ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ.ಯು.ಸಿ. ಮೊದಲ ವರ್ಷ

# ಇತಿಹಾಸ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ ಯು ಸಿ ಮೊದಲ ವರ್ಷ

# ಇತಿಹಾಸ


ಸಂಪಾದಕ

**ಡಾ. ಸಿ.ಆರ್. ಗೋವಿಂದರಾಜು**





ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ITIHAASA**
**Prescribed Text Book for First Year P.U.C**

*Edited by*
**Dr. C.R. Govindaraju**
Head, Dept. of History
Kannada University, Hampi
Vidyaranya 583 276

*Published by*
**Dr. H.C. Boralingaiah**
Director, Prasaranga
Kannada University, Hampi
Vidyaranya 583 276

Pages: xii+344 **Price: Rs. 100/-**
First Impression : 2004
www.kavihampi.org



**ಬೆಲೆ : ರೂ. ೧೦೦/-**

*ಮುಖಪುಟ* : **ಕೆ.ಕೆ. ಮಕಾಳಿ**

*ಪ್ರಕಾಶಕರು*
**ಡಾ. ಹಿ.ಚಿ. ಬೋರಲಿಂಗಯ್ಯ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

*ಅಕ್ಷರ ಸಂಯೋಜನೆ*
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

*ಮುದ್ರಣ*
ವಿಶ್ವಾಸ್ ಪ್ರಿಂಟ್ಸ್
VISHWAS PRINTS
೨೩, ೩ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು-೧೮



# ನಿರ್ದೇಶಕರ ಮಾತು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಠ್ಯಪುಸ್ತಕ ರಚನಾ ಕೇಂದ್ರವು ಶಿಕ್ಷಣದ ಎಲ್ಲಾ ಹಂತಗಳಿಗೆ ಮತ್ತು ಎಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳು, ಆಕರ ಗ್ರಂಥಗಳು, ಪರಾಮರ್ಶನ ಕೃತಿಗಳು, ಅಧ್ಯಾಪಕರ ಕೈಪಿಡಿಗಳು ಮುಂತಾದವುಗಳನ್ನು ಸಿದ್ಧಪಡಿಸುವ ಮತ್ತು ಪ್ರಕಟಿಸುವ ದೊಡ್ಡ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. ಈ ದಿಶೆಯಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆ ೨೦೦೪-೦೫ರಲ್ಲಿ ಜಾರಿಗೆ ತಂದಿರುವ ಹೊಸ ಪಠ್ಯಕ್ರಮವನ್ನು ಆಧರಿಸಿ ಪಠ್ಯಪುಸ್ತಕಗಳನ್ನು ಪ್ರಕಟಿಸುತ್ತಿದೆ. ಈ ಪಠ್ಯಕ್ರಮಕ್ಕೆ ಅನುಗುಣವಾಗಿ ಅಧ್ಯಾಪಕರ ಕೈಪಿಡಿಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಕೇಂದ್ರ ಆರಂಭಿಸಿದೆ.

ಈ ಕಾರ್ಯ ಅನೇಕರ ಸಹಕಾರ-ಸಹಯೋಗದಿಂದ ನಡೆಯಬೇಕಾಗಿದೆ. ನಾವು ಸಿದ್ಧಪಡಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಪಠ್ಯಗಳೆಂದು ಮನ್ನಣೆ ನೀಡಿದೆ. ಇದು ತುಂಬಾ ಮಹತ್ವದ ಸಂಗತಿಯಾಗಿದೆ. ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಡಿ.ಎನ್. ನಾಯಕ್ ಇವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ಪಠ್ಯಪುಸ್ತಕಗಳ ಸಂಪಾದಕರಾಗಿ ನಾಡಿನ ಅನೇಕ ಹಿರಿಯ ವಿದ್ವಾಂಸರು ಕೆಲಸ ಮಾಡುತ್ತಿದ್ದಾರೆ. ಅವರ ಸಹಯೋಗದಲ್ಲಿ ಅನೇಕ ಲೇಖಕರು ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರೆಲ್ಲರಿಗೂ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಕೇಂದ್ರದ ಹಿಂದಿನ ಶಕ್ತಿಯೆಂದರೆ ಕುಲಪತಿಗಳಾದ ಡಾ. ಕೆ.ವಿ.ನಾರಾಯಣ. ಅವರ ಮಾರ್ಗದರ್ಶನದಲ್ಲಿ ಕೇಂದ್ರವು ಕೆಲಸ ಮಾಡುತ್ತಿದೆ. ಈ ಸಂದರ್ಭದಲ್ಲಿ ಮಾನ್ಯ ಕುಲಪತಿಗಳಿಗೆ, ಕುಲಸಚಿವರಿಗೆ, ಕೇಂದ್ರದ ಸಲಹಾ ಮಂಡಳಿ ಸದಸ್ಯರಿಗೆ, ಪ್ರಸಾರಾಂಗದ ನಿರ್ದೇಶಕರು ಮತ್ತು ಸಿಬ್ಬಂದಿಗೆ ಕೇಂದ್ರದ ಪರವಾಗಿ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

ಪ್ರಸ್ತುತ ಪದವಿಪೂರ್ವ ಮೊದಲ ವರ್ಷದ ಇತಿಹಾಸ ಪಠ್ಯವನ್ನು ತುಂಬಾ ಅಚ್ಚುಕಟ್ಟಾಗಿ ಸಿದ್ಧಪಡಿಸಿಕೊಟ್ಟಿರುವ ಅದರ ಸಂಪಾದಕರಾದ ಡಾ. ಸಿ.ಆರ್.ಗೋವಿಂದರಾಜು ಅವರಿಗೆ ಹಾಗೂ ವಿವಿಧ ಅಧ್ಯಾಯಗಳನ್ನು ಬರೆದುಕೊಟ್ಟಿರುವ ನಾಡಿನ ಖ್ಯಾತ ವಿದ್ವಾಂಸರಿಗೆ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಡಾ. ಟಿ.ಆರ್.ಚಂದ್ರಶೇಖರ

# ಸಂಪಾದಕರ ಮಾತು

ಕನ್ನಡ ಮಾಧ್ಯಮದಲ್ಲಿ ಓದಿ, ಪರೀಕ್ಷೆಗಳನ್ನು ಎದುರಿಸುವ ವಿದ್ಯಾರ್ಥಿಗಳಿಗೆ ಒಳ್ಳೆಯ ಪಠ್ಯಪುಸ್ತಕಗಳು ದೊರೆಯುತ್ತಿಲ್ಲ. ಈ ಕೊರತೆ ಬಹಳ ಹಿಂದಿನಿಂದಲೂ ನಮ್ಮನ್ನು ಕಾಡುತ್ತಿದೆ. ಈ ಕೊರತೆಯನ್ನು ತುಂಬಲು ಪ್ರಯತ್ನಗಳು ನಡೆದಿವೆಯಾದರೂ ಬಹಳ ಕಡಿಮೆ. ಕನ್ನಡ ವಿಶ್ವವಿದ್ಯಾಲಯವು ಈ ದಿಸೆಯಲ್ಲಿ ಶಾಶ್ವತವಾದ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನಗಳನ್ನು ಮಾಡುತ್ತಿದೆ. ಅಂಥ ಪ್ರಯತ್ನಗಳಲ್ಲಿ ಪದವಿಪೂರ್ವ ತರಗತಿಗಳ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳನ್ನು ಕನ್ನಡದಲ್ಲಿಯೇ ರಚಿಸಿಕೊಡುವ ಪ್ರಯೋಗ, ಪ್ರಯತ್ನವೂ ಒಂದು. ಈ ಮಾತು ವಿಜ್ಞಾನ, ವಾಣಿಜ್ಯ, ಕಲಾ ವಿದ್ಯಾರ್ಥಿಗಳಿಗೂ ಅನ್ವಯ ಆಗುವಂಥದ್ದು. ನನ್ನ ವಿದ್ಯಾಗುರುಗಳೂ, ವಿದ್ವಾಂಸರೂ ಆದ ಪ್ರೊ. ಎಸ್.ಚಂದ್ರಶೇಖರ್ ಅವರು ಈ ಹಿಂದಿನ 'ಜಗತ್ತಿನ ಇತಿಹಾಸ'ದ ಪಠ್ಯಕ್ಕನುಗುಣವಾಗಿ ಕೃತಿಯೊಂದನ್ನು ಸಂಪಾದಿಸಿಕೊಟ್ಟಿದ್ದರು. ಅದು ನಮ್ಮ ವಿಶ್ವವಿದ್ಯಾಲಯದಿಂದಲೇ ಪ್ರಕಟ ಆಗಿತ್ತು. ಆದರೆ ಈ ಸಾಲಿನಿಂದ ಪರಿಷ್ಕೃತವಾದ ಪಠ್ಯವನ್ನು ಪದವಿಪೂರ್ವ ಶಿಕ್ಷಣ ಇಲಾಖೆ ಪರಿಚಯಿಸಿದೆ. ಹೀಗಾಗಿ ಇತಿಹಾಸದ ಹೊಸ ಪಠ್ಯಪುಸ್ತಕವನ್ನು ರಚಿಸಿಕೊಡುವ ಹೊಣೆ ನನ್ನ ಪಾಲಿಗೆ ಬಂದಿದೆ. ಇದಕ್ಕಾಗಿ ಹಿಂದಿನ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಹಾಗೂ ಹಾಲಿ ಕುಲಪತಿಗಳಾದ ಡಾ. ಕೆ.ವಿ.ನಾರಾಯಣ ಅವರಿಗೆ ವಿಶೇಷವಾದ ಧನ್ಯವಾದಗಳನ್ನು ಸಲ್ಲಿಸುತ್ತೇನೆ. ವಿಶ್ವವಿದ್ಯಾಲಯದ ಆಶಯಗಳಿಗೆ ಅನುಗುಣವಾಗಿ ಈ ಪಠ್ಯಪುಸ್ತಕಗಳು ನಾಡಿನ ವಿದ್ಯಾರ್ಥಿಗಳಿಗೆ, ಅಧ್ಯಾಪಕ ವೃಂದಕ್ಕೆ ತಲುಪಬೇಕೆಂದು ನಮ್ಮಲ್ಲಿ ಉತ್ಸಾಹ ತುಂಬುತ್ತಿರುವ ಕೆ.ವಿ. ನಾರಾಯಣ ಅವರನ್ನು ವಿಶೇಷವಾಗಿ ಅಭಿನಂದಿಸಲೇಬೇಕು. ಅಂತೆಯೇ ಕನ್ನಡ ವಿಶ್ವವಿದ್ಯಾಲಯದ ಆದ್ಯತೆಯ ಕಾರ್ಯ-ಯೋಜನೆಗಳಲ್ಲಿ ಪಠ್ಯಪುಸ್ತಕಗಳ ಕೊರತೆಯನ್ನು ನೀಗಬೇಕೆನ್ನುವ ಕನಸನ್ನು ಕಂಡು, ಇಂದಿಗೂ ನಮ್ಮನ್ನು ಪ್ರೋತ್ಸಾಹಿಸುತ್ತಿರುವ ಮೊದಲ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರನ್ನು ನೆನಪಿಸಿಕೊಳ್ಳದೆ ಇರಲಾರೆ. ಪದವಿಪೂರ್ವ ಶಿಕ್ಷಣ ಇಲಾಖೆಯ ಪದಾಧಿಕಾರಿಗಳು ಈ ಅವಕಾಶವನ್ನು ನಮಗೆ ನೀಡಿದ್ದಕ್ಕಾಗಿ ಅವರಿಗೂ ನಮ್ಮ ಧನ್ಯವಾದಗಳು.

ಪ್ರಸ್ತುತ ಪಠ್ಯಪುಸ್ತಕವು ಇತಿಹಾಸ ಅಧ್ಯಯನದ ಸ್ವರೂಪವನ್ನು ಪರಿಚಯಿಸುವುದರೊಂದಿಗೆ ಭಾರತ ಹಾಗೂ ಕರ್ನಾಟಕವನ್ನು ಅರಿಯುವಂಥದ್ದು. ಅಂದರೆ ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತ ಮತ್ತು ಕರ್ನಾಟಕಗಳ ಇತಿಹಾಸವನ್ನು ಪರಿಚಯಿಸುತ್ತಿದೆ. ಪಠ್ಯಕ್ಕನುಗುಣವಾಗಿ ಕನ್ನಡದಲ್ಲಿ ಚಿಂತನೆ ನಡೆಸಲು ಅನುಕೂಲವಾಗುವಂತೆ ಭಾಷೆಯ

ಬಳಿಕೆ, ವಿಷಯ ಮಂಡನೆಯ ಕ್ರಮುವನ್ನು ಇಲ್ಲಿ ಅನುಸರಿಸಲಾಗಿದೆ. ಇತಿಹಾಸವು ಚಲನಶೀಲವಾದ್ದರಿಂದ ಇತ್ತೀಚಿನ ಹೊಸ ಅಂಶಗಳನ್ನು ವೈಜ್ಞಾನಿಕ ದೃಷ್ಟಿಕೋನದ ಒರೆಗೆ ಹಚ್ಚಿ ಬಳಸಿಕೊಳ್ಳಬೇಕಿದೆ. ಅಲ್ಲದೆ ವಿದ್ಯಾರ್ಥಿ ವೃಂದಕ್ಕೆ ಅನುಕೂಲವಾಗಲೆಂದು ಸಾಧ್ಯ ವಾದಷ್ಟು ವಿವರಣೆಗಳ ಜೊತೆಗೆ ಪ್ರಶ್ನಾತ್ಮಕ ಶೈಲಿಯಲ್ಲಿ ವಿಚಾರಗಳನ್ನು ಮಂಡಿಸುವ ಕ್ರಮ ಇಲ್ಲಿನದು. ಅವಶ್ಯವಾದಲ್ಲಿ ಮಾತ್ರ ತಾತ್ವಿಕ-ಸೈದ್ಧಾಂತಿಕ ಚರ್ಚೆಗಳನ್ನು ಅಳವಡಿಸಿದ್ದೇವೆ. ಸಾಂಪ್ರದಾಯಿಕ ಚರಿತ್ರೆಯ ಬರವಣಿಗೆಗಿಂತ ಭಿನ್ನವಾಗಿ, ಸರಳವಾಗಿ, ಸಂಕ್ಷಿಪ್ತವಾಗಿ ಅಧ್ಯಾಯ ಗಳನ್ನು ಬರೆಸಲು ಪ್ರಯತ್ನಿಸಲಾಗಿದೆ. ಇಂಥ ಪ್ರಯತ್ನಗಳು ಎಷ್ಟರಮಟ್ಟಿಗೆ ಫಲಪ್ರದವಾಗಿವೆ ಎಂಬುದನ್ನು ವಿದ್ಯಾರ್ಥಿಗಳು ಹಾಗೂ ಅಧ್ಯಾಪಕ ವೃಂದವೇ ಹೇಳಬೇಕು. ತಮ್ಮ ಸಲಹೆ-ಸೂಚನೆಗಳಿಗೆ ಎಂದಿಗೂ ಸ್ವಾಗತ.

ಹರಪ್ಪ ಸಂಸ್ಕೃತಿಯಿಂದ ಆರಂಭಗೊಳ್ಳುವ 'ಪ್ರಾಚೀನ ಭಾರತ'ದ ಅಧ್ಯಾಯಗಳು ವೇದಕಾಲೀನ ಹಾಗೂ ನಂತರದ ವೇದಗಳ ಕಾಲದ ಸಂಸ್ಕೃತಿ ವಿಚಾರಗಳನ್ನು, ಜೈನ-ಬೌದ್ಧ ಧರ್ಮಗಳು, ಮೌರ್ಯ-ಗುಪ್ತರನ್ನು ಒಳಗೊಂಡಿವೆ. ಅಂತೆಯೆ 'ಮಧ್ಯಕಾಲೀನ ಭಾರತ'ದ ಇತಿಹಾಸವು ಅಲ್ಲಾವುದ್ದೀನ್ ಖಿಲ್ಜಿ, ಮಹಮದ್ ಬಿನ್ ತುಘಲಕ್, ಭಕ್ತಿ ಚಳುವಳಿ, ಮೊಗಲರು-ಅಕ್ಬರ್, ಶಿವಾಜಿಯನ್ನು ಒಳಗೊಂಡಿರುವಂಥದ್ದು. 'ಪ್ರಾಚೀನ ಕರ್ನಾಟಕ'ದ ವಿಭಾಗದಲ್ಲಿ ಶಾತವಾಹನ-ಕದಂಬ-ಗಂಗ-ಬಾದಾಮಿ ಚಾಲುಕ್ಯ-ರಾಷ್ಟ್ರಕೂಟ-ಕಲ್ಯಾಣಿ ಚಾಲುಕ್ಯ-ಹೊಯ್ಸಳ ಮನೆತನಗಳ ಇತಿಹಾಸವನ್ನು ಹಾಗೂ ಸಾಮಾಜಿಕ-ಧಾರ್ಮಿಕ ಸುಧಾರಣಾ ಚಳುವಳಿಗಳನ್ನು ಅಳವಡಿಸಲಾಗಿದೆ. 'ಮಧ್ಯಕಾಲೀನ ಕರ್ನಾಟಕ'ದ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯ, ಬಹಮನಿ-ಆದಿಲ್‌ಷಾಹಿಗಳು, ಒಡೆಯರ ಆಳ್ವಿಕೆಯ ಆರಂಭ ಘಟ್ಟ, ಇಕ್ಕೇರಿ-ಚಿತ್ರದುರ್ಗದ ನಾಯಕ ಅರಸರನ್ನು ಕುರಿತು ಪ್ರಸ್ತಾಪಿಸಲಾಗಿದೆ. ಈ ಪಠ್ಯದಲ್ಲಿನ ವ್ಯಾಪಕವಾದ ಅಧ್ಯಾಯಗಳನ್ನು ಉಪಶೀರ್ಷಿಕೆಗಳನ್ನು ನೀಡಿ ಸರಳ, ಸಂಕ್ಷಿಪ್ತ ಗೊಳಿಸುವ ಪ್ರಯತ್ನ ಮಾಡಲಾಗಿದೆ. ಕೆಲವೆಡೆ ಹೆಚ್ಚುವರಿ ಅನ್ನಿಸುವ ವಿಚಾರಗಳಿವೆ. ಅವುಗಳನ್ನು 'ಹೆಚ್ಚಿನ ವಿಷಯ'ದಡಿಯಲ್ಲಿ ಅಳವಡಿಸಿದ್ದೇವೆ. ಆಯಾ ಅಧ್ಯಾಯದ ಲೇಖಕರು 'ಹೆಚ್ಚಿನ ಓದಿಗಾಗಿ' ಕೃತಿಗಳನ್ನು, ಪ್ರಶ್ನೆಪತ್ರಿಕೆಗಳ ರಚನೆಗಾಗಿ 'ಮಾದರಿ ಪ್ರಶ್ನೆ'ಗಳನ್ನು, 'ಹೆಚ್ಚಿನ ಜ್ಞಾನ'ಕ್ಕಾಗಿ ಕಾರ್ಯ-ಯೋಜನೆಗಳನ್ನು ಪಠ್ಯಕ್ಕನುಗುಣವಾಗಿ ರೂಪಿಸಿದ್ದಾರೆ. ಅಧ್ಯಾಯಗಳ ಕೊನೆಗೆ ಕೆಲವು 'ಪರಿಕಲ್ಪನೆ'ಗಳನ್ನು ನೀಡಿ ವಿವರಿಸುವ ಪ್ರಯತ್ನವೂ ನಡೆದಿದೆ. ಪಠ್ಯಪುಸ್ತಕದ ಕೊನೆಗೆ 'ಆಯ್ದ ಗ್ರಂಥಸೂಚಿ'ಯನ್ನು ನೀಡಲಾಗಿದೆ. ಅಂತೆಯೇ 'ಮಾದರಿ ಪ್ರಶ್ನೆಪತ್ರಿಕೆ'ಯೊಂದನ್ನು (ಪ.ಪೂ.ಶಿಕ್ಷಣ ಇಲಾಖೆ ಸೂಚಿಸಿದ) ಸಹ ನೀಡಿದ್ದೇವೆ. ಒಟ್ಟಾರೆ ಪಠ್ಯಕ್ಕನುಗುಣವಾಗಿಯೆ ಈ ಪಠ್ಯಪುಸ್ತಕವನ್ನು ಯೋಜಿಸಲಾಗಿದೆ.

ಶ್ರಮವಹಿಸಿ ಪಠ್ಯದ ಅಧ್ಯಾಯಗಳನ್ನು ಬರೆದುಕೊಟ್ಟ ಪ್ರೊ. ಬಿ.ಸುರೇಂದ್ರರಾವ್, ಡಾ. ಬಿ.ಉದಯ, ಡಾ. ಎನ್.ಷೇಕ್ ಮಸ್ತಾನ್, ಡಾ. ಬಿ. ಯೋಗೀಶ್ವರಪ್ಪ ಹಾಗೂ ಡಾ. ಹನುಮನಾಯಕ್ ಅವರುಗಳಿಗೆ ನಾನು ಆಭಾರಿ. ಈ ಐದು ಜನ ವಿದ್ವಾಂಸರು ನನ್ನ

ಹಲವು ಬಗೆಯ ಒತ್ತಡ-ಒತ್ತಾಸೆಗಳಿಗೆ ಸ್ಪಂದಿಸಿರುವುದರಿಂದ ವಿಶೇಷವಾಗಿಯೇ ನೆನೆಯುತ್ತೇನೆ.
ಇವರ ಸಹಕಾರವಿಲ್ಲದೆ ಈ ಕೃತಿಯು ಪ್ರಕಟವಾಗುತ್ತಿರಲಿಲ್ಲ. ನನ್ನನ್ನು ಮೊದಲಿನಿಂದಲೂ
ಪ್ರೋತ್ಸಾಹಿಸುತ್ತಿರುವ ಡಾ. ಎಸ್.ಚಂದ್ರಶೇಖರ್, ಪ್ರೊ. ಲಕ್ಷ್ಮಣ್ ತೆಲಗಾವಿ, ಪ್ರೊ. ಕಿ.ರಂ.
ನಾಗರಾಜ, ಪ್ರೊ. ಬಸವರಾಜ ಕಲ್ಗುಡಿ ಅವರುಗಳಿಗೆ ಧನ್ಯವಾದಗಳು. ಹಿತೈಷಿಗಳೂ,
ಕುಲಸಚಿವರೂ ಆದ ಡಾ. ಕರೀಗೌಡ ಬೀಚನಹಳ್ಳಿ ಹಾಗೂ ಪ್ರಸಾರಾಂಗದ ನಿರ್ದೇಶಕರಾದ
ಡಾ. ಹಿ.ಚಿ. ಬೋರಲಿಂಗಯ್ಯ ಅವರುಗಳ ಸಹಕಾರವನ್ನು ಪ್ರೀತಿಯಿಂದ ನೆನೆಯುತ್ತೇನೆ.
ಪಠ್ಯಪುಸ್ತಕ ರಚನಾಕೇಂದ್ರದ ನಿರ್ದೇಶಕರಾದ ಡಾ. ಟಿ.ಆರ್. ಚಂದ್ರಶೇಖರ್, ಸಹಾಯಕ
ನಿರ್ದೇಶಕರಾದ ಜೈನುಲ್ಲಾ ಬಳ್ಳಾರಿ ಅವರು ಎಲ್ಲ ಹಂತಗಳಲ್ಲೂ ಸಹಕರಿಸಿದ್ದಾರೆ. ಅವರಿಗೆ
ನನ್ನ ಕೃತಜ್ಞತೆಗಳು. ಮುಖ್ಯವಾಗಿ ಕೃತಿಯು ಕೈ ಸೇರುವವರೆಗೆ ನನ್ನ ಎಲ್ಲ ತೊಂದರೆಗಳನ್ನು
ಸಹಿಸಿಕೊಂಡು ಪ್ರತಿ ಹಂತದಲ್ಲೂ ಹೆಗಲು ಜೋಡಿಸಿದ ಗೆಳೆಯ ಕೆ.ಎಲ್. ರಾಜಶೇಖರ್
ಅವರನ್ನು ವಿಶೇಷವಾಗಿ ನೆನೆಯುತ್ತೇನೆ. ಕರಡು ತಿದ್ದಲು ಸಹಕರಿಸಿದ ಬಾಳಗೆಳತಿ ಟಿ.ಕೆ.
ಭಾಗ್ಯವತಿ ಅವರಿಗೆ ಧನ್ಯವಾದಗಳು. ಅಂತೆಯೇ ಗೆಳೆಯರಾದ ಎಚ್.ಬಿ. ರವೀಂದ್ರ,
ಸುಜ್ಞಾನಮೂರ್ತಿ ಅವರುಗಳನ್ನು ಮರೆಯುವಂತಿಲ್ಲ. ಅಚ್ಚುಕಟ್ಟಾಗಿ ಡಿ.ಟಿ.ಪಿ ಮಾಡಿದ
ಶ್ರೀಮತಿ ಎ. ನಾಗವೇಣಿ ಅವರಿಗೆ ಧನ್ಯವಾದಗಳು. ಈ ಕೃತಿಯ ಪ್ರಕಟಣೆಗೆ ಸಲಹೆ-
ಸೂಚನೆಗಳನ್ನು ನೀಡಿ ಸಹಕರಿಸಿದ ವಿಭಾಗದ ಹಾಗೂ ವಿಶ್ವವಿದ್ಯಾಲಯದ ಎಲ್ಲ
ಸಹೋದ್ಯೋಗಿ ಮಿತ್ರರಿಗೆ ವಂದನೆಗಳು.

**ಸಿ.ಆರ್.ಗೋವಿಂದರಾಜು**

# ಪರಿವಿಡಿ

ಅಧ್ಯಾಯ ೧

**ಇತಿಹಾಸದ ಸ್ವರೂಪ ಪರಿಚಯ / ೧**

**ಪ್ರೊ. ಬಿ. ಸುರೇಂದ್ರರಾವ್**

ಅಧ್ಯಾಯ ೨

**ಪ್ರಾಚೀನ ಭಾರತ**

೨.೧ ಹರಪ್ಪ ಸಂಸ್ಕೃತಿ / ೧೫

೨.೨ ವೇದಕಾಲೀನ ಸಂಸ್ಕೃತಿ / ೨೬

೨.೩ ಜೈನ ಮತ್ತು ಬೌದ್ಧ ಧರ್ಮ / ೫೩

೨.೪ ಮೌರ್ಯ ಸಾಮ್ರಾಜ್ಯ / ೭೨

೨.೫ ಗುಪ್ತ ಸಾಮ್ರಾಜ್ಯ / ೮೯

**ಡಾ. ಬಿ.ಉದಯ**

ಅಧ್ಯಾಯ ೩

**ಮಧ್ಯಕಾಲೀನ ಭಾರತ**

೩.೧ ಅಲ್ಲಾವುದ್ದೀನ್ ಖಿಲ್ಜಿಯ ಆಕ್ರಮಣಗಳು ಮತ್ತು ಸಾಧನೆಗಳು / ೧೦೯

೩.೨ ಮಹಮುದ್ ಬಿನ್ ತುಘಲಕ್ : ವ್ಯಕ್ತಿತ್ವ / ೧೨೫

೩.೩ ಭಕ್ತಿ ಚಳುವಳಿ / ೧೩೪

೩.೪ ಅಕ್ಬರ್ ಮತ್ತು ಮೊಗಲ ಸಾಮ್ರಾಜ್ಯ / ೧೪೨

೩.೫ ಶಿವಾಜಿಯ ಏಳಿಗೆ / ೧೭೦

**ಡಾ. ಎನ್.ಷೇಕ್ ಮಸ್ತಾನ್**

ಅಧ್ಯಾಯ ೪

**ಪ್ರಾಚೀನ ಕರ್ನಾಟಕ**

೪.೧ ಶಾತವಾಹನರು / ೧೮೮

೪.೨ ಕದಂಬರು / ೧೯೭

೪.೩ ಗಂಗರು / ೨೦೬

೪.೪ ಬಾದಾಮಿಯ ಚಾಲುಕ್ಯರು / ೨೧೫
೪.೫ ಮಾನ್ಯಖೇಟದ ರಾಷ್ಟ್ರಕೂಟರು / ೨೨೯
೪.೬ ಕಲ್ಯಾಣದ ಚಾಲುಕ್ಯರು / ೨೪೩
೪.೭ ದ್ವಾರಸಮುದ್ರದ ಹೊಯ್ಸಳರು / ೨೫೩
೪.೮ ಸಾಮಾಜಿಕ-ಧಾರ್ಮಿಕ ಸುಧಾರಣಾ ಚಳುವಳಿಗಳು / ೨೬೭
ಡಾ. ಡಿ.ಎನ್.ಯೋಗೀಶ್ವರಪ್ಪ

ಅಧ್ಯಾಯ ೫

**ಮಧ್ಯಕಾಲೀನ ಕರ್ನಾಟಕ**

೫.೧ ವಿಜಯನಗರ ಸಾಮ್ರಾಜ್ಯ / ೨೮೭
೫.೨ ಬಹಮನಿಗಳು ಮತ್ತು ಆದಿಲ್‌ಷಾಹಿಗಳು / ೩೧೦
೫.೩ ಮೈಸೂರಿನ ಒಡೆಯರು (ಆರಂಭ ಕಾಲ) / ೩೧೯
೫.೪ ಇಕ್ಕೇರಿ ಮತ್ತು ಚಿತ್ರದುರ್ಗ ನಾಯಕರು / ೩೨೨
ಡಾ. ಹನುಮನಾಯಕ್

ಅಧ್ಯಾಯ ೬

**ಭೂಪಟಗಳ ಅಧ್ಯಯನ**

೬.೧ ಅಶೋಕನ ಕಾಲದ ಮೌರ್ಯ ಸಾಮ್ರಾಜ್ಯ / ೩೩೫
೬.೨ ಇಮ್ಮಡಿ ಪುಲಕೇಶಿಯ ಕಾಲದ ಚಾಲುಕ್ಯ ಸಾಮ್ರಾಜ್ಯ / ೩೩೬
೬.೩ ಕೃಷ್ಣದೇವರಾಯನ ಕಾಲದ ವಿಜಯನಗರ ಸಾಮ್ರಾಜ್ಯ / ೩೩೭
೬.೪ ಅಕ್ಬರ್‌ನ ಕಾಲದ ಮೊಗಲ ಸಾಮ್ರಾಜ್ಯ / ೩೩೮
೬.೫ ಪ್ರಮುಖ ಚಾರಿತ್ರಿಕ ಸ್ಥಳಗಳು / ೩೩೯
ಕೆ.ಎಲ್. ರಾಜಶೇಖರ್

ಆಯ್ದ ಗ್ರಂಥಸೂಚಿ / ೩೪೦

ಮಾದರಿ ಪ್ರಶ್ನೆ ಪತ್ರಿಕೆ / ೩೪೨

# ಅಧ್ಯಾಯ ೧

# ಇತಿಹಾಸದ ಸ್ವರೂಪ ಪರಿಚಯ

ನೀವು ಈಗ ಕಾಲೇಜು ಹಂತದಲ್ಲಿ ಇತಿಹಾಸವನ್ನು ಅಭ್ಯಸಿಸಲು ಹೊರಟವರು. ಇಲ್ಲಿಯ ತನಕ ಸಮಾಜವಿಜ್ಞಾನದ ಪಾಠಗಳ ಅಂಶವಾಗಿ ಇತಿಹಾಸದ ಕೆಲವು ರೋಚಕ ತುಣುಕುಗಳನ್ನು ಸವಿದಿದ್ದೀರಿ. ಆದರೆ ಈಗ ಅದನ್ನು ಒಂದು ಮುಖ್ಯ ಅಧ್ಯಯನ ವಸ್ತುವಾಗಿ ಆರಿಸಿ ಕೊಂಡಿದ್ದೀರಿ. ನಿಮ್ಮ ಈ ನಿರ್ಧಾರದ ಬಗ್ಗೆ ಕೆಲವರು ನಿಮ್ಮನ್ನು ಗಂಭೀರವಾಗಿಯೋ, ಲೇವಡಿ ಮಾಡಲೆಂದೋ ಪ್ರಶ್ನಿಸಿರಬಹುದು: 'ಇತಿಹಾಸ' ಎಂದರೇನು? ಅದನ್ನು ಯಾಕಾಗಿ ಅಧ್ಯಯನ ಮಾಡಬೇಕು? ಅದರಿಂದಾಗುವ ಉಪಯೋಗವಾದರೂ ಏನು? ಎಷ್ಟೋ ಬಾರಿ ಜನ ಕೇಳಿದ್ದುಂಟು: ಕಳೆದುಹೋದ ದಿನಗಳ ಬಗ್ಗೆ ನಾವೇಕೆ ತಲೆಕೆಡಿಸಿಕೊಳ್ಳಬೇಕು? ಹಿಂದೆ ಯಾವ ರಾಜರು ಆಳಿದರೇನು? ಅವರು ಏನು ಮಾಡಿದರೇನು? ನಾವು ಇರುವುದು ಇಂದು; ನಮಗೆ ಸಂಬಂಧಿಸಿದ್ದು ನಮ್ಮ ಇಂದಿನ ಸುಖ-ದುಃಖಗಳು, ಇಂದಿನ ಸಮಸ್ಯೆಗಳು; ಸತ್ತ ನಿನ್ನೆಗಳ ಅಥವಾ ಹುಟ್ಟದ ನಾಳೆಗಳ ಭಾರವನ್ನು ನಾವ್ಯಾಕೆ ಹೊರಬೇಕು? ಎಂಬ ಮಾತು ಕೆಲವೊಮ್ಮೆ ಕೇಳಿಬರುತ್ತದೆ. ಈ ಪ್ರಶ್ನೆಗಳು ಮೂದಲಿಕೆಯ ರೂಪವನ್ನು ತಾಳುವುದು ನಿಜವಾದರೂ ಅವುಗಳು, ಹಾಗೂ ಅವುಗಳಿಗೆ ನೀಡಬಹುದಾದ ಗಂಭೀರ, ಪ್ರಾಮಾಣಿಕ ಉತ್ತರಗಳು ಇತಿಹಾಸದ ಅರ್ಥ, ಸ್ವರೂಪಗಳನ್ನು ತಿಳಿಯುವಲ್ಲಿ ಸಹಾಯಕವಾಗುತ್ತವೆ. ಈ ಪ್ರಶ್ನೆಗಳಲ್ಲಿ ಹೊರಸೂಸುವ ಸಂದೇಹವಾದವನ್ನು ನಿಗ್ರಹಿಸುವ ಸೂಕ್ತ ಉತ್ತರವನ್ನು ನೀಡದಿದ್ದಲ್ಲಿ ನೀವು ಅಭ್ಯಸಿಸುವ ವಿಷಯ ಪೊಳ್ಳು ಹಾಗೂ ಅಪ್ರಸ್ತುತ ಎಂಬ ಸಂಶಯ ಹುಟ್ಟುವುದು ಸಹಜ. ಇದು ಅಧ್ಯಯನದ ಬುನಾದಿಯನ್ನೇ ಒಡೆದು ಹಾಕುತ್ತದೆ.

### ಇತಿಹಾಸ ಎಂದರೇನು?

ಒಂದು ಅರ್ಥದಲ್ಲಿ ಇತಿಹಾಸವು ಪ್ರತಿಯೊಂದರಲ್ಲೂ ಸೇರಿದೆ: ಪ್ರತಿಯೊಂದಕ್ಕೂ ಇತಿಹಾಸವಿದೆ. ನೀವು ಕಲಿತ ಶಾಲೆ, ಕಾಲೇಜುಗಳಿಗೆ ಅದರದರ ಇತಿಹಾಸವಿದೆ. ಅವುಗಳನ್ನು ಯಾರು, ಎಂದು ಸ್ಥಾಪಿಸಿದ್ದು, ಅವುಗಳು ನಡೆದು ಬಂದ ದಾರಿ, ಅವುಗಳ ಸಾಧನೆಗಳು ಏನು, ಇತ್ಯಾದಿ, ಇತ್ಯಾದಿ. ಹಾಗೆಯೇ ನೀವು ನಿಮ್ಮ ವಂಶವೃಕ್ಷ (ವಂಶಾವಳಿ)ವನ್ನು ಬಿಡಿಸಿ ವಿವರಿಸುವಾಗ ನಿಮ್ಮ ಹಾಗೂ ನಿಮ್ಮ ಮನೆತನದ ಇತಿಹಾಸವನ್ನು ಹೇಳಿದಂತಾಗುತ್ತದೆ. ನಿಮ್ಮ ಅನಾರೋಗ್ಯದ ಬಗ್ಗೆ ವೈದ್ಯರ ಸಲಹೆಯನ್ನು ಕೇಳ ಹೊರಟರೆ ಅವರು ನಿಮ್ಮ

ರೋಗ, ಬೇನೆಗಳ 'ಇತಿಹಾಸ'ವನ್ನು ಕೇಳಬಯಸುತ್ತಾರೆ. ನೀವು ನ್ಯಾಯಾಲಯಕ್ಕೆ ಕಕ್ಷಿಯೊಂದನ್ನು ಒಯ್ದರೆ ಅದರ 'ಇತಿಹಾಸ' ಬೆಳವಣಿಗೆ ಮತ್ತು ಅದರ ಇಂದಿನ ಸ್ಥಿತಿಗಳನ್ನು ನ್ಯಾಯಾಧೀಶರಿಗೆ ತಿಳಿಸಬೇಕಾಗುತ್ತದೆ. ಅಂದರೆ, ಜೀವನದ ವಿವಿಧ ಅನುಭವ, ಅವಸ್ಥೆಗಳನ್ನು ಅವು 'ಈಗ ಏಕೆ ಹೀಗಿವೆ' ಎಂದು ಗುರುತಿಸಿ ವಿವರಿಸುವ ಒಂದು ಸಾಮಾನ್ಯ, ಸ್ವಾಭಾವಿಕ ವರಸೆ ಐತಿಹಾಸಿಕವಾಗಿ ಪ್ರಕಟಗೊಳ್ಳುವಂಥದ್ದು. ಈ ಅರ್ಥದಲ್ಲಿ ಇತಿಹಾಸವು ನಮ್ಮ ಜೀವನಕ್ಕೆ ಯಾವಾಗಲೂ ಅಂಟಿಕೊಂಡಿದೆ. ನಾವು ಆಲೋಚಿಸುವ ಬಗೆ, ನಮ್ಮ ತಾರ್ಕಿಕ ಚೌಕಟ್ಟು, ಹಾಗೂ ನಮ್ಮ ವ್ಯವಹಾರ ವಿಧಾನಗಳೆಲ್ಲವೂ ಹಿಂದೆ ನಡೆದದ್ದರ ಅಥವಾ ಮುಂದಿನ ಯೋಜನೆಗಳ ಮೇಲೆ ಅವಲಂಬಿಸಿವೆ. 'ಹಿಂದೆ-ಮುಂದೆ ನೋಡಿ ನಡೆ' ಎಂಬ ಸಲಹೆಯೂ ಬದುಕಿನ ಸತ್ಯವನ್ನು ಅರಹುತ್ತದೆ. ಜೀವನದಲ್ಲಿ ಅನುಭವವು ಮುಖ್ಯವೆಂದು ಒಪ್ಪಿಕೊಳ್ಳುವುದಾದರೆ ಇತಿಹಾಸದ ಪ್ರಾಮುಖ್ಯತೆ ಅರಿವಾಗುತ್ತದೆ. ನಿನ್ನೆಗಳು ಸತ್ತಿವೆ, ಎನ್ನುವವರು ಅನುಭವಗಳನ್ನು ನಿರಾಕರಿಸುವ, ಹಾಗೂ ಅವುಗಳ ಲಾಭದಿಂದ ವಂಚಿತರಾಗುವ ಹುಂಬರು.

ಇತಿಹಾಸವು ನಮ್ಮ ಜೀವನದಲ್ಲಿ, ಆಲೋಚನಾ ಕ್ರಮಗಳಲ್ಲಿ ಸೇರಿಹೋಗಿದೆ ಎಂದ ಮಾತ್ರಕ್ಕೆ 'ಇತಿಹಾಸ' ಎಂದರೇನು? ಎಂಬ ಪ್ರಶ್ನೆಗೆ ಉತ್ತರ ಸಿಕ್ಕಿದಂಥಾಗುವುದಿಲ್ಲ. ನಾವಿಲ್ಲಿ ಅದನ್ನು ಅರ್ಥೈಸುವುದು ಒಂದು ಅಧ್ಯಯನ ವಿಷಯವಾಗಿ. ಈ ನೆಲೆಯಲ್ಲಿ ಅದು ಮಾನವನು ಇಂದಿನ ತನಕ ಮಾಡಿದ ಸಾಧನೆಗಳ ವಿಶ್ಲೇಷಣಾಪೂರ್ಣ ಕಥನ. ಇದನ್ನು ಸ್ವಲ್ಪ ಬಿಡಿಸಿ ಹೀಗೆ ವಿವರಿಸಬಹುದು:

೧. ಇತಿಹಾಸವು ಮಾನವನ ಕಥೆ.
೨. ಅದು ಮಾನವನು ಸಂಘಜೀವಿಯಾಗಿ, ಸಮಾಜಜೀವಿಯಾಗಿ, ತನ್ನ ಹಾಗೂ ತಾನು ಕಟ್ಟಿದ ಪರಿಸರದಲ್ಲಿ ನಡೆಸಿದ ಸಾಧನೆಗಳ ಗಾಥೆ.
೩. ಆದರೆ ಇತಿಹಾಸವು ಮಾನವನ ಖಾಸಗಿ ಜೀವನದ, ಅದರ ಸಾಧನೆಗಳ ವೃತ್ತಾಂತವಲ್ಲ; ಅದು ಅವನ ಸಾಧನೆಗಳು, ಆತನು ಬದುಕಿರುವ, ಆತನನ್ನು ರೂಪಿಸುವ ಸಮಾಜವನ್ನು ಹೇಗೆ ಬದಲಾಯಿಸಿವೆ ಎಂಬುದರ ವಿಮರ್ಶಾತ್ಮಕ ಕಥನ.
೪. ಇತಿಹಾಸವು ಬದಲಾವಣೆಗಳ ಗಾಥೆ. ಯಾವುದು ಬದಲಾಗುವುದಿಲ್ಲವೊ ಅದಕ್ಕೆ ಇತಿಹಾಸವಿಲ್ಲ. ಮಾನವನ ಪರಿಸರ, ಆತ ಕಟ್ಟಿದ ಸಮಾಜ, ಅವುಗಳೊಡನೆ ಆತನ ಸಂಬಂಧ, ಅವನು ರಚಿಸಿದ ಆರ್ಥಿಕ ನೆಲೆಗಟ್ಟು, ಸೃಷ್ಟಿಸಿದ ಸೈದ್ಧಾಂತಿಕತೆಗಳೆಲ್ಲವೂ ಕಾಲಕಾಲಕ್ಕೆ ಬೇರೆ ಬೇರೆ ಒತ್ತಡಗಳಿಂದ ಬದಲಾಗುತ್ತಾ ಬಂದಿವೆ. ಅವುಗಳೇ ಇಂದಿನ ಸಮಾಜವನ್ನು, ಆರ್ಥಿಕತೆಯನ್ನು, ನಾಗರಿಕತೆಯನ್ನು ಸೃಷ್ಟಿಸಿದ್ದು.
೫. ಇತಿಹಾಸವು ಬದಲಾವಣೆಗಳನ್ನು ಗುರುತಿಸಿ ವಿವರಿಸುತ್ತವೆ ಎಂದ ಮಾತ್ರಕ್ಕೆ ಅದು ಮಾನವನ ಪ್ರಗತಿಶೀಲ ಸಾಧನೆಗಳ ಕಥೆ ಎಂಬ ಅಭಿಪ್ರಾಯ ಮೂಡುವುದು ಸಹಜ. ಇದು ಹದಿನೆಂಟನೆ ಶತಮಾನದ 'ಜ್ಞಾನೋದಯಕಾಲ'ದ ಯುರೋಪಿನಲ್ಲಿ ಸೈದ್ಧಾಂತಿಕ

ನೆಲೆಯಲ್ಲಿ ಪ್ರತಿಪಾದಿಸಲ್ಪಟ್ಟು, ಫ್ರಾನ್ಸ್‌ನ ಮಹಾಕ್ರಾಂತಿ ಹಾಗೂ ಅದರಿಂದ ಹೊರ ಹೊಮ್ಮಿದ ರಾಷ್ಟ್ರೀಯತೆಯ ಪ್ರೇರಕ ಶಕ್ತಿಯಾಗಿ ರೂಪುಗೊಂಡಿತು. ಆದರೆ ಇತಿಹಾಸ ದಲ್ಲಿ ಬದಲಾವಣೆಗಳೆಲ್ಲವೂ ಪ್ರಗತಿಶೀಲವಾಗಬೇಕೆಂದಿಲ್ಲ. ಅವು ಎಷ್ಟೋ ಬಾರಿ ಹಾವು-ಏಣಿ ಆಟವಾಗಬಹುದು. ಒಮ್ಮೆ ಮೇಲೇರಿದರೆ ಇನ್ನೊಮ್ಮೆ ಕೆಳ ಜಾರಬಹುದು. ಒಂದು ಸಮಾಜ ಗಳಿಸಿದ್ದನ್ನು ಇನ್ನೊಂದು ಕಳೆದುಕೊಳ್ಳಬಹುದು. ಮಾರಕ ಯುದ್ಧಗಳು, ಉಲ್ಬಣಿಸುವ ರೋಗ-ರುಜಿನಗಳು, ಅವ್ಯಾಹತವಾಗಿ ನಡೆಯುವ ಪರಿಸರ ನಾಶ, ಇವೆಲ್ಲವೂ ಪ್ರಗತಿಯನ್ನು ಅಲ್ಲಗಳೆಯುವ ಸಾಧನೆಗಳು. ನಮ್ಮ ಬಗ್ಗೆ ನಾವು ಹೆಮ್ಮೆ ಪಡಲಾಗದ ಅಸಹ್ಯ ವಾಸ್ತವತೆಗಳು. ಇದಲ್ಲದೆ, ಪ್ರಗತಿಯನ್ನು ಬರೇ ಭೌತಿಕವಾದ, ಲೌಕಿಕವಾದದ ಸೀಮಿತ ಅರ್ಥದಲ್ಲಿ ನೋಡಲು ಸಾಧ್ಯವೇ? ಜೀವನದ ಅನೇಕ ನಿಜ ಮೌಲ್ಯಗಳನ್ನು ನಾವೆಷ್ಟು ಕೃಷಿ ಮಾಡಿದ್ದೇವೆ? ಬಾಳನ್ನು ನಾವೆಷ್ಟು ಹಸನುಗೊಳಿಸಿದ್ದೇವೆ? ಸೌಖ್ಯಾನುಭವವನ್ನು ಎಷ್ಟು ಹೊಂದಿದ್ದೇವೆ? ಎಂಬ ಪ್ರಶ್ನೆಗಳೂ ಅಪ್ರಸ್ತುತವೇನಲ್ಲ.

೬. ಇತಿಹಾಸದ ಪರಿಕಲ್ಪನೆ ಕಾಲ-ದೇಶಗಳ ಚೌಕಟ್ಟಿನಲ್ಲಿ ನಡೆಯುವಂಥಾದ್ದು. "ಒಂದಾ ನೊಂದು ಕಾಲದಲ್ಲಿ..." ಎಂದು ಪ್ರಾರಂಭವಾಗುವ ಕಥೆ ರೋಚಕವಾಗಿರ ಬಹುದು; ಅದನ್ನು ಹೇಳುವ ಅಜ್ಜಿ ಪುಟಾಣಿ ಮಕ್ಕಳ ಪ್ರೀತಿಗೆ ಪಾತ್ರಳಾಗಬಹುದು. ಆದರೆ ಅಲ್ಲಿನ ಘಟನೆಗಳು ಕಾಲಾತೀತವಾಗಿ, ಸ್ವೇಚ್ಛೆಯಿಂದ ತೇಲುತ್ತಿದ್ದರೆ ಅವುಗಳು ವಿಶ್ವಾಸಾರ್ಹ ವಾಗುವುದಿಲ್ಲ. ಯಾರು, ಎಲ್ಲಿ, ಎಂದು, ಏಕೆ - ಎಂಬುದರ ಬಗ್ಗೆ ಮಾಹಿತಿ ಇತಿಹಾಸ ಹುಡುಕುತ್ತದೆ; ಹುಡುಕಿ, ಹೇಳುತ್ತದೆ. ಅವುಗಳ ಬಗ್ಗೆ ಖಚಿತತೆಯ ವಾಗ್ದಾನ ಪ್ರತಿ ಸಂದರ್ಭದಲ್ಲೂ ಸಲ್ಲ. ಆದರೆ ಅದರ ಪ್ರಾಮಾಣಿಕ ಅನ್ವೇಷಣೆ ಸಾಧ್ಯ.

**ಇತಿಹಾಸವನ್ನು ನಿರ್ವಚಿಸುವ ಯತ್ನ**

ಇತಿಹಾಸವನ್ನು 'ಮಾನವನ ಸಾಧನೆಗಳ ವಿಶ್ಲೇಷಣಾ ಪೂರ್ಣ ಕಥನ' ಎಂದು ಪರಿಭಾವಿಸಿದರೆ ಈ ಮೇಲಿನ ಅನೇಕ ವಿಚಾರಗಳನ್ನು ಅದರೊಳಗೆ ಹೊಂದಿಸಿ ಚರ್ಚಿಸ ಬಹುದು. ಆದರೆ ಎಷ್ಟೋ ಬಾರಿ ಇತಿಹಾಸದ ನಿರ್ವಚನೆಯು ಅದರ ವ್ಯಾಪ್ತಿ ಹರಹುಗಳನ್ನು ನಿರ್ಧರಿಸುವ ಕಾಯಕವಾಗುತ್ತದೆ. ಇದು ಅನೇಕ ರೀತಿಯಲ್ಲಿ ಪ್ರಕಟಗೊಳ್ಳುತ್ತದೆ. ಉದಾಹರಣೆಗಾಗಿ, ಒಂದು ಸಾಮಾನ್ಯ ಹಾಗೂ ಇತ್ತೀಚೆಗಿನ ತನಕ ಜನಪ್ರಿಯವಾದ ಪರಿಕಲ್ಪನೆ ರಾಜಕೀಯ ಇತಿಹಾಸದ್ದು. ಸೀಲಿ, ಫ್ರೀಮನ್ ಮೊದಲಾದವರು ಇತಿಹಾಸವನ್ನು 'ಹಿಂದಿನ ರಾಜಕೀಯದ ಕಥನಾವಳಿ' ಎಂದು ತಿಳಿದರು. ಜರ್ಮನಿಯ ಮಹಾ ಇತಿಹಾಸಕಾರ **ಲಿಯೊಪಾಲ್ಡ್ ಫಾನ್ ರಾಂಕ್**ನೂ ಬಹುತೇಕ ಇದೇ ದೃಷ್ಟಿಯಲ್ಲಿ ಇತಿಹಾಸವನ್ನು ಕಂಡು, ರಚಿಸಿದ. ಇದು ಇತಿಹಾಸದ ಪುಸ್ತಕಗಳಲ್ಲಿ ಹಾಸುಹೊಕ್ಕಾದ ಚಿತ್ರಣ. ರಾಜ ಮನೆತನಗಳ ಏಳು-ಬೀಳುಗಳ ಕಥೆ, ಅಲ್ಲಿರುವ ಉದಾತ್ತ ರಾಜರು, ದುಷ್ಟ ದೊರೆಗಳು, ಅವರು ಗೆದ್ದ, ಸೋತ ಯುದ್ಧಗಳು, ಮಾಡಿದ ಸಂಧಿಗಳು, ಕಟ್ಟಿದ ದೇವಾಲಯಗಳು, ಆದರಿಸಿದ ಕವಿಗಳು

- ಇವೆಲ್ಲಾ 'ರಾಜಕೇಂದ್ರೀತ ಇತಿಹಾಸ'ವನ್ನು ಸೃಷ್ಟಿಸುತ್ತವೆ. ಇತಿಹಾಸದಲ್ಲಿ ರಾಜರಿಗೆ ಹಾಗೂ ಅವರ ರಾಜಕೀಯಕ್ಕೆ ಅಷ್ಟೇಕೆ ಮನ್ನಣೆ? ಇದು ಬರೇ ಇತಿಹಾಸಕಾರನ ಆಯ್ಕೆಗೆ ಸಂಬಂಧಿಸಿದ ವಿಚಾರವಲ್ಲ. ಅಥವಾ ಹಿಂದಿನ ಕಾಲದಲ್ಲಿ ರಾಜ-ರಾಜಕೀಯವನ್ನು ಬಿಟ್ಟರೆ ಬೇರೆ ಎಲ್ಲವೂ ಗೌಣ ಎಂಬ ನಿಲುವೂ ಸರಿಯಲ್ಲ. ರಾಜರು ಅಥವಾ ಸಮಾಜದ ಪ್ರಭಾವಿ ಜನಗಳು ತಮ್ಮ ಶಕ್ತಿಯ ನಿರೂಪಣೆಗಾಗಿ ತಮ್ಮ ಕುರುಹುಗಳನ್ನು ಖಚಿತವಾಗಿ ಬಿಟ್ಟುಹೋಗುವುದು ಸಾಮಾನ್ಯ. ಇದು ಪ್ರಭುತ್ವದ ಒಂದು ಲಕ್ಷಣ. ಆಳುವವರು ತಮ್ಮ ಕೀರ್ತಿ ಆಚಂದ್ರಾರ್ಕವಾಗಿ ಉಳಿಯಬೇಕು ಎಂದು ಬಯಸುತ್ತಾರೆ. ಅದಕ್ಕಾಗಿ ಕವಿಗಳಿಂದ, ಲಿಪಿಕಾರರಿಂದ ಪ್ರಶಸ್ತಿಗಳನ್ನು, ಶಾಸನಗಳನ್ನು ಬರೆಸುತ್ತಾರೆ; ನಾಣ್ಯಗಳಲ್ಲಿ ತಮ್ಮ ಮುಖವನ್ನೋ, ಬಿರುದುಗಳನ್ನೋ ಮುದ್ರಿಸುತ್ತಾರೆ; ಭವ್ಯವಾದ ದೇವಾಲಯಗಳನ್ನು ಕಟ್ಟಿಸಿ, ಕೆಲವೊಮ್ಮೆ ದೇವರ ಹೆಸರಿನೊಂದಿಗೆ ತಮ್ಮ ಹೆಸರನ್ನು ಸಮೀಕರಿಸಿಕೊಂಡು "ರಾಜಾ ಪ್ರತ್ಯಕ್ಷ ದೈವತಂ" ಎಂಬ ಸ್ತುತಿಯನ್ನು ಸ್ಥಿರಗೊಳಿಸುವ ಪ್ರಯತ್ನ ಮಾಡುತ್ತಾರೆ; ಇನ್ನೆಷ್ಟೋ ಬಾರಿ ದತ್ತಿ, ದಾನಗಳನ್ನು ನೀಡಿ, ತಮ್ಮ ಔದಾರ್ಯದ ಹಿರಿಮೆಯನ್ನು ಅವಿನಾಶ ಶಿಲೆಯಲ್ಲಿ ಬರೆಸಿ ಮೆರೆಯುತ್ತಾರೆ. ಇವೆಲ್ಲವೂ ಮುಂದೆ ಇತಿಹಾಸಕಾರನಿಗೆ ಆಕರ ವಸ್ತುಗಳಾಗಿ ದೊರೆತು, ಆತನ ರಚನೆಗೆ ಒಂದು ನಿರ್ದಿಷ್ಟ ಸ್ವರೂಪವನ್ನು ನೀಡುತ್ತವೆ. ರಾಜ, ಅಥವಾ ಆತನ ಸಾಧನಾ ಸಮೃದ್ಧಿಯನ್ನು ಹೊರಗಿಟ್ಟು ಇತಿಹಾಸವನ್ನು ಬರೆಯಲು ಅಸಾಧ್ಯವೇನೋ ಎಂಬ ಭಾವನೆಯನ್ನು ಸೃಷ್ಟಿಸುತ್ತದೆ. ಆದರೆ ಈ ದಿನಗಳಲ್ಲಿ ರಾಜಕೇಂದ್ರೀತ ಇತಿಹಾಸದ ಬಗ್ಗೆ ಸ್ವಲ್ಪ ನಿರಾಸಕ್ತಿ ಕಂಡು ಬರುತ್ತಿದೆ. ಸಮಾಜದಲ್ಲಿ ಪ್ರಜಾಸತ್ತೆಯ ಅಲೆಗಳು ದಟ್ಟವಾದಂತೆ, ಅಲ್ಲಿನ ವಿವಿಧ ಘಟಕಗಳು ತಮ್ಮ ತಮ್ಮ ಶಕ್ತಿಯನ್ನು ಕಂಡುಕೊಂಡಂತೆ ರಾಜರುಗಳು ಸ್ವಲ್ಪ ಬದಿಗೆ ಸರಿಯುತ್ತಾರೆ. ಅವರಿಂದ ಆಳಿಸಿಕೊಂಡ ಅನೇಕರು ಇತಿಹಾಸದಲ್ಲಿ ತಮಗೆ ಈ ತನಕ ನಿರಾಕರಿಸಲ್ಪಟ್ಟ ಸ್ಥಾನವನ್ನು ಆಗ್ರಹಪೂರ್ವಕ ಕೇಳಿ ಪಡೆಯುತ್ತಾರೆ. ಆದರೂ ಇತಿಹಾಸದಲ್ಲಿ ರಾಜರ ವೈಭವಯುತ ಮೆರವಣಿಗೆ ನಡೆದೇ ಇದೆ.

ರಾಜಕೇಂದ್ರೀತ ಇತಿಹಾಸಕ್ಕೆ ಪೂರಕವಾದ ಇನ್ನೊಂದು ಜನಪ್ರಿಯ ಪರಿಕಲ್ಪನೆ ಇತಿಹಾಸವನ್ನು ಮಹಾವ್ಯಕ್ತಿಗಳ ಸಾಧನೆಗಳ ಒಟ್ಟು ಕಥಾನಕವಾಗಿ ಕಾಣುವುದು. **ಥಾಮಸ್ ಕಾರ್ಲೈಲ್** ಇತಿಹಾಸವನ್ನು 'ಮಹಾಪುರುಷರ ಜೀವನಗಾಥೆಗಳ ಮಹಾಸಂಕಲನ' ಎಂದು ನಿರ್ವಚಿಸಿದ. ಸಮಾಜದ ಸಾಧನೆ, ವೈಚಾರಿಕತೆಗಳೆಲ್ಲವೂ ಮಹಾವ್ಯಕ್ತಿಗಳ ಮೂಲಕ ಪ್ರಕಟವಾಗುತ್ತವೆ; ಆ ಕಾರಣದಿಂದಲೇ ಇತಿಹಾಸದಲ್ಲಿ ಮಹಾವ್ಯಕ್ತಿಗಳಿಗೆ ಹೆಚ್ಚು ಬೆಲೆ, ಎಂದು ಪ್ರತಿಪಾದಿಸಿದ. ಇದನ್ನು ವಿರೋಧಿಸಿ **ಕಾರ್ಲ್‌ಮಾರ್ಕ್ಸ್** 'ಭೌತಿಕವಾದ'ವನ್ನು ಇತಿಹಾಸಕ್ಕೆ ಅಳವಡಿಸಿ, ಆರ್ಥಿಕತೆಯ ಅಡಿಗಲ್ಲಿನಲ್ಲಿ ಮಾನವನು ಸಮಾಜದಲ್ಲಿ ಸೃಷ್ಟಿಸುವ ಸಂಬಂಧಗಳು, ಅವುಗಳಿಂದ ಹುಟ್ಟುವ ದ್ವಂದ್ವಗಳು ಹಾಗೂ ವರ್ಗಕಲಹಗಳನ್ನು ವಿವರಿಸಿದ. ಇತಿಹಾಸದ ವೈಚಾರಿಕತೆ, ಚಾಲನೆಗಳೆಲ್ಲವೂ ವೈರುಧ್ಯಪೂರಿತ ಆರ್ಥಿಕತೆ ಹಾಗೂ ಸಾಮಾಜಿಕ

ನೆಲೆಗಳಿಂದ ಹೊರಹೊಮ್ಮುವಂಥವು; ವ್ಯಕ್ತಿ, ವಿಚಾರಗಳೆಲ್ಲವೂ ಜೀವನದ ನೈಜ ಅನುಭವಗಳಿಂದ ಜನಿಸುತ್ತವೆ ಎಂದು ವಾದಿಸಿದ.

ಈವರೆಗೆ ಚರ್ಚಿಸಿದ ಇತಿಹಾಸದ ಪರಿಕಲ್ಪನೆಗಳು ಅದರ ಪರಿಧಿಯನ್ನು ನಿರ್ಧರಿಸುವ ಪ್ರಯತ್ನಗಳು. ಅದೆಷ್ಟು ದೊಡ್ಡದಿರಬೇಕು, ಅಥವಾ ಅದನ್ನೆಷ್ಟು ಸೀಮಿತಗೊಳಿಸಬೇಕು ಎಂಬ ಸಂದಿಗ್ಧತೆ ಇತಿಹಾಸಕಾರನನ್ನು ಕಾಡುತ್ತಲೇ ಇರುತ್ತದೆ. ಇತಿಹಾಸದ ವೈಶಾಲ್ಯವನ್ನು ತಿರಸ್ಕರಿಸುವುದು ಕಷ್ಟ; ಹಾಗೆಯೇ ನಡೆದದ್ದೆಲ್ಲಾ ಇತಿಹಾಸವೇ ಎನ್ನುವುದೂ ಅಸಾಧ್ಯ. ಹಾಗಾಗಿ ಇತಿಹಾಸವನ್ನು ನಿರ್ವಚಿಸುವಾಗ ನಿಖರತೆಯನ್ನು ತ್ಯಜಿಸಿ ಅದು ಮೂಲತಃ ಏನನ್ನು ಒಳಗೊಂಡಿರಬೇಕೆಂದು ತಿಳಿಸುವ ಪ್ರಯತ್ನ ಮಾಡುತ್ತಾರೆ. ಉದಾಹರಣೆಗಾಗಿ, ಹೆನ್ರಿ ಪಿರೆನ್ ಎಂಬ ಇತಿಹಾಸಕಾರನು "ಮಾನವನು ಸಮಾಜ ಜೀವಿಯಾಗಿ ಮಾಡಿದ ಕಾರ್ಯ, ಸಾಧನೆಗಳ ಕಥನವೇ ಇತಿಹಾಸ" ಎಂದ. ಈ ರೀತಿಯ ನಿರ್ವಚನೆ ಇತಿಹಾಸದ ಪರಿಧಿಯನ್ನು ಸಾಕಷ್ಟು ವಿಸ್ತರಿಸುತ್ತದೆ. ಆದರೆ ಇತಿಹಾಸದ ಬಗ್ಗೆ ನಮ್ಮ ಕಲ್ಪನೆ ಯಾವಾಗಲೂ ಒಂದೇ ಆಗ ಬೇಕೆಂದಿಲ್ಲ. ಅದು ಬದಲಾಗುತ್ತಲೇ ಇರುತ್ತದೆ. ಇದು ಹೇಗೆ ಸಾಧ್ಯ?

### ಜ್ಞಾನ ಪ್ರಕಾರ

ಇತಿಹಾಸವು ಒಂದು ಜ್ಞಾನ ಪ್ರಕಾರ. ಹಿಂದೆ ನಡೆದದ್ದೆಲ್ಲಾ ನಮಗೆ ತಿಳಿದಿಲ್ಲ; ನಮಗೆ ತಿಳಿದದ್ದೆಲ್ಲಾ ಇತಿಹಾಸವಾಗುವುದಿಲ್ಲ. ಅಂದರೆ, ಹಿಂದೆ ಏನು ನಡೆಯಿತು ಎಂದು ನಮಗೆ ತಿಳಿಯುವುದು ಅದರ ಬಗ್ಗೆ ನಮಗೆ ಮಾಹಿತಿ ದೊರೆತಾಗ ಮಾತ್ರ. ಹಿಂದೆ ನಡೆದ ಘಟನೆ, ಆಳಿದ ರಾಜ, ನಡೆದ ಯುದ್ಧಗಳು ತಮ್ಮ ಕುರುಹುಗಳನ್ನು ಬಿಟ್ಟು ಹೋಗದಿದ್ದರೆ ಅವುಗಳ ಬಗ್ಗೆ ನಮಗೆ ಯಾವ ಜ್ಞಾನವೂ ಇರಲು ಸಾಧ್ಯವಿಲ್ಲ. ಸಿಕ್ಕಿದ ಮಾಹಿತಿಗಳು ಎಷ್ಟೋ ಬಾರಿ ಅಪೂರ್ಣವೇ. ಇತಿಹಾಸದ ಆಕರಗಳು ಎಷ್ಟೇ ವಿಪುಲವಾಗಿದ್ದರೂ ಅವು ಅರೆಬರೆ ವಿವರ ಗಳನ್ನು ಮಾತ್ರ ನೀಡುತ್ತವೆ. ಅವುಗಳನ್ನು ಸೇರಿಸಿ, ಪೋಣಿಸಿ, ತನ್ನ ತಾರ್ಕಿಕ, ಊಹನಾಶಕ್ತಿ ಯಿಂದ ಕಥೆಯನ್ನು ಸಾಧ್ಯವಾದಷ್ಟು ಪೂರ್ತಿಗೊಳಿಸಿ, ಅದನ್ನು ವ್ಯಾಖ್ಯಾನಿಸಿ ಹೇಳುವ ಜವಾಬ್ದಾರಿ ಇತಿಹಾಸಕಾರನದ್ದು. ಈ ಅರ್ಥದಲ್ಲಿ ಇತಿಹಾಸವನ್ನು ಜ್ಞಾನಪ್ರಕಾರವಾಗಿ ಸೃಷ್ಟಿಸುವುದು ಇತಿಹಾಸಕಾರನೇ. ಆತನಿಲ್ಲದಿದ್ದರೆ ಹಿಂದೆ ನಡೆದ ಘಟನೆಗಳು ಕಾಲಗರ್ಭದಲ್ಲಿ ಸೇರಿ ಮರೆಯಾಗುತ್ತವೆ. ಆತನ ಅನ್ವೇಷಣೆ, ಸಂಶೋಧನೆ, ವಿಶ್ಲೇಷಣೆ, ವಿವರಣೆ, ಕಥಾ ನಿರೂಪಣೆಗಳು ಇತಿಹಾಸ ಜ್ಞಾನವನ್ನು ಸೃಷ್ಟಿಸಿ ಬೆಳೆಸುತ್ತವೆ. ಸಮಾಜಕ್ಕೆ ತನ್ನ ಹಿಂದಿನ ಅನುಭವಗಳ ಬಗ್ಗೆ ಪರಿಣಮಿಸುವ ವಿಸ್ಮೃತಿ (ಮರೆವು)ಯನ್ನು ಕಡಿಮೆ ಮಾಡುತ್ತವೆ. ಇತಿಹಾಸ ಪ್ರಜ್ಞೆಯನ್ನು ರೂಪಿಸುತ್ತವೆ.

### ಇಂದು-ಹಿಂದೆ

ಆದರೆ ಈ ಇತಿಹಾಸ ಪ್ರಜ್ಞೆ ಎಲ್ಲಾ ಸಮಾಜದಲ್ಲಿ, ಎಲ್ಲಾ ಕಾಲದಲ್ಲಿ ಒಂದೇ ರೀತಿ ಯಾಗಿರುವುದಿಲ್ಲ. ಹಿಂದೆ ನಡೆದ ಘಟನೆಗಳಲ್ಲಿ ಯಾವುದು ರೋಚಕ, ಯಾವುದು ಅರ್ಥ

ಪೂರ್ಣ, ಯಾವುದು ಪ್ರಸ್ತುತ ಎಂಬ ಚಿಂತನೆ ಮತ್ತು ಆಯ್ಕೆಯನ್ನು ಮಾಡುವುದು ಸಮಾಜ. ಇದು ಸಮಾಜದ ಅಸ್ತಿತ್ವವನ್ನು ಪ್ರಕಟಿಸುತ್ತದೆ. ಅವಶ್ಯಕತೆಗಳನ್ನು ಪೂರೈಸುತ್ತದೆ. ಹಿಂದೆ ಇತಿಹಾಸವು ರಾಜರ ಶಕ್ತಿ, ಪ್ರಭಾವಗಳನ್ನು ಜಾಹೀರುಗೊಳಿಸುವ ಮಾಧ್ಯಮವಾಗಿದ್ದರೆ, ಇಂದಿನ ಇತಿಹಾಸ ರಚನೆಯಲ್ಲಿ ಇಂದಿನ ಸಮಾಜದ ಅನೇಕ ಘಟಕಗಳು ತಮ್ಮ ಸ್ಥಾನವನ್ನು ಗಳಿಸಿಕೊಂಡಿವೆ. ರೈತ, ಕಾರ್ಮಿಕರು, ಬುಡಕಟ್ಟು ಜನಾಂಗಗಳು, ಕೆಳಸ್ತರ ವರ್ಗಗಳು, ಮಹಿಳೆ, ಮೊದಲಾದವರು ಇತಿಹಾಸದಲ್ಲಿ ತಮ್ಮ ಪಾತ್ರವನ್ನು ಅನ್ವೇಷಿಸಿ, ಸ್ಥಾಪಿಸತೊಡಗಿದ್ದಾರೆ. ಇದು ಬದಲಾಗುತ್ತಿರುವ ಸಮಾಜದ ಬದಲಾಗುತ್ತಿರುವ ಇತಿಹಾಸ ಪ್ರಜ್ಞೆ. ಇದನ್ನು **ವಿಜಿಂಗಾ** ಎಂಬ ಡಚ್ ಇತಿಹಾಸಕಾರನು, "ಒಂದು ನಾಗರಿಕತೆಯು ತನ್ನ ಭೂತಕಾಲದ ಆತ್ಮ ಚಿತ್ರಣವನ್ನು ತನಗೇ ಕೊಟ್ಟಾಗ ಅದು ಇತಿಹಾಸವಾಗುತ್ತದೆ", ಎಂದು ಅರ್ಥಪೂರ್ಣ ವಾಗಿ ತಿಳಿಸಿದ. ಇದೇ ಅರ್ಥದಲ್ಲಿ **ಬೆನೆಡಿಟ್ಟೋ ಕ್ರೋಚೆ,** "ಎಲ್ಲಾ ಇತಿಹಾಸದಲ್ಲೂ ಸಮ ಕಾಲೀನತೆಯು ಅಡಕವಾಗಿದೆ" ಎಂಬ ಮಾತನ್ನು ಹೇಳಿದ್ದು. ಅಂದರೆ ಇತಿಹಾಸ ಜ್ಞಾನವು ಹುಟ್ಟಿ ಬೆಳೆಯುವುದು ಸಮಾಜದ ಅವಶ್ಯಕತೆಗಳಿಗೆ ಅನುಗುಣವಾಗಿ. ಇತಿಹಾಸದಲ್ಲಿ ನಾವೆತ್ತುವ ಪ್ರಶ್ನೆಗಳೆಲ್ಲವೂ ನಮ್ಮ ಜೀವನದ, ಸಮಾಜದ ಪ್ರಶ್ನೆಗಳು. ಅವುಗಳ ವಾಹಕ ಇತಿಹಾಸಕಾರ. ಇದನ್ನೇ **ಇ.ಹೆಚ್.ಕಾರ್** ಎಂಬುವನು "ಇತಿಹಾಸವು ಇಂದು-ನಿನ್ನೆಗಳೊಡನೆ ನಡೆಯುವ ನಿರಂತರ ಸಂವಾದ" ಎಂದು ವಿವರಿಸಿದ್ದು. ಈ ಅರ್ಥದಲ್ಲಿ, ಇತಿಹಾಸದ ವಸ್ತು, ವ್ಯಾಪ್ತಿ, ಅದರಲ್ಲಿ ಹುಟ್ಟುವ ಪ್ರಶ್ನೆಗಳು, ಹುಡುಕುವ ಉತ್ತರಗಳೆಲ್ಲವೂ ಬದಲಾಗು ವಂಥಾದ್ದು. ನಾವು, ನಮ್ಮ ಸಮಾಜ ಬದಲಾದಂತೆ ಇತಿಹಾಸದ ಜ್ಞಾನವೂ ಬದಲಾಗುತ್ತದೆ.

**ಯಾತಕ್ಕೆ ಈ ಇತಿಹಾಸ?**

ಇತಿಹಾಸದ ಅಧ್ಯಯನವನ್ನು ನಿರುಪಯುಕ್ತ ಎಂದು ಹಳಿಯುವುದುಂಟು. ಆದರೆ ಇತಿಹಾಸದ ಅರ್ಥವನ್ನು ತಿಳಿದಾಗ ಅದರ ಪ್ರಾಮುಖ್ಯತೆಯ ಅರಿವಾಗುತ್ತದೆ. ಬೇರೆ ಒಂದು ಕಾಲದ, ನಮ್ಮ ಅಥವಾ ಬೇರೆ ದೇಶದ ಜನಗಳ ಸಾಧನೆ, ಜೀವನ ಕ್ರಮಗಳನ್ನು ತಿಳಿದು, ನಮ್ಮೊಡನೆ ಹೋಲಿಸಿಕೊಂಡು ನಡೆಸುವ ಅಧ್ಯಯನ ಖಂಡಿತವಾಗಿಯೂ ರೋಚಕವಾಗು ತ್ತದೆ. ಕುಳಿತಲ್ಲೇ ಬೇರೆ ಬೇರೆ ಕಾಲಕ್ಕೆ ಹೊಕ್ಕು ಬೇರೆ ಬೇರೆ ದೇಶ ಸಂಸ್ಕೃತಿಗಳ ಪರಿಚಯಿಸಿ ಕೊಳ್ಳುವ ವಿಶೇಷ ಶಕ್ತಿಯನ್ನು ಹೊಂದಿರುವ ಇತಿಹಾಸದ ಅಧ್ಯಯನ ವಿದೇಶ ಪ್ರವಾಸದ ಅನುಭವವನ್ನು ನೀಡಬಲ್ಲುದು ಎಂಬ ಮಾತು ದಿಟ. ಅದರಲ್ಲಿ ನಾವು ಭೇಟಿಯಾಗುವ ದೊಡ್ಡ-ಚಿಕ್ಕ ವ್ಯಕ್ತಿಗಳು, ಅವರ ಸಾಧನೆ, ಬೋಧನೆಗಳು ಎಷ್ಟೋ ಬಾರಿ ಸ್ವಾರಸ್ಯಪೂರ್ಣ. ಇದು ಕೇವಲ ಮನೋರಂಜನೆಯಷ್ಟೇ ಅಲ್ಲ. **ಫ್ರಾನ್ಸಿಸ್ ಬೇಕನ್‌**ನ ಪ್ರಕಾರ, "ಇತಿಹಾಸದ ಅಧ್ಯಯನವು ಮಾನವನನ್ನು ವಿವೇಕಿಯನ್ನಾಗಿ ಮಾಡುತ್ತದೆ". ನಮ್ಮ ಪೂರ್ವಜರು ಮಾಡಿದ ಸಾಧನೆಗಳು, ಅವರು ಕಂಡ ಸೋಲುಗಳು ನಮಗೆ ದಾರಿದೀಪಗಳಾಗಬಹುದು. ಅವರ ಅನುಭವಗಳ ಪ್ರಯೋಜನವನ್ನು ನಾವು ಪಡೆಯಬಹುದು. ಹಿಂದೆ ಏನು ನಡೆಯಿತು? ಯಾರು ಏನು ಮಾಡಿದರು? ಅದರ ಪರಿಣಾಮವೇನಾಯ್ತು? ಎಂಬ ಅರಿವು ನಮಗೆ

ಉಪಯುಕ್ತ ಪಾಠಗಳನ್ನು ನೀಡಬಹುದು. ಅವುಗಳನ್ನು ಗ್ರಹಿಸುವುದು ವಿವೇಕಿಗಳ ಲಕ್ಷಣ. ಈ ಪ್ರಯೋಜನವಾದಿ ಚಿಂತನೆಯನ್ನು ಇನ್ನಷ್ಟು ಪರಿಷ್ಕರಿಸಿ, ಇತಿಹಾಸವು ನಮ್ಮನ್ನು ನಾವು ಅರಿಯಲು ಅವಶ್ಯಕ ಎಂಬ ಮಾತನ್ನು **ಆರ್.ಜಿ. ಕಾಲಿಂಗ್ ವುಡ್** ಹೇಳಿದ್ದಾರೆ: "ತನ್ನ ಬಗ್ಗೆ ತಾನು ತಿಳಿದುಕೊಳ್ಳುವುದು ಎಂದರೆ, ತಾನು ಏನು ಮಾಡಲು ಶಕ್ತ ಎಂಬ ಅರಿವು; ಪ್ರಯತ್ನವನ್ನು ಮಾಡದೇ ತಾನೇನು ಮಾಡಲು ಶಕ್ತ ಎಂದು ತಿಳಿಯುವುದು ಅಸಾಧ್ಯವಾದುದರಿಂದ, ಹಿಂದೆ ಮಾನವನೇನು ಮಾಡಿದ ಎಂಬ ತಿಳುವಳಿಕೆ ತಾನೇನು ಮಾಡಬಲ್ಲೆ ಎಂಬುವನ್ನು ಸೂಚಿಸಲು ಸಾಧ್ಯ". ಇತಿಹಾಸದ ಅಧ್ಯಯನವು ರಾಷ್ಟ್ರೀಯತೆಯ ಬೆಳವಣಿಗೆಯ ಸಂದರ್ಭದಲ್ಲಿ ಅದಕ್ಕೆ ಪೂರಕವಾಗಿ ಬೆಳೆಯಿತು. ಹಿಂದಿನ ಸಾಧನೆಗಳ ಬಗ್ಗೆ ಹೆಮ್ಮೆ, ವೈಭವಗಳ ಬಗ್ಗೆ ಅಭಿಮಾನ, ನೋವುಗಳ ಬಗ್ಗೆ ಆಕ್ರೋಶ, ಇವೆಲ್ಲವೂ ರಾಷ್ಟ್ರೀಯತೆಯನ್ನು ರೂಪಿಸಲು ಸಹಾಯಕವಾದುವು. ಆದರೆ ಕೆಲವೊಮ್ಮೆ ಈ ಭಾವನೆಗಳು ವಿಕೃತ ರೂಪವನ್ನು ಪಡೆದು ವಿಭಜನಾ ಮನೋಭಾವ-ಸಿದ್ಧಾಂತಗಳನ್ನು ಸೃಷ್ಟಿಸಿ, ಸಮಾಜದ ಬಿರುಕುಗಳನ್ನು ಹೆಚ್ಚಿಸಿದ್ದುಂಟು. ಸ್ವಸ್ಥ ಸಮಾಜದ ರಚನೆಗೆ ಇತಿಹಾಸವು ಸಹಾಯಕ ಎಂಬುದು ಎಷ್ಟು ಸತ್ಯವೋ, ಒಳ್ಳೆಯ, ತಿಳಿಯಾದ ಇತಿಹಾಸ ರಚನೆಯು ಸ್ವಸ್ಥ ಸಮಾಜದಿಂದ ಮಾತ್ರ ಸಾಧ್ಯ ಎಂಬ ಮಾತು ಅಷ್ಟೇ ದಿಟ.

**ಇತಿಹಾಸ ಚಿಂತನೆ**

ಇತಿಹಾಸದ ಬಗ್ಗೆ ಚಿಂತನೆಯು ನಿರಂತರವಾಗಿ ನಡೆದಿದೆ. ಇದು ಎರಡು ಸ್ತರಗಳಲ್ಲಿ ನಡೆಯಲು ಸಾಧ್ಯ. ಒಂದು, ಹಿಂದೆ ನಡೆದ ಘಟನಾವಳಿಗಳನ್ನು ವೀಕ್ಷಿಸಿ ಅವುಗಳ ಪೂರ್ಣ ಚಿತ್ರಣದ ಬಗ್ಗೆ, ಅಥವಾ ಅವುಗಳಲ್ಲಿ ಅಡಕವಾಗಿರುವ ಅರ್ಥ, ಒಗಟುಗಳ ಬಗ್ಗೆ ಅಥವಾ ಇತಿಹಾಸದ ಗತಿ, ಶೃತಿಗಳ ಬಗ್ಗೆ ಇತಿಹಾಸಕಾರರು ಹಾಗೂ ದಾರ್ಶನಿಕರು ಸಾಕಷ್ಟು ಚಿಂತನೆ ನಡೆಸಿದ್ದಾರೆ. ಇನ್ನೊಂದು ಸ್ತರದಲ್ಲಿ ಇತಿಹಾಸವನ್ನು ಒಂದು ಜ್ಞಾನ ಪ್ರಕಾರವಾಗಿ ಗ್ರಹಿಸಿ, ಇತಿಹಾಸಕಾರನು ತಾನು ಮಾಡುವ ಕೆಲಸದ ಬಗ್ಗೆ, ಅದರಲ್ಲಿ ಬಳಸುವ ವಿಧಾನ, ತರ್ಕಗಳ ಕುರಿತು, ಅಥವಾ ಅದರಲ್ಲಿ ಹುಟ್ಟುವ ಸತ್ಯಗಳ ವಿಚಾರವಾಗಿ ಚರ್ಚೆ, ಚಿಂತನೆಗಳನ್ನು ನಡೆಸಿದ್ದಾನೆ. ಇವೆರಡು ಬಗೆಯ ಜಿಜ್ಞಾಸೆಗಳೂ ಇತಿಹಾಸದ ಸ್ವರೂಪ ವಿಶೇಷಗಳ ಬಗ್ಗೆ ಬೆಳಕು ಚೆಲ್ಲುತ್ತವೆ.

ಇತಿಹಾಸವು ಒಂದು ಗಂಭೀರ ಅಧ್ಯಯನ ವಿಷಯವಾಗಿ ಬೆಳೆದದ್ದು ಗ್ರೀಕರ ಕೈಯಲ್ಲಿ. **ಹೆರೊಡೊಟಸ್** (ಕ್ರಿ.ಪೂ. ೫ನೇ ಶತಮಾನ) ಗ್ರೀಕ್ ಇತಿಹಾಸಕಾರರಲ್ಲಿ ಮೊದಲಿಗ ಹಾಗೂ ಪ್ರಮುಖ ಎಂದು ಪರಿಗಣಿಸಲ್ಪಟ್ಟಿದ್ದಾನೆ; ಆ ಕಾರಣದಿಂದಲೇ ಆತನಿಗೆ ಪಿತೃಸ್ಥಾನ (Father of History) ಪ್ರಾಪ್ತವಾಗಿದೆ. ಹೆರೊಡೊಟಸನಿಗೂ ಮೊದಲು ಇತಿಹಾಸವು ಅನ್ವೇಷಣೆ, ಅಥವಾ ಸಂಶೋಧನೆಯಾಗಿರಲಿಲ್ಲ. ಹಿಂದೆ ನಡೆದ ವಿಶೇಷ ಘಟನೆಗಳನ್ನು ಕುರಿತು ಕಾವ್ಯ, ಲಾವಣಿಗಳನ್ನು ರಚಿಸಿ ಹಾಡಿ ರಂಜಿಸುವ ಸಂಪ್ರದಾಯವಷ್ಟೇ ಆಗಿತ್ತು. ತನಗೆ ತಿಳಿದದ್ದನ್ನು ಅಥವಾ ತಾನು ಕೇಳಿದ್ದನ್ನು ಇನ್ನೊಬ್ಬರಿಗೆ ವರ್ಗಾಯಿಸುವ ಕಾಯಕ ಸಂತೋಷ ನೀಡಬಹುದೆ

ಹೊರತು ಸಂಶೋಧನೆ ಆಗಲಾರದು. ಹೆರೊಡೊಟಸ್ ಪರ್ಶಿಯನ್ ಯುದ್ಧಗಳು ಎಂಬ ಗ್ರಂಥವನ್ನು ರಚಿಸಿ, ಗ್ರೀಕ್ ಮತ್ತು ಪರ್ಶಿಯನ್‌ರ ನಡುವೆ ನಡೆದ ಕಲಹ, ಯುದ್ಧಗಳನ್ನು ವಿವರಿಸಿದ. ತಾನು ಅವುಗಳ ಪ್ರತ್ಯಕ್ಷದರ್ಶಿಯಲ್ಲದಿದ್ದರೂ, ಅದರಲ್ಲಿ ಭಾಗವಹಿಸಿದವರನ್ನು ಕಂಡು ಮಾಹಿತಿಗಳನ್ನು ಸಂಗ್ರಹಿಸಿ, ಅವುಗಳನ್ನು ಹೊಂದಿಸಿ, ತುಲನೆ ಮಾಡಿ, ಯಾವುದು ಸತ್ಯ, ಯಾವುದು ಪೊಳ್ಳು ಎಂದು ನಿಷ್ಕರ್ಶೆ ಮಾಡಿ ನಡೆದ ಘಟನೆಗಳನ್ನು ಸತ್ಯನಿಷ್ಠವಾಗಿ ವಿವರಿಸಲು ಪ್ರಯತ್ನಿಸಿದ್ದೇನೆ ಎಂದು ಹೆರೊಡೊಟಸ್ ತಿಳಿಸಿದ್ದಾನೆ. ಆತ ರಮ್ಯ ಕಥೆಗಾರ; ಆದರೆ ಆತನ ಕೃತಿ ಅಧ್ಯಯನದ ಫಲ. ಹೆರೊಡೊಟಸನು ಬೇರೆ ಬೇರೆ ಸ್ಥಳಗಳನ್ನು ಸಂದರ್ಶಿಸಿ, ಅಲ್ಲಿನ ಜನ, ಕ್ರಮಗಳನ್ನು ಅರಿಯಲು ಪ್ರಯತ್ನಿಸಿದ. ಆತನ ಅಧ್ಯಯನದ ಪರಿಧಿ ಬಹಳ ದೊಡ್ಡದಲ್ಲ. ಅದು ಗ್ರೀಕ್ ಪ್ರಪಂಚಕ್ಕೆ ಸೀಮಿತವಾದದ್ದು ಹಾಗೂ ತನ್ನ ತಲೆಮಾರನ್ನು ಬಿಟ್ಟು ಬಹಳ ಹಿಂದಿನದಲ್ಲ. ಪರಕೀಯರಾದ ಪರ್ಶಿಯನರ ಬಗ್ಗೆ ಆತನ ಕಲ್ಪನೆ ವಾಸ್ತವತೆಯ ತಳಹದಿಯನ್ನು ಆಗಾಗ ಬಿಟ್ಟೇಳುವಂಥಾದ್ದು. ಗ್ರೀಕೇತರ ಜನರ ಕುರಿತು ಆತನ ವಿವರಣೆ, ತೀರ್ಪುಗಳು ಎಷ್ಟೋ ಬಾರಿ ವಿಕೃತಿ, ಉತ್ಪ್ರೇಕ್ಷೆಗಳಿಂದ ಕೂಡಿವೆ. ಕೆಲವೊಮ್ಮೆ ಅತಿಮಾನುಷ, ಅಸಾಧಾರಣ ವಿಷಯಗಳನ್ನು ಸಹಜವೆಂದು ನಂಬುವ ಅಮಾಯಕನಾಗಿ ಕಂಡುಬರುತ್ತಾನೆ. ಇದಲ್ಲದೆ ಆತನ ಇತಿಹಾಸ ಪ್ರತ್ಯಕ್ಷದರ್ಶಿಗಳ ಸಾಕ್ಷಿಗಳನ್ನು ಅವಲಂಬಿಸಿರುವುದರಿಂದ, ಬೇರೆ ಆಕರಗಳ ಅಧ್ಯಯನವು ಬೆಳೆಯದ್ದರಿಂದ, ಹೆರೊಡೊಟಸನ ಸಂಶೋಧನೆಯ ವ್ಯಾಪ್ತಿ ಬಹಳಷ್ಟು ಸಂಕುಚಿತವಾಗಿಯೇ ಇತ್ತು. ಆದರೆ ಇತಿಹಾಸ ಅಧ್ಯಯನದಲ್ಲಿ ಆತನ ಸ್ಥಾನ ದೊಡ್ಡದು. ಆತನ ಮಾದರಿಯನ್ನು ಥುಸಿಡೈಡಿಸ್, ಕ್ಸೆನೊಫೋನ್ ಮೊದಲಾದ ಗ್ರೀಕ್ ಇತಿಹಾಸಕಾರರು ಹಾಗೂ ಟ್ಯಾಸಿಟಸ್, ಲಿವಿ ಮೊದಲಾದ ರೋಮಿನ ಇತಿಹಾಸಕಾರರು ಮುಂದುವರಿಸಿ ಬೆಳೆಸಿದರು.

ಇತಿಹಾಸ ಚಿಂತನೆಯಲ್ಲಿ ಒಂದು ಜನಪ್ರಿಯ ವಿಧ, ಇತಿಹಾಸವನ್ನು ಮಹಾವ್ಯಕ್ತಿಗಳ ಸಾಧನೆ ಸರಣಿಗಳನ್ನಾಗಿ ಕಾಣುವುದು. ಹತ್ತೊಂಭತ್ತನೆ ಶತಮಾನದ ಪ್ರಸಿದ್ಧ ಬ್ರಿಟಿಷ್ ಸಾಹಿತಿ ಹಾಗೂ ಇತಿಹಾಸಕಾರ **ಥಾಮಸ್ ಕಾರ್ಲೈಲ್** ಇತಿಹಾಸವನ್ನು 'ಮಹಾಪುರುಷರ ಯೋಜನೆ, ಸಾಧನೆ, ಯೋಚನೆ ಹಾಗೂ ಜೀವನಗಾಥೆಗಳ ಒಂದು ಮಹಾಸಂಕಲನ' ಎಂದು ವಿವರಿಸಿದ. ಸಮಾಜದ ಎಲ್ಲಾ ಅಮೂರ್ತ ಶಕ್ತಿ, ಸೃಜನಶೀಲತೆಗಳು ಕೆನೆಗಟ್ಟಿ ಪ್ರಕಟವಾಗುವುದು ಮಹಾಪುರಷರಲ್ಲಿ. ಅವರ ವಿಶೇಷಶಕ್ತಿ ಸಮಾಜಕ್ಕೆ ಚಾಲನೆ ನೀಡುತ್ತದೆ. ಅವರಿಂದ ನಿಜವಾದ ಸಾಧನೆಗಳು ಸಾಧ್ಯವಾಗುತ್ತವೆ. ಸಮಾಜದ ಭಾವನೆಗಳಿಗೆ, ಆಶೋತ್ತರಗಳಿಗೆ, ನೋವು ಆಕ್ರೋಶಗಳಿಗೆ ಮಾತಿನ, ಕಾರ್ಯದ, ರೂಪಕೊಟ್ಟು ಸಾಧನೆಗಳನ್ನಾಗಿ ಮಾಡುವ ಶಕ್ತಿ ಮಹಾವ್ಯಕ್ತಿಗಳಿಗೆ ಮಾತ್ರ. ಕಾರ್ಲೈಲ್‌ನ ಅಭಿಪ್ರಾಯದಲ್ಲಿ ಮಹಾಪುರುಷರು ರಾಜರೇ ಆಗಬೇಕೆಂದಿಲ್ಲ. ಶೇಕ್ಸ್‌ಪಿಯರ್, ಮಿಲ್ಟನ್‌ರಂಥ ಮಹಾಸಾಹಿತಿಗಳು, ಯೇಸು, ಬುದ್ಧರಂಥ ಪ್ರವಾದಿಗಳು ಅಥವಾ ಧರ್ಮಸ್ಥಾಪಕರು, ಅಲೆಕ್ಸಾಂಡರ್, ನೆಪೊಲಿಯನ್ ಮುಂತಾದ ಮಹತ್ವಾಕಾಂಕ್ಷಿ ವಿಜಯಿಗಳು - ಇವರೆಲ್ಲಾ ಇತಿಹಾಸದ ಗತಿಯನ್ನು ಚುರುಕುಗೊಳಿಸಿದವರು,

ಅಥವಾ ಬದಲಾಯಿಸಿದವರು. ಮಾನವನ ಸಾಧನೆ, ಸಾಧ್ಯತೆಗಳಿಗೆ ಆಕಾರವನ್ನಿತ್ತವರು. ಈ ಅರ್ಥದಲ್ಲಿ ಇತಿಹಾಸದಲ್ಲಿ ಮಹಾಪುರುಷರು ವಿಜೃಂಭಿಸಿದರೆ ತಪ್ಪೇನಲ್ಲ ಎಂಬ ಅಭಿಪ್ರಾಯವನ್ನು ಕಾರ್ಲೈಲ್ ಮಂಡಿಸಿದ. ಇತಿಹಾಸದಲ್ಲಿ ಮಹಾವ್ಯಕ್ತಿಗಳ ಪಾತ್ರವನ್ನು ಅಲ್ಲಗಳೆಯಲೂ ಖಂಡಿತ ಅಸಾಧ್ಯ. ಆದರೆ ಅವರ ವಿಶಿಷ್ಟ ಸಾಧನೆಗಳಿಗೆ ಅನುವು ಮಾಡಿ ಕೊಟ್ಟ ಅನೇಕ ಅನಾಮಧೇಯರನ್ನು, ಸಾಮಾಜಿಕ, ಆರ್ಥಿಕ ಸನ್ನಿವೇಶಗಳನ್ನು ಪರಿಗಣಿಸು ವುದು ಅವಶ್ಯ. ಇನ್ನೊಂದು ವಾದದ ಪ್ರಕಾರ ಎಲ್ಲಾ ವಿಚಾರ, ಸಿದ್ಧಾಂತಗಳು ಹುಟ್ಟುವುದು ಜೀವನಾನುಭವದಿಂದ - ಬೇರೆ ಬೇರೆ ಪರಿಸರಗಳಲ್ಲಿ, ಬೇರೆ ಬೇರೆ ಒತ್ತಡಗಳಿಂದ. ಯಾವ ಸಾಹಿತಿ ಅಥವಾ ಚಿಂತಕನೂ ತನ್ನ ವಿಚಾರಗಳನ್ನು ತೀರ ಹೊಸದಾಗಿ, ಶೂನ್ಯದೊಳಗಿಂದ ಸೃಷ್ಟಿಸುವುದಿಲ್ಲ. ಅವುಗಳ ಜನನದಲ್ಲಿ ಆತನ ಪಾತ್ರ ಓರ್ವ ಸೂಲಗಿತ್ತಿಯದ್ದಷ್ಟೇ. ಈ ಕಲ್ಪನೆ ಚರ್ಚಾತೀತವಲ್ಲದಿದ್ದರೂ ಮಹಾವ್ಯಕ್ತಿಗಳು ಇತಿಹಾಸದಲ್ಲಿ ಎಷ್ಟೋ ಬಾರಿ ನಿರ್ಣಾಯಕ ಪಾತ್ರವಹಿಸಬಲ್ಲರು ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

ಹತ್ತೊಂಭತ್ತನೆ ಶತಮಾನದ ಇನ್ನೊಬ್ಬ ಪ್ರಭಾವಶಾಲಿ ಚಿಂತಕ ಕಾರ್ಲ್‌ಮಾರ್ಕ್ಸ್. ಆತನನ್ನು ಇತಿಹಾಸಕಾರನೆಂದು ಗುರುತಿಸುವುದು ಕಷ್ಟವಾದರೂ ಇತಿಹಾಸದ ಬಗ್ಗೆ ಆತನ ವಿಚಾರಗಳು ಹಾಗೂ ಅವುಗಳ ಪ್ರಭಾವ ಗಮನಾರ್ಹ. ಆತನ ಆಲೋಚನೆಗಳು ಹಾಗೂ ಸಿದ್ಧಾಂತಗಳು ಅವನು ಬರೆದ *ಕ್ಯಾಪಿಟಲ್, ದಿ ಕಮ್ಯೂನಿಷ್ಟ್ ಮ್ಯಾನಿಫೆಸ್ಟೊ, ಪವರ್ಟಿ ಆಫ್ ಫಿಲಾಸಫಿ, ದಿ ಜರ್ಮನ್ ಐಡಿಯಾಲಜಿ, ಎ ಕಾಂಟ್ರಿಬ್ಯೂಶನ್ ಟು ದ ಕ್ರಿಟೀಕ್ ಆಫ್ ಪೊಲಿಟಿಕಲ್ ಇಕಾನಮಿ*, ಮೊದಲಾದ ಅನೇಕ ಗ್ರಂಥಗಳಲ್ಲಿ ಅಡಕವಾಗಿವೆ. ಆತನ ಸ್ನೇಹಿತ ಹಾಗೂ ಸಹಯೋಗಿ ಫ್ರೆಡೆರಿಕ್ ಎಂಗೆಲ್ಸ್ ಇವುಗಳ ಬೆಳವಣಿಗೆಯಲ್ಲಿ ಸಕ್ರಿಯವಾದ ಪಾತ್ರ ವಹಿಸಿದ್ದ. ಮಾರ್ಕ್ಸ್‌ನ ಚಿಂತನೆಯನ್ನು 'ಐತಿಹಾಸಿಕ ಭೌತಿಕವಾದ'ದ ಚೌಕಟ್ಟಿನಲ್ಲಿ ಅರ್ಥೈಸಬೇಕು. ಅದರ ಪ್ರಕಾರ ನಮ್ಮ ವಿಚಾರ, ಮೌಲ್ಯಗಳೆಲ್ಲವೂ ಜೀವನ ಜನ್ಯ. ಜೀವನವು ಚಾಲನೆ ಪಡೆಯುವುದು ಆರ್ಥಿಕ ಹಾಗೂ ಸಾಮಾಜಿಕ ಸ್ತರಗಳಲ್ಲಿ. ತಾನು ಬದುಕಲು ಅಗತ್ಯವಾದ ಆಹಾರವನ್ನು ಉತ್ಪಾದಿಸಲೇಬೇಕಾಗುವ ಹಿರಿಮೆಯೋ, ದುರಂತವೋ ನಾಗರಿಕ ಸ್ಥಿತಿಯನ್ನೇರಿದ ಮಾನವನದ್ದು. ಇದು ನಡೆಯುವುದು ಸಮಾಜದಲ್ಲಿ; ಇದು ಆರ್ಥಿಕತೆ-ಸಾಮಾಜಿಕ ಸಂಬಂಧಗಳನ್ನು ಸೃಷ್ಟಿಸುತ್ತವೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಮಾನವನು ಇತರರೊಡನೆ ಏರ್ಪಡಿಸಿದ ಸಂಬಂಧಗಳು, ಅವುಗಳಲ್ಲಿ ಹುಟ್ಟುವ ಬಂಧಗಳು, ದ್ವಂದ್ವಗಳು, ವರ್ಗಗಳು, ವರ್ಗ ಸಮರಗಳು, ಪ್ರಗತಿಗಾಮಿ ವೈರುಧ್ಯಗಳನ್ನು ಸೃಷ್ಟಿಸುತ್ತವೆ. ಇತಿಹಾಸವು ಪುರೋಗಾಮಿಯಾಗಿ ಕಂಡುಬಂದರೂ ಅಲ್ಲಿ ವರ್ಗಭೇದ, ವರ್ಗಕಲಹ ಹಾಗೂ ಶೋಷಣಾ ವ್ಯವಸ್ಥೆಯ ನೆಲೆಯಾಗಿವೆ. ಹತ್ತೊಂಭತ್ತನೆ ಶತಮಾನದಲ್ಲಿ ಗಟ್ಟಿಯಾಗಿ ಬೆಳೆದು ನಿಂತ ಬಂಡವಾಳಶಾಹಿ ವ್ಯವಸ್ಥೆಯನ್ನು ನಿರ್ದಾಕ್ಷಿಣ್ಯವಾಗಿ ವಿಶ್ಲೇಷಿಸಿದ ಮಾರ್ಕ್ಸ್, ಅದರ ಹುಟ್ಟು ಹಾಗೂ ಅದನ್ನು ಸೃಷ್ಟಿಸಿದ ಹಿಂದಿನ ಸಾಮಾಜಿಕ, ಆರ್ಥಿಕ ಸನ್ನಿವೇಶಗಳನ್ನು ಚರ್ಚಿಸಿದ. ಆತನ ಪ್ರಕಾರ ಮಾನವನು ಐತಿಹಾಸಿಕವಾಗಿ ಗುಲಾಮಗಿರಿ ಆಧಾರಿತ ಸಮಾಜದಿಂದ

ಮುನ್ನಡೆದು, ಊಳಿಗಮಾನ್ಯ ವ್ಯವಸ್ಥೆಯನ್ನು ಅನುಭವಿಸಿ, ಬಂಡವಾಳಶಾಹಿ ಹಂತವನ್ನು ತಲುಪಿದವನು. ಇವೆಲ್ಲವೂ ವರ್ಗಭೇದ, ವರ್ಗಕಲಹಗಳಿಂದ ಕೂಡಿದ ಶೋಷಣಾ ಪ್ರೇಮಿ ಸಮಾಜಗಳು. ಇವುಗಳೆಲ್ಲವೂ ಉತ್ಪಾದನಾ ವಿಧಾನ ಹಾಗೂ ಉತ್ಪಾದನಾ ಸಂಬಂಧಗಳಲ್ಲಿ ಹುಟ್ಟಿದ ವೈರುಧ್ಯಗಳ ಫಲವಾಗಿ ಕುಸಿದು ನಾಶವಾದಂಥವು ಅಥವಾ ನಾಶವಾಗುವಂಥವು. ಇವುಗಳಲ್ಲಿ ಬಂಡವಾಳಶಾಹಿ ವ್ಯವಸ್ಥೆ ತನ್ನ ಹೆಚ್ಚಿನ ದಕ್ಷತೆಯಿಂದ ಶೋಷಣೆಯನ್ನು ಸಂಸ್ಥೀಕರಿಸಿದೆ. ಇದರ ಹಿಂದಿನ ವ್ಯವಸ್ಥೆಗಳಂತೆ ಇದೂ ಕೊನೆಗೊಳ್ಳುವಂಥಾದ್ದೇ. ಆದರೆ ಆ ಗತಿಯನ್ನು ತೀವ್ರಗೊಳಿಸಿದರೆ ದುಡಿಸಿಕೊಳ್ಳುವವರೆಗೆ ಹೆಚ್ಚು ಕ್ಷೇಮ. ಬಂಡವಾಳಶಾಹಿ ವ್ಯವಸ್ಥೆಯನ್ನು ನಿಗ್ರಹಿಸಿ, ಕಿತ್ತೊಗೆಯುವುದು ಶೋಷಿತ ಕಾರ್ಮಿಕವರ್ಗದ ಕರ್ತವ್ಯ. ಈ ಮಹಾಯುದ್ಧದಲ್ಲಿ ಕಾರ್ಮಿಕರು ಕಳೆದುಕೊಳ್ಳುವುದು ತಮ್ಮ ಶೃಂಖಲೆಗಳನ್ನು ಮಾತ್ರ. ಈ ಕರ್ತವ್ಯವನ್ನು ಪೂರೈಸಿದಾಗ ವರ್ಗಶೋಷಣೆ ಕೊನೆಗೊಂಡು, ಸಮಾನತೆಯ ಸ್ವರ್ಗವನ್ನು ಕಟ್ಟಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕಾರ್ಮಿಕವರ್ಗವು ಕಾರ್ಯೋನ್ಮುಖರಾಗಬೇಕು ಎಂದು ಮಾರ್ಕ್ಸ್ ಕರೆ ನೀಡಿದ. ಆತನ ಪ್ರಕಾರ ಇತಿಹಾಸದ ಚಾಲನೆ, ಗತಿ, ಗುರಿಗಳು ಖಚಿತ; ಆರ್ಥಿಕ, ಸಾಮಾಜಿಕ ಶಕ್ತಿಗಳು ಇವುಗಳನ್ನು ನಿರ್ಧರಿಸುತ್ತವೆ. ಅವುಗಳಿಗೆ ಅನುಗುಣ ವಾಗಿ ಮನುಷ್ಯನು ತನ್ನ ಚುಕ್ಕಾಣಿಯನ್ನು ಹಿಡಿಯಬೇಕೆ ವಿನಹ ಏಕಾಂಗಿಯಾಗಿ ಏನನ್ನೂ ಮಾಡಲು ಅಶಕ್ತ. ಸಮಾಜವಾದದ ಪತಾಕೆಯನ್ನು ಹಿಡಿದು ನಡೆದ ಚಳುವಳಿಗಳು ಹಾಗೂ ಆ ಹೆಸರಿನಲ್ಲಿ ನಡೆದ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಪ್ರಯೋಗಗಳು ಮಾರ್ಕ್ಸ್ ನನ್ನು ಪ್ರವಾದಿಯ ಸ್ಥಾನಕ್ಕೆ ಏರಿಸಿದುವು. ಅವುಗಳ ಸೋಲು-ಗೆಲುವುಗಳು ಹಾಗೂ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಬಂಡವಾಳಶಾಹಿಯ ಬದಲಾದ ಸ್ವರೂಪ, ಕಾರ್ಯವರಸೆ, ಪ್ರಭಾವಗಳು ಆತನ ಪ್ರವಾದಿತ್ವದ ಪ್ರಖರತೆಯನ್ನು ಕಸಿದುಕೊಂಡದ್ದು ನಿಜ. ಆದರೆ ಆತನ ಚಿಂತನೆಯ ಆಶಯ, ಪ್ರಾಮುಖ್ಯತೆಗಳನ್ನು ಅಲ್ಲಗಳೆಯಲು ಅಸಾಧ್ಯ. ಮಾರ್ಕ್ಸ್‌ವಾದವೂ ಮಾರ್ಕ್ಸ್‌ನೊಂದಿಗೆ ಕೊನೆಗೊಳ್ಳದೆ ಆತನ ಅನೇಕ ಅನುಯಾಯಿಗಳು, ವಿಮರ್ಶಕರು, ಹಾಗೂ ಇತಿಹಾಸಕಾರರು ಈ ಚಿಂತನೆಯನ್ನು ಶ್ರೀಮಂತಗೊಳಿಸಿದ್ದಾರೆ.

ಇಪ್ಪತ್ತನೇ ಶತಮಾನದ ಮೊದಲಾರ್ಧದಲ್ಲಿ ನಡೆದ ಎರಡು ಜಾಗತಿಕ ಯುದ್ಧಗಳು ಇತಿಹಾಸದ ಚಿಂತನೆಗೆ ಹೊಸ ಆಯಾಮವನ್ನು ನೀಡಿದುವು. ಮಾನವನು ಕಟ್ಟಿದ ನಾಗರಿಕತೆ ಯನ್ನು ಆತನೇ ನಾಶಗೊಳಿಸುವ ವಿಕೃತ ಕ್ರೀಡೆಯ ಬಗ್ಗೆ ಸಾಕಷ್ಟು ಆತಂಕ ಹುಟ್ಟಿತು. ವಿಜ್ಞಾನಕ್ಕೆ ಲಭ್ಯವಾದ ವರ ಭಸ್ಮಾಸುರನಿಗೆ ಸಿಕ್ಕಿದ ವರ ಎಂಬ ಸಂಶಯ ಮೂಡಿತು. ಈ ಸಮಯದಲ್ಲಿ, ಅಂದರೆ ಮೂವತ್ತು-ನಲ್ವತ್ತರ ದಶಕದಲ್ಲಿ, ಇತಿಹಾಸಕಾರ ಅರ್ನಾಲ್ಡ್ ಜೆ. ಟಾಯ್ನ್‌ಬಿ *ಎ ಸ್ಟಡಿ ಆಫ್ ಹಿಸ್ಟರಿ* ಎಂಬ ಹತ್ತು ಸಂಪುಟಗಳ ಮಹಾ ಕೃತಿಯನ್ನು ಬರೆದರು. ಇದರಲ್ಲಿ ಇತಿಹಾಸದಲ್ಲಿ ಜನಿಸಿ, ನಶಿಸಿದ ಇನ್ನೂ ಉಳಿದ ಅಥವಾ ರೂಪಾಂತರ ಗೊಂಡ ಇಪ್ಪತ್ತೊಂದು ನಾಗರಿಕತೆಗಳನ್ನು ವಿಸ್ತಾರವಾಗಿ, ತುಲನಾತ್ಮಕವಾಗಿ ಅಧ್ಯಯನ ಮಾಡಿದ್ದಾರೆ. ಅವುಗಳ ಉಗಮ, ಬೆಳವಣಿಗೆ, ಶಿಥಿಲತೆ ಹಾಗೂ ಅಂತ್ಯಗಳ ಬಗ್ಗೆ ಸಿದ್ಧಾಂತಿಸಿದ್ದಾರೆ. ಇವರ ಪ್ರಕಾರ

ನಾಗರಿಕತೆಯ ಹುಟ್ಟಿಗೆ ಒಂದು ಜನಾಂಗದ ಶ್ರೇಷ್ಠತೆ ಅಥವಾ ಅದಕ್ಕೆ ದತ್ತವಾದ ಪರಿಸರದ ಲಾಭ ಕಾರಣವಲ್ಲ. ಬದಲಾಗಿ ಅದು ಎದುರಿಸುವ ವಿವಿಧ ಭೌಗೋಳಿಕ, ಸಾಂದರ್ಭಿಕ ಸವಾಲುಗಳು ಹಾಗೂ ಅವುಗಳಿಗೆ ದೊರಕುವ ಪ್ರತಿಕ್ರಿಯೆಗಳು, ಅದಕ್ಕೆ ಉದ್ದೀಪನಾ ಶಕ್ತಿಗಳಾಗಿ ಪರಿಣಮಿಸುತ್ತವೆ. ಆದರೆ ಈ ಸವಾಲುಗಳು ತೀರ ಕಠಿಣವಾದರೂ, ತೀರ ಸುಲಭ ವಾದರೂ ಅವು ತಮ್ಮ ಕ್ರಿಯಾಶಕ್ತಿಯನ್ನು ಕಳೆದು ಕೊಳ್ಳುತ್ತವೆ. ಪರಿಸ್ಥಿತಿಯು ತೀರ ಕಠಿಣ ವಾದಾಗ ಪ್ರತಿಕ್ರಿಯೆಯು ತೀರ ಕ್ಷೀಣವಾಗಬಹುದು; ಸವಾಲುಗಳು ತೀರಾ ಸುಲಭವಾದಲ್ಲಿ ಅವುಗಳಿಗೆ ಉತ್ತರ ನೀಡುವ ಯೋಗ್ಯತೆಯೇ ಇರುವುದಿಲ್ಲ. ಸವಾಲುಗಳನ್ನು ಎದುರಿಸುವ ಶಕ್ತಿಯನ್ನು ನಾಗರಿಕತೆಯು ತನ್ನ 'ಸೃಜನಶೀಲ ಅಲ್ಪಸಂಖ್ಯಾತ'ರ ಮೂಲಕ ಪ್ರಕಟ ಪಡಿಸುತ್ತದೆ. ಈ ಮುಂದಾಳುಗಳು ತಮ್ಮ ಸತ್ವ, ಶಕ್ತಿಗಳನ್ನು ಹೊಂದಿದಷ್ಟು ದಿನ ಉಳಿದ ಬಹುಸಂಖ್ಯಾತರು ಅವರನ್ನು ಸ್ವ-ಇಚ್ಛೆಯಿಂದ ಹಿಂಬಾಲಿಸುತ್ತಾರೆ. ಒಟ್ಟಿಗೆ ಬಂದ ಸವಾಲು ಗಳನ್ನು ಇದಿರಿಸುವ ಚೈತನ್ಯ ನಾಗರಿಕತೆಗೆ ಬರುತ್ತದೆ. ಇದು ಅದರ ಬೆಳವಣಿಗೆಯ ಹಂತ. ಆದರೆ ಎಷ್ಟೋ ಬಾರಿ ನಾಗರಿಕತೆಯು ಬೆಳವಣಿಗೆಯ ಜಾಡನ್ನು ಬಿಟ್ಟು ಶಿಥಿಲತೆಯತ್ತ ಜಾರುತ್ತದೆ. ಇದಕ್ಕೆ ಮುಪ್ಪು, ಪ್ರಾರಬ್ಧಗಳೇನೂ ಕಾರಣಗಳಲ್ಲ. ಮುಂಚೂಣಿಯಲ್ಲಿದ್ದ ಅಲ್ಪಸಂಖ್ಯಾತರು ತಮ್ಮ ಸೃಜನಶೀಲತೆಯನ್ನು ಕಳೆದುಕೊಳ್ಳುವುದೇ ಇದಕ್ಕೆ ಕಾರಣ. ಒಳ್ಳೆಯ ದಿನಗಳಲ್ಲಿ ಕಂಡ ಜಯ, ಗಳಿಸಿದ ಹೊಗಳಿಕೆಗಳು ಅವರಿಗೆ ಅಮಲೇರಿಸುತ್ತವೆ. ಪ್ರಾಮಾಣಿಕ ಶ್ರಮವನ್ನು ತ್ಯಜಿಸಿ, ತಮ್ಮದೇ ಆರಾಧನೆಗೆ ತೊಡಗುವ ಧುರೀಣವರ್ಗದ ಓಜಸ್ಸು ಕುಂದ ತೊಡಗುತ್ತದೆ. ಸತ್ವಹೀನ ನೇತಾರರನ್ನು ಹಿಂಬಾಲಿಸುವವರು ಯಾರೂ ಇರುವುದಿಲ್ಲ. ನಾಗರಿಕತೆಯು ಒಗ್ಗಟ್ಟು ಕಳಚಿ ಹೋಗಿ ಸವಾಲುಗಳನ್ನು ಎದುರಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ತನ್ನ ನಿಶ್ಶಕ್ತಿಯನ್ನು ಮರೆಮಾಡುವ ಹಲವು ಪ್ರಯತ್ನಗಳು ವಿಫಲವಾಗಿ ನಾಗರಿಕತೆಯು ಕುಂಟುತ್ತಾ, ಕೊರಗುತ್ತಾ, ಕುಸಿದು ಅಳಿಯುತ್ತದೆ. ಟಾಯ್ನ್‌ಬಿ ಅವರ ಅಭಿಪ್ರಾಯದಲ್ಲಿ ಯಾವ ನಾಗರಿಕತೆಯೂ ಇನ್ನೊಬ್ಬರಿಂದಾಗಿ ನಾಶ ಹೊಂದುವುದಿಲ್ಲ. ಅವು ಸವಾಲುಗಳನ್ನು ಎದುರಿಸುವ ಚೈತನ್ಯವನ್ನು ಕಳೆದುಕೊಂಡಾಗ ನಾಗರಿಕತೆಯ ದುರ್ದೆಶೆ ಪ್ರಾರಂಭವಾಗುತ್ತದೆ. ಅಂದರೆ ತನ್ನ ನಾಶಕ್ಕೆ ತಾನೇ ಕಾರಣ. "ನಾಗರಿಕತೆಯು ಸಾಯುತ್ತದೆ, ಎನ್ನುವುದಕ್ಕಿಂಥ ಅದು ಆತ್ಮಹತ್ಯೆ ಮಾಡಿಕೊಳ್ಳುತ್ತದೆ, ಎನ್ನುವುದು ಹೆಚ್ಚು ಸೂಕ್ತ"- ಎಂಬ ಅವರ ಮಾತು ಅರ್ಥಪೂರ್ಣ. ಇತಿಹಾಸದ ಸವಿಸ್ತಾರ ಅಧ್ಯಯನದ ಮೂಲಕ ನಾಗರಿಕತೆಯ ಅಳಿವು-ಉಳಿವುಗಳ ಬಗ್ಗೆ ಮಾರ್ಮಿಕವಾಗಿ ಉದ್ಧರಿಸಿದ ಟಾಯ್ನ್‌ಬಿ ಅವರ 'ಸವಾಲು-ಪ್ರತಿಕ್ರಿಯೆ' (ಸವಾಲು-ಜವಾಬು) ಸಿದ್ಧಾಂತದಲ್ಲಿ ಹೊಸತೇನು ಎಂಬ ಪ್ರಶ್ನೆಯನ್ನು ಎತ್ತಲಾಗಿದ್ದರೂ, ಅದು ಮಾನವನ ಅಸ್ತಿತ್ವವನ್ನು ಕುರಿತು ನಡೆಸುವ ಚಿಂತನೆಯಲ್ಲಿ ಖಂಡಿತ ಪ್ರಸ್ತುತ. ಇತಿಹಾಸ ರಚನಾ ವಿಧಾನ ಹಾಗೂ ನಿಲುವುಗಳ ಬದಲಾವಣೆಗೆ ಹೆಚ್ಚೇನೂ ಕಾರಣವಾಗದಿದ್ದರೂ, ಟಾಯ್ನ್‌ಬಿ ಅವರ ಕೃತಿ ಇತಿಹಾಸದ ಅಪಾರ ವಿವರಗಳನ್ನು ಕ್ರೋಢೀಕರಿಸಿ ಅವುಗಳನ್ನು ಅರ್ಥೈಸುವಲ್ಲಿ ಮೇರು ಕೃತಿ ಎಂದೇ ಪರಿಗಣಿಸಬೇಕು.

ಕಳೆದ ಶತಮಾನದ ಪೂರ್ವಾರ್ಧದಲ್ಲಿ ಭಾರತವು ಅದರ ಮೇಲೆರಗಿದ ವಸಾಹತುಶಾಹಿ ಶಕ್ತಿಯ ವಿರುದ್ಧ ತಾತ್ವಿಕವಾಗಿ ಹಾಗೂ ತನ್ನನ್ನು ತೊಡಗಿಸಿಕೊಂಡು, ಹೋರಾಟ ನಡೆಸಿತು. ತನ್ನ ರಾಷ್ಟ್ರೀಯತೆಯನ್ನು ಬೆಳೆಸಿ, ತನ್ನನ್ನು ತಾನು ಆಧರಿಸುವ ಶಕ್ತಿಯನ್ನು ಬೆಳೆಸಿಕೊಂಡಿತು. ಈ ರಾಷ್ಟ್ರೀಯ ಚಳುವಳಿಯಲ್ಲಿ ಅನೇಕ ಬಾರಿ ದೇಶದ ಇತಿಹಾಸದ ಬಗ್ಗೆ ಚಿಂತನೆ, ಚರ್ಚೆ ನಡೆಯಿತು. ಇದರಲ್ಲಿ ಭಾಗಿಯಾಗಿ ತನ್ನ ಅನಿಸಿಕೆಯನ್ನು ವಿಸ್ತಾರವಾಗಿ, ಕೆಲವೊಮ್ಮೆ ವೈಜ್ಞಾನಿಕವಾಗಿ, ಕೆಲವೊಮ್ಮೆ ಭಾವುಕರಾಗಿ, ಆದರೆ ಯಾವಾಗಲೂ ಜನರ ಮನಸ್ಸನ್ನು ಸೆಳೆಯುವಂತೆ ಬರೆದು ಪ್ರಕಟಿಸಿದವರು ಪಂಡಿತ್ ಜವಹಾರ್‌ಲಾಲ್ ನೆಹರೂರವರು. *ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟರಿ* (೧೯೩೪-೩೫) ಮತ್ತು *ದಿ ಡಿಸ್ಕವರಿ ಆಫ್ ಇಂಡಿಯಾ* (೧೯೪೬) ಎಂಬ ಎರಡು ಕೃತಿಗಳು ನೆಹರೂರವರ ಇತಿಹಾಸ ಪ್ರೇಮ ಮತ್ತು ಪ್ರಜ್ಞೆಗಳಿಗೆ ಉದಾಹರಣೆ. ಅವರನ್ನು ಇತಿಹಾಸ ಸಂಶೋಧಕ ಅಥವಾ ವೃತ್ತಿಪರ ಇತಿಹಾಸಕಾರನೆಂದು ಪರಿಗಣಿಸುವುದು ಅಸಾಧ್ಯವಾದರೂ ಭಾರತದ ಪುರೋಗಾಮಿ ರಾಷ್ಟ್ರೀಯವಾದಿ ಇತಿಹಾಸ ಚಿಂತನೆಯ ತರಂಗಗಳು ಅವರ ಕೃತಿಗಳಲ್ಲಿ ಸುಲಲಿತವಾಗಿ ಮೂಡಿಬಂದಿವೆ. ತಮ್ಮ ಜೈಲುವಾಸದ ನೋವುಳ್ಳ ಬಿಡುವನ್ನು ಉಪಯೋಗಿಸಿ ಬರೆದ ಈ ಎರಡು ಪುಸ್ತಕಗಳು ನೆಹರೂರವರ ವ್ಯಕ್ತಿತ್ವವನ್ನು ಬಿಚ್ಚಿಡುತ್ತವೆ. ಭಾರತದ ಐತಿಹಾಸಿಕ ನೆಲೆಯನ್ನು ಹುಡುಕಿ ಸ್ಥಾಪಿಸುವುದು ಅವರ ಡಿಸ್ಕವರಿಯ ಗುರಿಯಾದರೆ, ತನ್ನನ್ನು ಜಾಗತಿಕ ಪ್ರಜೆಯಾಗಿ ಗುರುತಿಸಿ ಕೊಳ್ಳುವುದು ಅವರ ಗ್ಲಿಂಪ್ಸಸ್‌ನ ಕಾರ್ಯಸೂಚಿ. ಇದೆರಡು ಸ್ತರಗಳಲ್ಲೂ ಭಾರತೀಯರು ಬೆಳೆಯಬೇಕು ಎಂಬ ಆಶಯ ನೆಹರೂರವರ ಬರವಣಿಗೆಗಳಲ್ಲಿ ಕಾಣುತ್ತೇವೆ. ನಮ್ಮನ್ನು ನಾವು ಕಂಡುಕೊಳ್ಳುವುದು ಕನ್ನಡಿಯಲ್ಲಿ ಅಲ್ಲ; ನಮ್ಮನ್ನು ನಾವು ಕಾಣಬೇಕಾದದ್ದು ನಮ್ಮ ಸಮಾಜದಲ್ಲಿ, ನಮ್ಮ ದೇಶದಲ್ಲಿ, ನಮ್ಮ ಜಗತ್ತಿನಲ್ಲಿ. ಅದು ಸಾಧ್ಯವಾದಾಗ ಮಾತ್ರ ನಾವು ಬೆಳೆಯಲು ಸಾಧ್ಯ. ರಾಷ್ಟ್ರೀಯತೆ ಎಂದರೆ ಹೇರಿದ ಏಕತೆಯಲ್ಲ; ವೈವಿಧ್ಯತೆಯಲ್ಲಿ ಏಕತೆ. ವೈವಿಧ್ಯತೆಯು ಏಕತೆಗೆ ಮಾರಕವಲ್ಲ; ಪೂರಕ. ಭಾರತದ ವರ್ಣರಂಜಿತ ವೈವಿಧ್ಯತೆಯು ಉತ್ಸವಯೋಗ್ಯವಾದದ್ದು. ಅದನ್ನು ಒಪ್ಪಿ, ನಮ್ಮದಾಗಿಸಿ ಕೊಳ್ಳುವುದು ರಾಷ್ಟ್ರೀಯತೆಯ ಹಿರಿಮೆ. ನಮ್ಮ ಇತಿಹಾಸವೂ ಇದರ ಪ್ರತೀಕ. ವಿವಿಧ ಭಾಷೆ, ಧರ್ಮ, ಸಂಸ್ಕೃತಿಗಳನ್ನು ಸ್ವೀಕರಿಸಿ, ಅವುಗಳಿಗೆ ಜಾಗವನ್ನು ಕಲ್ಪಿಸಿ, ಸೃಷ್ಟಿಸಿದ ಸಂಕೀರ್ಣ ಸಂಸ್ಕೃತಿ ನಮ್ಮದು. ಅಲ್ಲಿರಬೇಕಾದದ್ದು ಪರಸ್ಪರ ಗೌರವ, ಸಂಕುಚಿತ ಮನೋಭಾವ ಅಲ್ಲ. ಹೊಸ ಪ್ರಗತಿ ಪಥದಲ್ಲಿ ನಡೆಯುವ ಛಲ. ಹಳೇ ಮಾದರಿಗಳನ್ನು ತ್ಯಜಿಸುವ ಧೈರ್ಯ. ಇತಿಹಾಸ ಅಧ್ಯಯನವು 'ಹಳೆಯದ್ದೆಲ್ಲಾ ಚಿನ್ನ' ಎಂಬ ಪಾಠವನ್ನು ನೀಡುವುದಿಲ್ಲ. ಅದು ಹಿಂದೆ ನಮ್ಮ ಪೂರ್ವಜರು ಹೇಗೆ ಬದುಕಿದ್ದರು ಎಂದಷ್ಟೇ ತಿಳಿಸುತ್ತದೆ. ಇತಿಹಾಸದ ಗೌರವಯುತ ಅಧ್ಯಯನ ಪ್ರಗತಿಯು ಆಯ್ಕೆಯ ವಿರೋಧಿಯಲ್ಲ. ಹಾಗೆಯೇ ನಾವು ಕೂಪಮಂಡೂಕ ಗಳಾಗಬಾರದು. ನಮ್ಮ ಸಾಧನೆ, ಸೋಲುಗಳನ್ನು ಜಾಗತಿಕ ಸ್ತರದಲ್ಲಿ ನೋಡಿ ಮೌಲ್ವೀಕರಿಸ

ಬೇಕು. ನಮ್ಮ ಬೆಳವಣಿಗೆಯು ಜಾಗತಿಕ ಬೆಳವಣಿಗೆಯ ಹೊರತಾಗಿರಲು ಅಸಾಧ್ಯ. ಈ ಪಾಠ ಹಿಂದಿನ ಇತಿಹಾಸದಲ್ಲೂ ಲಭ್ಯ. ಈಗಂತೂ ಜಗತ್ತೊಂದು ಕುಟುಂಬವಾಗಿ ಒಬ್ಬರ ಸುಖ-ದುಃಖಗಳನ್ನು ಇನ್ನೊಬ್ಬರು ಹಂಚಿಕೊಳ್ಳುವ ಸಂದರ್ಭ ನಮಗೆ ಒದಗಿ ಬಂದಿದೆ. ಇದನ್ನು ನಿರಾಕರಿಸಲು ಅಸಾಧ್ಯ ಎಂಬ ಧ್ವನಿ ನೆಹರೂರವರ ಬರಹಗಳಲ್ಲಿ ಇದೆ. ಅವರ ಪ್ರಗತಿಗಾಮಿ ನಿಲುವು, ಎಲ್ಲರನ್ನೊಂದುಗೂಡಿಸುವ ರಾಷ್ಟ್ರೀಯತೆ, ವೈಜ್ಞಾನಿಕ ಮನೋಭಾವ, ಧರ್ಮಸಹಿಷ್ಣುತೆ, ಜಾಗತಿಕ ದೃಷ್ಟಿ ಇವೆಲ್ಲವೂ ಅವರ ಇತಿಹಾಸ ಚಿಂತನೆಯಲ್ಲಿ ಪ್ರಕಟವಾಗಿವೆ.

**ಹೆಚ್ಚಿನ ಓದಿಗಾಗಿ**

೧. ಇ.ಹೆಚ್. ಕಾರ್ - ವ್ಹಾಟ್ ಈಸ್ ಹಿಸ್ಟರಿ?

೨. ಮಾರ್ವಿಕ್ - ದ ನೇಚರ್ ಆಫ್ ಹಿಸ್ಟರಿ

೩. ಎ.ಎಲ್. ರೌಸ್ - ದ ಯೂಸ್ ಆಫ್ ಹಿಸ್ಟರಿ

೪. ಮಾರ್ಕ್ ಬ್ಲಾಕ್ - ದ ಹಿಸ್ಟೋರಿಯನ್ಸ್ ಕ್ರ್ಯಾಫ್ಟ್

## ಮಾದರಿ ಪ್ರಶ್ನೆಗಳು

**I.** ಒಂದು ವಾಕ್ಯದಲ್ಲಿ ಉತ್ತರಿಸಿ (೧ ಅಂಕಗಳು)

೧. ಹೆರೊಡೊಟಸ್ ಯಾರು?

೨. 'ಪರ್ಶಿಯನ್ ಯುದ್ಧಗಳು' ಕೃತಿಯ ಕರ್ತೃ ಯಾರು?

೩. ಅರ್ನಾಲ್ಡ್ ಜೆ. ಟಾಯ್ನಬಿ ಬರೆದ ಹತ್ತು ಸಂಪುಟಗಳ ಮಹಾಕೃತಿಯ ಹೆಸರೇನು?

೪. 'ದಿ ಕಮ್ಯೂನಿಷ್ಟ್ ಮ್ಯಾನಿಫೆಸ್ಟೊ' ಕೃತಿಯನ್ನು ಬರೆದವರು ಯಾರು?

೫. ಲಿಯೊಪಾಲ್ಡ್ ಫಾನ್ ರ್ಯಾಂಕ್ ಯಾವ ದೇಶದ ಇತಿಹಾಸಕಾರ?

**II.** ಎರಡು ವಾಕ್ಯಗಳಲ್ಲಿ ಉತ್ತರಿಸಿ (೨ ಅಂಕಗಳು)

೧. ಇತಿಹಾಸ ಎಂದರೇನು? ಒಂದು ವ್ಯಾಖ್ಯೆಯ ಮೂಲಕ ತಿಳಿಸಿ.

೨. ಗ್ರೀಕ್ ಇತಿಹಾಸಕಾರರನ್ನು ಹೆಸರಿಸಿ.

೩. ರೋಮ್ ದೇಶದ ಇಬ್ಬರು ಇತಿಹಾಸಕಾರರನ್ನು ಹೆಸರಿಸಿ.

೪. ಕಾರ್ಲ್‌ಮಾರ್ಕ್ಸ್‌ನ ಎರಡು ಕೃತಿಗಳನ್ನು ಹೆಸರಿಸಿ.

೫. ಜವಾಹರಲಾಲ್ ನೆಹರು ಅವರ ಎರಡು ಕೃತಿಗಳನ್ನು ಹೆಸರಿಸಿ.

**III.** ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ (೫ ಅಂಕಗಳು)

೧. ಹೆರೊಡೊಟಸ್‌ನ ಇತಿಹಾಸ ಬರವಣಿಗೆಗಳ ಬಗ್ಗೆ ಬರೆಯಿರಿ.

೨. ಥಾಮಸ್ ಕಾರ್ಲೈಲ್‌ನ ಇತಿಹಾಸದ ಚಿಂತನೆ ಯಾವ ಸ್ವರೂಪದ್ದು? ತಿಳಿಸಿ.

೩. ಆರ್.ಜಿ. ಕಾಲಿಂಗ್‌ವುಡ್ ಅವರನ್ನು ಕುರಿತು ಬರೆಯಿರಿ.

೪. ಕಾರ್ಲ್‌ಮಾರ್ಕ್ಸ್‌ನ ಇತಿಹಾಸದ ಚಿಂತನೆ ಯಾವ ಬಗೆಯದು? ವಿವರಿಸಿ.

೫. ಇತಿಹಾಸವನ್ನು ಯಾವ ಕಾರಣಕ್ಕಾಗಿ ಓದಬೇಕು? ತಿಳಿಸಿ.

**IV. ೩೦ ರಿಂದ ೪೦ ವಾಕ್ಯಗಳಲ್ಲಿ ಉತ್ತರಿಸಿ (೧೦ ಅಂಕಗಳು)**

೧. ಇತಿಹಾಸ ಎಂದರೇನು? ಅದರ ವ್ಯಾಪ್ತಿಯೇನು?

೨. ರಾಜಕೇಂದ್ರಿತ ಇತಿಹಾಸವು ಜನಪ್ರಿಯವಾಗಲು ಕಾರಣಗಳೇನು?

೩. ಹೆರೊಡೊಟಸನು ಇತಿಹಾಸಕ್ಕೆ ಸಂಶೋಧನೆಯ ಸ್ವರೂಪವನ್ನು ಹೇಗೆ ನೀಡಿದ?

೪. ಇತಿಹಾಸ ಮತ್ತು ವರ್ತಮಾನಗಳ ಸಂಬಂಧವೇನು?

೫. ಕಾರ್ಲೈಲನು ಮಹಾಪುರುಷರ ಬಗ್ಗೆ ನೀಡಿದ ವಿಶ್ಲೇಷಣೆಗಳೇನು?

೬. ಕಾರ್ಲ್‌ಮಾರ್ಕ್ಸ್‌ನ 'ಐತಿಹಾಸಿಕ ಭೌತಿಕವಾದ'ದ ತಿರುಳೇನು?

೭. ನಾಗರಿಕತೆಯ ಹುಟ್ಟು-ಸಾವುಗಳನ್ನು ಟಾಯ್ನ್‌ಬಿ ಅವರು ಹೇಗೆ ವಿವರಿಸಿದ್ದಾರೆ?

೮. ರಾಷ್ಟ್ರೀಯತೆ ಹಾಗೂ ಜಾಗತಿಕ ಕಲ್ಪನೆಗಳು ಜವಾಹರ್‌ಲಾಲ್ ನೆಹರೂರವರ ಇತಿಹಾಸ ಚಿಂತನೆಯಲ್ಲಿ ಹೇಗೆ ಮೂಡಿವೆ?

**V. ಹೆಚ್ಚಿನ ಜ್ಞಾನಕ್ಕಾಗಿ ಕಾರ್ಯ-ಯೋಜನೆಗಳು (Assighments/Projects)**

೧. ಇತಿಹಾಸ ಎಂಬ ಪದದ ಅರ್ಥಗ್ರಹಿಕೆಯನ್ನು ಕುರಿತು ಚರ್ಚಿಸಿ.

೨. ಇತಿಹಾಸದ ವ್ಯಾಖ್ಯೆಗಳನ್ನು ಕುರಿತು ವಿಮರ್ಶಾತ್ಮಕವಾಗಿ ಚರ್ಚಿಸಿ.

೩. ಇತಿಹಾಸ ಅಧ್ಯಯನದ ಪ್ರಾಮುಖ್ಯತೆಯನ್ನು ಕುರಿತು ಕೂಲಂಕಷವಾಗಿ ಪರಿಶೀಲಿಸಿ.

ಅಧ್ಯಾಯ ೨

# ಪ್ರಾಚೀನ ಭಾರತ

## ೨.೧ ಹರಪ್ಪ ಸಂಸ್ಕೃತಿ

### ಭೌಗೋಳಿಕ ವ್ಯಾಪ್ತಿ

ಸಿಂಧೂ ಅಥವಾ ಹರಪ್ಪ ಸಂಸ್ಕೃತಿಯು ಭಾರತ ಉಪಖಂಡದ ವಾಯುವ್ಯ ಭಾಗದಲ್ಲಿ ರೂಪುಗೊಂಡಿದ್ದು, ಈಜಿಪ್ಟ್ ಮತ್ತು ಮೆಸಪೊಟೇಮಿಯಾ ನಾಗರಿಕತೆಗಳಿಗಿಂತಲೂ ವಿಸ್ತಾರವಾಗಿತ್ತು. ೧೯೨೧ ರಲ್ಲಿ ಈಗಿನ ಪಾಕಿಸ್ಥಾನದ ಪಶ್ಚಿಮ ಪಂಜಾಬಿನಲ್ಲಿರುವ ಹರಪ್ಪದಲ್ಲಿ ಈ ಸಂಸ್ಕೃತಿಯನ್ನು ಮೊತ್ತ ಮೊದಲು ಗುರುತಿಸಲಾಯಿತು. ಈ ಸಂಸ್ಕೃತಿಯು ಪಂಜಾಬಿನ ಕೆಲವು ಭಾಗ, ಹರಿಯಾಣಾ, ಸಿಂಧ್, ಬಲೂಚಿಸ್ಥಾನ, ಗುಜರಾತ್, ರಾಜಸ್ಥಾನ ಹಾಗೂ ಉತ್ತರ ಪ್ರದೇಶದ ಪಶ್ಚಿಮ ಭಾಗಗಳನ್ನು ಆವರಿಸಿತ್ತು. ಉತ್ತರದಿಂದ ದಕ್ಷಿಣಕ್ಕೆ ೧,೧೦೦ ಕಿ.ಮೀ.ಗೂ ಹೆಚ್ಚು, ಪಶ್ಚಿಮದಿಂದ ಪೂರ್ವಕ್ಕೆ ೧,೬೦೦ ಕಿ.ಮೀ.ಗೂ ಹೆಚ್ಚು ವಿಸ್ತಾರವಾಗಿತ್ತು. ಅಂದರೆ ಉತ್ತರದಲ್ಲಿ ಜಮ್ಮು, ದಕ್ಷಿಣದಲ್ಲಿ ನರ್ಮದಾ ನದಿಯ ಮುಖಜ ಭೂಮಿ, ಪಶ್ಚಿಮದಲ್ಲಿ ಬಲೂಚಿಸ್ಥಾನದ ಮಕ್ರಾನ್ ಕರಾವಳಿ ಮತ್ತು ಈಶಾನ್ಯದಲ್ಲಿ ಮೀರತ್ ಗಡಿಪ್ರದೇಶವನ್ನು ವ್ಯಾಪಿಸಿಕೊಂಡಿತ್ತು.

ಈ ವಿಶಾಲ ಭೂಭಾಗದಲ್ಲಿ ಸಾವಿರಕ್ಕೂ ಹೆಚ್ಚಿನ ಹರಪ್ಪ ಜನವಸತಿ ನಗರಗಳು ಇದ್ದದ್ದು ಇತ್ತೀಚಿಗಿನ ಉತ್ಖನನಗಳಿಂದ ತಿಳಿದುಬಂದಿದೆ. ಅವುಗಳಲ್ಲಿ ಪೂರ್ಣ ಪ್ರಮಾಣದ ನಾಗರಿಕತೆಯ ಲಕ್ಷಣಗಳನ್ನು ಹೊಂದಿರುವ ಜನವಸತಿ ಕೆಲವೇ ಭಾಗಗಳಲ್ಲಿ ಗುರುತಿಸಲಾಗಿದೆ. ಮತ್ತು ಕೇವಲ ಬೆರಳೆಣಿಕೆಯಷ್ಟು ಜನವಸತಿಗಳು, ನಗರಗಳ ನಿಜವಾದ ಲಕ್ಷಣಗಳನ್ನು ತೋರ್ಪಡಿಸಿವೆ. ಇವುಗಳಲ್ಲಿ ಪಶ್ಚಿಮ ಪಂಜಾಬ್ ಜಿಲ್ಲೆಯ ರಾವಿ ನದಿ ದಂಡೆಗೆ ತಾಗಿರುವ ಹರಪ್ಪವನ್ನು ಮೊದಲು ಉತ್ಖನನ ಮಾಡಲಾಯಿತು. ಐದು ಕಿ.ಮೀ.ಕ್ಕಿಂತಲೂ ಕಡಿಮೆ ಪ್ರದೇಶಗಳಿಗೆ ವಿಸ್ತರಿಸಿದ್ದ ಈ ನಗರದಲ್ಲಿ, ನಂತರ ಹಲವು ವಸ್ತುಗಳು ಉತ್ಖನನದ ವೇಳೆ ದೊರೆತಿದ್ದವು. ಇದು ಈ ಪ್ರದೇಶಗಳಲ್ಲಿ ರೂಪುಗೊಂಡ ಎರಡು ಪ್ರಮುಖ ನಗರಗಳಲ್ಲಿ ಒಂದು.

ಇನ್ನೊಂದು ನಗರ ಮೊಹೆಂಜೊದಾರೊ. ಇದು ಸಿಂಧೂ ನದಿಯ ಕೆಳಭಾಗದ ಲಾರ್ಕಾನಾ ಜಿಲ್ಲೆಯಲ್ಲಿದ್ದು, ಹರಪ್ಪ ಸಂಸ್ಕೃತಿಯನ್ನು ಪ್ರತಿನಿಧಿಸುವ ಅತಿ ದೊಡ್ಡ ಜನವಸತಿ ನಗರ

ವಾಗಿದೆ. ಮೂರನೆ ಅತಿ ದೊಡ್ಡ ಹರಪ್ಪ ಜನವಸತಿ ನಗರ ಚನ್ಹುದಾರೊ. ಇದು ಮಹೆಂಜೊದಾರೊ ನಗರದಿಂದ ೧೩೦ ಕಿ.ಮೀ. ದಕ್ಷಿಣದ ಸಿಂಧ್‌ನಲ್ಲಿದೆ. ಲೋಥಾಲ್ ಗುಜರಾತ್‌ನ ಕ್ಯಾಂಬೆ ಕೊಲ್ಲಿಯಲ್ಲಿದೆ. ಕಾಲಿಬಂಗನ್ ಉತ್ತರ ರಾಜಸ್ಥಾನದಲ್ಲಿರುವ ಗಗ್ಗರ ನದಿ ದಂಡೆಯಲ್ಲಿದೆ. ಮತ್ತು ಬನವಾಲಿ ಜನವಸತಿ ಕೇಂದ್ರ ಹರಿಯಾಣದ ಹಿಸ್ಸಾರ್ ಜಿಲ್ಲೆಯಲ್ಲಿದೆ. ಇವು ಹರಪ್ಪ ಸಂಸ್ಕೃತಿಯ ಇತರ ನಗರಗಳು. ಕಾಲಿಬಂಗನ್ ಮತ್ತು ಬನವಾಲಿ ನಗರಗಳು ಪೂರ್ವ ಹರಪ್ಪ ಮತ್ತು ಹರಪ್ಪ ಸಂಸ್ಕೃತಿಯ ಬೆಳವಣಿಗೆಯ ಲಕ್ಷಣಗಳನ್ನು ತಿಳಿಸುತ್ತವೆ.

ಈ ಸ್ಥಳಗಳಲ್ಲದೆ ಬೆಳಕಿಗೆ ಬಂದಿರುವ ಎರಡನೆ ಶ್ರೇಣಿಯ ನಗರಗಳಲ್ಲಿ ಮೂಲಭೂತ ವಿನ್ಯಾಸವನ್ನು ಹೊಂದಿರುವ ಲಕ್ಷಣಗಳನ್ನು ನಾವು ನೋಡಬಹುದು. ಅವುಗಳು ಗುಜರಾತ್ ಕರಾವಳಿ ಪಟ್ಟಣವಾಗಿದ್ದ ಸುರ್‌ಕೋಟ್‌ಡಾ ಮತ್ತು ಪಾಕಿಸ್ಥಾನ-ಇರಾನ್ ಗಡಿ ಪ್ರದೇಶಕ್ಕೆ ತಾಗಿಕೊಂಡಿದ್ದ ಮಕ್ರಾನ್ ಕರಾವಳಿಗೆ ಹತ್ತಿರದಲ್ಲಿರುವ ಸುತ್ಕಾಜೆಂಡೂರ್, ಗುಜರಾತಿನ ಕಾಥ್ಯಾವಾರ್ ಪರ್ಯಾಯ ದ್ವೀಪದಲ್ಲಿರುವ ರಂಗಪುರ ಮತ್ತು ರೋಜ್ಡಿಗಳಲ್ಲಿರುವ ನಗರಗಳು. ಇವುಗಳು ಉತ್ತರ ಹರಪ್ಪ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಮಣ್ಣಿನ ಇಟ್ಟಿಗೆ ಗಳಿಂದ ನಿರ್ಮಿಸಿದ ಜಗಲಿಗಳು, ರಸ್ತೆಗಳು ಹಾಗೂ ಚರಂಡಿಗಳು ಸಾಮಾನ್ಯವಾಗಿ ಹರಪ್ಪ ನಾಗರಿಕತೆಯ ಲಕ್ಷಣಗಳು. ಇವುಗಳನ್ನು ಹರಪ್ಪ ಸಂಸ್ಕೃತಿಯ ಕುರುಹು ದೊರಕಿರುವ ಎಲ್ಲಾ ನಗರಗಳಲ್ಲೂ ನಾವು ಗುರುತಿಸಬಹುದು. ೧೯೪೭ ರಿಂದೀಚೆಗೆ ಇನ್ನೂ ಹಲವು ಹರಪ್ಪ ನಾಗರಿಕತೆಯ ವಸತಿಗಳನ್ನು ಗುರುತಿಸಿದರೂ ಕೂಡ ಆ ಸಂಸ್ಕೃತಿಯನ್ನು ಪ್ರತಿನಿಧಿಸುವ ಎರಡು ಪಟ್ಟಣಗಳಾದ ಹರಪ್ಪ ಮತ್ತು ಮಹೆಂಜೊದಾರೊ ಪ್ರಾಮುಖ್ಯತೆ ಪಡೆಯುತ್ತವೆ.

## ನಗರ ಯೋಜನೆ ಮತ್ತು ಮಾದರಿಗಳು

ಹರಪ್ಪ ನಾಗರಿಕತೆಯ ನಗರ ಕೇಂದ್ರಗಳು ಒಂದೇ ಮಾದರಿಯ ಯೋಜನೆಯ ಮೇಲೆ ವಿನ್ಯಾಸಗೊಳಿಸಲಾಗಿದ್ದು, ಅವುಗಳು ಆ ಸಂಸ್ಕೃತಿಯ ಬೆಳವಣಿಗೆಯ ಉನ್ನತ ಮಟ್ಟವನ್ನು ಪ್ರತಿನಿಧಿಸುತ್ತವೆ. ಹರಪ್ಪ, ಮಹೆಂಜೊದಾರೊ ಮತ್ತು ಕಾಲಿಬಂಗನ್‌ಗಳು ವಿಶಿಷ್ಟ ನಗರಗಳಾಗಿದ್ದವು. ದೊಡ್ಡ ನಗರಗಳಲ್ಲಿ ಎರಡು ಪ್ರಮುಖ ಭಾಗಗಳನ್ನು ಗುರುತಿಸಬಹುದು. ಒಂದನೆಯದು ದುರ್ಗ ಅಥವಾ ಕೋಟೆ. ಇಲ್ಲಿ ಬಹುಶಃ 'ಆಳುವ ವರ್ಗ'ಗಳು ಅಥವಾ ನಗರದ ಅಧಿಕಾರಿಗಳು ವಾಸ ಮಾಡುತ್ತಿದ್ದರು. ಎರಡನೆಯದು, 'ಕೆಳನಗರ'. ಇಲ್ಲಿ ಸಾಮಾನ್ಯ ಜನರು ವಾಸಿಸುವ ಮನೆಗಳಿದ್ದು, ಅವುಗಳನ್ನು ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ. ದುರ್ಗವನ್ನು ಮಣ್ಣಿನ ಇಟ್ಟಿಗೆಗಳಿಂದ ಎತ್ತರದ ವೇದಿಕೆಯ ಮೇಲೆ ಕಟ್ಟಲಾಗುತ್ತಿತ್ತು. ಜೊತೆಗೆ ಅವುಗಳು ನಗರದ ಉಳಿದ ಭಾಗಗಳಿಗಿಂತ ಎತ್ತರದಲ್ಲಿರುತ್ತಿದ್ದವು. ಸಿಂಧೂ ನದಿ ಕಣಿವೆಯ ಪಟ್ಟಣಗಳು ಎದುರಿಸುತ್ತಿದ್ದ ಪ್ರವಾಹವು ಅತ್ಯಂತ ಭೀಕರ ನೈಸರ್ಗಿಕ ದುರಂತವಾಗಿರುವುದರಿಂದ ಈ ವೇದಿಕೆಯ ಮೇಲೆ ನಿರ್ಮಿಸಿದ ಕೋಟೆಗೆ ರಕ್ಷಣೆಯು ದೊರೆಯುತ್ತಿತ್ತು. ಕೋಟೆ ಮತ್ತು ಕೆಲವೊಮ್ಮೆ ಕೆಲ ನಗರಗಳು ದೊಡ್ಡ ಗಾತ್ರದ ಮಣ್ಣಿನ ಗೋಡೆಯಿಂದಾವೃತವಾಗಿವೆ.

ಕಾಲಿಬಂಗನ್ ವಸತಿ ನಗರ ಇದಕ್ಕೆ ಉತ್ತಮ ಉದಾಹರಣೆ. ಈ ಗೋಡೆ ಚಚ್ಚೌಕವ ಗೋಪುರಗಳನ್ನು ಮತ್ತು ಬುರುಜುಗಳನ್ನು ಹೊಂದಿದೆ. ಇದರ ಮುಖ್ಯ ದ್ವಾರವನ್ನು ಉತ್ತರದ ಕಡೆಗಿರುವ ಗೋಡೆಯಲ್ಲಿ ಅಳವಡಿಸಲಾಗಿದೆ ಮತ್ತು ದಕ್ಷಿಣದ ಕಡೆಗೂ ಮತ್ತೊಂದು ದ್ವಾರ ಇದೆ. ನಗರದ ಎರಡೂ ಭಾಗಗಳ ನಡುವೆ ಸಂಪರ್ಕ ಕಲ್ಪಿಸಲಾಗಿತ್ತು. ಉದಾಹರಣೆಗೆ, ಕಾಲಿಬಂಗನ್‌ನಲ್ಲಿ ದುರ್ಗವನ್ನು 'ಕೆಳನಗರ'ದೊಂದಿಗೆ ಸಂಪರ್ಕಿಸಲು ಎರಡು ಪ್ರವೇಶ ದ್ವಾರಗಳು ಮಾತ್ರ ಇದ್ದವು. ಈ ಪ್ರವೇಶ ದ್ವಾರಗಳನ್ನು ಮುಚ್ಚುವ ಅವಕಾಶವನ್ನು ಕಲ್ಪಿಸಿದ್ದು ನಗರದ ಅಧಿಕಾರಿಗಳು ಸಾಮಾನ್ಯ ಜನರಿಂದ ಪ್ರತ್ಯೇಕಗೊಳಿಸಿಕೊಳ್ಳಬಹುದಿತ್ತು. ಸುರ್ ಕೊಟ್‌ಡಾನಲ್ಲಿ ದುರ್ಗವು 'ಕೆಳನಗರ'ದಿಂದ ಬಂದು ಬಲವಾದ ಮಣ್ಣುದಿಬ್ಬದಿಂದ ಬೇರ್ಪಡುತ್ತದೆ. ಅಗಲವಾದ ರಸ್ತೆಗಳು ಪರಸ್ಪರ ಸಮಕೋನದಲ್ಲಿವೆ. ರಸ್ತೆಗಳ ಅಗಲದಲ್ಲೂ ಕೂಡ ಸಾಮಾನ್ಯ ಸಮನ್ವಯವಿರುವಂತೆ ಕಂಡುಕೊಳ್ಳಲಾಗಿದೆ. ಅತಿ ದೊಡ್ಡ ರಸ್ತೆಗಳು ಚಿಕ್ಕ ರಸ್ತೆಗಳಿಗಿಂತ ಎರಡರಷ್ಟು ಅಗಲವಾಗಿವೆ. ಮತ್ತು ಅಡ್ಡ ರಸ್ತೆಗಳಿಗಿಂತ ಅವು ಮೂರರಿಂದ ನಾಲ್ಕು ಪಟ್ಟು ದೊಡ್ಡದಾಗಿವೆ. ನಗರವನ್ನು ಹಲವು ವಠಾರಗಳಾಗಿ ವಿಭಜಿಸ ಲಾಗಿದೆ. ನಗರಗಳು ಸಣ್ಣದಿರಲಿ, ದೊಡ್ಡದಿರಲಿ, ಅವುಗಳ ವಿನ್ಯಾಸವು ಹರಪ್ಪ ಸಂಸ್ಕೃತಿಯ ಪ್ರಮುಖ ಲಕ್ಷಣವಾಗಿದೆ.

ಎಲ್ಲಾ ನಗರಗಳಲ್ಲಿ ಇಂತಹ ಸಾಮಾನ್ಯ ಮಾದರಿಯ ವಿನ್ಯಾಸವನ್ನು ಗುರುತಿಸಬಹುದು. ಆದರೆ, ಲೋಥಾಲ್‌ನಲ್ಲಿರುವ ನಗರದ ವಿನ್ಯಾಸವು ಸ್ವಲ್ಪ ಭಿನ್ನವಾಗಿದೆ. ಇದಕ್ಕೆ ಕಾರಣ ಲೋಥಾಲ್ ಒಂದು ವ್ಯಾಪಾರ ಕೇಂದ್ರವಷ್ಟೇ ಅಲ್ಲ, ಒಂದು ರೇವು ಪಟ್ಟಣವು ಆಗಿದ್ದಿರ ಬೇಕು. ನಗರದ ಸುತ್ತ ಕಲ್ಲಿನ ಗೋಡೆ ಇದೆ. ಈ ನಗರ ಸಬರಮತಿ ನದಿಯ ಉಪನದಿಗೆ ಹತ್ತಿರವಾದ ಕೆಳಮಟ್ಟದ ನೆಲದ ಮೇಲೆ ಇದ್ದು, ವಾಸಸ್ಥಳಗಳನ್ನು ಪ್ರವಾಹದಿಂದ ರಕ್ಷಿಸ ಲೋಸುಗ ಬೃಹತ್ ಗಾತ್ರದ ಇಟ್ಟಿಗೆಯ ಗೋಡೆಯನ್ನು ಕಟ್ಟಲಾಗಿದೆ. ನಗರದ ಪೂರ್ವ ಭಾಗದಲ್ಲಿ ಹಡಗುಕಟ್ಟೆ ಇದ್ದಿರುವುದನ್ನು ಗುರುತಿಸಲಾಗಿದೆ. ಅದನ್ನು ಕಾಲುವೆಗಳ ಮೂಲಕ ನದಿಗೆ, ನಂತರ ಸಮುದ್ರಕ್ಕೆ ಸಂಪರ್ಕಿಸಲಾಗಿದೆ. ನಗರದ ಉಳಿದ ಭಾಗಗಳಲ್ಲಿ ವಸತಿ ಗೃಹಗಳಿದ್ದವು. ಮುಖ್ಯ ಬೀದಿಗಳು ನಾಲ್ಕರಿಂದ ಆರು ಮೀಟರ್‌ಗಳಷ್ಟು ವಿಶಾಲವಾಗಿದ್ದವು. ಪುಟ್ಟ ಅಡ್ಡ ಬೀದಿಗಳು ಎರಡು ಮೀಟರ್‌ಗಿಂತ ಹೆಚ್ಚು ಅಗಲವಾಗಿರಲಿಲ್ಲ. ಮುಖ್ಯ ಬೀದಿಗಳ ಇಕ್ಕೆಲಗಳಲ್ಲೂ ಕೈಕಸುಬುದಾರರ ಕರ್ಮಶಾಲೆಗಳಿದ್ದವು. ಇತರ ಕಟ್ಟಡಗಳ ಜೊತೆಗೆ ಉಗ್ರಾಣ ಗಳೂ, ಅಡಿಪಾಯಗಳ ಗುರುತುಗಳು ನಂತರದ ಉತ್ಖನನದಿಂದ ಬೆಳಕಿಗೆ ಬಂದಿವೆ.

ಮಹೆಂಜೊದಾರೋವಿನ ಬೃಹತ್ ಸ್ನಾನಗೃಹ ಅತ್ಯಂತ ಪ್ರಮುಖ ಸಾರ್ವಜನಿಕ ಸ್ಥಳ. ಸುಮಾರು ೧೨ ಮೀ. ಉದ್ದ, ೭ ಮೀ. ಅಗಲ, ೩ ಮೀ. ಆಳವಿದ್ದ ಈ ಸ್ನಾನಗೃಹಕ್ಕೆ ಎರಡೂ ಕಡೆಗಳಲ್ಲಿ ಏರಿಳಿಯಲು ಮೆಟ್ಟಿಲುಗಳಿವೆ. ಇದೊಂದು ಸೊಗಸಾದ ಇಟ್ಟಿಗೆ ಕೆಲಸದ ಮಾದರಿಯಾಗಿದೆ. ಸ್ನಾನಗೃಹದ ನೆಲವನ್ನು ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾಗಿದೆ. ಪಕ್ಕದ ಕೋಣೆಯಲ್ಲಿರುವ ಬಾವಿಯಿಂದ ನೀರನ್ನು ಪೂರೈಸಲಾಗುತ್ತಿತ್ತೆಂದು ಅಭಿಪ್ರಾಯಪಡ

ಲಾಗಿದ್ದು, ಸ್ನಾನಗೃಹದ ಇನ್ನೊಂದು ಮೂಲೆಯಲ್ಲಿರುವ ಕಿಂಡಿಯಿಂದ ನೀರನ್ನು ಚರಂಡಿಗೆ ಹೊರಗೆ ಹರಿದು ಬಿಡಲಾಗುತ್ತಿತ್ತು. ಈ ಸ್ನಾನಗೃಹವನ್ನು ಧಾರ್ಮಿಕ ಸಂಸ್ಕಾರಗಳಲ್ಲಿ ಅತ್ಯಗತ್ಯ ವಾದ ಶಾಸ್ತ್ರೋಕ್ತ ಸ್ನಾನದ ಆಚರಣೆ ಸಂಬಂಧವಾಗಿ ಬಳಸಲಾಗಿತ್ತೆಂದು ನಂಬಲಾಗಿದೆ.

ಹರಪ್ಪ ಮತ್ತು ಮಹೆಂಜೊದಾರೊ ಎರಡೂ ನಗರಗಳಲ್ಲಿ ಅನೇಕ ನಾಗರಿಕ, ಧಾರ್ಮಿಕ ಅಥವಾ ಆಡಳಿತ ಕಟ್ಟಡಗಳು ಹಾಗೂ ಇತರ ನಿರ್ಮಾಣಗಳ ಕುರುಹುಗಳು ಕಂಡುಬಂದಿವೆ. ಇವುಗಳಲ್ಲಿ ಕೆಲವನ್ನು ಜನರನ್ನು ಕಲೆ ಹಾಕುವುದಕ್ಕೂ ಹಾಗೂ ತೆರಿಗೆಗಳನ್ನು ಸಂಗ್ರಹಿಸು ವುದಕ್ಕೂ ಆಳುವ ವರ್ಗವು ಬಳಸುತ್ತಿತ್ತು ಎಂದು ಹೇಳಲಾಗಿದೆ. ಧಾನ್ಯದ ಕಣಜಗಳು ಎರಡು ನಗರಗಳಲ್ಲಿ ಗುರುತಿಸಲಾಗಿದ್ದು, ಅವುಗಳ ನೆಲದ ಬಿರುಕುಗಳಲ್ಲಿ ಗೋಧಿ, ಬಾರ್ಲಿ ಕಾಳುಗಳು ದೊರೆತಿರುವುದರಿಂದ ಈ ಉಗ್ರಾಣಗಳನ್ನು ಕಾಳು ಒಕ್ಕಲು ಬಳಸುತ್ತಿದ್ದರು ಎಂಬುದು ಸ್ಪಷ್ಟ. ವಾಸದ ಮನೆಗಳನ್ನು ಸಾಕಷ್ಟು ವೈವಿಧ್ಯತೆಯಿಂದ ನಿರ್ಮಿಸಲಾಗಿದೆ. ಒಂದು ಕೋಣೆಯಿಂದ ೧೨ ಕೋಣೆಗಳವರೆಗೂ ಇರುವ ಮನೆಗಳು ವಿಭಿನ್ನ ಗಾತ್ರದಲ್ಲಿ ಕಂಡು ಬರುತ್ತವೆ. ಸಾಮಾನ್ಯವಾಗಿ ಎಲ್ಲಾ ದೊಡ್ಡ ಮನೆಗಳಲ್ಲಿ ಖಾಸಗಿ ಬಾವಿಗಳಿವೆ. ಮನೆಗಳ ನಿರ್ಮಾಣದಲ್ಲಿ ಮರಪನ್ನಲ್ಲದೆ ಅರೆದ ಮೆಕ್ಕಲುಮಣ್ಣನ್ನೂ ಉಪಯೋಗಿಸಲಾಗಿದೆ. ಪ್ರತಿಯೊಂದು ಮನೆಗೂ ವಿಶೇಷ ಹಿತ್ತಲ ಮನೆಗಳೂ, ಅಂಗಳವೂ ಇದ್ದವು. ಅಡಿಗೆ ಮನೆ ಯಲ್ಲಿ ವಿಶೇಷ ಒಲೆಗಳಿರುತ್ತಿದ್ದವು. ಪ್ರತಿ ಮನೆಯಲ್ಲೂ ಸ್ನಾನ ಗೃಹ ಇದ್ದು, ಹೊರ ಹರಿವಿನ ಕಾಲುವೆಗಳನ್ನು ಹೊಂದಿವೆ. ಅವು ಇಳಿಗಾಲುವೆಗಳಿಗೆ ಸಂಪರ್ಕ ಹೊಂದಿದ್ದು, ನೇರವಾಗಿ ರಸ್ತೆಯ ಮುಖ್ಯ ಚರಂಡಿಗಳಿಗೆ ಸೇರುತ್ತವೆ.

ನಗರಗಳ ನೀರು ಸರಬರಾಜು ಹಾಗೂ ಚರಂಡಿ ವ್ಯವಸ್ಥೆಯು ಪುರಾತನ ಪ್ರಾಚ್ಯದಲ್ಲಿ ಅತ್ಯಂತ ಮುಂದುವರಿದ ವ್ಯವಸ್ಥೆಗಳಲ್ಲಿ ಒಂದಾಗಿದೆ. ಸ್ಥಳೀಯ ಹವಾಗುಣ ಪರಿಸ್ಥಿತಿ, ಜನಸಂಖ್ಯೆಯ ಸಾಂದ್ರತೆ ಮತ್ತು ನೈರ್ಮಲ್ಯ ಹಾಗೂ ಆರೋಗ್ಯ ವ್ಯವಸ್ಥೆ ತಳಮಟ್ಟದಲ್ಲಿ ದ್ದುದರಿಂದ, ದಕ್ಷವಾದ ನೀರು ಸರಬರಾಜು ವ್ಯವಸ್ಥೆ ಹಾಗೂ ಚರಂಡಿ ವ್ಯವಸ್ಥೆಗಳು ಅತ್ಯಂತ ಮುಖ್ಯವಾಗಿದ್ದವು. ಉಪ ರಸ್ತೆಗಳು ಮತ್ತು ಮುಖ್ಯರಸ್ತೆಗಳ ಇಕ್ಕೆಲಗಳಲ್ಲಿ ಚರಂಡಿ ವ್ಯವಸ್ಥೆ ಇದ್ದವು. ಅವುಗಳನ್ನು ಇಟ್ಟಿಗೆಗಳಿಂದ ಅಥವಾ ಕೆಲವೊಮ್ಮೆ ಕಲ್ಲು ಚಪ್ಪಡಿಗಳಿಂದ ಮುಚ್ಚ ಲಾಗಿದೆ. ಇವುಗಳಿಗೆ ಮನೆಗಳಿಂದ ಬರುವ ನೀರು ಸೇರುತ್ತವೆ. ಚರಂಡಿಗಳು ನೇರವಾಗಿ ಬೃಹತ್ ಗಾತ್ರದ ಗುಂಡಿಗಳಿಗೆ ಅಥವಾ ಹಳ್ಳಗಳಿಗೆ ಸೇರುತ್ತವೆ. ಹೀಗೆ ಹರಪ್ಪ ಸಂಸ್ಕೃತಿ ವೈಜ್ಞಾನಿಕವಾದ ಒಳಚರಂಡಿ ವ್ಯವಸ್ಥೆಗೆ ಹೆಸರಾಗಿದೆ.

ಹರಪ್ಪ, ಮಹೆಂಜೊದಾರೊ ಮತ್ತು ಇತರ ಜನವಸತಿ ಕೇಂದ್ರಗಳು ಮುಖ್ಯವಾಗಿ ನಗರ ಸಂಸ್ಕೃತಿಯ ಎಲ್ಲಾ ಲಕ್ಷಣಗಳನ್ನು ಹೊಂದಿವೆ ಎಂಬುದು ಉತ್ಖನನಗಳಿಂದ ಗುರುತಿಸ ಲಾಗಿದೆ. ಅಂತಹ ಉನ್ನತ ಮಟ್ಟದ ಬೆಳವಣಿಗೆ ಹಂತವನ್ನು ತಲುಪಲು ಆ ಪ್ರದೇಶವು ಸೂಕ್ತ ಅವಕಾಶ ಕಲ್ಪಿಸಿರುವುದು ಖಚಿತವಾಗುತ್ತದೆ. ಆಗಲೇ ಆಹಾರ ಸಂಗ್ರಹಣ ಹಂತವು ಆಹಾರ ಉತ್ಪಾದನಾ ಹಂತವಾಗಿ ಬೆಳೆದು ಕೃಷಿ ಸಮಾಜವೊಂದರ ನಿರ್ಮಾಣವಾಗಿರಬೇಕು.

ಇಂಥದೊಂದು ಅವಕಾಶ ಸಿಂಧೂ ನದಿ ತೀರದಲ್ಲಿಯೇ ಒದಗಿದ್ದು, ಅದನ್ನು ಬಳಸಿಕೊಂಡ ಜನರು ಆಹಾರ ಉತ್ಪಾದನೆಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಇದಕ್ಕೆ ಪೂರಕವೆಂಬಂತೆ, ಸಿಂಧೂ ನದಿ ಪ್ರತಿ ವರ್ಷವೂ ಪ್ರವಾಹದಲ್ಲಿ ಫಲವತ್ತಾದ ಎರೆ ಮಣ್ಣನ್ನು ತಂದು ಹರಡುತ್ತಿತ್ತು. ಇದು ಪ್ರವಾಹದ ಸಮಯದಲ್ಲಿ ಕೊಚ್ಚಿಕೊಂಡು ಬಂದ ಮಣ್ಣಾದ್ದರಿಂದ ವಿರಳವಾಗಿಯೂ, ಹಗುರವಾಗಿಯೂ ಮತ್ತು ಮೃದುವಾಗಿಯೂ ಇರುತ್ತದೆ. ಇದೊಂದು ಅನುಕೂಲಕರವಾದ ವಾತಾವರಣವೂ ಹೌದು. ಏಕೆಂದರೆ ಹೀಗೆ ಸಂಗ್ರಹವಾಗುವ ಮಣ್ಣು ಹರಡಿರುವ ಪ್ರದೇಶದಲ್ಲಿ ಭಾರವಾದ ದೊಡ್ಡ ನೇಗಿಲು ಬಳಸದೆಯೂ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಬಹುದು. ಅಲ್ಲಿ ಪ್ರಾಕೃತಿಕ ಸಸ್ಯ ಸಂಪತ್ತು ವಿಪುಲವಾಗಿದ್ದು, ಒಳ್ಳೆ ಮಳೆಯು ಬರುತ್ತಿತ್ತು ಎನ್ನುವುದಕ್ಕೆ ನದಿಯಲ್ಲಿ ಪ್ರವಾಹವಾಗಿ ಹರಿಯುವ ನೀರು ಸಮರ್ಥಿಸುತ್ತದೆ. ಉತ್ಖನನಗಳ ಸಮಯದಲ್ಲಿ ದೊರಕಿದ ವಸ್ತುಗಳನ್ನು ಆಧಾರವಾಗಿ ತೀರ್ಮಾನಿಸುವುದಾದರೆ ಹರಪ್ಪ ಸಂಸ್ಕೃತಿ ಜನರು ಗೋಧಿ, ಬಾರ್ಲಿ, ಎಳ್ಳು ಹಾಗೂ ಹುರುಳಿ ಬೆಳೆಗಳನ್ನು ಬೆಳೆಯುವುದನ್ನು ತಿಳಿದಿದ್ದರು. ಸಿಂಧೂ ನದಿ ಕಣಿವೆಯಲ್ಲಿರುವ ಯಾವುದೇ ವಸತಿಗಳಲ್ಲಿ ಅಕ್ಕಿ ಕಾಳು ಅಥವಾ ಭತ್ತ ಹೊಟ್ಟಿನ ಕುರುಹುಗಳು ದೊರೆತಿಲ್ಲ. ಆದರೆ, ಲೋಥಾಲ್ ಹಾಗೂ ರಂಗಪುರ ಜೇಡಿಮಣ್ಣಿನ ಸ್ತರದಲ್ಲಿ ದೊರೆತ ಮಣ್ಣಿನ ಸಾಮಾನುಗಳ ಅವಶೇಷಗಳ ಜೊತೆಗೆ ಭತ್ತದ ಹೊಟ್ಟು ಕಂಡುಬಂದಿವೆ. ಇದರಿಂದ ಈ ಪ್ರದೇಶದ ಜನರಿಗೆ ಭತ್ತದ ಕೃಷಿಯ ಬಗ್ಗೆ ಅರಿವು ಇರುವುದನ್ನು ಶೃತಪಡಿಸುತ್ತದೆ. ಮಹೆಂಜೊದಾರೊ ದಲ್ಲಿ ನಡೆಸಿದ ಉತ್ಖನನದಲ್ಲಿ ಹತ್ತಿ ಬಟ್ಟೆಯ ಒಂದು ಸಣ್ಣ ತುಂಡು ದೊರೆತಿದೆ ಎನ್ನಲಾಗಿದೆ. ಅದು ಸತ್ಯವಾದರೆ ಆ ಜನರು ಹತ್ತಿ ಬೆಳೆಯುತ್ತಿದ್ದರು ಎಂಬುದನ್ನು ಸಮರ್ಥಿಸುತ್ತದೆ.

**ಕೃಷಿ ಚಟುವಟಿಕೆ**

ಫಲವತ್ತಾದ ಭೂಮಿ ಎಂದ ಮೇಲೆ ದಟ್ಟವಾದ ಅರಣ್ಯಗಳಂತೂ ಇರುವುದು ಸಹಜ. ಆದರೆ ಇಂತಹ ಕಾಡು ಪ್ರದೇಶಗಳನ್ನು ವ್ಯವಸಾಯ ಯೋಗ್ಯವನ್ನಾಗಿಸಬೇಕಾದರೆ ಕಬ್ಬಿಣದ ಸಾಧನ ಸಲಕರಣೆಗಳು ಅಗತ್ಯವಾಗಿ ಬೇಕು. ದೊಡ್ಡದಾದ, ಭಾರವಾದ ನೇಗಿಲೂ ಬೇಕು. ಕೆಲವು ವಿದ್ವಾಂಸರ ಪ್ರಕಾರ ಆ ಕಾಲದಲ್ಲಿ ಜನರಿಗೆ ನೇಗಿಲು ಇನ್ನೂ ತಿಳಿದಿರಲಿಲ್ಲ. ಇದಲ್ಲದೆ ಉತ್ಖನನದ ವೇಳೆ ಯಾವುದೇ ನೇಗಿಲಾಗಲಿ, ನೆಲಗುದ್ದಲಿಯಾಗಲಿ ದೊರೆತಿಲ್ಲ. ಆದರೆ ಕಾಲಿಬಂಗನ್‌ನಲ್ಲಿ ಉತ್ಖನನ ನಡೆಸುತ್ತಿದ್ದಾಗ ನೇಗಿಲಿನಿಂದ ಉತ್ತ ಸಾಲುಗಳ ಕುರುಹು ಅಲ್ಲಿ ಇಲ್ಲಿ ಕಂಡುಬಂದಿವೆ. ಅಂದರೆ ಹರಪ್ಪ ಜನರಿಗೆ ನೇಗಿಲಿನ ಬಳಕೆ ಗೊತ್ತಿರಬೇಕು ಎಂಬುದನ್ನು ತಿಳಿಸುತ್ತದೆ. ಬಹುಶಃ ಅವರು ಭೂಮಿಯನ್ನು ಹಗುರವಾದ ಕುಂಟೆಗಳಿಂದ ಉಳುತ್ತಿದ್ದರು. ಎರೆ ಮಣ್ಣಿನ ನದಿ ತೀರ ಪ್ರದೇಶಗಳ ಪೊಳ್ಳು ಪೊದರಿನ ಚಿಕ್ಕ ಚಿಕ್ಕ ಕಾಡುಗಳಲ್ಲಿ ಕೃಷಿಗೆ ಕಷ್ಟವಾಗುತ್ತಿರಲಿಲ್ಲ. ಆ ಪೊದೆಗಳನ್ನು ಸವರಿ ಮೃದು ಮಣ್ಣಿನ ಭೂಮಿಯನ್ನು ಕೃಷಿಗೆ ಯೋಗ್ಯವಾಗುವಂತೆ ಹಸನು ಮಾಡಿಕೊಳ್ಳಲಾಗುತ್ತಿತ್ತು. ಪೊದೆಗಳಿಗೆ ಬೆಂಕಿ ಹಚ್ಚಿ ಸುಡಬಹುದು. ಜೊತೆಗೆ ಆ ಕಾಲದ ವ್ಯವಸಾಯಗಾರರು ಸಿಂಧೂ ನದಿಯ ಪ್ರವಾಹಗಳನ್ನು

ಕೌಶಲ್ಯದಿಂದ ಬಳಸಿಕೊಳ್ಳುತ್ತಿದ್ದರು. ಒಳ್ಳೆಯ ನೀರಾವರಿ ಕಾರ್ಯವನ್ನು ವ್ಯವಸ್ಥೆ ಮಾಡಿ ಕೊಂಡು ನದಿಯಿಂದ ಕಾಲುವೆಗಳನ್ನು ತೋಡಿಕೊಂಡು ನೀರನ್ನು ಕೃಷಿ ಭೂಮಿಗೆ ತಂದು ಕೊಳ್ಳಲಾಗುತ್ತಿತ್ತು.

ಬೃಹತ್ ಕಟ್ಟಡಗಳನ್ನು ನಿರ್ಮಿಸಲು ಸಾಕಷ್ಟು ಪ್ರಮಾಣದಲ್ಲಿ ಸುಟ್ಟ ಇಟ್ಟಿಗೆಗಳನ್ನು ಬಳಸಲಾಗಿತ್ತು. ಅಲ್ಲದೆ ಆ ಕಟ್ಟಡಗಳಲ್ಲಿ ಹೆಚ್ಚು ಪ್ರಮಾಣದ ಮರಗಳ ಬಳಕೆಯಾಗಿರುವುದು ಉತ್ಖನನದಿಂದ ತಿಳಿದುಬಂದಿದೆ. ಆದ್ದರಿಂದ ಇಲ್ಲಿ ಅರಣ್ಯ ಸಂಪನ್ಮೂಲಗಳು ಹೇರಳವಾಗಿ ಲಭಿಸುತ್ತಿದ್ದು, ಬೃಹತ್ ಪ್ರಮಾಣದಲ್ಲಿ ಇಟ್ಟಿಗೆ ಸುಡಲು ಉರುವಲು ಮತ್ತು ವಸತಿಗಳಿಗೆ ಬಳಸಲು ಮರವನ್ನು ಒದಗಿಸುತ್ತಿತ್ತು. ಪಶುಪಾಲನೆಯಲ್ಲಿಯೂ ಈ ಜನರು ತೊಡಗಿದ್ದರು. ಕೃಷಿಯ ವಿಸ್ತರಣೆ ಮತ್ತು ಮೇವು ಹೇರಳವಾಗಿ ದೊರೆತಿರುವುದು ಇದಕ್ಕೆ ಸಹಕಾರಿ ಯಾಗಿರಬೇಕು.

ಆಹಾರ ಧಾನ್ಯಗಳನ್ನು ಕಣಜಗಳಲ್ಲಿ ಸಂಗ್ರಹಿಸಿಡುತ್ತಿದ್ದರು. ಇದಕ್ಕೆ ಹರಪ್ಪ, ಮಹೆಂಜೊದಾರೊ ಮತ್ತು ಕಾಲಿಬಂಗನ್‌ಗಳಲ್ಲಿ ಉಗ್ರಾಣಗಳ ಕುರುಹು ಸಾಕ್ಷಿ. ವಿದ್ವಾಂಸರ ಪ್ರಕಾರ, ಆಳುವ ವರ್ಗ ರೈತರಿಂದ ತೆರಿಗೆ ವಸೂಲಿ ಮಾಡುತ್ತಿದ್ದು ಅದನ್ನು ಧಾನ್ಯದ ರೂಪದಲ್ಲಿ ಸಲ್ಲಿಸಲಾಗುತ್ತಿತ್ತು. ಬಹುಶಃ ಕೂಲಿ ಕಾರ್ಮಿಕರಿಗೆ ಸಂಬಳವನ್ನು ಕೂಡ ಅದೇ ರೂಪದಲ್ಲಿ ನೀಡಲಾಗುತ್ತಿದ್ದಿರಬೇಕು.

### ವ್ಯಾಪಾರ ಮತ್ತು ವಾಣಿಜ್ಯ ವಹಿವಾಟುಗಳು

ಹರಪ್ಪ ಸಂಸ್ಕೃತಿಯನ್ನು ಅಧ್ಯಯನ ಮಾಡಲು ಬೇಕಾದ ಸಾಹಿತ್ಯ ಆಧಾರಗಳಾವುವು ಲಭ್ಯವಿಲ್ಲ. ಆದರೆ, ಹರಪ್ಪ, ಮಹೆಂಜೊದಾರೊದಲ್ಲಿ ನಡೆಸಿದ ಉತ್ಖನನದ ವೇಳೆ ಕೆಲವು ವ್ಯಾಪಾರಸ್ಥರು ಬಳಸುವ ಮುದ್ರೆಗಳು ದೊರೆತಿವೆ. ಇವುಗಳ ಮೇಲೆ ಬಹುತೇಕ ಸಮುದಾಯ ಚಿಹ್ನೆಗಳಂತಹ ಪ್ರಾಣಿ-ಪಕ್ಷಿ ಮುಂತಾದ ಚಿತ್ರಗಳಿವೆ. ಇನ್ನು ಕೆಲವುದರ ಮೇಲೆ ಬರಹದಂತಹ ಗುರುತುಗಳು ಕಂಡುಬರುತ್ತವೆ. ಈ ಮುದ್ರೆಗಳ ಮೇಲೆ ಎತ್ತು, ಆನೆ, ಖಡ್ಗಮೃಗ, ಆಮೆ, ಮೊಸಳೆ ಮೊದಲಾದ ಪ್ರಾಣಿಗಳ ಚಿತ್ರಗಳೂ ಅಚ್ಚಾಗಿವೆ. ಕೆಲವು ಮುದ್ರೆಗಳ ಮೇಲೆ ಹಾವು-ಮನುಷ್ಯ, ಹಾವು-ಎತ್ತು, ಹಾವು-ಆನೆ ಹೀಗೆ ಸಂಯುಕ್ತ ಸಮುದಾಯ ಚಿಹ್ನೆಗಳಿವೆ. ಇಂತಹ ಎರಡು-ಮೂರು ಚಿಹ್ನೆಗಳ ಜೋಡಿಗಳು ಸಮುದಾಯಗಳ ವಿಲೀನತೆಯನ್ನು ಸೂಚಿಸುತ್ತ ದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಜೊತೆಗೆ ಸಮುದಾಯ ಚಿಹ್ನೆಗಳು 'ಮಾಂತ್ರಿಕ' ಶಕ್ತಿಯನ್ನು ಪಡೆದಿರುತ್ತವೆ ಎಂಬ ನಂಬಿಕೆ ಪ್ರಚಲಿತದಲ್ಲಿದ್ದು, ಇಂತಹ ಮುದ್ರೆಗಳನ್ನೊತ್ತಿದ ಆ ಸರಕುಗಳ ಚೀಲಗಳನ್ನು ಸಾಗಿಸುವ ದಾರಿಯಲ್ಲಿ ಇತರರು ಬಿಚ್ಚಲು ಭಯ ಪಡುತ್ತಿದ್ದರು. ಇದರಿಂದ ಸರಕುಗಳ ಭದ್ರತೆಯು ಖಚಿತವಾಗುತ್ತದೆ.

ಮೆಸಪೊಟೇಮಿಯಾದ ನಗರಗಳಲ್ಲಿ ಹರಪ್ಪ ನಾಗರಿಕತೆಯ ಲಕ್ಷಣಗಳನ್ನುಳ್ಳ ಮೊಹರು ಗಳು, ಮಣಿಗಳು, ಮುದ್ರೆಗಳು, ಶಂಖ, ಕವಡೆ ಮತ್ತಿತರ ವ್ಯಾಪಾರಿ ವಸ್ತುಗಳು ದೊರೆತಿವೆ.

ಅದೇ ರೀತಿ ಸಿಂಧೂ ನದಿ ಕಣಿವೆಯ ನಗರಗಳಲ್ಲಿ ಮೆಸಪೊಟೇಮಿಯಾ ಮಾದರಿಯ ಮೊಹರುಗಳನ್ನೂ ಕಂಡುಹಿಡಿಯಲಾಗಿದೆ. ಮೆಸಪೊಟೇಮಿಯಾದಲ್ಲಿ ದೊರೆತ ಈ ಕಾಲದ ಮಣ್ಣಿನ ಹಲಗೆಗಳ ಮೇಲಿನ ಬರಹಗಳನ್ನು ಓದಲಾಗಿದ್ದು, ಯಾವ ಯಾವ ವಸ್ತುಗಳು ಇಲ್ಲಿಂದ ಅಲ್ಲಿಗೆ ರಫ್ತಾಗುತ್ತಿದ್ದವು ಎಂಬ ಮಾಹಿತಿ ದೊರೆತಿದೆ. ಸುಮೇರ್‌ನಲ್ಲಿ ನಡೆಸಿದ ಉತ್ಖನನದಲ್ಲಿ ಹರಪ್ಪ ಮೊಹರು ಅಚ್ಚಾಗಿರುವ ಬಟ್ಟೆ ದೊರೆತಿದ್ದು, ಅದರಿಂದ ಸಿಂಧೂ ನದಿ ಕಣಿವೆ ಮತ್ತು ಸುಮೇರ್‌ಗಳ ನಡುವೆ ನಿಕಟ ವ್ಯಾಪಾರ ಸಂಪರ್ಕ ಇದ್ದುದನ್ನು ಸೂಚಿಸುತ್ತದೆ. ಸುಮೇರ್‌ನೊಂದಿಗೆ ವ್ಯಾಪಾರವನ್ನು ಬಹರೈನ್ ದ್ವೀಪದ ರೇವಿನ ಮೂಲಕ ಸಮುದ್ರದ ಮೇಲೆ ಸರಕುಗಳನ್ನು ಸಾಗಿಸಲಾಗಿತ್ತು ಎಂದು ನಂಬಲಾಗಿದೆ. ಏಕೆಂದರೆ ಬಹರೈನಲ್ಲೂ ಹರಪ್ಪ ನಾಗರಿಕತೆಗೆ ಸೇರಿದ ಅನೇಕ ವಸ್ತುಗಳು ದೊರೆತಿವೆ. ಇಲ್ಲಿಂದ ದಂತ, ತಾಮ್ರ, ಹರಳುಗಳು, ಸಮುದ್ರದ ಮುತ್ತು ಹವಳಗಳು ಇತ್ಯಾದಿ ವಸ್ತುಗಳು ರಫ್ತಾಗುತ್ತಿದ್ದವು. ಆಮದು ಮಾಡಿಕೊಳ್ಳುತ್ತಿದ್ದ ವಸ್ತುಗಳ ಬಗ್ಗೆ ಖಚಿತ ಮಾಹಿತಿ ಇಲ್ಲ.

ಸಮುದ್ರದ ಮೇಲೆ ಬೃಹತ್ ಪ್ರಮಾಣದಲ್ಲಿ ವ್ಯಾಪಾರ ನಡೆಸಲಾಗುತ್ತಿತ್ತೆಂದು ಲೋಥಾಲ್‌ನಲ್ಲಿ ದೊರೆತ ವಸ್ತುಗಳು ತಿಳಿಸುತ್ತವೆ. ಅಲ್ಲಿ ನಡೆಸಿದ ಉತ್ಖನನದ ವೇಳೆ ಹಡಗು ಕಟ್ಟೆ, ಹಡಗು ನಿಲ್ಲುವ ಸ್ಥಳಗಳು ಹಾಗೂ ಕಲ್ಲು ಲಂಗರುಗಳು ಕಂಡುಬಂದಿವೆ. ಹರಪ್ಪ ಮತ್ತು ಮಹೆಂಜೊದಾರೊ ನಗರಗಳಲ್ಲೂ ದೊರಕಿದ ಅನೇಕ ಮೊಹರುಗಳಲ್ಲಿ, ಮುದ್ರೆಗಳಲ್ಲಿ, ಜೇಡಿಮಣ್ಣಿನ ಪ್ರತಿಮೆಗಳಲ್ಲಿ ಹಡಗುಗಳನ್ನು ಚಿತ್ರಿಸಲಾಗಿದೆ. ಲೋಥಾಲ್ ನಲ್ಲಿ ಹಡಗಿನ ಒಂದು ಜೇಡಿಮಣ್ಣಿನ ಮಾದರಿಯು ದೊರೆತಿದೆ.

ಇವೆಲ್ಲವನ್ನು ಆಧರಿಸಿ ವ್ಯಾಖ್ಯಾನಿಸುವುದಾದರೆ, ಹರಪ್ಪ ಮತ್ತು ಮಹೆಂಜೊದಾರೊ ನಾಗರಿಕತೆಯ ಅಭಿವೃದ್ಧಿಗೆ ಒಂದು ಸಂಘಟಿತ ವರ್ತಕ ವರ್ಗ, ದೇಶಿಯ ಮತ್ತು ವಿದೇಶಿಯ ವ್ಯಾಪಾರಗಳನ್ನು ನಡೆಸುತ್ತಿತ್ತು ಎಂದು ಅಭಿಪ್ರಾಯ ಪಡಬಹುದು. ಇವರು ದೂರ ಪ್ರದೇಶ ಗಳ ಅರಣ್ಯವಾಸಿಗಳಿಂದ ತಾಮ್ರ, ದಂತ, ನೀಲ ಹರಳುಗಳು ಮತ್ತು ವೈಢೂರ್ಯಗಳು, ಚಿನ್ನ ಮತ್ತು ಬೆಳ್ಳಿ, ಮೃದು ಕಲ್ಲು ಅಥವಾ ಸಾಬೂನು ಕಲ್ಲುಗಳು, ಕಪ್ಪೆಚಿಪ್ಪುಗಳನ್ನು ಸಂಗ್ರಹಿಸುತ್ತಿದ್ದರು.

ಇಷ್ಟು ಬೃಹತ್ ಪ್ರಮಾಣದ ದೇಶಿ ಮತ್ತು ವಿದೇಶಿ ವ್ಯಾಪಾರದಲ್ಲಿ ತೊಡಗಿದ್ದರೆಂದರೆ ವ್ಯಾಪಾರಿಗಳು ತಮ್ಮ ಪಟ್ಟಣದ ಸುತ್ತಮುತ್ತಲಿನ ಕೃಷಿಕ ಸಮುದಾಯದಿಂದ ಹೆಚ್ಚುವರಿ ಉತ್ಪಾದನೆಯನ್ನು ದೊಡ್ಡ ಪ್ರಮಾಣದಲ್ಲೇ ಸಂಗ್ರಹಿಸುತ್ತಿದ್ದಿರಬೇಕು. ಹೀಗೆ ಸಂಗ್ರಹಿಸಿದ ಕೃಷಿ ಉತ್ಪಾದನಾ ವಸ್ತುಗಳನ್ನು ಸಂಗ್ರಹಿಸಿಡಲು ಬಳಸುತ್ತಿದ್ದ ದೊಡ್ಡ ದೊಡ್ಡ ಉಗ್ರಾಣಗಳು ಹರಪ್ಪ ಮತ್ತು ಮಹೆಂಜೊದಾರೊ ನಗರಗಳಲ್ಲಿ ಕಂಡುಬಂದಿವೆ. ಈ ಧಾನ್ಯಗಳ ಹೊಟ್ಟು ತೆಗೆದು ಶುಚಿ ಮಾಡುವ ಕೆಲಸವನ್ನು ಕೂಲಿಯಾಳುಗಳು ನಿರ್ವಹಿಸುತ್ತಿದ್ದರು. ಈ ಕೂಲಿ ಆಳುಗಳು ವಾಸ ಮಾಡುವ ಚಿಕ್ಕ ಚಿಕ್ಕ ಮನೆಗಳು ಕೂಡ ಈ ಉಗ್ರಾಣಗಳ ಸುತ್ತ ಇವೆ. ಇಂತಹ ಕೆಲಸಗಳನ್ನು ಮಾಡಲು ಬಳಸುತ್ತಿದ್ದ ಕಲ್ಲಿನ ಮತ್ತು ಮರದ ಅನೇಕ ಅವಶೇಷಗಳು

ಉತ್ಖನನದ ವೇಳೆ ಪತ್ತೆಯಾಗಿವೆ. ಬಹುಶಃ ರೈತರು ತಾವು ಬೆಳೆದದ್ದರಲ್ಲಿ ತಮ್ಮ ಬಳಕೆಗೆ ಬೇಕಾಗುವಷ್ಟನ್ನು ಇಟ್ಟುಕೊಂಡು ಉಳಿದುದನ್ನು ಉಗ್ರಾಣಗಳಿರುವ ಪಟ್ಟಣಗಳಿಗೆ ಕಳುಹಿಸುತ್ತಿದ್ದರು. ಅಲ್ಲಿ ಆ ಧಾನ್ಯವನ್ನು ಉಗ್ರಾಣಗಳಲ್ಲಿ ಸಂಗ್ರಹಿಸಿಟ್ಟು, ಬೇಕಾದಾಗ ಅದನ್ನು ವ್ಯಾಪಾರಿಗಳು ದೂರ ಪ್ರಾಂತಗಳಿಗೆ ರಫ್ತು ಮಾಡಿ ಹಣ ಸಂಪಾದಿಸುತ್ತಿದ್ದರು.

## ಧಾರ್ಮಿಕ ನಂಬಿಕೆಗಳು

ಹರಪ್ಪ ಸಂಸ್ಕೃತಿಯು ಹರಡಿರುವ ಎಲ್ಲಾ ಪ್ರದೇಶಗಳಲ್ಲಿ ಕೈಗೊಂಡ ಉತ್ಖನನಗಳು ಆ ಜನರು ಪಾಲಿಸಿರುವ ಧಾರ್ಮಿಕ ನಂಬಿಕೆಗಳ ಬಗ್ಗೆ ಸೂಕ್ಷ್ಮ ಮಾಹಿತಿ ನೀಡುತ್ತವೆ. ದುರ್ಗಗಳು ಮತ್ತು ನಗರಗಳ ನಿವಾಸ ಪ್ರದೇಶಗಳಲ್ಲಿ ವಿಶಿಷ್ಟ ರೀತಿಯ ಸ್ಮಾರಕವಾಗಿ ಉಳಿದಿರುವ ಕೆಲವು ಕಟ್ಟಡಗಳನ್ನು ಮಂದಿರಗಳೆಂದು ಗುರುತಿಸಲಾಗಿದೆ. ಆಗಿನ ಕಾಲದ ಜೇಡಿ ಮಣ್ಣಿನ ಸಣ್ಣ ಪ್ರತಿಮೆಗಳು, ಚಿತ್ರಗಳಿರುವ ಮೊಹರುಗಳು ಮತ್ತು ಆಭರಣಗಳನ್ನು ಧರಿಸಿರುವ ಜೇಡಿ ಮಣ್ಣಿನ ಹೆಣ್ಣು ಪ್ರತಿಮೆಗಳು ಅಪಾರ ಪ್ರಮಾಣದಲ್ಲಿ ಇಲ್ಲಿ ದೊರೆತಿವೆ. ಇವುಗಳನ್ನು 'ಆದಿಶಕ್ತಿ'ಯೊಂದಿಗೆ ಹೋಲಿಸಲಾಗಿದೆ.

ಮೊಹರುಗಳ ಮೇಲೆ ರಚನೆಯಾದ ಚಿತ್ರಗಳನ್ನಾಧರಿಸಿ ಹರಪ್ಪ ಜನರ ಧಾರ್ಮಿಕ ನಂಬಿಕೆಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಇಂತಹ ಒಂದು ಮುದ್ರೆಯ ಮೇಲೆ ಮುಮ್ಮುಖದ ಪುರುಷ ದೈವವನ್ನು ಚಿತ್ರಿಸಲಾಗಿದೆ. ಈ ದೈವವು ವಿಶಿಷ್ಟ 'ಯೋಗ' ಭಂಗಿಯಲ್ಲಿ ತಗ್ಗಾದ ಆಧಾರಪೀಠವೊಂದರ ಮೇಲೆ ಒಂದು ಕಾಲಿನ ಮೇಲೆ ಇನ್ನೊಂದನ್ನು ಇರಿಸಿ ಕುಳಿತಿದೆ. ಈ ಆಧಾರ ಪೀಠಕ್ಕೆ ಜಿಂಕೆಗಳ ಪುಟ್ಟ ಆಕೃತಿಗಳನ್ನು ಜೋಡಿಸಲಾಗಿದೆ. ದೈವದ ಕೂದಲನ್ನು ಕೊಂಬುಗಳ ರೂಪದಲ್ಲಿರುವಂತೆ ರಚಿಸಲಾಗಿದೆ. ಈ ದೈವದೊಂದಿಗೆ ಕಾಡುಮೃಗಗಳಾದ ಆನೆ, ಹುಲಿ, ಘೆಂಡಾಮೃಗದಂತಹ ಚಿತ್ರಗಳಿವೆ. ಇದನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದ **ಸರ್ ಜಾನ್ ಮಾರ್ಷಲ್**ರವರು 'ಪಶುಪತಿ' ದೇವರು ಎಂದು ಗುರುತಿಸಿದ್ದಾರೆ. ಅಂದರೆ ಪ್ರಾಣಿಗಳ ಪೋಷಕ, 'ಸಂರಕ್ಷಕ ಶಿವ' ಎಂಬ ತೀರ್ಮಾನಕ್ಕೆ ಅವರು ಬಂದಿದ್ದಾರೆ. ಇಲ್ಲಿ ಗಮನಾರ್ಹ ಅಂಶವೇನೆಂದರೆ ಆದಿಕಾಲದಿಂದಲೂ ಶಿವನನ್ನು ಯೋಗಿಯನ್ನಾಗಿ, ಕೊಂಬುಗಳಂತಿರುವ ತಲೆಗೂದಲುಳ್ಳ ದೇವನನ್ನಾಗಿ ವರ್ಣಿಸಲಾಗಿದೆ. ದೈವವನ್ನು ಸುತ್ತುವರಿದಿರುವ ನಾಲ್ಕು ಪ್ರಾಣಿಗಳು ಭೂಮಿಯ ನಾಲ್ಕು ದಿಕ್ಕುಗಳನ್ನು ನೋಡುತ್ತಿದ್ದು, ಹಿಂದೂಧರ್ಮದ ಎಲ್ಲಾ ದೈವಗಳಿಗೂ ಇರುವಂತೆ ಇವು ಆ ದೈವದ ವಾಹನಗಳಿರಬೇಕೆಂದು ವ್ಯಾಖ್ಯಾನಿಸಲಾಗಿದೆ.

ಇನ್ನೊಂದು ಮೊಹರಿನ ಮೇಲೆ ಒಬ್ಬ ಯೋಗಿ ಹಾಗೂ ಹೆಡೆ ಬಿಚ್ಚಿದ ನಾಗರಹಾವಿನ ಚಿತ್ರವಿದೆ. ಇನ್ನೂ ಅನೇಕ ಮೊಹರುಗಳ ಮೇಲೆ ಆಲ ಅಥವಾ ಇತರ ವೃಕ್ಷದೊಡನೆ ವೃಕ್ಷ ದೇವತೆಯನ್ನು ಚಿತ್ರಿಸಲಾಗಿದೆ. ಮೊಹರುಗಳ ಮೇಲೆ ಗೂಳಿಗಳು, ಹುಲಿಗಳು ಮತ್ತಿತ್ತರ ಪ್ರಾಣಿಗಳ ಚಿತ್ರವಿರುವುದನ್ನು ಗಮನಿಸಿ ವಿದ್ವಾಂಸರು ಇದು ಹಿಂದೂ ಧರ್ಮಕ್ಕೂ, ಹರಪ್ಪ ನಾಗರಿಕತೆಯ ಜನರ ಧಾರ್ಮಿಕ ಕಲ್ಪನೆಗಳಿಗೂ ನಡುವೆ ಸಂಬಂಧವಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಏಕೆಂದರೆ ಹಿಂದೂ ಧಾರ್ಮಿಕ ನಂಬಿಕೆಗಳ ಪ್ರಕಾರ ವಿವಿಧ ದೇವರುಗಳು ವಿವಿಧ

ಪ್ರಾಣಿಗಳೊಂದಿಗೆ ಸಂಪರ್ಕ ಹೊಂದಿದ್ದವು. ಉದಾಹರಣೆಗೆ ಶಿವನು ಗೂಳಿ (ನಂದಿ) ಯೊಂದಿಗೆ, ಅವನ ಪತ್ನಿ ಪಾರ್ವತಿ ಹುಲಿಯೊಂದಿಗೆ ಸಂಪರ್ಕ ಹೊಂದಿದ್ದರು. ಪ್ರಾಣಿಗಳ ಚಿತ್ರವನ್ನು ಮೊಹರುಗಳ ಮೇಲೆ ರಚಿಸುವ ಉದ್ದೇಶ, ಕುಲದೇವತಾ ಪರಿಕಲ್ಪನೆಗಳ ಉಳಿಯುವಿಕೆಗಾಗಿಯೂ ಇರಬಹುದು. ಕೆಲವು ಮೊಹರುಗಳ ಮೇಲೆ ಸಂಯುಕ್ತ ಪ್ರಾಣಿ ಚಿತ್ರಗಳನ್ನು ರಚಿಸಲಾಗಿದೆ. ಉದಾಹರಣೆಗೆ, ಏಕ ಶೃಂಗಿ ಮತ್ತು ಆನೆ ಅಥವಾ ಮನುಷ್ಯ ಮತ್ತು ಸಿಂಹ. ಅವು ಒಂದು ಪಂಥದ ಚಿತ್ರಗಳಾಗಿವೆ ಎಂಬ ಅಭಿಪ್ರಾಯವು ಇದೆ. ಹೀಗೆ ವೃಕ್ಷಗಳು, ಪ್ರಾಣಿಗಳು ಹಾಗೂ ಮನುಷ್ಯ ರೂಪಗಳಲ್ಲಿ ಹರಪ್ಪ ಸಂಸ್ಕೃತಿಯ ಜನರು ದೇವರನ್ನು ಆರಾಧಿಸುತ್ತಿದ್ದಿರಬೇಕು.

ಕಾಲಿಬಂಗನ್‌ನಲ್ಲಿ ಬೂದಿ ಹಾಗೂ ಪ್ರಾಣಿಗಳ ಮೂಳೆಗಳಿರುವ ಇಟ್ಟಿಗೆಯ ಅಂಚು ಕಟ್ಟಿರುವ ಹೊಂಡಗಳು ಉತ್ಖನನದ ವೇಳೆ ಗುರುತಿಸಲಾಗಿದೆ. ಅವುಗಳನ್ನು ಯಜ್ಞವೇದಿಕೆ ಯಾಗಿ ಬಳಸಿರಬಹುದೆಂದು ಅಭಿಪ್ರಾಯಪಡಲಾಗಿದೆ. ಮಹೆಂಜೊದಾರೊ ದಿಬ್ಬದಲ್ಲಿ ನಿರ್ಮಾಣವಾಗಿದ್ದ ಸ್ನಾನಗೃಹ ಕೇವಲ ಸ್ನಾನದ ಉದ್ದೇಶಕ್ಕಾಗಿ ನಿರ್ಮಾಣವಾದದ್ದಾಗಿರದೆ, ಪೂಜಾ ಸಂಬಂಧವಾದ ಅರ್ಥವನ್ನು ಅದಕ್ಕೆ ಕಲ್ಪಿಸಲಾಗಿದೆ. ಏಕೆಂದರೆ, ಈ ಕೊಳದ ನಿರ್ಮಾಣವನ್ನು ಕೊಳದೊಳಕ್ಕೆ ಇಳಿಯಲು ರಚಿಸಿರುವ ಮೆಟ್ಟಿಲುಗಳನ್ನು ಗಮನಿಸಿದರೆ ಇದು ಪೂಜಾ ಸಂಬಂಧದ ಕೊಳ ಅಥವಾ ಪುಷ್ಕರಿಣಿಯಾಗಿರಬಹುದು ಎಂದು ತಿಳಿಯಲಾಗಿದೆ.

ಹರಪ್ಪ ನಾಗರಿಕತೆಗೆ ಸೇರಿದ ಮೊಹರುಗಳ ಮೇಲೆ ಗಂಡು ದೇವತೆಗಳು, ಗಂಡುಪ್ರಾಣಿಗಳು ಮತ್ತು ಅವುಗಳ ಪೂಜೆಗಳು ಮಾತ್ರವಲ್ಲದೆ, ಮಾತೃದೇವತೆಗಳು ಕೂಡ ಚಿತ್ರಿತವಾಗಿವೆ. ಇದಕ್ಕೆ ನಿದರ್ಶನವಾಗಿ ಭಯಂಕರ ಸ್ವರೂಪದ ಸಣ್ಣ ಸಣ್ಣ ಹೆಣ್ಣು ಗೊಂಬೆಗಳು ಉತ್ಖನನದ ವೇಳೆ ದೊರೆತಿವೆ. ಈ ಮಾತೃದೇವತೆಯರ ಪೂಜೆಗೆ ಸಂಬಂಧಿಸಿದ ಪುಷ್ಕರಣಿಯೇ ಮಹೆಂಜೊದಾರೊ ದಿಬ್ಬದಲ್ಲಿ ಕಂಡುಬಂದಿರುವ 'ಸ್ನಾನದ ಗೃಹ' ಎಂದು ಅಭಿಪ್ರಾಯ ಪಡಲಾಗಿದೆ.

## ಹರಪ್ಪ ಲಿಪಿ

ಹರಪ್ಪ ಕಾಲದ ಭಾಷೆಯ ಬಗ್ಗೆ ಯಾವುದೇ ನಿಶ್ಚಿತ ಜ್ಞಾನವಿಲ್ಲದಿರುವುದು ಹರಪ್ಪ ಲಿಪಿಯನ್ನು ಓದುವುದಕ್ಕೆ ಅಡಚಣೆಯಾಗಿದೆ. ಇದುವರೆಗೂ ಇಲ್ಲಿ ಸುಮಾರು ಒಂದು ಸಾವಿರಕ್ಕೂ ಹೆಚ್ಚು ಮೊಹರುಗಳನ್ನು ಉತ್ಖನನದ ವೇಳೆ ಗುರುತಿಸಲಾಗಿದೆ. ಇದರ ಜೊತೆಗೆ ಕುಂಬಾರ ವಸ್ತುಗಳ ಮೇಲೂ, ಲೋಹದ ವಸ್ತುಗಳ ಮೇಲೂ ಬರಹ ರೂಪದಲ್ಲಿರುವ ವಿನ್ಯಾಸಗಳನ್ನು ಕಂಡುಹಿಡಿಯಲಾಗಿದೆ. ಮೊಹರುಗಳಲ್ಲಿ ಕಂಡುಬಂದಿರುವ ಲಿಪಿ, ಸಂಜ್ಞೆಗಳ ಸಂಖ್ಯೆ ಸುಮಾರು ೪೦೦ ಆಗಿದೆ. ಅವುಗಳಲ್ಲಿ ಕೆಲವು ಭಾವ ಸಂಜ್ಞೆಗಳಾಗಿದ್ದರೂ, ಲಿಪಿಗಳ ಪ್ರಧಾನ ಭಾಗಕ್ಕೆ ಧ್ವನಿ ಸಂಜ್ಞೆಗಳಿದ್ದವು ಎಂದು ವಿದ್ವಾಂಸರು ವ್ಯಾಖ್ಯಾನಿಸುತ್ತಾರೆ. ಅದು ನಿಜವಾಗಿಯೂ ಬರಹವೇ ಆಗಿದ್ದಲ್ಲಿ ಅವುಗಳು ತುಲನಾತ್ಮಕವಾಗಿ ಸ್ಥೂಲವಾಗಿದ್ದಂತೆ ಕಾಣುತ್ತವೆ. ಸಂಖ್ಯೆಗಳನ್ನು ಸೂಚಿಸಲು ವಿಶೇಷ ಗೆರೆಗಳನ್ನು ಉಪಯೋಗಿಸಲಾಗುತ್ತಿತ್ತು.

ಕಾಲಿಬಂಗನ್‌ನಲ್ಲಿ ದೊರೆತ ಒಂದು ಅವಶೇಷದ ಮೇಲೆ ಕಂಡುಬಂದ ಬರಹವು, ಆಗಿನ ಕಾಲದಲ್ಲಿ ಬಲದಿಂದ ಎಡಕ್ಕೆ ಬರೆಯಲಾಗುತ್ತಿದ್ದಿತು ಅನ್ನುವುದನ್ನು ಸ್ಪಷ್ಟಪಡಿಸಿದೆ.

ಇತ್ತೀಚೆಗೆ ಕೆಲವು ವಿದ್ವಾಂಸರು ಈ ಬರಹಗಳ ಅರ್ಥವನ್ನು ಕಂಡುಹಿಡಿಯಲು ಯತ್ನಿಸುತ್ತಿದ್ದಾರೆ. ತಮ್ಮದೇ ಆದ ವಿಧಾನಗಳ ಮೂಲಕ ಈ 'ಗುಪ್ತ' ಲಿಪಿಯನ್ನು ಓದಿದ್ದಾರೆ. ಲಿಪಿಯ ಚಿಹ್ನೆಗಳನ್ನು ವರ್ಣಮಾಲಾಕ್ಷರಗಳೆಂದೂ, ಚಿತ್ರಲಿಪಿಗಳೆಂದೂ, ಶೀಘ್ರಲಿಪಿಯ ಗುರುತುಗಳೆಂದೂ ಹೇಳಲಾಗಿದೆ. ಅಷ್ಟೇಕೆ ಅದು ಕೇವಲ ಪ್ರಾಣಿ ಮೂಳೆಗಳ ಪ್ರತಿಬಿಂಬಗಳೇ ಹೊರತು, ಒಂದು ಬರಹ ವ್ಯವಸ್ಥೆಯೇ ಅಲ್ಲ ಎಂದೆಲ್ಲಾ ವ್ಯಾಖ್ಯಾನಿಸಲಾಗಿದೆ. ಬೆದ್ರಿಖ್ ಹ್ರೋಸ್ನಿ ಎಂಬ ಖ್ಯಾತ ವಿದ್ವಾಂಸ ಹರಪ್ಪ ಬರವಣಿಗೆಗೂ 'ಹಿಟೈಟ್ ಚಿತ್ರ ಲಿಪಿ'ಗೂ ನಡುವೆ ಸಾಮ್ಯತೆ ಕಂಡಿದ್ದಾರೆ. ಆದರೆ ಇದು ಹೆಚ್ಚು ಗಮನ ಸೆಳೆದಿಲ್ಲ. ಈ ಬರಹಗಳ ಅರ್ಥವನ್ನು ತಿಳಿಯಲು ಮೊದಲು ಹರಪ್ಪ ಜನರು ಯಾವ ಭಾಷೆಯನ್ನು ಮಾತನಾಡು ತ್ತಿದ್ದರು ಮತ್ತು ಬರೆಯುತ್ತಿದ್ದರು ಅನ್ನುವುದನ್ನು ತಿಳಿದುಕೊಳ್ಳುವ ಅಗತ್ಯವಿದೆ.

ಸೋವಿಯತ್ ಹಾಗೂ ಫಿನ್ನಿಷ್ ಸಂಶೋಧಕರು ಗಣಕಯಂತ್ರಗಳ ಸಹಾಯದಿಂದ ವಿಶ್ಲೇಷಿಸಿ ಇದೇ ತೀರ್ಮಾನಕ್ಕೆ ಬಂದಿದ್ದಾರೆ. ಅವರು ಹರಪ್ಪ ಲಿಪಿಯ ಭಾಷೆಯನ್ನು ದ್ರಾವಿಡಿಯನ್ ವೃಂದದ ಭಾಷೆಗಳಲ್ಲೊಂದಾಗಿರಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ. ಪ್ರಯತ್ನಗಳು ಇನ್ನು ಮುಂದುವರಿದಿದ್ದು, ಆಸ್ಕೊಪರ್ಪೋಲಾ ಮತ್ತು ಅವರ ಸ್ಕಾಂಡಿ ನೇವಿಯನ್ ಸಹೋದ್ಯೋಗಿಗಳು, ಐರಾವತ ಮಹಾದೇವನ್, ಎಸ್.ಆರ್. ರಾವ್ ಮತ್ತು ಇತರರು ಈ ವಿಚಾರವಾಗಿ ಪ್ರಯತ್ನಮಾಡುತ್ತಿರುವ ಪ್ರಮುಖ ವಿದ್ವಾಂಸರು. ಆದರೆ, ಈವರೆಗೆ ಯಾರೂ ತೃಪ್ತಿಕರವಾಗಿ ಈ ಲಿಪಿಯ ರಹಸ್ಯವನ್ನು ಬೇಧಿಸಲಿಲ್ಲ. ಒಂದು ವೇಳೆ ಸಕಾರಾತ್ಮಕ ವಾದ ಯಶಸ್ಸು ದೊರೆತಲ್ಲಿ ಹರಪ್ಪ ಸಂಸ್ಕೃತಿಯ ಜನರು ಸಾಹಿತ್ಯಕ್ಕೆ ನೀಡಿರುವ ಕೊಡುಗೆ, ಅವರ ಭಾವನೆಗಳ ಕುರಿತಾಗಿ ಮತ್ತು ವಿಶ್ವಾಸಗಳನ್ನು ಕುರಿತು ಹೆಚ್ಚು ಬೆಳಕು ಚೆಲ್ಲು ವಂತಾಗುತ್ತದೆ.

## ಹರಪ್ಪ ಸಂಸ್ಕೃತಿಯ ಅವನತಿ

ಈ ಸಂಸ್ಕೃತಿಯ ಒಂದು ಮುಖ್ಯ ಲಕ್ಷಣವೇನೆಂದರೆ, ಇಷ್ಟು ದೀರ್ಘ ಕಾಲದ ನಾಗರಿಕತೆಯುಳ್ಳ ಹರಪ್ಪ, ಮಹೆಂಜೊದಾರೊ ಪಟ್ಟಣಗಳ ನಿರ್ಮಾಣಗಳಲ್ಲಿ ಯಾವುದೇ ರೀತಿಯ ಬದಲಾವಣೆಗಳು ಕಾಣದಿರುವುದು. ಹೊಸ ಹೊಸ ಪಟ್ಟಣಗಳ ನಿರ್ಮಾಣಗಳಿದ್ದರೂ ಅವೆಲ್ಲವೂ ಒಂದೇ ಮಾದರಿಯ ವಿನ್ಯಾಸದಿಂದ ಕೂಡಿವೆ. ಉತ್ಖನನಗಳಿಂದ ದೊರೆತ ಮಡಕೆ-ಕುಡಿಕೆಗಳನ್ನು ಪರಿಶೀಲಿಸಿದರೂ ಈ ಒಂದು ಸಾವಿರ ವರ್ಷಗಳ ದೀರ್ಘ ಅವಧಿಯಲ್ಲಿ, ಈ ವಸ್ತುಗಳ ತಯಾರಿಯಲ್ಲಿ ಯಾವುದೇ ಬದಲಾವಣೆಗಳು ಅಥವಾ ನಮೂನೆಗಳು ಕಂಡು ಬರುವುದಿಲ್ಲ. ಸಾವಿರಕ್ಕೂ ಮಿಕ್ಕಿ ದೊರೆತ ಮೊಹರುಗಳ ಮೇಲೆ ಬರೆದ ಲಿಪಿಯಲ್ಲೂ ಇಷ್ಟೊಂದು ದೀರ್ಘ ಕಾಲದಲ್ಲಿ ಏನೂ ಬದಲಾವಣೆಗಳಿಲ್ಲ. ನಮ್ಮ ದೇಶದ ಭಾಷೆಗಳ ಲಿಪಿಗಳಲ್ಲಿ ಅದೆಷ್ಟೋ ವ್ಯತ್ಯಾಸಗಳೂ, ಬೆಳವಣಿಗೆಗಳೂ ಆಗಿರುವುದನ್ನು ನಾವು ಗಮನಿಸಿ ದ್ದೇವೆ. ಆದರೆ ಹರಪ್ಪ ಸಂಸ್ಕೃತಿ ಹೇಗೆ ಅಚಾನಕವಾಗಿ ರೂಪುಗೊಂಡಿತೋ ಹಾಗೇ

ಏಕಾಏಕಿಯಾಗಿ ಹೆಪ್ಪುಗಟ್ಟಿದಂತೆ ನಿಂತುಬಿಟ್ಟಿದೆ. ಇದಕ್ಕೆ ಹೊರಗಿನ ಧಾಳಿಗಳಿಂದ ಈ ಸಂಸ್ಕೃತಿ ತಾಳಿಕೊಳ್ಳಲಾಗದೆ ನಾಶವಾಗಿ ಹೋಗಿರಬೇಕೆಂದು ಒಂದು ಅಭಿಪ್ರಾಯ ಅಥವಾ ಸಿದ್ಧಾಂತವಿದೆ. ಬಹುಶಃ ಆ ಧಾಳಿಗಳು ಸಂಘಟಿತವಾಗಿ ಬಹಳ ಹಿಂಸಾತ್ಮಕವಾಗಿ ಈ ಸಂಸ್ಕೃತಿಯನ್ನು ನಾಶ ಮಾಡಿರಬೇಕು. ಇದಕ್ಕೆ ಸಾಕ್ಷಿಯಾಗಿ ಮಹೆಂಜೊದಾರೊ ಅವಶೇಷಗಳು ನಮಗೆ ಲಭ್ಯವಿವೆ. ಇಲ್ಲಿನ ಮನೆಗಳು, ಮನೆಗಳ ರಚನೆ ಒಡೆದಿರುವುದಕ್ಕೆ, ದೊಡ್ಡ ಪ್ರಮಾಣದ ಹತ್ಯಾಕಾಂಡವೇ ನಡೆದಿರಬಹುದೆಂಬ ಅಭಿಪ್ರಾಯಕ್ಕೆ ಪುಷ್ಟಿ ನೀಡುತ್ತವೆ. ನೇರವಾಗಿ ಹೇಳುವುದಾದರೆ ಈ ಹಿಂಸಾಕಾಂಡಕ್ಕೆ ಆರ್ಯರೇ ಕಾರಣರು ಎಂದು ವಿದ್ವಾಂಸರು ಖಚಿತವಾಗಿ ಹೇಳುತ್ತಾರೆ.

ಆದರೆ ಈ ಸಿದ್ಧಾಂತ ನಂಬಲರ್ಹವಲ್ಲ. ಏಕೆಂದರೆ ಈ ಧಾಳಿಯಾಗುವ ಮೊದಲೇ ಆಂತರಿಕ ಅಂಶಗಳಿಂದ ಅನೇಕ ನಗರಗಳು ನಾಶದಂಚಿನಲ್ಲಿದ್ದವು ಎಂದು ಇತ್ತೀಚೆಗೆ ತಿಳಿದು ಬಂದಿದೆ. ಸಾಮಾನ್ಯವಾಗಿ ನಗರಗಳು ಉನ್ನತ ಸ್ಥಿತಿಯಲ್ಲಿದ್ದ ನಂತರ ಅವುಗಳ ಅವನತಿಯ ಕಾಲ ಆರಂಭವಾಗುತ್ತದೆ. ಮಹೆಂಜೊದಾರೊ, ಹರಪ್ಪ, ಕಾಲಿಬಂಗನ್ ಇತ್ಯಾದಿ ನಗರಗಳಲ್ಲಿ ದೊರೆತಿರುವ ಕುರುಹುಗಳು ಇದನ್ನು ಸಮರ್ಥಿಸುತ್ತವೆ. ಇಲ್ಲಿ ನಡೆದ ನಿರ್ಮಾಣ ಕಾರ್ಯವನ್ನು ಯಾವುದೇ ಕಟ್ಟುನಿಟ್ಟಾದ ಯೋಜನೆ ಇಲ್ಲದೆ ನಡೆಸಲಾಯಿತು. ಆ ಹೊತ್ತಿಗೆ ಕೆಲವು ದೊಡ್ಡ ಕಟ್ಟಡಗಳು ಆಗಲೇ ನಾಶಗೊಂಡಿದ್ದವು. ನೀರು ಸರಬರಾಜು ವ್ಯವಸ್ಥೆಯೂ ಆ ಹೊತ್ತಿಗೆ ಅಸ್ತವ್ಯಸ್ತಗೊಂಡಿದ್ದಿತು. ಈ ಆಂತರಿಕ ಅಂಶಗಳಲ್ಲಿ, ಅಲ್ಲಿನ ಮಣ್ಣಿನಲ್ಲಿ ಉಪ್ಪಿನ ಪ್ರಮಾಣ ಹೆಚ್ಚಾದುದು, ಪ್ರವಾಹಗಳು, ಮರಳುಭೂಮಿ ವಿಸ್ತರಿಸಿರುವುದು ಮತ್ತು ಸಿಂಧೂ ನದಿ ಹರಿಯುತ್ತಿದ್ದ ದಿಕ್ಕಿನಲ್ಲಾದ ಬದಲಾವಣೆಗಳು ಮುಖ್ಯವಾದ ಕಾರಣಗಳೆಂದೂ ಹೇಳಲಾಗಿದೆ. ನೈಸರ್ಗಿಕ ವಿಕೋಪದಿಂದಾಗಿಯೂ ಹರಪ್ಪ ನಾಗರಿಕತೆ ವಿನಾಶವಾಯಿತು ಎಂಬ ಅಭಿಪ್ರಾಯವೂ ಇದೆ. ಮಹೆಂಜೊದಾರೊ ಪ್ರದೇಶದಲ್ಲಿ ಜಲಧರ್ಮಶಾಸ್ತ್ರ ಸಂಶೋಧನೆ ನಡೆಸಿ, ಈ ನಗರ ನಾಶವಾಗುವ ಸ್ವಲ್ಪ ಕಾಲಕ್ಕೆ ಮುಂಚೆ ಅಲ್ಲಿ ಭೂಕಂಪ ಜರುಗಿದ್ದಿತೆಂದೂ, ಅದರಿಂದ ನಗರ ನಾಶವಾಯಿತು ಎಂಬ ತೀರ್ಮಾನಕ್ಕೆ ಬರಲಾಗಿದೆ. ಆದರೆ ಮಹೆಂಜೊದಾರೊ ನಗರದ ವಿನಾಶಕ್ಕೆ ಪ್ರವಾಹಗಳೇ ಮುಖ್ಯ ಕಾರಣವಾಗಿದ್ದು, ನಗರವು ಅನೇಕ ಭಾರಿ ಪ್ರವಾಹಕ್ಕೆ ಬಲಿಯಾಗಿದ್ದು, ಕೊನೆಗೆ ಅಲ್ಲಿನ ಜನರು ಬೇರೆ ಕಡೆಗೆ ವಲಸೆ ಹೋಗುವಂತಾಯಿತು. ಇತರ ನಗರಗಳೂ ಪ್ರವಾಹದಿಂದ ಮುಳುಗಿರುವ ಸಾಧ್ಯತೆಯೂ ಇದೆ. ಇನ್ನೊಂದು ಕಾರಣವನ್ನು ನೀಡಲಾಗಿದೆ. ಸಿಂಧೂ ನದಿಯು ದಿಕ್ಕು ಬದಲಿಸಿದುದರಿಂದಾಗಿ ಅಲ್ಲಿ ತೀವ್ರ ನೀರಿನ ಅಭಾವ ಉಂಟಾಗಿ ನಗರ ದುಃಸ್ಥಿತಿಯನ್ನು ಎದುರಿಸಿತ್ತು ಎಂದು ಅಭಿಪ್ರಾಯ ಪಡಲಾಗಿದೆ. ಈ ಅಭಿಪ್ರಾಯಗಳು ನಂಬಲರ್ಹವಾದುದರಿಂದ ಹರಪ್ಪ ನಾಗರಿಕತೆಯ ಮತ್ತು ಅದರ ನಗರಗಳ ಅವನತಿಗೆ ಆಂತರಿಕ ಘಟನೆಗಳೆ ಮುಖ್ಯ ಕಾರಣಗಳಾಗಿದ್ದವು ಎಂಬುದು ಸುಸ್ಪಷ್ಟವಾಗಿದೆ.

ಮಧ್ಯ ಏಷ್ಯಾ, ಬಾಲ್ಟಿಕ್ ಪ್ರದೇಶ, ಅಲ್ಲದೇ ಯೂರೋಪಿನ ಕೆಲವು ಪ್ರದೇಶಗಳಿಂದ ಬಂದವರು ಆರ್ಯರು ಎಂಬ ಪಾಶ್ಚಾತ್ಯ ವಿದ್ವಾಂಸರ ವಾದಗಳಲ್ಲಿ ಸತ್ಯಾಂಶದ ಕೊರತೆ ಇದೆ ಎಂಬ ಟೀಕೆಯೂ ಪ್ರಚಲಿತದಲ್ಲಿದೆ. ಮೇಲಾಗಿ, ಭಾರತೀಯರ ಮೂಲವನ್ನು ವಿದೇಶ ಗಳಿಗೆ ಒಯ್ದು ಅವರ ದೇಶಿಯ ಅಭಿಮಾನವನ್ನು ಮರೆಯುವಂತೆ ಮಾಡುವ ವಿದೇಶಿಯರ ಕೃತ್ಯ ಇದರಿಂದ ವ್ಯಕ್ತವಾಗುತ್ತದೆ ಎಂಬ ಅಭಿಪ್ರಾಯವೂ ಇದೆ. ಇದಕ್ಕುತ್ತರವಾಗಿ ಭಾರತವು ಆರ್ಯರ ಮೂಲ ಸ್ಥಾನ, ಅವರು ಬೇರೆ ಎಲ್ಲಿಂದಲೂ ಬಂದವರಲ್ಲ ಎಂಬ ಅಭಿಪ್ರಾಯ ಅನೇಕ ಭಾರತೀಯ ವಿದ್ವಾಂಸರಿಂದ ವ್ಯಕ್ತವಾಗಿದೆ: ಆರ್ಯರು ಹೊರಗಿನಿಂದ ಬಂದವ ರಾಗಿದ್ದರೆ ಭಾರತ ದೇಶವನ್ನು ಹೇಗೆ ಮನತುಂಬಿ ಹೊಗಳಲು ಸಾಧ್ಯ? ಅನ್ಯ ದೇಶಗಳಿಂದ ಬಂದವರಾಗಿದ್ದರೆ, ಈ ನಾಡನ್ನು ಹೇಗೆ ತಾನೆ ತಮ್ಮ ತಾಯ್ನಾಡೆಂದು ಹೊಗಳಲು ಸಾಧ್ಯ? ಹಾಗೆಯೇ ಹೊರಗಿನಿಂದ ಬಂದವರಾಗಿದ್ದರೆ ತಮ್ಮ ಪೂರ್ವದ ಹಿನ್ನೆಲೆಯನ್ನೂ ಅಥವಾ ತಾವು ಬೆಳೆದು ಬಂದ ಪರಿಸರವನ್ನು ವೇದಗಳಲ್ಲಿ ಕಾಣಿಸದಿರುತ್ತಿದ್ದರೆ? ಈ ಅನುಮಾನಗಳು ಆರ್ಯರು ಭಾರತೀಯರೆ ಹೊರತು, ಎಲ್ಲಿಂದಲೋ ಬಂದವರಲ್ಲ ಎಂಬ ಅಂಶವನ್ನು ಎತ್ತಿ ಹಿಡಿಯುವಲ್ಲಿ ನೆರವಾಗಬಲ್ಲವು. ಸ್ವಾಮಿ ವಿವೇಕಾನಂದರು ಕೂಡ ತಮ್ಮ *ದಿ ಈಸ್ಟ್ ಎಂಡ್ ವೆಸ್ಟ್* ಕೃತಿಯಲ್ಲಿ ಯಾವುದೊ ಹೊರದೇಶದಿಂದ ಆರ್ಯರು ವಲಸೆ ಬಂದರಂತೆ, ಇಲ್ಲಿನ ಮೂಲ ನಿವಾಸಿಗಳಿಂದ ಭೂಮಿಯನ್ನು ಕಿತ್ತುಕೊಂಡು ಇಲ್ಲಿ ನೆಲೆಸಿದರಂತೆ ಎಂಬುದಾಗಿ ಆಂಗ್ಲ ವಿದ್ವಾಂಸರು ಹೇಳಿರುವುದು ಶುದ್ಧ ಸುಳ್ಳು ಎಂದು ವಾದಿಸುತ್ತಾರೆ. ಆರ್ಯರು ಹೊರನಾಡಿನಿಂದ ಬಂದರೆಂದು ಯಾವ ವೇದದಲ್ಲಿ ಹೇಳಿದೆ? ಎಂಬ ಪ್ರಶ್ನೆ ವಿಚಾರಪೂರಿತವಾಗಿದೆ. ಈ ಅಭಿಪ್ರಾಯವನ್ನು ಒಪ್ಪದ ಇತರರು ಭಾರತವೇ ಆರ್ಯರ ಮೂಲಸ್ಥಾನವಾಗಿದ್ದಲ್ಲಿ ಇಂತಹ ಉತ್ಕರ್ಷ ಹಾಗೂ ಆಶ್ರಯವುಳ್ಳ ಸ್ಥಳದಿಂದ ಫಲ ದೊರೆಯದ ಹಾಗೂ ಅತ್ಯಂತ ಬಂಜರು ಪ್ರದೇಶವಾದ ಪರ್ಶಿಯಾ, ಮಧ್ಯ ಏಷ್ಯಾ ಮುಂತಾದ ಭಾಗಗಳಿಗೆ ಅವರು ವಲಸೆ ಹೋಗಬೇಕಾದ ಅಗತ್ಯ ಇರಲಿಕ್ಕೆ ಇಲ್ಲ ಎಂಬ ವಾದ ಈ ಗುಂಪಿನ ವಿದ್ವಾಂಸರು ಮಂಡಿಸುತ್ತಾರೆ.

ಇತ್ತೀಚೆಗೆ ಪ್ರಚಲಿತವಾಗಿ ಬಹುಜನರ ಸಮ್ಮತಿ ಪಡೆದಿರುವ ಇನ್ನೊಂದು ಅಭಿಪ್ರಾಯವೂ ಇದೆ. ಇದರಂತೆ ಆಗ್ನೇಯ ಯೂರೋಪ್ ಆರ್ಯರ ಮೂಲಸ್ಥಾನ. ಈ ಅಭಿಪ್ರಾಯವನ್ನು ಈ ರೀತಿ ಹೇಳಲಾಗಿದೆ: ಹೊಂಗೆ ಮರ, ವಿಲ್ಲೊ (ಹೆಣಿಗೆ ದಾರ ಕೊಡುವ ಮರ) ಜಕ್ ಮರಗಳು ಮತ್ತು ಹಸು ಮುಂತಾದ ಪ್ರಾಣಿಗಳ ಬಗ್ಗೆ ಆರ್ಯರಿಗೆ ಚೆನ್ನಾಗಿ ತಿಳಿದಿತ್ತು. ಇವು ಆಗ್ನೇಯ ಯೂರೋಪ್‌ನಲ್ಲಿ ವಿಪುಲವಾಗಿ ಇದ್ದುದು, ಅಲ್ಲಿ ಪ್ರಾಪ್ತ ವಾಗಿರುವ ಪಳೆಯುಳಿಕೆಗಳಿಂದ ಕಂಡುಬರುತ್ತದೆ. ಅಂದ ಮೇಲೆ ಅವುಗಳಲ್ಲಿ ಚಿರಪರಿಚಿತ ವಾದ ಆರ್ಯರು ಆ ಪ್ರದೇಶದಿಂದಲೇ ಬೇರೆ ಬೇರೆ ಕಡೆಗೆ ಚದುರಿದರು. ಮೇಲೆ ತಿಳಿಸಿದ ಹಸು ಮತ್ತು ಮರಗಳ ವಿವರಣೆ ಪರ್ಶಿಯನ್ನರ 'ಜಂದ್-ಅವೆಸ್ತ' ಮತ್ತು ವೇದಗಳಲ್ಲಿ ಉಲ್ಲೇಖವಾಗಿರುವುದು ಈ ಅಭಿಪ್ರಾಯಕ್ಕೆ ಮತ್ತಷ್ಟು ಪುಷ್ಟಿ ಕೊಟ್ಟಿದೆ.

ಬಾಲಗಂಗಾಧರ ತಿಲಕ್‌ರವರ *ಆರ್ಕ್‌ಟಿಕ್ ಹೋಮ್ ಆಫ್ ದಿ ಆರ್ಯನ್ಸ್* ಎಂಬ ಗ್ರಂಥದ ಪ್ರಕಾರ ಆರ್ಕಟಿಕ್ ಅಥವಾ ಉತ್ತರ ಧ್ರುವಪ್ರದೇಶ ಆರ್ಯರ ಮೂಲಸ್ಥಾನ. ಋಗ್ವೇದದ ಒಂದು ಸೂಕ್ತಿಯಲ್ಲಿ 'ಶೂಕ್ಲೇ, ಕೃಷ್ಣೇ, ಸಂವತ್ಸರೇ' ಎಂದು ಹೇಳಲಾಗಿದೆ. ಅಂದರೆ ಒಂದು ಸಂವತ್ಸರದಲ್ಲಿ ಆರು ತಿಂಗಳ ಕಾಲ ಹಗಲು (ಶುಕ್ಲಪಕ್ಷ), ಆರು ತಿಂಗಳು ರಾತ್ರಿಯೂ (ಕೃಷ್ಣಪಕ್ಷ) ಇತ್ತೆಂದು ತಿಲಕರು ವ್ಯಾಖ್ಯಾನಿಸಿದ್ದರು. ಧ್ರುವ ಪ್ರದೇಶದಲ್ಲಿ ಈ ತೆರನಾದ ಆರು ತಿಂಗಳು ದೀರ್ಘ ಹಗಲು, ಆರು ತಿಂಗಳು ದೀರ್ಘ ರಾತ್ರಿ ಕಂಡುಬರುತ್ತದೆ. ಇದರ ಆಧಾರದ ಮೇಲೆ ತಿಲಕ್ ಉತ್ತರ ಧ್ರುವ ಪ್ರದೇಶ ಆರ್ಯರ ಮೂಲಸ್ಥಾನವೆಂದು ಪರಿಗಣಿಸಿದ್ದರು.

ಕ್ಯಾಸ್ಪಿಯನ್ ಪ್ರದೇಶದ ಸ್ಟೆಪ್ಪೀಸ್ ಹುಲ್ಲುಗಾವಲು ಆರ್ಯರ ಮೂಲಸ್ಥಾನವೆಂದು ಪರಿಗಣಿಸುತ್ತಿದ್ದ ವಿದ್ವಾಂಸರು ತಿಲಕರ ಅಭಿಪ್ರಾಯವನ್ನು ೧೯೫೪ ರವರೆಗೂ ಮಾನ್ಯ ಮಾಡಿರಲಿಲ್ಲ. ಆದರೆ ಪ್ರೊಫೆಸರ್ ಸೈರಿಲ್ ಫಗಾನ್ ಎಂಬ ಅಮೆರಿಕಾದ ಖಗೋಳಶಾಸ್ತ್ರಜ್ಞರ ಸಂಶೋಧನೆ ತಿಲಕರ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಇವನ ಪ್ರಕಾರ ಸ್ಟೆಪ್ಪೀಸ್ ಪ್ರದೇಶ ಕ್ರಿ.ಪೂ. ೪೦೦೦ ದಲ್ಲಿ ಉತ್ತರ ಧ್ರುವ ಪ್ರದೇಶಕ್ಕೆ ಹತ್ತಿರದಲ್ಲಿತ್ತು.

**ಹೆಚ್ಚಿನ ವಿಷಯ**

[ಆಗ ಭೂಮಿ ೫೭ ೧/೨ ಡಿಗ್ರಿ ಅಕ್ಷಾಂಶದಷ್ಟು ಓರೆಯಾಗಿತ್ತು. ಕ್ರಿ.ಪೂ. ೩೦೦೦ ದಲ್ಲಿ ೪೪ ೧/೨ ಡಿಗ್ರಿಯಷ್ಟು, ಕ್ರಿ.ಶ. ಆರಂಭದಲ್ಲಿ ೨ ಡಿಗ್ರಿಯಷ್ಟು, ನಂತರ ಕ್ರಿ.ಶ. ೧೦೦೦ ದಲ್ಲಿ ೧೦ ಡಿಗ್ರಿಯಷ್ಟು ಓರೆಯಾಗಿದೆ. ಹೀಗೆ ಯುಗಾಂತರದಲ್ಲಿ ಭೂಮಿ ಓರೆಯಾಗಿರುವುದರಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಈ ಸ್ಟೆಪ್ಪೀಸ್ ಪ್ರದೇಶ ೪೦ ಡಿಗ್ರಿ ಉತ್ತರ ಅಕ್ಷಾಂಶದಲ್ಲಿದೆ. ಈ ಪ್ರದೇಶ ಕ್ರಿ.ಪೂ ೪೦೦೦ ದಲ್ಲಿ ೫೭ ಡಿಗ್ರಿ ಉತ್ತರ ಅಕ್ಷಾಂಶದಲ್ಲಿ ಧ್ರುವ ಪ್ರದೇಶದ ಗಡಿಗೆ ಹತ್ತಿರವಾಗಿತ್ತು. (ಉತ್ತರ ಧ್ರುವ ಪ್ರದೇಶ ೬೬ ೧/೨ ಡಿಗ್ರಿಯಿಂದ ೯೦ ಡಿಗ್ರಿವರೆಗೂ ವಿಸ್ತರಿಸಿದೆ.) ಇದರಿಂದ ಧ್ರುವ ಪ್ರದೇಶಕ್ಕೆ ಹತ್ತಿರವಾಗಿದ್ದ ಸ್ಟೆಪ್ಪೀಸ್ ಪ್ರದೇಶವೇ ಆರ್ಯರ ಮೂಲ ಸ್ಥಾನವೆಂದೂ ಪರಿಗಣಿಸಲಾಗಿದೆ.]

## ಆರ್ಯ-ದ್ರಾವಿಡ ಜನಾಂಗವಾದ

ಆರ್ಯರು ಮೊದಲು ಸಿಂಧೂ ನದಿಯ ಬಯಲಿನಲ್ಲಿ ನೆಲೆಸಿದ್ದರು. ಕ್ರಮೇಣ ಭಾರತದ ಇತರ ಭಾಗಗಳಿಗೂ ಹರಡಿಕೊಂಡರು. ಮೊದಲು ಪಂಜಾಬಿನಲ್ಲಿ ನೆಲೆಸಿದ ಆರ್ಯರು ಆ ಪ್ರದೇಶವನ್ನು 'ಸಪ್ತ ಸಿಂಧವ' ಎಂದು ಕರೆದರು. ಅಂದರೆ ಏಳು ನದಿಗಳ ಪ್ರದೇಶ- ಜೀಲಂ, ಚಿನಾಬ್, ರಾವಿ, ಬಿಯಾಸ್, ಸಟ್ಲೇಜ್, ಸರಸ್ವತಿ ಮತ್ತು ದ್ರಿಷ್‌ದ್ವೈತಿ. ಇಲ್ಲಿ ಋಗ್ವೇದ ರಚಿತವಾದಂತೆ ಕಂಡುಬರುತ್ತದೆ. ಈ ಕಾಲದ ನಾಗರಿಕತೆಯೂ ಋಗ್ವೇದ ಕಾಲದ ನಾಗರಿಕತೆ ಎಂದೂ ಕರೆಯಲಾಗಿದೆ.

ಆರಂಭದಲ್ಲಿ ಅಲ್ಲಿನ ಮೂಲನಿವಾಸಿಗಳ ಅಥವಾ ದ್ರಾವಿಡರ ಪ್ರತಿಭಟನೆಯನ್ನು ಇವರು ಎದುರಿಸಬೇಕಾಯಿತು. ಹೀಗೆ ಪ್ರತಿಭಟಿಸಿದ ಕಪ್ಪು ವರ್ಣದ ದ್ರಾವಿಡರು ಮತ್ತು ಆರ್ಯರ

ನಡುವೆ ಸಾಮಾಜಿಕವಾಗಿ ಪ್ರತಿಬಂಧಕಗಳು ಹುಟ್ಟಿಕೊಂಡವು. ಇಲ್ಲಿನ ಮೂಲ ನಿವಾಸಿಗಳಾದ ದ್ರಾವಿಡರು ಆರ್ಯರ ತಿರಸ್ಕಾರ ದೃಷ್ಟಿಗೆ ಪಾತ್ರರಾದರು ಮತ್ತು ಸಾಮಾಜಿಕ ವ್ಯವಹಾರಗಳಲ್ಲಿ ಅವರ ನಡುವೆ ಹೆಚ್ಚಿನ ಅಂತರವೇರ್ಪಡುವಂತಾಯಿತು. ಗಂಗಾ ನದಿಯ ಬಯಲಿನಲ್ಲಿದ್ದ ದ್ರಾವಿಡರನ್ನು ಅಮಾನುಷ ವ್ಯಕ್ತಿಗಳಂತೆ ವರ್ಣಿಸಿದ್ದಾರೆ. ಇವರ ನಡುವೆ ಮತೀಯ ಭಿನ್ನಾಭಿಪ್ರಾಯಗಳು ಇದ್ದವು. ದ್ರಾವಿಡರನ್ನು ಕರ್ಮವಿಧಿಗಳಿಲ್ಲದವರು, ದೇವರನ್ನು ಆರಾಧಿಸದವರು, ವ್ರತಾಚರಣೆಯಲ್ಲಿ ಆಸಕ್ತಿ ಇಲ್ಲದವರು ಮುಂತಾಗಿ ವರ್ಣಿಸಿದ್ದಾರೆ. ದ್ರಾವಿಡ ಸಂಸ್ಕೃತಿಯ ಲಕ್ಷಣಗಳನ್ನು ಈ ರೀತಿ ಪಟ್ಟಿ ಮಾಡಲಾಗಿದೆ: ದುರ್ಗಪೂಜೆ, ದ್ಯಾಮವ್ವ, ಮಾರಮ್ಮ ಮುಂತಾದ ಗ್ರಾಮದೇವತೆಗಳು, ನಾಗರಪೂಜೆ, ಪಶುಬಲಿ, ಮಾತೃ ಪ್ರಧಾನ ಪದ್ಧತಿ, ಕನ್ಯಾಶುಲ್ಕ, ಭೂತಾರಾಧನೆ, ಅಶ್ವಥ ಪೂಜೆ, ಆಲದಮರ ಪೂಜೆ, ಗಾಲಿ, ಬಲಿಪೂಜೆ, ಬಸವಿ ಬಿಡುವ ಪದ್ಧತಿ, ಕುರಿ, ಎಮ್ಮೆ ಪೂಜೆ ಇತ್ಯಾದಿ ದ್ರಾವಿಡ ಸಂಸ್ಕೃತಿಯ ಲಕ್ಷಣಗಳೆಂದು ಹೇಳಲಾಗಿದೆ.

ಕೊನೆಗೆ ಆರ್ಯರು ಗಂಗಾ ನದಿಯ ಬಯಲಿಗೂ ಹರಡಿರುವುದರಿಂದ ಮಗಧ, ಅಂಗ, ವಂಗ ಮತ್ತು ಕಳಿಂಗ ಆರ್ಯೇತರ ಜನರ ಕೇಂದ್ರಗಳಾಗಿ ಉಳಿದವು. ಹೀಗಾಗಿ ಪೂರ್ವ ಭಾರತದಲ್ಲಿ ಆರ್ಯೇತರರು ತಮ್ಮ ಸಾಮಾಜಿಕ ಕಟ್ಟುಪಾಡುಗಳನ್ನು ಮುಂದುವರಿಸಿಕೊಂಡು ಬಂದರು. ಮುಂದೆ ಜೈನ ಮತ್ತು ಬೌದ್ಧ ಮತಗಳು ಏಳಿಗೆಗೆ ಬರಲು ದಾರಿಯಾಯಿತು. ಉತ್ತರ ಭಾರತದಲ್ಲಿನ ಆರ್ಯರ ದಿಗ್ವಿಜಯ ದಕ್ಷಿಣದಲ್ಲಿ ಮುಂದುವರಿಯಲಿಲ್ಲ.

ಈ ದೇಶ ಎಂದೂ ಒಂದೇ ರಾಜಕೀಯ ವ್ಯವಸ್ಥೆಯಡಿ ಬಂದಿರಲಿಲ್ಲ ಎಂಬ ವಿಚಾರವನ್ನು ಜನರ ಮನಸ್ಸಿನಲ್ಲಿ ಬಿತ್ತಲು ಆರಂಭಿಸಿದ ಬ್ರಿಟಿಷರು ಈ ಆರ್ಯ-ದ್ರಾವಿಡ ಜನಾಂಗ ವಾದವನ್ನು ಹುಟ್ಟು ಹಾಕಿದರು. ಇವರುಗಳು ಆಕಾರ, ವಿಕಾರ, ಬಣ್ಣ, ರೂಪ-ಲಕ್ಷಣಗಳಲ್ಲೂ ಭಿನ್ನತೆಯನ್ನು ಕಲ್ಪಿಸಿ ಅಂತರ ಏರ್ಪಡಿಸಿದರು. 'ಆರ್ಯರು ಬಿಳಿಯರು' ಮತ್ತು 'ದ್ರಾವಿಡರು ಕರಿಯರು' ಮೊದಲಾದ ವಾದಗಳನ್ನು ಮುಂದಿಟ್ಟುಕೊಂಡು ನಮ್ಮ ಇಲ್ಲಿನ ವಿದ್ವಾಂಸರುಗಳು ಬ್ರಿಟಿಷರ ಧಾಟಿಯಲ್ಲೇ ಭಾರತೀಯರಲ್ಲಿ ಜನಾಂಗವಾದ ಹರಡುತ್ತಾ ಬಂದರು. ಭೌತಿಕ ಹಾಗೂ ಮಾನಸಿಕವಾಗಿ ಒಂದು ಕುಟುಂಬದ ಸದಸ್ಯರಲ್ಲೇ ವ್ಯತ್ಯಾಸಗಳಿರುವುದು ಸಹಜ. ಹಾಗಿದ್ದರೂ ಅಂತಹ ವಿಚಾರವನ್ನು ಪ್ರಧಾನವಾಗಿಸಿಕೊಂಡ ಬ್ರಿಟಿಷರು 'ಆರ್ಯ ಜನಾಂಗ' ಮತ್ತು 'ದ್ರಾವಿಡ ಜನಾಂಗ'ಗಳನ್ನು ಸೃಷ್ಟಿಸಿದರು. 'ಇದೊಂದು ಕಲ್ಪನೆಯಿಂದ ಕೂಡಿದ ಪ್ರಚಾರ' ಎಂದು ಖ್ಯಾತ ಇತಿಹಾಸಕಾರ **ಆರ್.ಎಸ್. ಶರ್ಮ** ಅಭಿಪ್ರಾಯ ಪಡುತ್ತಾರೆ.

**ಜವಾಹರಲಾಲ್ ನೆಹರೂ**ರವರೂ ತಮ್ಮ *ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟರಿ* ಎಂಬ ಗ್ರಂಥದಲ್ಲಿ "ನಾವು ಕಲಿತ ಭಾರತದ ಇತಿಹಾಸ ತಪ್ಪಾಗಿ ತಿದ್ದಿದ ಚರಿತ್ರೆ. ನಮ್ಮ ತಾಯ್ನಾಡನ್ನು ನಾವೇ ಕೀಳಾಗಿ ನೋಡಬೇಕೆಂದು ಉದ್ದೇಶಪೂರ್ವಕವಾಗಿ ಚಿತ್ರಿಸಿದ ಇತಿಹಾಸ ನಾನು ಓದಿದ್ದು" ಎಂಬುದಾಗಿ ಅಪಾದಿಸಿದ್ದಾರೆ. ಇದೂ ಕೂಡ ಮೇಲಿನ ಅಂಶವನ್ನೇ ಪ್ರತಿ ಪಾದಿಸುತ್ತದೆ.

ರೋಮಿಲಾ ಥಾಪರ್ ಅವರು ಹೇಳಿರುವಂತೆ ಭಾರತೀಯ ಇತಿಹಾಸದ ಸಾಮ್ರಾಜ್ಯವಾದಿ ಭಾಷ್ಯದ ಸಂದರ್ಭದಲ್ಲಿ ಯೂರೋಪಿಯನ್ನರ ಮಾನಸಿಕ ಮುನ್ನೋಟವು ಪೂರ್ವಾಗ್ರಹ ಗಳಿಂದ 'ಆರ್ಯ ಜನಾಂಗ' ಎಂಬ ಸಿದ್ಧಾಂತವನ್ನು ಸೃಷ್ಟಿ ಮಾಡಿತು. ಭಾರತೀಯ ಇತಿಹಾಸ ಕಾರರೂ ಕೂಡ ಹಲವಾರು ಮೂಲಭೂತವಾದಗಳನ್ನು ಪ್ರತಿಪಾದಿಸಿದರೂ ಆರ್ಯ ಜನಾಂಗವಾದವನ್ನು ತಿರಸ್ಕರಿಸಲಿಲ್ಲ. ಬಹುಸಂಖ್ಯಾತ ಇತಿಹಾಸಕಾರರು ಮೇಲು ಜಾತಿಯ-ಬ್ರಾಹ್ಮಣ, ಕ್ಷತ್ರೀಯ, ಕಾಯಸ್ಥ ಮತ್ತು ಮಧ್ಯಮ ವರ್ಗದವರೂ ಆಗಿದ್ದರಿಂದ ತಮ್ಮ ವರ್ಗದ ಘನತೆಯನ್ನು ಎತ್ತಿ ಹಿಡಿಯಲು ವೈದಿಕ ಸಂಸ್ಕೃತಿಯ ಮೂಲಕ್ಕೆ ಹತ್ತಿರವಾದುದೆಂದು ವಾದಿಸಲು ಅವರಿಗೆ ಅನುಕೂಲವಾಯಿತು.

ಭಾರತದ ಬಗ್ಗೆ ಮೇಲ್ಜಾತಿಯವರ ವಾದವನ್ನು ತಿರಸ್ಕರಿಸುವ ಜನರೂ ಕೂಡ ಈ ವಾದವನ್ನು ಸ್ವೀಕರಿಸಿ ತಮ್ಮ ವಾದಗಳ ಸಮರ್ಥನೆಗೆ ಬಳಸಿಕೊಂಡರು. ಬ್ರಾಹ್ಮಣೇತರ ಚಳವಳಿಯ ಸದಸ್ಯರೂ ಕೂಡ ಕೀಳು ಜಾತಿಯವರು ಹಾಗೂ ಮೇಲ್ಜಾತಿಯರಿಬ್ಬರೂ 'ಆರ್ಯ ವಂಶಸ್ಥ'ರೆಂದು ಪ್ರತಿಪಾದಿಸಲು ಈ ಪ್ರಮೇಯವನ್ನು ಬಳಸುತ್ತಾ ಬಂದರು. 'ಆದಿವಾಸಿಗಳು' ಎಂಬ ಪದವನ್ನು ಹೀಗೆಯೆ ಬಳಸಿರುವ ಬ್ರಿಟಿಷರು ಮತ್ತು ಯೂರೋಪಿಯನ್ನರು ಇಡೀ ಹಿಂದೂ ಸಮುದಾಯವನ್ನೆ ವಕ್ರದೃಷ್ಟಿಯಲ್ಲಿ ನೋಡಿದ್ದಾರೆ. ಪರಿಣಾಮ ಆರ್ಯ ಜನಾಂಗ ವಾದವು ಧಾರ್ಮಿಕ ಸಂಪ್ರದಾಯ ಮತ್ತು ಮತಾಂಧತೆಗಳಿಗೆ ದಾರಿ ಮಾಡಿ ಜನರಲ್ಲಿ ಪ್ರತ್ಯೇಕತೆಯನ್ನು ಬೆಳೆಸುತ್ತದೆ. ಇದು ಆಂಗ್ಲರ ಮನೋ ಇಂಗಿತವೂ ಆಗಿದ್ದಿತು. ಈ ಬಗ್ಗೆ ಒಟ್ಟಾಭಿಪ್ರಾಯಕ್ಕೆ ಸೂಕ್ತ ವೇದಿಕೆ ನಿರ್ಮಾಣವಾಗಬೇಕಿದೆ ಎಂದು ರೋಮಿಲಾ ಥಾಪರ್ ಹೇಳುತ್ತಾರೆ.

ಆರ್ಯರ ಮೂಲ ಸಮಸ್ಯೆ ಇನ್ನೂ ಹಲವು ಆಯಾಮವನ್ನು ಪಡೆದು ಚರ್ಚೆ ಮುಂದು ವರಿದಿದೆ. ದಕ್ಷಿಣ ಮತ್ತು ಉತ್ತರ ಭಾರತದಲ್ಲಿ ಇಂದಿಗೂ ಆರ್ಯೇತರ ಭಾಷೆಗಳನ್ನು ಕೆಲವು ಭಾಗಗಳಲ್ಲಿ ಆಡುವುದರಿಂದ ಈ ವಿಷಯವೇ ಭಾರತ ಮೂಲನಿವಾಸವಾದಕ್ಕೆ ವಿರುದ್ಧವಿರುವ ಏಕೈಕ ಪ್ರಬಲ ಆಧಾರವಾಗಿದೆ. ಮುಖ್ಯವಾಗಿ ಬಲೂಚಿಸ್ತಾನದಲ್ಲಿ ದ್ರಾವಿಡ ಭಾಷಾ ಪ್ರದೇಶ (ಬ್ರಾಹುಯಿ)ವೊಂದು ಇರುವುದರಿಂದ ಮೊದಲಿಗೆ ಭಾರತವು ಪೂರ್ತಿಯಾಗಿ, ಇಲ್ಲವಾದರೆ ಬಹುತೇಕ ಭಾಗವಾದರೂ ಆರ್ಯೇತರ ಭಾಷೆಗಳನ್ನಾಡುವ ದೇಶವಾಗಿತ್ತೆನ್ನ ಬಹುದು. ಚಾರಿತ್ರಿಕ ಕಾಲಕ್ಕೂ ಪೂರ್ವದ ಮಹೆಂಜೊದಾರೊ ಸಂಸ್ಕೃತಿಯ ಭಾಷೆ ಸಂಸ್ಕೃತ ವೆಂದಾಗಲಿ, ಸಂಸ್ಕೃತದ ಪೂರ್ವರೂಪವೆಂದಾಗಲಿ ನಿರ್ಧರಿಸಲಾಗಿದ್ದರೆ, ಸಾಕ್ಷ್ಯಗಳೆಲ್ಲಾ ವಿರುದ್ಧವಾಗಿದ್ದರೂ, ಭಾರತವೇ ಆರ್ಯರ ಮೂಲನಿವಾಸವಾಗಿತ್ತೆಂದು ವಾದಿಸಲು ಸಾಧ್ಯ ವಾಗುತ್ತಿತ್ತು. ಇದಕ್ಕೆ ಕಾರಣ ಹರಪ್ಪ-ಮಹೆಂಜೊದಾರೊ ಸಂಸ್ಕೃತಿಯ ಯುಗಕ್ಕೂ ಮುಂಚೆ ಭಾರತದ ಹೊರಗಡೆ ಆರ್ಯ ಜನಾಂಗವಾಗಲಿ, ಅವರ ಭಾಷೆಯಾಗಲಿ ಇದ್ದಿತೆನ್ನುವುದಕ್ಕೆ ನಿಶ್ಚಿತ ಪ್ರಮಾಣ ದೊರೆತಿಲ್ಲ. ಮಹೆಂಜೊದಾರೊದಲ್ಲಿ ದೊರೆತ ಮುದ್ರೆಗಳು ಅಸ್ಪಷ್ಟವಾಗಿ

ಇರುವವರೆಗೂ ಈ ವಿಷಯಕ್ಕೆ ಸಂಬಂಧಿಸಿದಂತೆ ಸದ್ಯಕ್ಕೆ ಅಭಿಪ್ರಾಯವನ್ನು ನೀಡಲು ಸಾಧ್ಯವಿಲ್ಲ.

ವೇದ ಕಾಲದ ಸಂಸ್ಕೃತಿಯು ಮಹೆಂಜೊದಾರೊ ಸಂಸ್ಕೃತಿಗಿಂತ ಮೂಲತಃ ಅತಿ ಭಿನ್ನವಾಗಿತ್ತೆಂದು ಹಾಗೂ ಈಚಿನದೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯ ಚರ್ಚಿಸಿದ ನಂತರ ಒಂದು ಅಂಶವು ಕಂಡುಬರುತ್ತದೆ. ಮಹೆಂಜೊದಾರೊದಲ್ಲಿ ದೊರೆತ ಫಲಕವೊಂದರ ಆಧಾರದಿಂದ **ಸರ್ ಜಾನ್ ಮಾರ್ಷಲ್**‌ರವರು ಶಿವ, ಪಶುಪತಿ (ರುದ್ರ) ಎಂಬ ತತ್ವವನ್ನು ವೇದಕಾಲದ ಆರ್ಯರು ಮಹೆಂಜೊದಾರೊ ಸಂಸ್ಕೃತಿಯಿಂದ ಪಡೆದರು ಎಂದು ಹೇಳುತ್ತಾರೆ. ಮುಖ್ಯವಾಗಿ, ಬೇರೆ ದೇವತೆಯಲ್ಲದೆ, ಈ ರುದ್ರ ದೇವತೆಯೂ ಮಾತ್ರ ವೈದಿಕ ಧರ್ಮ ಹಾಗೂ ಪೂಜಾವಿಧಾನದಲ್ಲಿ ಹೇಯವಾದ ದೇವರೆಂದೂ, ಭಯ ಹುಟ್ಟಿಸುವ ದೇವರೆಂದು ನಂಬಿದ್ದರು. ರುದ್ರ ದೇವತೆಗಳೂ ಸಹ ಆರ್ಯರಿಗೆ ಪೂರ್ವದಲ್ಲಿ ಭಾರತದಲ್ಲಿ ವಾಸಿಸುತ್ತಿದ್ದ ಜನಗಳ ದೇವತೆಗಳಾಗಿದ್ದಿರಬೇಕೆಂದು ಒಪ್ಪಿಕೊಂಡರೆ, ಮಹೆಂಜೊದಾರೊ ಜನರು ಆರ್ಯರಲ್ಲವೆಂದು ಒಪ್ಪಿಕೊಂಡಂತೆಯೆ ಮೇಲೆ ಹೇಳಿದಂತೆ ಸರ್ ಜಾನ್‌ರ ಅಭಿಪ್ರಾಯವನ್ನು ಎಲ್ಲರೂ ಒಪ್ಪಿಕೊಂಡಿಲ್ಲವೆಂಬ ಸಂಗತಿ ನಿಜ. ಆದರೆ ಭಾರತದ ಅತಿ ಪ್ರಾಚೀನ ಉಪಲಬ್ಧ ನಾಗರಿಕತೆಯನ್ನು ಆರ್ಯೇತರರಿಂದ ವಿಕಸಿತವಾದದೆಂದು ತಿಳಿಯುವುದಾದರೆ, ಆರ್ಯರು ಭಾರತಕ್ಕೆ ಹೊರಗಿನಿಂದ ಬಂದವರೆಂಬ ವಿಚಾರ ನಿರ್ವಿವಾದವಾದೀತು.

ಇಂಡೋ-ಯುರೋಪಿಯನ್ ಕುಟುಂಬಕ್ಕೆ ಸೇರಿದ ನಿಶ್ಚಿತವಾದ ಇಂಡೋ-ಇರಾನಿಯನ್ ಎನ್ನುವ ಭಾಷೆಯ ಅತಿ ಪ್ರಾಚೀನ ನಿಸ್ಸಂದೇಹವಾದ ಗುರುತೆಂದರೆ ಬೊಗಾಜ್-ಕೊಯ್ ಎಂಬಲ್ಲಿ ದೊರೆತ ಹಿಟ್ಟೈಟ್ ದೊರೆ ಶುಬ್ಬಿಲುಲಿ ವಿಮ ಹಾಗೂ ಮಿತನ್ನೆಯ ರಾಜ ಮತ್ತಿ ವಾಜರ ನಡುವಣ ಕ್ರಿ.ಪೂ. ಸುಮಾರು ೧೪೦೦ ರ ಸಂಧಿಪತ್ರದಲ್ಲಿ ಕಂಡುಬರುವ ಮಿತ್ರ, ವರುಣ, ಇಂದ್ರ ಮತ್ತು ನಾಸತ್ಯರೆಂಬ ನಾಲ್ಕು ವೈದಿಕ ದೇವತೆಗಳ ಹೆಸರುಗಳು. ಇವುಗಳಲ್ಲಿ ಮಿತ್ರ ಮತ್ತು ವರುಣ ಎಂಬೆರಡು ಹೆಸರುಗಳ ಪ್ರಾರಂಭದಲ್ಲಿ 'ದೇವತೆ' ಎಂಬ ನಿರ್ಧಾರಕ ಪದವೊಂದು ಬಹುವಚನದಲ್ಲಿ ಕಂಡುಬರುತ್ತದೆ. ಬಹುವಚನದ ನಿರ್ಧಾರಕ ಪದದ ಉಪಯೋಗವು ಈ ಹೆಸರುಗಳು ವೇದದ ಸಂಸ್ಕೃತದಂತೆ ದ್ವಂದ್ವ ಸಮಾಸ ರೂಪದಲ್ಲಿದ್ದ ವೆನ್ನುವುದನ್ನು ಸೂಚಿಸಲಷ್ಟೇ ಎಂಬ ವಿಚಾರ ಗಮನಾರ್ಹವಾದದ್ದು.

**ಹೆಚ್ಚಿನ ವಿಷಯ**

[ಆದರೂ ಈ ಹೆಸರುಗಳನ್ನೂ ಯಾವ ಭಾಷೆಯಿಂದ ಎರವಲಾಗಿ ಪಡೆಯಿತೊ, ಅದು ಇನ್ನಾವುದೊ ಭಾಷೆಯೂ ಆಗಿರದೆ ನಮ್ಮ ವೇದದ ಸಂಸ್ಕೃತವೇ ಎಂದೂ. ಅಲ್ಲಿ ಕಾಣಬರುವ ಸಣ್ಣ ವ್ಯತ್ಯಾಸಗಳಿಂದ ಹಿಟ್ಟೈಟ್ ಜನರು ಅಕಾಡಿಯನ್ ಅಕ್ಷರಗಳ ಉಪಯೋಗದಲ್ಲಿ ಅಸಮರ್ಥವಾಗಿದ್ದುದರಿಂದಲೇ ಎಂದೂ ನಿರ್ಣಯಿಸಿದರೆ ತಪ್ಪಾಗುತ್ತದೆ. ಕಾರಣ ಈ ಸಂಖ್ಯಾ ವಾಚಕ ಶಬ್ದಗಳು (ಐಕ, ತೇರ, ಪಂಜ, ಸತ್ತ) ರಥವನ್ನೋಡಿಸುವ ಪಂದ್ಯದ ಬಗ್ಗೆ ಹಿಟ್ಟೈಟ್ ಭಾಷೆಯಲ್ಲಿ 'ಕಿಕ್ಕುಲಿ' ಎಂಬ ಹೆಸರಿನ ಮಿತನ್ನಿ ಲೇಖಕನಿಂದ ರಚಿತವಾದ ಮತ್ತು ಬೊಗಾಜ್-

ಕೊಯ್‌ನಲ್ಲಿಯೆ ದೊರೆತ ಗ್ರಂಥವೊಂದರಲ್ಲಿ ಕಂಡುಬರುವುದರಿಂದ, ಇನ್ನೂ ಪೂರ್ಣ ರೀತಿಯಲ್ಲಿ ಇಂಡೋ-ಆರ್ಯನ್ ಎಂದಾಗಲಿ ಅಥವಾ ಇರಾನಿಯನ್ ಎಂದಾಗಲಿ ವಿಕಸಿತವಾಗಿರದ ಹಳೆಯ ಇಂಡೋ-ಇರಾನಿಯನ್ ಭಾಷೆಯೊಂದನ್ನು ಸೂಚಿಸುತ್ತದೆ.

ಕ್ರಿ.ಪೂ. ಸುಮಾರು ೧೫೦೦ ರ ವೇಳೆಗೆ ಹಳೆಯ ಇಂಡೋ-ಇರಾನಿಯನ್ ಭಾಷಾ ಸ್ವರೂಪದ ಇರುವಿಕೆಯ ಬಗ್ಗೆ ನಿಶ್ಚಿತ ಪ್ರಮಾಣ ನೀಡುವ ಪ್ರದೇಶ ಬೊಗಾಜ್-ಕೊಯ್ ಒಂದೇ ಅಲ್ಲ. ಈಜಿಪ್ಟ್‌ನಲ್ಲಿ ದೊರೆತಿರುವ ಬ್ಯಾಬಿಲೋನಿಯನ್ ಬರವಣಿಗೆಯ ಜೇಡಿ ಮಣ್ಣಿನ ಮುದ್ರಿಕೆಗಳಿಂದ ಇಂಡೋ-ಇರಾನಿಯನ್ ಎನ್ನಬಹುದಾದ ಹೆಸರುಗಳುಳ್ಳ ಹಲವಾರು ಕುಲಗಳು ಅದೇ ಕಾಲದಲ್ಲಿ ಸಿರಿಯ ದೇಶದಲ್ಲಿ ಆಳ್ವಿಕೆ ನಡೆಸಿದ್ದರೆಂದು ತಿಳಿದು ಬರುತ್ತದೆ. ಕಪಡೋಸಿಯಾ ಮತ್ತು ಸಿರಿಯಾಗಳಂತಹ ಪರಸ್ಪರ ದೂರದ ಪ್ರದೇಶಗಳಲ್ಲಿ ದೊರೆಯುವ ಭಾಷಿಕ ಸಾಕ್ಷಿಗಳು ಸುಮಾರು ಕ್ರಿ.ಪೂ. ೧೫೦೦ ರಲ್ಲಿ ಆ ಪ್ರದೇಶಗಳಲ್ಲಿ ನಮಗೆ ತಿಳಿದುಬಂದಿರುವ ಪ್ರಾಚೀನ ಅವೆಸ್ತ ಅಥವಾ ಸಂಸ್ಕೃತಕ್ಕಿಂತಲೂ ನಿಸ್ಸಂದೇಹವಾಗಿ ಪುರಾತನವೆನ್ನಬಹುದಾದ ಅತಿ ಹಳೆಯ ಇಂಡೋ-ಇರಾನಿಯನ್ ಭಾಷಾರೂಪಗಳಾಗಿದ್ದವೆಂದು ನಿರ್ಧರಿಸುತ್ತವೆ. ಇಂಡೋ-ಯೂರೋಪಿಯನ್ ಅಥವಾ ಇಂಡೋ-ಆರ್ಯನ್ ಭಾಷೆಗಳನ್ನು ಆಡುವ ಜನರ ಒಂದು ಗುಂಪಿನ ಇರುವಿಕೆಯನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಏಕೆಂದರೆ ಸಂಸ್ಕೃತ, ಲ್ಯಾಟಿನ್, ಗ್ರೀಕ್, ಜರ್ಮನಿಕ್, ಸ್ಲಾವ್, ರೋಮನ್ ಭಾಷೆಗಳೆಲ್ಲವೂ ಆರ್ಯ ಕುಟುಂಬಕ್ಕೆ ಸೇರಿದ ಭಾಷೆಗಳೆಂದು ಅಭಿಪ್ರಾಯಪಡಲಾಗಿದೆ. ಈ ಭಾಷೆಗಳ ನಡುವಿನ ಸಾಮ್ಯತೆಯ ಆಧಾರದ ಮೇಲೆ ಆರ್ಯರ ಮೂಲವು ರಷ್ಯಾ ಮತ್ತು ಮಧ್ಯ ಏಷ್ಯಾದ ನಡುವೆ ಬರುವ ಯಾವುದೋ ಸಾಮಾನ್ಯ ಪ್ರದೇಶವಾಗಿರಬೇಕೆಂದು ತಿಳಿಯಲಾಗಿದೆ. ಆ ಪ್ರದೇಶದಿಂದ ಆರ್ಯ ಭಾಷೆ ಮಾತನಾಡುವ ಜನರು ಯೂರೋಪ್ ಮತ್ತು ಏಷ್ಯಾದ ಬೇರೆ ಬೇರೆ ಸ್ಥಳಗಳಿಗೆ ವಲಸೆ ಹೋಗಿರಬಹುದು. ಈ ವಲಸೆ ಹೋದ ಹಲವು ಗುಂಪುಗಳಲ್ಲಿ ಒಂದು ಗುಂಪು ಇರಾನಿಗೆ ಬಂದು ಅನೇಕ ವರ್ಷದವರೆಗೆ ನೆಲೆಸಿರಬೇಕು. ನಂತರ ಅಲ್ಲಿಂದ ತಮ್ಮ ವಲಸೆಯನ್ನು ಭಾರತಮುಖವಾಗಿ ಮುಂದುವರಿಸಿ ಬಂದಾಗ ನಗರ ಕೇಂದ್ರಿತ ಹರಪ್ಪ ಅಥವಾ ಸಿಂಧೂ ನಾಗರಿಕತೆಯನ್ನು ಎದುರುಗೊಂಡಿರಬೇಕು ಈ ಭೇಟಿಯು ಯುದ್ಧ ದೊಂದಿಗೆ ಅಂತ್ಯಗೊಂಡಿತು. ಈ ಸಂಘರ್ಷದಿಂದ ಹರಪ್ಪ ನಾಗರಿಕತೆ ನಾಶವಾಗಿ, ಆ ಪ್ರದೇಶವನ್ನು ಆರ್ಯರು ವಶಪಡಿಸಿಕೊಂಡಿರಬೇಕು ಎಂಬುದು ಒಂದು ಅಭಿಪ್ರಾಯ.]

## ವೇದ ಕಾಲ

ಆರ್ಯರ ಇತಿಹಾಸವನ್ನು ಕುರಿತು ನಮಗೆ ಲಭ್ಯವಿರುವ ಮಾಹಿತಿ ವೇದ ಸಾಹಿತ್ಯ. ಈ ಸಾಹಿತ್ಯ ಇಂಡೋ-ಯೂರೋಪಿಯನ್ ಭಾಷೆಗೆ ಸೇರಿದ ಗುಂಪಿನ ಅತಿ ಪ್ರಾಚೀನ ಸಾಹಿತ್ಯ ಆಕರವಾಗಿದೆ. 'ವೇದ' ಶಬ್ದದ ಅರ್ಥ 'ಜ್ಞಾನಭಂಡಾರ'. ವೇದಗಳಲ್ಲಿ ನಾಲ್ಕು ವಿಧಗಳು - ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ. ವೇದ ಸಾಹಿತ್ಯವನ್ನು ಎರಡು ಹಂತಗಳಲ್ಲಿ ರಚಿಸಲಾಗಿದೆ. ಒಂದು ಆರಂಭದ ವೇದ ಕಾಲ - ಕ್ರಿ.ಪೂ. ೧೫೦೦ ರಿಂದ ೧೦೦೦ ದವರೆಗೆ. ಈ ಕಾಲದಲ್ಲಿ 'ಋಗ್ವೇದ'ವನ್ನು ರಚಿಸಲಾಯಿತು. ಎರಡನೆಯದು ನಂತರದ ವೇದಗಳ ಕಾಲ - ಕ್ರಿ.ಪೂ. ಸುಮಾರು ೧೦೦೦ ದಿಂದ ೬೦೦ ರವರೆಗೆ. ಈ ಕಾಲದಲ್ಲಿ

ಉಳಿದ ಸಾಹಿತ್ಯ ಗ್ರಂಥಗಳನ್ನು ರಚಿಸಲಾಯಿತು. ಈ ಎರಡೂ ಹಂತದಲ್ಲಿ ಆರ್ಯರ ವೃದ್ಧಿ ಭಾರತದಲ್ಲಿ ನಡೆದಿತ್ತು.

**ಭೌಗೋಳಿಕ ಸರಹದ್ದು**

ಋಗ್ವೇದದಲ್ಲಿ ರಚಿಸಲಾಗಿರುವ ಸ್ತುತಿ, ಸ್ತೋತ್ರಗಳು ಭಾರತ ಉಪಖಂಡದಲ್ಲಿ ಇಂಡೋ-ಆರ್ಯನ್ ಬುಡಕಟ್ಟುಗಳು ನೆಲೆಸಿದ ಸಾಮಾನ್ಯ ಭೌಗೋಳಿಕ ಸರಹದ್ದನ್ನು ಕುರಿತು ನಿರ್ದಿಷ್ಟ ಮಾಹಿತಿ ನೀಡುತ್ತವೆ. ಪೂರ್ವ ಆಫ್ಘಾನಿಸ್ಥಾನ, ಪಂಜಾಬ್ ಮತ್ತು ಉತ್ತರ ಪ್ರದೇಶ ದಲ್ಲಿ ಪಶ್ಚಿಮದ ಕೆಲವು ಭಾಗಗಳಲ್ಲಿ ಆರ್ಯರು ನೆಲೆಸಿದ್ದರು. ಈ ವಿಚಾರವನ್ನು ಪ್ರಾಚ್ಯ ಶಾಸ್ತ್ರಕ್ಕೆ ಸಂಬಂಧಿಸಿದ ಯಾವುದೇ ಆಧಾರಗಳು ಸಮರ್ಥಿಸದಿದ್ದರೂ ಋಗ್ವೇದ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಸಿಂಧೂ, ಗೋಮಾಲ್ ಮತ್ತು ಪಂಜಾಬಿನ ಇತರ ಅನೇಕ ನದಿಗಳನ್ನು ದಾಖಲಿಸ ಲಾಗಿದೆ. ಈ ಪ್ರದೇಶಗಳು ಸಿಂಧೂ ನದಿಯ ಉಪನದಿಗಳು ಹರಿಯುವ ಸುತ್ತಲಿನ ಪ್ರದೇಶ, ಗೋಮತಿ ನದಿ ತೀರ, ಕ್ರುಮು ಮತ್ತು ಕುಭಾ ನದಿ ದಂಡೆ ಪ್ರದೇಶಗಳೆಂದು ಹೇಳಿವೆ. ಕಾಬೂಲ್‌ಗೆ ಉತ್ತರದಲ್ಲಿರುವ ಸುವಾಸ್ತು ನದಿ ಪ್ರಮುಖವಾದುದು ಎಂದೂ ದಾಖಲಾಗಿದೆ. ಆ ಹೆಸರೆ ಸೂಚಿಸುವಂತೆ ಸಂಘಟಿತವಾದ ಬುಡಕಟ್ಟು ಜನರ ವಸತಿಗಳು ಸುವಾಸ್ತು ನದಿ ಕಣಿವೆಯಲ್ಲಿ ವಾಸವಾಗಿದ್ದವು. ಆದರೆ ಇಂಡೋ-ಆರ್ಯನ್ ಬುಡಕಟ್ಟು ಸಂಸ್ಕೃತಿಯ ಪ್ರಧಾನ ಕೇಂದ್ರ ಮಾತ್ರ ಪಂಜಾಬ್ ಮತ್ತು ದೆಹಲಿ ಸುತ್ತಲಿನ ಪ್ರದೇಶಗಳು. ಈ ಪ್ರದೇಶಗಳಲ್ಲಿ ಋಗ್ವೇದ ಸ್ತೋತ್ರಗಳಲ್ಲಿ ನಮೂದಿಸಲಾದ ಪ್ರಸಿದ್ಧ ನದಿಗಳು ಹರಿಯುತ್ತಿವೆ. ಸಿಂಧೂ, ಸರಸ್ವತಿ, ದೃಶದ್ವತಿ (ಗಗ್ಗರ್) ಮತ್ತು ಐದು ಉಪನದಿಗಳಾದ ಸಟ್ಲೇಜ್, ಬೀಯಾಸ್, ರಾವಿ, ಜೆನಾಬ್ ಮತ್ತು ಜೀಲಂ. ವೇದ ಕಾಲದ ಈ ಬುಡಕಟ್ಟುಗಳ ಭೌಗೋಳಿಕ ಜ್ಞಾನವನ್ನು ಕುರಿತು ಮಾಹಿತಿ ದಾಖಲಾಗಿದೆ. ಅವರಿಗೆ ಹಿಮಾಲಯದ ಪರಿಚಯವಿದೆ, ಆದರೆ ವಿಂಧ್ಯಾ ಪರ್ವತಗಳ ಪರಿಚಯವಿದ್ದಂತೆ ಕಾಣುವುದಿಲ್ಲ. ಏಕೆಂದರೆ ವೇದಗಳಲ್ಲಿ ಈ ಪರ್ವತಗಳ ಹೆಸರು ನಮೂದಾಗಿಲ್ಲ. ಅಂದರೆ ಅವರಿಗೆ ಯಮುನಾ ನದಿ ತೀರಕ್ಕೆ ಕೆಳಗಿನ ಭಾಗಗಳ ಬಗ್ಗೆ ಯಾವುದೇ ಅರಿವು ಇರಲಿಲ್ಲ.

ಆರಂಭದಲ್ಲಿ ಆರ್ಯರು ಸಿಂಧೂ ನದಿ ಮತ್ತು ಅದರ ಉಪನದಿಗಳು ಹರಿಯುವ ಪ್ರದೇಶಗಳಾದ ಸಪ್ತಸಿಂಧವ ಪ್ರದೇಶವನ್ನು ಆಕ್ರಮಿಸುವ ಪ್ರಯತ್ನ ಮಾಡಿದ್ದರು. ಇದರ ಪರಿಣಾಮವಾಗಿ ಅನೇಕ ಸಂಘರ್ಷಗಳು ನಡೆದವು. ಋಗ್ವೇದದಲ್ಲಿ ಇಂತಹ ಸಂಘರ್ಷಗಳ ಕುರಿತು ಮಾಹಿತಿಗಳಿದ್ದು, ಅದರಲ್ಲಿ 'ದಶರಜ್ಞ ' ಎಂಬ ಯುದ್ಧವೂ ಒಂದು. ಈ ಹೋರಾಟವನ್ನು 'ಹತ್ತು ರಾಜರ ಯುದ್ಧ' ಎಂದೂ ಕರೆಯಲಾಗಿದೆ. 'ಪುರುಶಿ' ಎಂದು ಕರೆಯಲ್ಪಡುವ ರಾವಿ ನದಿಯ ದಂಡೆಯಲ್ಲಿ ನಡೆದ ಯುದ್ಧದಲ್ಲಿ 'ಸುಧಾಸನು' ಗೆದ್ದು ಭರತ ಕುಲದವರ ಸಾರ್ವಭೌಮತ್ವವನ್ನು ಸ್ಥಾಪಿಸಿದನು. ಇನ್ನು ಅನೇಕ ಅಂತರ್ಯುದ್ಧಗಳು ಬುಡಕಟ್ಟು ಕುಲಗಳ ನಡುವೆ ನಡೆದಿವೆ. ಆರ್ಯರಲ್ಲಿ 'ಪಂಚ ಜನ' ಎಂಬ ಐದು

ಕುಲಗಳಿದ್ದವು. ಸಂಘರ್ಷಗಳು ಈ ಕುಲಗಳ ನಡುವೆ ಸರ್ವೆಸಾಮಾನ್ಯ ಲಕ್ಷಣವಾಗಿದ್ದು 'ಭರತ' ಮತ್ತು 'ತ್ರಿತ್ಸು' ಎಂಬವು ಅಧಿಕಾರ ಪಡೆಯಲು ಯಶಸ್ವಿಯಾದ ಕುಲಗಳು.

ಸಿಂಧೂ ನಾಗರಿಕತೆಯ ನಾಶಕ್ಕೆ ಆರ್ಯರ ದಂಡಯಾತ್ರೆಯೇ ಕಾರಣವೆಂದು ಹೇಳಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಋಗ್ವೇದ ಒಂದಷ್ಟು ಮಾಹಿತಿ ನೀಡುತ್ತದೆ. ವೇದ ಕಾಲದ ಆರ್ಯರ ಮುಖ್ಯ ದೇವರುಗಳೆಂದರೆ ಅಗ್ನಿ, ಇಂದ್ರ. ಋಗ್ವೇದ ಸ್ತೋತ್ರಗಳಲ್ಲಿ 'ಸೋಮಪಾನ'ವನ್ನು ಮಾಡಿ ಶತ್ರುಗಳನ್ನು ಸೋಲಿಸು ಎಂದು ಇಂದ್ರನನ್ನು ಆಹ್ವಾನಿಸುತ್ತಾರೆ. ನಾಸ್ತಿಕರ ಸಂಪತ್ತನ್ನು ಸೂರೆಗೊಂಡ ವೀರನೆಂದು ಅವನನ್ನು ಹೊಗಳಲಾಗಿದೆ. ಯವ್ಯಾವತಿ ನದಿ (ಇಂದಿನ ರಾವಿ ನದಿ) ತೀರದಲ್ಲಿರುವ ಹರಿಯೂಪಿಯಾ (ಹರಪ್ಪ ನಗರವೆಂದು ನಂಬಲಾಗಿದೆ) ಪಟ್ಟಣವನ್ನು ಛಿದ್ರಗೊಳಿಸಿ, ಮಡಕೆಗಳನ್ನು ಚೂರು ಮಾಡಿದಷ್ಟು ಸಲೀಸಾಗಿ ಶತ್ರು ಸೈನ್ಯವನ್ನು ಧ್ವಂಸ ಗೊಳಿಸಿದನೆಂದು ಋಗ್ವೇದದಲ್ಲಿ ಇಂದ್ರನನ್ನು ಹೊಗಳಲಾಗಿದೆ. 'ನಾರ್ಮಿಣಿ' ಎಂಬ ಪಟ್ಟಣವನ್ನು ಅಗ್ನಿದೇವನು ದಹನ ಮಾಡಿದನೆಂದು ಋಗ್ವೇದದಲ್ಲಿ ತಿಳಿಸಿದೆ. ಅದು ಮಹೆಂಜೊದಾರೊ ನಗರವೇ ಇರಬಹುದೆಂದು ಸಮರ್ಥಿಸಲು ಅಲ್ಲಿ ಶಿಥಿಲವಾದ ಹೊರ ಪದರಗಳಲ್ಲಿ ಆ ಪಟ್ಟಣವು ಆಕ್ರಮಣಕ್ಕೆ ಒಳಗಾದ ಕುರುಹುಗಳು ದೊರೆತಿವೆ.

ವೇದ ಸಾಹಿತ್ಯದಿಂದ ತಿಳಿದುಬರುವಂತೆ ಆರ್ಯರಿಗೆ ಅತಿ ದೊಡ್ಡ ಸವಾಲನ್ನು ಒಡ್ಡಿದವರು ಆರ್ಯೇತರ ಮೂಲಕ್ಕೆ ಸೇರಿದ ಸ್ಥಳೀಯ ಜನ ಸಮುದಾಯ. ಋಗ್ವೇದದ ಹಲವು ಪಾಠಗಳಲ್ಲಿ 'ಪಾನೀಸ್' ಎಂಬ ಜನರ ಗುಂಪೊಂದಿಗೆ ಆರ್ಯರಿಗೆ ವೈಷಮ್ಯವಿತ್ತೆಂದು ನಮೂದಿಸಲಾಗಿದೆ. ಈ ಗುಂಪು ಶ್ರೀಮಂತವಾಗಿದ್ದು ಆರ್ಯರ ಪುರೋಹಿತರನ್ನು ಸಹಿಸಲಿಲ್ಲ. ಅವರ ಸಂಸ್ಕಾರಗಳನ್ನು ಪಾಲಿಸಲು ವಿರೋಧಿಸಿದ್ದರು ಮತ್ತು ಆರ್ಯ ಬುಡಕಟ್ಟುಗಳ ಸ್ವಾಧೀನದಲ್ಲಿರುವ ಪಶುಗಳನ್ನು ಅಪಹರಿಸುತ್ತಿದ್ದು ನಿರಂತರ ಉಪಟಳ ಕೊಡುತ್ತಿದ್ದರು. 'ಪಾನೀಸ್' ಕುಲಕ್ಕಿಂತಲೂ 'ದಾಸಾಸ್' ಮತ್ತು 'ದಾಸ್ಯುಸ್' ಎಂಬ ಜನಸಮುದಾಯದವರು ಆರ್ಯರಿಗೆ ಮುಖ್ಯ ಶತ್ರುಗಳಾಗಿದ್ದರು. 'ದಾಸಾಸ್' ಗುಂಪನ್ನು ಪ್ರಾಚೀನ ಇರಾನಿ ಸಾಹಿತ್ಯ ದಲ್ಲಿ ದಾಖಲಾಗಿರುವ 'ದಹೇಸ್' ಎಂಬ ಬುಡಕಟ್ಟು ಜನರಿಗೆ ಹೋಲಿಸಲಾಗಿದ್ದು, ಕೆಲವೊಮ್ಮೆ ಅವರನ್ನು ಆರಂಭಿಕ ಆರ್ಯರ ಒಂದು ಪಂಗಡವೆನ್ನಲಾಗಿದೆ. 'ದಿವೊದಾಸ್' ಎಂಬವನು 'ಭರತ' ಕುಲದ ಮುಖಂಡನಾಗಿದ್ದು ಆರ್ಯೇತರ ಜನರ ನಾಯಕ ಸಂಭಾರನನ್ನು ಸೋಲಿಸಿದ್ದನು ಎಂದು ಹೇಳಲಾಗಿದೆ. 'ದಿವೊದಾಸ್' ಎಂಬ ಹೆಸರಲ್ಲಿ, ದಾಸ ಎಂಬ ಶಬ್ದವು ಆರ್ಯರ ಸಂಬಂಧವನ್ನು ಹೇಳುತ್ತದೆ. 'ದಾಸ್ಯೂ' ಎಂಬುದು ಪ್ರಾಚೀನ ಇರಾನಿ ಭಾಷೆಯ 'ದಹ್ಯೂ' ಪದಕ್ಕೆ ಹತ್ತಿರವಾಗಿದೆ. ಇದನ್ನು ಗಮನಿಸಿದರೆ ವೇದ ಕಾಲದ ಬುಡಕಟ್ಟು ಜನರು ಮತ್ತು ದಾಸ್ಯ ಗುಂಪಿನ ನಡುವಿನ ಜಗಳ ನಿಜವಾಗಿ ಇಂಡೋ-ಇರಾನಿಯನ್ ಅಥವಾ ಇಂಡೋ-ಆರ್ಯನ್ ಜನಸಮೂಹದ ಎರಡು ಮುಖ್ಯ ಪಂಗಡಗಳೇ ಇರಬೇಕು. ಅವರೇ ಭಾರತಕ್ಕೆ ಎರಡು ಹಂತಗಳಲ್ಲಿ ವಲಸೆ ಬಂದ ಜನರಿರಬಹುದೇ? ದಾಸಾಸ್ ಮತ್ತು ದಾಸ್ಯುಸ್ ಮೂಲತಃ ಆರ್ಯಯನ್ ಭಾಷೆ ಮಾತನಾಡುವ ಜನಾಂಗಕ್ಕೆ ಸೇರಿರಬಹುದು. ನಂತರ

ಉಪಖಂಡದತ್ತ ವಲಸೆ ಬಂದಾಗ ಅವರಿಗೆ ಪ್ರತ್ಯೇಕ ಸಾಂಸ್ಕೃತಿಕ ನೆಲಗಟ್ಟು ಲಭಿಸಿದ್ದು ವೇದಕಾಲೀನ ಆರ್ಯರಿಗಿಂತ ಭಿನ್ನವಾಗಿ ಉಳಿದಿರಬೇಕು.

**ಕೃಷಿ ಮತ್ತು ಪಶುಪಾಲನೆ**

ವೇದಗಳ ಕಾಲದ ಆರ್ಯರ ಮುಖ್ಯ ಕಸುಬುಗಳೆಂದರೆ, ಕೃಷಿ ಹಾಗೂ ಪಶುಪಾಲನೆ. ಅದರಲ್ಲೂ ಪಶುಪಾಲನೆಯು ವೇದಕಾಲದ ಜೀವನದಲ್ಲಿ ಒಂದು ಮುಖ್ಯ ಪಾತ್ರ ನಿರ್ವಹಿಸುತ್ತಿದ್ದಿತು. ವ್ಯಕ್ತಿಯ ಪ್ರಧಾನ ಸಂಪತ್ತು ಅವನ ವಶದಲ್ಲಿರುವ ಪಶು ಸಂಪತ್ತಿನಲ್ಲಿದ್ದಿತೆಂದು ವೇದ ಸಾಹಿತ್ಯದಲ್ಲಿ ಅನೇಕ ಉಲ್ಲೇಖಗಳಿವೆ. ಜನರು ಪಶುಗಳನ್ನು ಸಮೃದ್ಧವಾಗಿ ಹೊಂದಿರುವಂತೆ ಅನುಗ್ರಹಿಸಬೇಕೆಂದು ವೇದಗಳ ಸ್ತುತಿ ಗೀತೆಗಳು ಸತತವಾಗಿ ದೇವರನ್ನು ಪ್ರಾರ್ಥಿಸುತ್ತವೆ. ಸಂಘರ್ಷಗಳನ್ನು ಪಶು ಸಂಪತ್ತನ್ನು ಸೆರೆ ಹಿಡಿಯಲು ಉತ್ತಮ ಅವಕಾಶಗಳೆಂದು ಪರಿಗಣಿಸಲಾಗುತ್ತಿತ್ತು. 'ಗೋಗ್ರಹಣ'ವೇ ವೇದ ಕಾಲದ ಜನರ ನಡುವೆ ಸಂಘರ್ಷಗಳಿಗೆ ಮುಖ್ಯ ಕಾರಣವಾಗಿದ್ದಿರಬೇಕು.

ಇವರ ಸಾಮಾಜಿಕ ವ್ಯವಸ್ಥೆ ಮುಖ್ಯವಾಗಿ ಸಮುದಾಯ ವ್ಯವಸ್ಥೆಯೆ ಆಗಿತ್ತು. ಆದರೆ ಆಹಾರ ಸಂಗ್ರಹಣಾ ಜೀವನ ನಡೆಸುತ್ತಿದ್ದ ಅರಣ್ಯವಾಸಿಗಳಂತೆ ಮಾತೃಪ್ರಧಾನ ವ್ಯವಸ್ಥೆಯಲ್ಲ. ಪಿತೃ ಸ್ವಾಮ್ಯವಾದದ್ದು. ಅವರ ಬಹುತೇಕ ದೇವರುಗಳು ಪುರುಷರೇ ಆಗಿರುವುದು ಇದಕ್ಕೆ ಸಾಕ್ಷಿ. ಮೇಲೆ ಸೂಚಿಸಿದಂತೆ ಪಶುಗಳೇ ಅವರ ಪ್ರಧಾನ ಸಂಪತ್ತಾದ ಕಾರಣ ಆರ್ಯರು ತಮ್ಮ ಸಮುದಾಯಗಳನ್ನು 'ಗೋತ್ರ'ಗಳು ಎಂದು ಗುರುತಿಸಿಕೊಳ್ಳುತ್ತಿದ್ದರು. ಒಂದು ಗೋತ್ರಕ್ಕೆ ಸೇರಿದವರ ಪಶು ಸಂಪತ್ತು ಒಟ್ಟು ಆ ಗೋತ್ರದ ಸಾಮೂಹಿಕ ಸಂಪತ್ತು. ಗೋತ್ರ ಎಂದರೆ 'ಪಶುಮೂಲ' ಎಂದರ್ಥ. ಆಯಾ ಗೋತ್ರದವರು ತಮ್ಮ ಪಶುಗಳಿಗೆ ಕಾವಲಾಗಿ ವಾಸಿಸುತ್ತಿದ್ದರು. ಅವರ ಜೀವನಾಧಾರವಾದ ಆ ಗೋತ್ರಗಳು ಸುಖ ದುಃಖಗಳಿಗೂ ಜೀವನ ಮರಣಗಳಿಗೂ ಅತೀತವಾದ ಅದ್ಭುತ ಸಂಕೇತಗಳಾಗಿ ಅವರಿಗೆ ಕಂಡುಬಂದಿರುವುದು ಗಮನಾರ್ಹ ಅಂಶ.

ಆರ್ಯರು ಪಶುಪಾಲನೆಯ ಜೊತೆ ಜೊತೆಗೆ ಆಹಾರ ಸಂಗ್ರಹಣಾ ವಿಧಾನವನ್ನು ಸ್ವಲ್ಪಮಟ್ಟಿಗೆ ರೂಢಿಯಲ್ಲಿರಿಸಿಕೊಂಡಿದ್ದರು. ಪಶುಗಳ ಜೊತೆ ಸಂಚರಿಸುತ್ತಾ ಅಲೆಮಾರಿಗಳಾಗಿದ್ದ ಈ ಆರ್ಯರ ಗುಂಪುಗಳನ್ನು 'ಗ್ರಾಮಗಳು' ಎನ್ನುತ್ತಿದ್ದರು. ಈ ಸಂಚಾರಿ ಗ್ರಾಮದ ಹಿರಿಯನನ್ನು 'ಗ್ರಾಮಿಣಿ' ಅಥವಾ 'ಗೋವುಡ' ಎಂದು ಗುರುತಿಸಲಾಗುತ್ತಿತ್ತು. ಒಟ್ಟು ಬುಡಕಟ್ಟಿನ ಹಿರಿಯುನನ್ನು 'ರಾಜ' ಎಂದೂ ಕರೆಯುತ್ತಿದ್ದರು. ಗೋವು ಆರ್ಯರ ಪ್ರಧಾನ ಸಂಪತ್ತಾಗಿರುವುದರಿಂದ ಬಹುಶಃ ಅವರ ಭಾಷೆಯಲ್ಲಿ ಗೋವಿನ ಸಂಬಂಧದ ಹೆಸರುಗಳೇ ರೂಢಿಗೆ ಬಂದಿತೆಂಬು ನಂಬಲಾಗಿದೆ. ಉದಾಹರಣೆಗೆ, 'ಗೋಮತ್' ಅಂದರೆ ಶ್ರೀಮಂತ ವ್ಯಕ್ತಿ. 'ಗವಿಷ್ಠಿ' ಅಂದರೆ ಪಶುಗಳ ಹುಡುಕಾಟಕ್ಕಾಗಿ ನಡೆಯುವ ಸಂಘರ್ಷ. ಇಂತಹದೇ ಶಬ್ದಗಳಾದ 'ಗೋಷು', 'ಗವ್ಯಾತ್', 'ಗವ್ಯ', 'ಗವೇಶಾನ' ಇತ್ಯಾದಿ ಹೆಸರುಗಳು 'ಸಂಘರ್ಷ' ಎಂಬ ಅರ್ಥವನ್ನು ಸೂಚಿಸುತ್ತಿದ್ದು, ಗೋವಿನ ಸಂಬಂಧವನ್ನೇ ಸಮರ್ಥಿಸುತ್ತವೆ. 'ದುಹಿತೃ'

ಅಂದರೆ ಮಗಳು ಎಂಬರ್ಥ. 'ಗೋಘನ' ಅಂದರೆ ಅತಿಥಿ, 'ಅಘ್ನ್ಯ' ಅಂದರೆ ಗೋಹತ್ಯೆ ಮಾಡಬಾರದು ಎಂಬುದನ್ನು ಸೂಚಿಸುತ್ತದೆ.

ಆರ್ಯರು ಪಶುಗಳನ್ನು ಹಾಲಿಗಾಗಿ ಮಾತ್ರವಲ್ಲದೆ, ಮಾಂಸಕ್ಕಾಗಿಯೂ ಬಳಸುತ್ತಿದ್ದರು. ಗೋಮಾಂಸ ಆರ್ಯರ ಮುಖ್ಯ ಆಹಾರ. ತಮ್ಮ ಪಶು ಸಂಪತ್ತು ಹೆಚ್ಚಾಗಲೂ ಅವರು ದೇವರಿಗೆ ಪೂಜೆ ಸಲ್ಲಿಸುತ್ತಿದ್ದರು. ಅಲ್ಲದೆ ಅವರ ದೇವರುಗಳಿಗೆ ಸ್ತೋತ್ರ ಮಂತ್ರಗಳನ್ನು ಅರ್ಪಿಸಿದರೆ ತಮ್ಮ ಬೇಡಿಕೆಗಳು ಈಡೇರುವುದೆಂಬ ನಂಬಿಕೆ ಇಟ್ಟುಕೊಳ್ಳುತ್ತಿದ್ದರು. ಆ ಕಾರಣಕ್ಕಾಗಿಯೇ ಆಚರಣೆಗಳು ಮತ್ತು ಮಂತ್ರ ಸಾಹಿತ್ಯಗಳು ಹುಟ್ಟಿಕೊಂಡವು. ಅಷ್ಟೇ ಅಲ್ಲದೆ ಕುಲಭಾಂದವರು, ಜನಸಮುದಾಯದವರು ಸಂಗ್ರಹಿಸುವ ಸಂಪತ್ತು ಮತ್ತು ಆಹಾರವನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ಪದ್ಧತಿಯನ್ನು ಪಾಲಿಸುತ್ತಿದ್ದರು. ಯಜ್ಞವು ಆರ್ಯ ಸಮುದಾಯದ ಆಚರಣೆಗಳಲ್ಲಿ ಪ್ರಮುಖವಾದುದು. ಇಂತಹ ಸಂದರ್ಭಗಳಲ್ಲಿ ಅವರು ಹೆಚ್ಚಾಗಿ ಪಶುಗಳನ್ನು ಬಲಿಕೊಡುತ್ತಿದ್ದರು. ಹಸುಗಳನ್ನಲ್ಲದೆ, ಆರ್ಯರು ಆಡುಗಳನ್ನು ಮತ್ತು ಕುರಿಗಳನ್ನು ಮಾಂಸಕ್ಕಾಗಿ ಮತ್ತು ಹಾಲಿಗಾಗಿ ಪೋಷಿಸುತ್ತಿದ್ದರು. ಹರಪ್ಪ ನಂತರದ ವಸತಿ ಕೇಂದ್ರಗಳಲ್ಲಿ ಸುಟ್ಟಂತಿರುವ ಪ್ರಾಣಿಗಳ ಮೂಳೆಗಳು ಬೃಹತ್ ಪ್ರಮಾಣದಲ್ಲಿ ಉತ್ಖನನದ ವೇಳೆ ದೊರೆತಿರುವುದು ಇದನ್ನು ಸಮರ್ಥಿಸುತ್ತದೆ. ಹರಿಯಾಣದ ಭಗವಾನ್‌ಪುರ ಮತ್ತು ದಧೇರಿಯಲ್ಲಿ ಇಂತಹ ಹರಪ್ಪ ನಂತರದ ಸಂಸ್ಕೃತಿಯ ಅವಶೇಷಗಳು ವೇದ ಕಾಲದ ಸಂಸ್ಕೃತಿಯ ಕುರುಹುಗಳಿಗೆ ಹೋಲುತ್ತವೆ.

ಪಶು ಸಂಗೋಪನೆಯ ಜೊತೆಗೆ ಕೃಷಿಯನ್ನು ಆರ್ಯರು ಅವಲಂಭಿಸಿರುವ ಸಾಧ್ಯತೆಯೂ ಇದೆ. ಕೃಷಿ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಹೆಚ್ಚು ವಿವರಗಳು ಋಗ್ವೇದದಲ್ಲಿ ಕಾಣುವುದಿಲ್ಲ. 'ಕೃಷಿ' ಎಂಬ ಪದವು ಬಹಳ ವಿರಳವಾಗಿ ದಾಖಲಾಗಿದೆ. ಪರಿಚಿತವಿರುವ 'ಹಲ' (ಭೂಮಿ ಉಳು ಎಂದರ್ಥ) ಎಂಬ ಪದವು ಕಂಡುಬಂದಿಲ್ಲ. ಇದೇ ಅರ್ಥ ಕೊಡುವ 'ಲಂಗಾಲ' ಮತ್ತು 'ಸಿರಾ' ಕೇವಲ ಎರಡೇ ಬಾರಿ ದಾಖಲಾಗಿವೆ. ಆದರೆ ಕೃಷಿ ಮಾಡಲು ಆರ್ಯರಿಗೆ ಕಾಲಮಾನದ ಅರಿವು ಇತ್ತು. ಋಗ್ವೇದದಲ್ಲಿ ಐದು ಕಾಲಮಾನಗಳನ್ನು ಸೂಚಿಸಲಾಗಿದೆ. ಇದರಿಂದ ಅವರು ನಿರ್ದಿಷ್ಟ ಕಾಲಮಾನದಲ್ಲಿಯೇ ಕೃಷಿಯನ್ನು ಅಭಿವೃದ್ಧಿಪಡಿಸುತ್ತಿದ್ದರು. ಕಬ್ಬಿಣದ ಬಗ್ಗೆ ಈ ಜನರಿಗೆ ಯಾವುದೇ ಅರಿವು ಇದ್ದಂತೆ ಕಾಣುವುದಿಲ್ಲ. ಆ ಕಾಲದಲ್ಲಿ ಕಬ್ಬಿಣವನ್ನು ಸೂಚಿಸಲು ಬಳಸಿದ 'ಆಯಸ್' ಎಂಬ ಪದದ ವಿಷಯದಲ್ಲಿ ವಿದ್ವಾಂಸರಲ್ಲಿ ಇನ್ನೂ ಭಿನ್ನಾಭಿಪ್ರಾಯವಿದೆ. ತಾಮ್ರದ ಬಗ್ಗೆ ಅರಿವಿದ್ದರೂ ಕೃಷಿ ಭೂಮಿಗೆ ಸಂಬಂಧಿಸಿದಂತೆ ಯಾವುದೇ ಸಹಕಾರಿಯಾಗುತ್ತಿರಲಿಲ್ಲ. ಇಷ್ಟಾಗಿಯೂ, ವೇದ ಪಾಠಗಳಲ್ಲಿ ಉಳುವುದು, ಬಿತ್ತುವುದು, ಸುಗ್ಗಿ ಕಟಾವು ಮಾಡುವುದು, ತೆನೆ ಬಡಿಯುವುದು ಮುಂತಾದ ಮಾದರಿಯ ಕೃಷಿ ಕಾರ್ಯಗಳಿಗೆ ಉಲ್ಲೇಖಗಳಿವೆ. ಋಗ್ವೇದದಲ್ಲಿ ನೀರಾವರಿ ಉದ್ದೇಶಗಳಿಗಾಗಿ ಬಳಸಲು ಸಾಧ್ಯವಿರುವಂಥ 'ಬಂಧಿತ' ಜಲಕ್ಕೂ, ಜಲಚಕ್ರಗಳಿಗೂ ಉಲ್ಲೇಖಗಳಿವೆ. ಇದನ್ನು ಗಮನಿಸುವಾಗ ಕಬ್ಬಿಣದ ಬಳಕೆ ಸ್ವಲ್ಪ ಮಟ್ಟಿಗಾದರೂ ಪ್ರಚಲಿತವಾಗಿತ್ತು

ಎಂಬುದು ಸ್ಪಷ್ಟ. ಕಬ್ಬಿಣದ ಉಪಕರಣಗಳ ಸಹಾಯವಿಲ್ಲವಾಗಿದ್ದಿದ್ದರೆ, ಗಂಗಾ ನದಿ ಕಣಿವೆಯ ಕಾಡು ಪ್ರದೇಶಗಳನ್ನು ವಾಸಯೋಗ್ಯಗೊಳಿಸಿ ಅಲ್ಲಿ ಸ್ಥಿರವಾಗಿ ನೆಲೆಸುವುದು, ಭೂ ಸಾಗುವಳಿ ಮಾಡುವುದು ಮತ್ತು ಅವಶ್ಯವಾದ ಕಡೆಗಳಲ್ಲಿ ನೀರಾವರಿ ವ್ಯವಸ್ಥೆ ಏರ್ಪಡಿಸುವುದು ಸುಲಭವಾಗುತ್ತಿರಲಿಲ್ಲ.

ಈ ಕಾಲದ ಜನರಿಗೆ ಅಧಿಕ ಸಂಖ್ಯೆಯ ಧಾನ್ಯಗಳ ಪರಿಚಯವು ಇದ್ದಿರುವುದು ಕಂಡುಬರುತ್ತದೆ. ಕ್ರಿ.ಪೂ. ೧೧ನೇ ಮತ್ತು ೯ನೇ ಶತಮಾನಗಳ ನಡುವಿನ 'ಚಿತ್ರಿತ ಕುಂಬಾರ ಸಾಮಾನುಗಳ' ಸಂಸ್ಕೃತಿಯ ವಸತಿಗಳಲ್ಲಿ ನಡೆಸಿದ ಉತ್ಖನನಗಳಲ್ಲಿ ಅಕ್ಕಿ ಹಾಗೂ ಗೋಧಿ ಕಾಳುಗಳು ದೊರೆತಿವೆ. ಹೀಗಾಗಿ ಅವರಿಗೆ ಬಾರ್ಲಿ, ಅಕ್ಕಿ, ಗೋಧಿ, ಹುರುಳಿ ಮುಂತಾದ ಧಾನ್ಯಗಳು ಪರಿಚಯವಾಗಿದ್ದವು. ಅಲ್ಲದೆ, ಗಂಗಾ ನದಿ ಕಣಿವೆಯ ಬಹುಭಾಗಗಳಲ್ಲಿ ಇಂಡೋ-ಆರ್ಯರು ನೆಲೆ ನಿಂತುದರ ಫಲವಾಗಿ ವಿಸ್ತೃತ ಪ್ರಮಾಣದ ಅಕ್ಕಿ ಬೆಳೆಗೆ ದಾರಿ ತೆರೆಯಿತು. ಆರ್ಯರು ಭಾರತಕ್ಕೆ ಬರುವ ಮೊದಲು ಅಕ್ಕಿ ಬೆಳೆಯ ಪರಿಚಯವಿರಲಿಲ್ಲ. ಈ ಕಲೆಯನ್ನು ಸ್ಥಳೀಯ ಬುಡಕಟ್ಟುಗಳಿಂದ ಕಲಿತರು ಎಂದು ಅನೇಕ ವಿದ್ವಾಂಸರು ಹೇಳುತ್ತಾರೆ.

ವೇದ ಕಾಲದಲ್ಲಿ ಜನರು ಕೋಟೆಗಳಿಂದ ಸಂರಕ್ಷಿಸಲ್ಪಟ್ಟ ವಸತಿಗಳಲ್ಲಿ ನೆಲೆಸುತ್ತಿದ್ದರು ಎಂಬುದನ್ನು ಭಗವಾನ್‌ಪುರದಲ್ಲಿ ನಡೆಸಿದ ಉತ್ಖನನದ ವೇಳೆ ದೊರೆತ ೧೩ ಕೋಣೆಗಳ ಒಂದು ಮಣ್ಣಿನ ಮನೆ ಸಮರ್ಥಿಸುತ್ತದೆ. ಇದು ಒಂದು ದೊಡ್ಡ ಜಂಟಿ ಕುಟುಂಬದ ಅಥವಾ 'ಕುಲ'ದ ಮುಖಂಡನ ಮನೆಯಾಗಿರಬಹುದು. ವೇದ ಪಾಠಗಳಲ್ಲಿ ಕಮ್ಮಾರರು, ಕುಂಬಾರರು, ಬಡಗಿಗಳು, ಅಕ್ಕಸಾಲಿಗರು, ಆಯುಧ ತಯಾರಿಕರು ಮೊದಲಾದ ಅನೇಕ ಕೈಕಸುಬುದಾರರಿಗೆ ಉಲ್ಲೇಖಗಳಿವೆ. ಅಂದರೆ ಆ ಕಾಲದಲ್ಲಿ ಈ ಕಸುಬುಗಳು ಪ್ರಚಲಿತದಲ್ಲಿದ್ದವೆಂಬುದು ಸ್ಪಷ್ಟ. ಋಗ್ವೇದದ ಸ್ತುತಿಗೀತೆಗಳಲ್ಲಿ ನಮೂದಿಸಲಾಗಿರುವ ಪಟ್ಟಣಗಳು ಅಥವಾ ಪುರಗಳು ಹೆಚ್ಚಾಗಿ ಗ್ರಾಮಾಂತರ ಕೇಂದ್ರಗಳನ್ನು ಹೋಲುತ್ತವೆ. ಆದ್ದರಿಂದ ಆರ್ಯರು ಪಟ್ಟಣವಾಸಿಗಳಾಗಿರಲಿಕ್ಕಿಲ್ಲ ಎಂಬುದು ಖಚಿತ.

## ರಾಜಕೀಯ ವ್ಯವಸ್ಥೆ

ಆರಂಭದ ಆರ್ಯರು ಸಾಮಾನ್ಯವಾಗಿ ವಲಸೆಗಾರರು ಆಗಿರುವುದರಿಂದ ರಾಜ್ಯಾಂಗ ರಚನೆಗೆ ಪೂರಕವಾಗುವ ಯಾವುದೇ ರಾಜಕೀಯ ಅಂಶಗಳನ್ನು ಹುಟ್ಟು ಹಾಕಿರಲಿಲ್ಲ. 'ಸಪ್ತ ಸಿಂಧವ' ಎಂಬ ಭೂಭಾಗವನ್ನು ಆರಂಭದಲ್ಲಿ ಆಕ್ರಮಿಸಿಕೊಂಡ ಇವರು ಹಲವು ಗುಂಪುಗಳಾಗಿ ಅಥವಾ ಕುಲದವರಾಗಿದ್ದರು. ಅವರಲ್ಲಿ ಐದು ಗುಂಪುಗಳನ್ನು 'ಪಂಚ ಜನ' ಎಂದು ಋಗ್ವೇದ ಹೇಳುತ್ತದೆ. ರಾಜತ್ವದ ಹೊಣೆಗಾರಿಕೆ ಆ ಗುಂಪಿನ ಮುಖಂಡನದ್ದು. ಅವನನ್ನು 'ರಾಜನ್' ಎಂದು ಹೆಸರಿಸಲಾಗಿತ್ತು. ಇವನು ಸಾಮಾನ್ಯವಾಗಿ ಸೈನಿಕ ಚಟುವಟಿಕೆಗಳಲ್ಲಿ ಪಳಗಿದ್ದು, ಅವನ ಮುಖ್ಯ ಕರ್ತವ್ಯ ಪಶುಗಳ ಹುಡುಕಾಟ. ಅಲ್ಲದೆ ಬೇರೆ ಕುಲದವರೊಂದಿಗೆ

ಸಂಘರ್ಷಕ್ಕಿಳಿದು ಪಶುಗಳನ್ನು ವಶಪಡಿಸಿಕೊಳ್ಳುವುದು. ಅವನು ತನ್ನ ಕುಲದ ಜನರನ್ನು ಆಳುತ್ತಿದ್ದನು. ಆ ಸಮೂಹವನ್ನು 'ಜನ' ಎಂದು ಕರೆಯಲಾಗುತ್ತಿತ್ತು. ಹಾಗಾಗಿ ಅವನನ್ನು 'ಗೋಪ ಜನಸ್ಯ' ಅಥವಾ 'ಗೋಪತಿ ಜನಸ್ಯ' ಎಂದು ಸಂಭೋದಿಸಲಾಗುತ್ತಿತ್ತು. ಅಂದರೆ 'ಜನ ಸಮೂಹದ ರಕ್ಷಕ' ಎಂದರ್ಥ. 'ಗೋಪತಿ' ಪದ 'ಪಶುಗಳ ಸಂರಕ್ಷಕ' ಎಂಬ ಅರ್ಥವನ್ನು ಸೂಚಿಸುತ್ತದೆ. ಇದರಿಂದ ಅವನ ಸಮುದಾಯದ ರಕ್ಷಕನಾಗಿ ಹೆಚ್ಚುವರಿ ಅಧಿಕಾರವನ್ನು ಹೊಂದಿದ್ದನು. ಋಗ್ವೇದದಲ್ಲಿ 'ಜನ' ಎಂಬ ಶಬ್ದವು ಸುಮಾರು ೨೭ ಬಾರಿ ಉಲ್ಲೇಖವಾಗಿದೆ. 'ಜನಪದ' ಎಲ್ಲಿಯೂ ದಾಖಲಾಗಿಲ್ಲ ಮತ್ತು 'ರಾಜ್ಯ' ಎಂಬ ಶಬ್ದವು ಒಂದೇ ಬಾರಿ ಬಳಕೆಯಾಗಿದೆ. ಏಕ ನಾಯಕಾಧಿಪತ್ಯವು ವೇದ ಕಾಲದ ಅಂತ್ಯದ ವೇಳೆ ಉಗಮವಾಗಿರಬೇಕು. ಆಗ ನಾಯಕನು ಅಥವಾ ರಾಜನು ರಾಷ್ಟ್ರದ ಅಧಿಪತ್ಯವನ್ನು ಹೊಂದಿದ್ದನು. ರಾಜನ ಸ್ಥಾನವು ಅನುವಂಶೀಯವಾಗಿದೆ ಎನ್ನುವುದಕ್ಕೆ ಸರಿಯಾದ ಮಾಹಿತಿ ಋಗ್ವೇದದಲ್ಲಿ ಇಲ್ಲ. ರಾಜನ ಅಧಿಕಾರ ವ್ಯಾಪ್ತಿ 'ಸಭಾ' ಮತ್ತು 'ಸಮಿತಿ' ಎಂಬ ಎರಡು ಸಂಘಟನೆಗೆ ಸೀಮಿತವಾಗುತ್ತದೆ. ಆದರೆ ಸಮುದಾಯದ ಆಡಳಿತ ನಿರ್ವಹಣೆ ಮತ್ತು ಒಳ ವ್ಯವಹಾರಗಳಿಗೆ ಸಂಬಂಧಿಸಿದ ಎಲ್ಲಾ ಪ್ರಶ್ನೆಗಳನ್ನೂ ಸಮುದಾಯದ ಪೂರ್ಣ ಪ್ರಮಾಣದ ಸದಸ್ಯರಿದ್ದ 'ವಿಧಾಥ', 'ಸಭಾ' ಅಥವಾ 'ಸಮಿತಿ' ಎಂದು ಕರೆಯುತ್ತಿದ್ದ ಕೂಟಗಳಲ್ಲಿ ತೀರ್ಮಾನಿಸಲಾಗುತ್ತಿತ್ತು.

'ವಿಧಾಥ' ಅನ್ನುವುದು ಬಹುಶಃ ಅತ್ಯಂತ ಪುರಾತನ ಸಂಸ್ಥೆಯಾಗಿದ್ದು, ಬುಡಕಟ್ಟಿನ ಹಿರಿಯ ಕೂಟವನ್ನು ಪ್ರತಿಬಿಂಬಿಸುತ್ತದೆ. ಇದು ಎಲ್ಲಕ್ಕಿಂತ ಮಿಗಿಲಾಗಿ ರಾಜಕೀಯ ವ್ಯವಹಾರಗಳನ್ನು ನೋಡಿಕೊಳ್ಳುತ್ತಿತ್ತು. 'ಸಮಿತಿ'ಯು 'ಸಭಾ'ಕ್ಕಿಂತ ಹೆಚ್ಚು ವಿಶಾಲ ಸ್ವರೂಪದ ಕೂಟವಾಗಿದ್ದಿತೆಂದು ತಿಳಿದುಬರುತ್ತದೆ. ಸಮಿತಿಯು ಬುಡಕಟ್ಟು ಜನರ ಸಾಮಾನ್ಯ ಕೂಟವಾಗಿದ್ದಿತ್ತು. 'ಸಭಾ' ಮತ್ತು 'ಸಮಿತಿ' ಎರಡೂ ಕೂಟಗಳು ನ್ಯಾಯಾಂಗ ಮತ್ತು ರಾಜಕೀಯ ವ್ಯವಹಾರದಲ್ಲಿ ಪಾಲ್ಗೊಳ್ಳುತ್ತಿದ್ದವು ಎಂದಷ್ಟೆ ಹೇಳಬಹುದು.

ಸಾಮಾನ್ಯವಾಗಿ ಆರ್ಯರು ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ಈ ಗ್ರಾಮಗಳಲ್ಲಿ ದೊಡ್ಡ ಕುಲಪತಿ, ಆಡಳಿತ ಪದ್ಧತಿಯ ಕುಟುಂಬಗಳು ಅಥವಾ ಕುಲಗಳು ಇದ್ದವು. ಗೋತ್ರ ಸಂಬಂಧಗಳು ಮುಖ್ಯವಾಗಿದ್ದು ಜೀವನದ ಎಲ್ಲ ವಲಯಗಳಲ್ಲೂ ಪ್ರಭಾವ ಬೀರುತ್ತಿತ್ತು. ಆಸ್ತಿ ಹಾಗೂ ಸಾಮಾಜಿಕ ಸ್ಥಾನಮಾನಗಳ ಮೇಲೆ ಆಧರಿಸಿದ ಅಸಮಾನತೆ ಬೇರು ಬಿಟ್ಟಂತೆ, ಬುಡಕಟ್ಟು, ಆಡಳಿತಾಂಗಗಳು ರಾಜ್ಯ ಆಡಳಿತಾಂಗಗಳಾಗಿ ವಿಕಾಸಗೊಂಡಂತೆ, ಕ್ರಮೇಣ ಬುಡಕಟ್ಟು ವೃಂದಗಳು ನಾನಾ ಸ್ತರಗಳಾಗಿ ಪುನರ್ರಚನೆಗೊಂಡವು. 'ಗೋಪತಿ'ಯ ಸ್ಥಾನವೂ ಬದಲಾಗಿ, ಅವನು ಬುಡಕಟ್ಟಿನ ನಾಯಕನ ಬದಲು ಒಂದು ರಾಜ್ಯ ಒಕ್ಕೂಟದ ಮುಖಂಡ ನಾಗುತ್ತಾನೆ.

ರಾಜನನ್ನು ಆರಂಭದಲ್ಲಿ ಜನರೇ ಆಯ್ಕೆ ಮಾಡುತ್ತಿದ್ದರು. ಇದಕ್ಕಾಗಿ ಅವರು ಒಂದು ವಿಶೇಷ ಸಭೆ ಸೇರುತ್ತಿದ್ದರು ಎಂದು ಋಗ್ವೇದದಲ್ಲಿ ಉಲ್ಲೇಖವಿದೆ. ಪ್ರಜೆಗಳ ಸಂರಕ್ಷಣೆ

ರಾಜನ ಮುಖ್ಯ ಕರ್ತವ್ಯಗಳಲ್ಲೊಂದಾಗಿದ್ದಿತು. ರಾಜನನ್ನು 'ಪ್ರಜಾರಕ್ಷಕ'ನೆಂದೇ ತಿಳಿಯಲಾಗಿತ್ತು.

ರಾಜ್ಯ ರಚನೆಯು ಒಂದು ಸುದೀರ್ಘ ಪ್ರಕ್ರಿಯೆ. ಇದರಲ್ಲಿ ಬುಡಕಟ್ಟು ಕೂಟಗಳಾದ 'ಸಭಾ' ಮತ್ತು 'ಸಮಿತಿಗಳು' ಪ್ರಮುಖ ಪಾತ್ರವಹಿಸುತ್ತಲೇ ಹೋದವು ಮತ್ತು ರಾಜನ ನೇಮಕಾತಿಯ ಮೇಲೆ ಹೆಚ್ಚು ಪ್ರಭಾವ ಬೀರುತ್ತಿದ್ದವು. ಕ್ರಮೇಣ ಈ ಬುಡಕಟ್ಟು ಕೂಟಗಳ ಸ್ಥಾನಗಳನ್ನು ಕುಲೀನರ ಕೂಟಗಳು ಅಥವಾ ರಾಜನ ಅನುಚರರ ಅಥವಾ ಆಸ್ಥಾನಿಕರ ಕೂಟಗಳು ಅಲಂಕರಿಸಿದವು. ರಾಜನ ಅಧಿಕಾರ ಹೆಚ್ಚಿದಂತೆ ಸಭಾ ಅಥವಾ ಸಮಿತಿಗಳ ಪಾತ್ರಗಳು ದುರ್ಬಲಗೊಳ್ಳುತ್ತಾ ಹೋದವು. ಕಾಲಕ್ರಮೇಣ ರಾಜ್ಯಾಧಿಕಾರದ ಅಂಗಸಂಸ್ಥೆಗಳೂ, ಸ್ಥಾಯಿ ರಾಜ್ಯ ಕಾರ್ಯಾಲಯಗಳೂ ಹುಟ್ಟಿಕೊಂಡವು. ಜನರು ತೆರಿಗೆಗಳನ್ನು ನೀಡಬೇಕಾಗಿ ಬಂದಿತು. ಒಮ್ಮೆ ಬುಡಕಟ್ಟಿನ ಮುಖಂಡನಿಗೆ ಅಥವಾ ದೇವರಿಗೆ ಸ್ವಇಚ್ಛೆಯಿಂದ ಅರ್ಪಿಸುತ್ತಿದ್ದ ಬಲಿಯು ಈಗ ರಾಜನಿಗೆ ವಿಶೇಷವಾಗಿ ನೇಮಿಸಲ್ಪಟ್ಟ ಅಧಿಕಾರಿಗಳ ಮೂಲಕ ಕಟ್ಟುನಿಟ್ಟಾಗಿ ನೀಡಲೇ ಬೇಕಾದ ತೆರಿಗೆಯ ರೂಪ ತಾಳಿತು.

ಬುಡಕಟ್ಟಿನ ಯೋಧರ ವೃಂದ ಕ್ರಮೇಣ ಶಾಶ್ವತ ಸೈನ್ಯಬಲವಾಗಿ ಬೆಳೆಯಿತು. ಇದಕ್ಕೆ ಒಬ್ಬ ವಿಶೇಷ ಅಧಿಪತಿಯನ್ನು ನೇಮಿಸಲಾಯಿತು. ಅವನನ್ನು 'ಸೇನಾನಿ' ಅಥವಾ 'ಸೇನಾಪತಿ' ಎಂದು ಕರೆಯಲಾಗುತ್ತಿತ್ತು. ರಾಜನೂ, ವೃತ್ತಿಪರ ಯೋಧರೂ ರಥಗಳಲ್ಲಿ ಕುಳಿತು ಹೋರಾಟ ನಡೆಸುವ ಪದ್ಧತಿಗಳು ಬೆಳೆದವು. ಹಾಗೆಯೇ ಸಮುದಾಯಗಳ ಸಾಮಾನ್ಯ ಪ್ರಜೆಗಳು ಕಾಲಾಳುಗಳಾಗಿ ಹೋರಾಟ ನಡೆಸುತ್ತಿದ್ದರು.

ರಾಜನಿಗೆ ಪಟ್ಟಾಭಿಷೇಕ ಮಾಡುವ ಸಂದರ್ಭದಲ್ಲಿ ನಡೆಸುವ ಆಚರಣೆಗಳ ವಿವರಗಳು ವೇದ ಸಾಹಿತ್ಯದಲ್ಲಿವೆ. ಅವನಲ್ಲಿ ದೈವತ್ವವೂ ಇದೆ ಎಂದು ನಂಬಲಾಗಿದೆ. ರಾಜನ ಪ್ರಧಾನ ಅರ್ಚಕ ಅಥವಾ 'ಪುರೋಹಿತ' ಹೆಚ್ಚು ಹೆಚ್ಚು ಮುಖ್ಯ ಕಾರ್ಯ ನಿರ್ವಹಿಸತೊಡಗಿದ. ಅವನು ರಾಜ ಜ್ಯೋತಿಷಿಯ ಹಾಗೂ ಸಲಹೆಗಾರನ ಕರ್ತವ್ಯಗಳನ್ನೂ ನಡೆಸುತ್ತಿದ್ದ. ಪಟ್ಟಾಭಿಷೇಕ ಸಂದರ್ಭದಲ್ಲಿ ನೆರವಾಗುತ್ತಿದ್ದ ವ್ಯಕ್ತಿಗಳನ್ನು 'ರಾಜ ನಿರ್ಮಾತೃ'ಗಳೆಂದು ಕರೆಯಲಾಗುತ್ತಿತ್ತು. ಅವರ ಮಧ್ಯೆ 'ಗ್ರಾಮಿಣಿ'ಯೂ ಇರುತ್ತಿದ್ದ. ಕ್ರಮೇಣ ಆಯ್ಕೆಗೊಂಡ ರಾಜತ್ವದ ಸ್ಥಳದಲ್ಲಿ ಆನುವಂಶಿಕ ರಾಜತ್ವ ಬಂದಿತು. ಅಧಿಕಾರವು ಸಾಮಾನ್ಯವಾಗಿ ತಂದೆಯಿಂದ ಮಗನಿಗೆ ಬರುವಂತಾಯಿತು. ಹೀಗೆ ರಾಜ್ಯ ರಚನೆಗಳು ವೇದ ಕಾಲದ ಆರಂಭಿಕ ಗಣಗಳಿಂದ ವಿಕಾಸಗೊಂಡಂತೆ ಕಂಡುಬರುತ್ತವೆ.

## ಸಮಾಜ ರಚನೆ

ಆರ್ಯರ ಸಮಾಜ ಸಂಘಟನೆಯು ಬಂಧುತ್ವದ ಆಧಾರದ ಮೇಲೆ ರಚನೆಯಾಗಿದ್ದು ಬುಡಕಟ್ಟು ಲಕ್ಷಣವನ್ನು ಹೊಂದಿತ್ತು. ಋಗ್ವೇದದಲ್ಲಿ ಎರಡು ಶಬ್ದಗಳು- 'ಜನ' ಮತ್ತು 'ವಿಶ್' ಆಗಾಗ ಉಲ್ಲೇಖವಾಗಿವೆ. ಹಲವು 'ವಿಶ್'ಗಳು ಕೂಡಿ ಒಂದು 'ಜನ'ವಾಗಿತ್ತು.

'ಜನ' ಎಂಬುದು ಇಡೀ ಬುಡಕಟ್ಟನ್ನೇ ಸೂಚಿಸುತ್ತದೆ. 'ವಿಶ್' ಎಂದರೆ ಒಂದು 'ಕುಲ'ವನ್ನು ಸೂಚಿಸುತ್ತದೆ. 'ವಿಶ್'ಗಳನ್ನು ಮತ್ತಷ್ಟು ವಿಂಗಡಿಸಿ ಗ್ರಾಮಗಳನ್ನಾಗಿ ಮಾಡಲಾಗಿದೆ. ಬುಡಕಟ್ಟು ಆರ್ಯರ ಸಾಮಾನ್ಯ ಘಟಕ ಕುಲ. ಕುಲದ ಹಿರಿಯ ವ್ಯಕ್ತಿಯು ಆ ಕುಟುಂಬದ ರಕ್ಷಕನಾಗಿದ್ದು ಅವನನ್ನು 'ಕುಲಪ' ಎಂದು ಕರೆಯಲಾಗುತ್ತಿತ್ತು. 'ಪ್ರಜೆ'ಗಳಿಗೆ ಹೆಚ್ಚು ಒತ್ತುಕೊಟ್ಟಿದ್ದರೂ ಧೈರ್ಯದ ಗಂಡು ಮಕ್ಕಳನ್ನು ಪಡೆಯುವುದನ್ನು ಕುಟುಂಬ ನಿರೀಕ್ಷಿಸುತ್ತಿತ್ತು ಎಂದು ಋಗ್ವೇದದಲ್ಲಿ ಉಲ್ಲೇಖಗಳಿವೆ. 'ಸುವಿರ' ಎಂದರೆ ಧೈರ್ಯದ ಗಂಡು ಮಗು ಎಂದರ್ಥ.

ಋಗ್ವೇದ ಕಾಲದಲ್ಲಿ ಆರ್ಯರಲ್ಲಿ ವರ್ಣ ವ್ಯವಸ್ಥೆ ಇರಲಿಲ್ಲ. ವಿವಿಧ ಆರ್ಯ ಸಮುದಾಯಗಳು ಮತ್ತು ಆ ಸಮುದಾಯಗಳಲ್ಲಿ ಗೋತ್ರಗಳು ಮಾತ್ರ ಇದ್ದವು. ವೈದಿಕ ಯಜ್ಞಗಳಿಗೆ ಸಂಬಂಧಿಸಿದ ಆಚರಣೆಗಳನ್ನು ನಿರ್ವಹಿಸುವವರು ಎಲ್ಲಾ ಸಮುದಾಯಗಳಲ್ಲೂ, ಎಲ್ಲಾ ಕುಟುಂಬಗಳಲ್ಲೂ ಇರುತ್ತಿದ್ದರು. ಅಂದರೆ 'ಬ್ರಾಹ್ಮಣ' ಎಂಬ ಒಂದು ಪ್ರತ್ಯೇಕ ವರ್ಣ ಅಥವಾ ವರ್ಗ ಆಗ ಇರಲಿಲ್ಲ. ಆದರೆ ವೇದ ಮಂತ್ರಗಳನ್ನು ಲಿಪಿಗೆ ಇಳಿಸದೆ ರಹಸ್ಯವಾಗಿರಿಸಿ, ಕಲಿಯಬೇಕೆನ್ನುವವರು ಇಡೀ ವೇದವನ್ನು ಒಂದಿಷ್ಟು ಕಂಠಪಾಠ ಮಾಡಬೇಕು ಎಂದು ನಿಯಮವನ್ನು ರೂಪಿಸುವಲ್ಲಿಯೇ ಒಂದು ವರ್ಗದ (ಬ್ರಾಹ್ಮಣ) ಸೃಷ್ಟಿಯ ಅಂಕುರವಾಯಿತು. ವೇದ ಮಂತ್ರಗಳನ್ನು ಕಲಿಯಬೇಕೆಂದು ಬಯಸುವವನು ಅಡವಿಗಳಲ್ಲಿ ವಾಸವಾಗಿರುತ್ತಿದ್ದ ಗುರುಗಳ ಜೊತೆಗೆ ವಾಸಿಸಬೇಕಾಗುತ್ತಿತ್ತು. ಆತನ ಪಶುಗಳನ್ನು ಪಾಲಿಸಬೇಕು. ಆತನಿಗಾಗಿ ಆಹಾರವನ್ನು ಸಂಗ್ರಹಿಸಿ ತರಬೇಕು. ಅಂದರೆ ಅವನ ಪರವಾಗಿ ಪಶುಪಾಲನೆ, ಆಹಾರ ಸಂಗ್ರಹ ಮಾಡಬೇಕು. ಈ ವಿಧದಲ್ಲಿ ಎಷ್ಟೋ ವರ್ಷಗಳು ಕಳೆದು ವೇದಗಳನ್ನು ಕಂಠಪಾಠ ಮಾಡಿದ ನಂತರವೇ ಅವನೂ ಪೌರೋಹಿತ್ಯಕ್ಕೆ ಅರ್ಹ ನೆನಿಸುವುದು. ಈ ವಿಧಾನದಲ್ಲಿ ಯಜ್ಞಗಳ ಆಚರಣೆಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಲಿಪಿಬದ್ಧಗೊಳ್ಳಲು ಬಿಡದೆ ಕೆಲವರ ಗುತ್ತಿಗೆಯಲ್ಲಷ್ಟೇ ಉಳಿಸಿಕೊಳ್ಳಲು ಮಾಡಿದ ಉಪಾಯದಿಂದಲೇ ಪುರೋಹಿತರಿಗೆ ಸಮಾಜದಲ್ಲಿ ಅಸಮಾನವಾಗಿ ಉನ್ನತ ಸ್ಥಾನ ಲಭಿಸು ವುದು ಸಾಧ್ಯವಾಯಿತು. "ನಂತರದ ಕಾಲದಲ್ಲಿ ಇಡೀ ಚರಿತ್ರೆಯನ್ನೆ ತನ್ನ ಪ್ರಭಾವದಲ್ಲಿ ಸಿಲುಕಿಸಿಕೊಂಡ ಬಲವಾದ ಶಕ್ತಿಯ ವರ್ಗವಾಗಿ ಇದು ಬೆಳೆದುಬಿಟ್ಟಿತು".

ಸಾಮಾಜಿಕ ವಿಭಜನೆ ಸೃಷ್ಟಿಯಾಗಲು ಆರ್ಯರು ಸ್ಥಳೀಯ ನಿವಾಸಿಗಳನ್ನು ಸದೆಬಡಿದಿರುವುದು ಮುಖ್ಯ ಕಾರಣ. ಋಗ್ವೇದದಲ್ಲಿ ಒಂದು ಕಡೆ 'ದಶರಾಜ್ಞ ಯುದ್ಧ'ದ ಕಥೆಯಿದೆ. 'ಸುಧಾಸ' ಭರತ ಸಮುದಾಯಕ್ಕೆ ಸೇರಿದ ರಾಜ. ಇವನು ಇತರ ಹತ್ತು ಮಂದಿ ರಾಜರೊಂದಿಗೆ ಯುದ್ಧ ಮಾಡಿ ಅವರನ್ನು ಸೋಲಿಸಿ ಭರತ ಸಮುದಾಯದ ಅಧಿಪತ್ಯವನ್ನು ಸ್ಥಾಪಿಸಿದನು. ಋಗ್ವೇದದಲ್ಲಿ ಈ 'ದಶರಾಜ್ಞ ಯುದ್ಧ'ದಲ್ಲಿ ಸುಧಾಸನ ವಿಜಯವನ್ನು ಹಾಡಿದವನು ಪ್ರಮುಖ ಬ್ರಾಹ್ಮಣ ಋಷಿ ವಸಿಷ್ಠ. ಈ ಸಂಘರ್ಷ ಆರ್ಯ ಮತ್ತು ಆರ್ಯೇತರ ಜನ ಸಮುದಾಯದ ನಡುವೆ ನಡೆದುದು ಎಂದು ಅಭಿಪ್ರಾಯ ಪಡಲಾಗಿದೆ.

ಆರ್ಯರು ತಾವು ಸೋಲಿಸಿದ ಸ್ಥಳೀಯರನ್ನು, ದಾಸರನ್ನು ಮತ್ತು ದಸ್ಯುಗಳನ್ನು ಗುಲಾಮರಂತೆ, ಶೂದ್ರರಂತೆ ಪರಿಗಣಿಸಿದರು. ಅವರು ಗೆದ್ದು ಗಳಿಸಿದ ಸಂಪತ್ತಿನಲ್ಲಿ ಬಹುಪಾಲನ್ನು ಕುಲಗಳ ರಾಜರು ಮತ್ತು ಪುರೋಹಿತರು ವಶಪಡಿಸಿಕೊಂಡ ಕಾರಣ ಅವರು ಸಾಮಾನ್ಯ ಜನರಿಗಿಂತ ಬಲಿಷ್ಠವಾಗಿ ಬೆಳೆದು ಸಾಮಾಜಿಕ ಭೇದಗಳು ಹುಟ್ಟಿಕೊಂಡವು. ಈ ವರ್ಣ ಪದ್ಧತಿಯಲ್ಲಿ ಯುದ್ಧ ನಡೆಸುತ್ತಿದ್ದ ಕುಲೀನರು 'ಕ್ಷತ್ರಿಯ'ರಾದರು, ಪುರೋಹಿತರು 'ಬ್ರಾಹ್ಮಣ'ರಾದರು, ಗ್ರಾಮದ ಸ್ವತಂತ್ರ ಜನರು 'ವೈಶ್ಯ'ರಾದರು, ಅನಂತರ ಬಂದ 'ಶೂದ್ರ'ರು ಈ ಸಾಮಾಜಿಕ ಅಂತಸ್ತಿನಲ್ಲಿ ತೀರ ಕೆಳಗಿನವರಾಗಿದ್ದರು. ಋಗ್ವೇದದಲ್ಲಿ ವರ್ಣ ಪದ್ಧತಿಯ ಮೊದಲ ಮೂರು ವರ್ಣಗಳಿಗೆ ಅನೇಕ ಉಲ್ಲೇಖಗಳಿವೆ. ಆದರೆ ಹತ್ತನೆಯ 'ಮಂಡಲ'ದಲ್ಲಿ ನಾಲ್ಕನೆಯ ವರ್ಣವು ಮೊದಲ ಬಾರಿಗೆ ಪ್ರಸ್ತಾಪವಾಗಿದೆ. ಈ ಎಲ್ಲಾ ನಾಲ್ಕು ವರ್ಣಗಳೂ ಆದಿಮಾನವನಾದ 'ಪುರುಷ'ನಿಂದ ಹುಟ್ಟಿಕೊಂಡವರೆಂದೂ ಹೇಳುವ ವಿವರಣೆ ಇದೆ. ಬ್ರಾಹ್ಮಣರು ಪುರುಷನ ಬಾಯಿಯಿಂದಲೂ, ಕ್ಷತ್ರಿಯರು ಬಾಹುಗಳಿಂದಲೂ, ವೈಶ್ಯರು ತೊಡೆಯಿಂದಲೂ, ಶೂದ್ರರು ಪಾದಗಳಿಂದಲೂ ಹುಟ್ಟಿದರೆಂದು *ಪುರುಷಸೂಕ್ತ*ದಲ್ಲಿ ನಮೂದಿಸಲಾಗಿದೆ.

ಅನಂತರ ಕಾಲದ ವೇದ ಸಾಹಿತ್ಯದಲ್ಲಿ ಈ ವಿಚಾರ ವಿಪುಲವಾಗಿ ದಾಖಲಾಗಿದೆ. ಮಾತ್ರವಲ್ಲ, ವರ್ಣ ವ್ಯವಸ್ಥೆಯ ಉಗಮವನ್ನು ಸರ್ವೋಚ್ಚ ದೇವರಾದ ಬ್ರಹ್ಮನೊಂದಿಗೆ ಸಂಬಂಧಿಸಲಾಗಿದೆ. ಈ ನಾಲ್ಕು ವರ್ಣಗಳ ಉದಯ ಹಾಗೂ ಅವುಗಳ ಸ್ಥಾನಮಾನಗಳನ್ನು ಬ್ರಾಹ್ಮಣರು ಪವಿತ್ರಗೊಳಿಸಿದರು. ಅವರು ಬ್ರಾಹ್ಮಣ ವರ್ಣದ ಉಚ್ಚತೆಯನ್ನು ಸಮರ್ಥಿಸಿ ತಮ್ಮ ಗುಂಪಿಗೆ ದೈವತ್ವವನ್ನು ಹಚ್ಚಲು ಎಲ್ಲ ಪ್ರಯತ್ನವನ್ನು ಮಾಡಿದರು. ಆದ್ದರಿಂದಲೇ ಎಲ್ಲ ವೇದ ಪಾಠಗಳಲ್ಲೂ ಬ್ರಾಹ್ಮಣರನ್ನೇ ಇತರ ವರ್ಣಗಳಿಗಿಂತ ಮುಂಚೆ ಹೆಸರಿಸಿರುವುದು ಅರ್ಥಗ್ರಾಹ್ಯವೇ ಆಗಿದೆ. ಬ್ರಾಹ್ಮಣರು ಪೂಜೆ ಪುರಸ್ಕಾರದ, ಧಾರ್ಮಿಕ ಕರ್ಮಗಳನ್ನು ನಡೆಸುವ ಮತ್ತು ಧಾರ್ಮಿಕ ಗ್ರಂಥಗಳನ್ನು ವಾಚಿಸುವ ತಮ್ಮ ವಿಶೇಷಾಧಿಕಾರವನ್ನು ಸಮರ್ಥಿಸಿಕೊಂಡರು. ಕ್ಷತ್ರಿಯರು ರಾಜ್ಯಾಡಳಿತದ 'ಅಧಿಪತಿ' ಸ್ಥಾನದಲ್ಲಿದ್ದರು. ಅವರು ಅಧಿಕಾರದ ಮುಖ್ಯ ಸಾಧನವಾದ ಸೈನ್ಯವನ್ನು ತಮ್ಮ ಹತೋಟಿಯಲ್ಲಿ ಇರಿಸಿಕೊಂಡಿದ್ದು, ಮುಖ್ಯ ಸ್ಥಾನಗಳನ್ನೆಲ್ಲ ತಾವೇ ಪಡೆದುಕೊಂಡಿದ್ದರು. ಗ್ರಾಮದ ಸ್ವತಂತ್ರ ಜನರು, ಬೇಸಾಯಗಾರರು ಮತ್ತು ವರ್ತಕರು ವೈಶ್ಯರ ಗುಂಪಿನಲ್ಲಿದ್ದರು. ಅವರೇ ತೆರಿಗೆಗಳಲ್ಲಿ ಅಧಿಕ ಭಾಗವನ್ನು ನೀಡುತ್ತಿದ್ದು ಕೆಲವು ರಾಜಕೀಯ ಹಕ್ಕುಗಳನ್ನು ಉಳಿಸಿಕೊಂಡು ರಾಜ್ಯದ ವ್ಯವಹಾರಗಳನ್ನು ತೀರ್ಮಾನಿಸುವುದರಲ್ಲೂ ಪ್ರಮುಖ ಪಾತ್ರ ವಹಿಸುತ್ತಿದ್ದರು.

ಮೊದಲ ಮೂರು ವರ್ಣಗಳ ಜನರನ್ನು 'ದ್ವಿಜ'ರೆಂದು ಕರೆಯಲಾಗುತ್ತಿತ್ತು. ಇವರಿಗೆ ಉಪನಯನದ, ಅಂದರೆ ವೇದಗಳಲ್ಲಿ ಹೇಳಲಾದ ಮತ-ಕ್ರಿಯಾವಿಧಿಗಳನ್ನು ತಿಳಿಯುವ ಮತ್ತು ಆಚರಿಸುವ ಹಕ್ಕು ಇದ್ದಿತು. ನಾಲ್ಕನೆ ವರ್ಣ ಶೂದ್ರರು, ಇವರು ದ್ವಿಜರಾಗಿರಲಿಲ್ಲ. ಆದ್ದರಿಂದ ಅವರಿಗೆ ವೇದದ ಮತ-ಕ್ರಿಯಾವಿಧಿಗಳಲ್ಲಿ ಭಾಗವಹಿಸುವ ಅಥವಾ ಪವಿತ್ರ

ಗ್ರಂಥಗಳನ್ನು ಅಭ್ಯಸಿಸುವ ಹಕ್ಕು ಇರಲಿಲ್ಲ. ಶೂದ್ರರು ಸಾಮಾನ್ಯವಾಗಿ ಬಡವರಾಗಿದ್ದು, ಮೇಲ್ವರ್ಗದವರ ಸೇವಕರಾಗಿದ್ದರು. 'ಋಗ್ವೇದ'ದ ಆರಂಭಿಕ ಮಂಡಲಗಳಲ್ಲಿ ಶೂದ್ರರ ಬಗ್ಗೆ ಯಾವುದೇ ಉಲ್ಲೇಖಗಳಿಲ್ಲ. ಆದ್ದರಿಂದ ಅವರು ಆರ್ಯರು ತಮ್ಮ ಅಧೀನ ಮಾಡಿ ಕೊಂಡ ಸ್ಥಳೀಯ ನಿವಾಸಿಗಳಾಗಿದ್ದಿರಬಹುದೆಂದು ಕೆಲವು ವಿದ್ವಾಂಸರು ಭಾವಿಸಿದ್ದಾರೆ. ಹೀಗೆಯೇ ಆರ್ಯರು ಶ್ರೇಷ್ಠರು, ಅವರ ಕುಲ ಶುದ್ಧವಾದುದು ಎಂಬ ಅಭಿಪ್ರಾಯ ಹುಟ್ಟಿ ಕೊಂಡದ್ದು. ಈ ಆರ್ಯರು ಕಪ್ಪು ಮೈಬಣ್ಣದ ಸ್ಥಳೀಯ ನಿವಾಸಿಗಳನ್ನು ಹತ್ತಿಕ್ಕಿ ಅವರನ್ನು ಶೂದ್ರರ ಸ್ಥಾನಕ್ಕೆ ಇಳಿಸಿದರು ಎಂದು ಈ ವಿದ್ವಾಂಸರು ಭಾವಿಸುತ್ತಾರೆ.

ವೇದ ಕಾಲದ ಕೊನೆಯಲ್ಲಿ ವರ್ಣಗಳ ನಡುವೆಯೇ ವೃತ್ತಿಯ ಮೇಲೆ ಆಧರಿಸಿದ ಉಪ ವಿಭಾಗಗಳೂ ಹುಟ್ಟಿಕೊಂಡು, ಅವು ಅನಂತರ ಜಾತಿಗಳ ರೂಪ ತಳೆದವು.

## ದೇವತೆಗಳು ಮತ್ತು ನಂಬಿಕೆ

ವೇದ ಕಾಲದ ಸಮಾಜ ಪಿತೃಪ್ರಧಾನವಾಗಿದ್ದು, ಪುರುಷ ದೇವರುಗಳು ಹೆಚ್ಚು ಪ್ರಾಮುಖ್ಯತೆ ಪಡೆದಿರುವುದು ತಿಳಿದುಬರುತ್ತದೆ. ಅವುಗಳಲ್ಲಿ ಪ್ರಮುಖ ದೇವರು. ಅಗ್ನಿ ಅಗ್ನಿಯಲ್ಲದೆ ಇತರ ದೇವರುಗಳಾದ ವರುಣ, ಮಿತ್ರ, ಸೂರ್ಯ, ವಾಯು, ಅಶ್ವಿನಿಗಳು, ಪರ್ಜನ್ಯ- ಮೊದಲಾದವರು, ಬಹುಕಾಲದವರೆಗೆ ನಿಸರ್ಗ ಸಂಗತಿಗಳು ಮಾನವೀಕೃತ ರೂಪ ತಾಳಿದವು. ಈ ಎಲ್ಲಾ ದೇವರುಗಳ ನಾಯಕನಾದ ಇಂದ್ರನು ಯುದ್ಧ ನಿಪುಣ. ಆತನಿಗೆ ಆರ್ಯರು ಬಲಿಗಳನ್ನು ಅರ್ಪಿಸಿ ಅವನನ್ನು ಒಲಿಸಿಕೊಂಡ ಆರ್ಯ ಸಮುದಾಯಗಳಿಗೆ ಇತರ (ಆರ್ಯ ಮತ್ತು ಆರ್ಯೇತರ) ಸಮುದಾಯಗಳೊಂದಿಗೆ ಯುದ್ಧಗಳಾದಾಗ ಇಂದ್ರನು ಸಹಾಯ ನೀಡುತ್ತಾನೆ. ಈ ಯುದ್ಧಗಳು ಪಶುಸಂಪತ್ತಿಗಾಗಿ, ಜಲಮೂಲಗಳ ಸಂಬಂಧವಾಗಿ ಆಗುತ್ತಿದ್ದವು. ಇಂದ್ರನನ್ನು ಬಹಳ ಘಟಾನುಘಟಿ ದೇವರು ಎಂದು ಋಗ್ವೇದಬಲ್ಲಿ ಬಣ್ಣಿಸಲಾಗಿದ್ದು ಇವನ ಬಗ್ಗೆ ಅತಿ ಹೆಚ್ಚು ಅಂದರೆ ೨೦೦ ಶ್ಲೋಕಗಳಲ್ಲಿ ಉಲ್ಲೇಖಿಸ ಲಾಗಿದೆ. 'ಸೋಮ' ಇವನ ಇಷ್ಟದ ಮಧ್ಯಪಾನ, ಗಾಂಧರ್ವರು ಇವನ ಸೇವಕರು. ಅಗ್ನಿ ದೇವರಿಗೆ ಎರಡನೇ ಸ್ಥಾನ ಕಲ್ಪಿಸಲಾಗಿದ್ದು, ಕಾಡುಗಳನ್ನು ಸುಡುವುದರಲ್ಲಿ, ಅಡಿಗೆ ಮುಂತಾದ ದೈನಂದಿನ ಕಾರ್ಯಗಳಲ್ಲಿ ಉಪಯುಕ್ತವಾಗುತ್ತಿದ್ದು ಪ್ರಾಚೀನ ಜನರ ಜೀವನದಲ್ಲಿ ಮಹತ್ತರ ಪಾತ್ರ ವಹಿಸುತ್ತಿತ್ತು. ಜನರು ಮತ್ತು ದೇವತೆಗಳ ನಡುವೆ ಮಧ್ಯವರ್ತಿಯಾಗಿ ಅಗ್ನಿ ದೇವತೆ ಕಾರ್ಯ ನಿರ್ವಹಿಸುತ್ತಿತ್ತೆಂದು ಜನರು ನಂಬಿದ್ದರು. ಸುಮಾರು ೨೦೦ ಶ್ಲೋಕಗಳಲ್ಲಿ ಅಗ್ನಿ ದೇವರನ್ನು ಹೊಗಳಲಾಗಿದೆ. ವರುಣ ಮೂರನೆ ಮುಖ್ಯ ಸ್ಥಾನವನ್ನು ಅಲಂಕರಿಸಿದ್ದು ನೀರಿನ ಒಡೆಯನೆಂದು ಹೇಳಲಾಗಿದೆ. ಈ ಎಲ್ಲಾ ಪುರುಷ ದೇವತೆಗಳ ಬಗ್ಗೆ ವಿಪುಲವಾದ ವಿವರಗಳು ಋಗ್ವೇದದಲ್ಲಿ ಇವೆ.

ಋಗ್ವೇದದಲ್ಲಿ ಉಲ್ಲೇಖವಾಗಿರುವ ಸ್ತ್ರೀ ದೇವತೆಗಳಲ್ಲಿ ಉಷಸ್ಸು ಮುಖ್ಯವಾದುದು. ಋಗ್ವೇದದುದ್ದಕ್ಕೂ ಈಕೆಯ ಸ್ಥಾನ ಒಂದೇ ತೆರನಾಗಿಲ್ಲ. ಇತರ ವೈದಿಕ ದೇವರುಗಳಂತೆ ಈಕೆಯೂ ಬಲಿಗಳನ್ನು ಪಡೆಯುತ್ತಾಳೆ. ಈಕೆಯನ್ನು ಋಗ್ವೇದದಲ್ಲಿ ೨೧ ಸ್ತೋತ್ರಗಳಲ್ಲಿ

ಸ್ತುತಿಸಲಾಗಿದೆ. ಅದೇ ಋಗ್ವೇದದಲ್ಲಿ ಉಷಸ್ಸನ್ನು ದೇವತೆಗಳ ತಾಯಿ (ಮಾತಾ ದೇವಾನಾಂ) ಎಂದೂ, ಅದಿತಿ (ಸೂರ್ಯನ ತಾಯಿ) ಎಂದೂ ವರ್ಣಿಸಲಾಗಿದೆ.

ಮಂತ್ರಗಳ ಪಠಣ ಮತ್ತು ಯಜ್ಞ-ಯಾಗಗಳ ಮೂಲಕ ದೇವತೆಗಳನ್ನು ಪೂಜಿಸುವ ಪದ್ಧತಿ ಪ್ರಚಲಿತದಲ್ಲಿತ್ತು. ಪ್ರಾರ್ಥನೆಗಳು ಮುಖ್ಯವಾದ ಧಾರ್ಮಿಕ ಚಟುವಟಿಕೆಗಳಾಗಿದ್ದು ವೈಯಕ್ತಿಕವಾಗಿಯೂ, ಸಾಮೂಹಿಕವಾಗಿಯೂ ಸಲ್ಲಿಸಲಾಗುತ್ತಿತ್ತು. ಯಜ್ಞ-ಯಾಗಗಳನ್ನೂ ಇದೇ ರೀತಿ ಮಾಡಲಾಗುತ್ತಿತ್ತು.

## ಉತ್ತರ ವೇದಗಳ ಕಾಲ

### (ಕ್ರಿ.ಪೂ. ೧೦೦೦ ದಿಂದ ಕ್ರಿ.ಪೂ. ೬೦೦ ರವರೆಗೆ)

ಕ್ರಿ.ಪೂ. ೧೨೦೦-೧೦೦೦ ರ ಸುಮಾರಿಗೆ ಅಂದರೆ ಋಗ್ವೇದದ ನಂತರದ ಕಾಲದಲ್ಲಿ ಆರ್ಯರ ಎರಡನೆಯ ಹಂತದ ವಲಸೆ ಭಾರತ ಉಪಖಂಡಕ್ಕೆ ಬಂದಿತು. ಈ ವಲಸೆಯ ಪ್ರಭಾವದಿಂದ ಕ್ರಿ.ಪೂ. ೧೦೦೦ ದ ವೇಳೆಗೆ ಆರ್ಯರ ಭೌತಿಕ ಜೀವನದಲ್ಲಿ ದೊಡ್ಡ ಮಟ್ಟದ ಬದಲಾವಣೆ ಕಂಡುಬಂತು. ಕಬ್ಬಿಣದ ಬಳಕೆ ಹೆಚ್ಚಾಗುತ್ತಿದ್ದಂತೆ ಆಹಾರ ಉತ್ಪಾದನೆ ಪಶುಪಾಲನೆಗಿಂತಲೂ ಪ್ರಮುಖ ಜೀವನಾಧಾರವಾಗಲು ಆರಂಭವಾಯಿತು. ಉತ್ಪಾದನಾ ಪದ್ಧತಿಗಳಲ್ಲಿ ಕಂಡುಬಂದ ಈ ಬದಲಾವಣೆಯ ಪರಿಣಾಮವಾಗಿ ಉತ್ಪಾದನೆಯ ಪ್ರಮಾಣ ಹೆಚ್ಚಿತು. ಇದು ಆರ್ಯರ ಬದುಕಿನಲ್ಲಿ ಆದ ಮೊದಲ ಬದಲಾವಣೆ. ಇದರಿಂದ ಒಂದು ಸಾಮಾಜಿಕ ವ್ಯವಸ್ಥೆಯೇ ಜಾರಿಗೆ ಬಂದು ಅದರಲ್ಲಿ ಪಾಲಕ ವರ್ಗಗಳು, ಬ್ರಾಹ್ಮಣರು, ಕ್ಷತ್ರಿಯರು, ಹೊಸ ವ್ಯವಸ್ಥೆಯ ಏರ್ಪಾಡು, ಕಬ್ಬಿಣ ಮತ್ತು ನೇಗಿಲುಗಳನ್ನು ಬಳಸಿದ ಹೊಸ ಉತ್ಪಾದನಾ ಪದ್ಧತಿಯ ಹುಟ್ಟು, ಆಹಾರ ಉತ್ಪಾದನೆ ಎಂಬ ಹೊಸ ಜೀವನಾಧಾರ -ಮೊದಲಾದ ಲಕ್ಷಣಗಳು ಕಂಡುಬಂದವು. ಇದರಿಂದ ಸಮುದಾಯ ವ್ಯವಸ್ಥೆಯು ದುರ್ಬಲ ಗೊಳ್ಳುತ್ತ, ಕ್ರಮೇಣ ಹೊಸ ಆಹಾರ ಉತ್ಪಾದನಾ ಸಮಾಜ, ಅಂದರೆ ಕೃಷಿಕ ವರ್ಗ ಸಮಾಜ ರೂಪುಗೊಂಡಿತು. ಹೀಗೆ ಪರಿವರ್ತನೆಗೊಂಡು ಆ ವರೆಗೆ ಪಂಜಾಬ್ ಪ್ರಾಂತದ ಸಿಂಧೂ ನದಿ ಉಪನದಿಯ ಬಯಲುಗಳಿಗಷ್ಟೇ ಸೀಮಿತವಾಗಿದ್ದ ಆರ್ಯ ಸಮಾಜ ನಿರಾತಂಕವಾಗಿ ಈ ನಾಲ್ಕು ಶತಮಾನಗಳಲ್ಲಿ ಪೂರ್ವಾಭಿಮುಖವಾಗಿ ವಿಸ್ತರಿಸಿ ಗಂಗಾ ಯಮುನಾ ಬಯಲು ಗಳಿಗೆ ಸಾಗಿ ಪಶ್ಚಿಮದ ಅಂದರೆ ಈಗಿನ ದೆಹಲಿ ಪ್ರಾಂತಕ್ಕೂ ಹರಡಿಕೊಂಡಿತು.

ಈ ಕಾಲದಲ್ಲಿ ಮೂರು ವೇದಗಳಾದ ಯಜುರ್ವೇದ, ಸಾಮವೇದ ಮತ್ತು ಅಥರ್ವ ವೇದಗಳು ಹಾಗೂ ಬ್ರಾಹ್ಮಣಗಳು, ಕೆಲವು ಉಪನಿಷತ್ತು ಸಾಹಿತ್ಯ ರಚನೆಯಾದವು. ಋಗ್ವೇದ ಸಾಹಿತ್ಯಕ್ಕೆ ಹೋಲಿಸಿದಾಗ ಉತ್ತರ ವೇದ ಸಾಹಿತ್ಯದಲ್ಲಿ ಆ ಜನರಿಗೆ ಭಾರತದ ಭೌಗೋಳಿಕ ಜ್ಞಾನ ವಿಶಾಲವಾಗಿರುವುದನ್ನು ತಿಳಿಯಬಹುದು. ಎರಡು ಮುಖ್ಯ ಸಮುದ್ರಗಳು ಅರಬ್ಬಿ ಸಮುದ್ರ ಮತ್ತು ಇಂಡಿಯನ್ ಒಶಿಯನ್ ಬಗ್ಗೆ ಉಲ್ಲೇಖಗಳಿವೆ. ಹಿಮಾಲಯ ಪರ್ವತ ಶ್ರೇಣಿಗಳ ಹೆಸರು ನಮೂದಿಸಲಾಗಿದೆ. ವಿಂಧ್ಯಾ ಪರ್ವತವನ್ನು ಪರೋಕ್ಷವಾಗಿ ಹೇಳಲಾಗಿದೆ.

ಇದರಿಂದ ಉತ್ತರ ವೇದ ಸಾಹಿತ್ಯಗಳು ರಚನೆಯಾಗುವಷ್ಟು ಹೊತ್ತಿಗೆ ಆರ್ಯರಿಗೆ ಉತ್ತರ ಭಾರತದಲ್ಲಿ ಬಹುತೇಕ ಭಾಗಗಳು ಪರಿಚಿತವಾಗಿದ್ದವು ಮತ್ತು ಗಂಗಾ ನದಿ ಬಯಲು ಭಾಗಗಳಲ್ಲಿ ಅವರು ನೆಲೆಗಳನ್ನು ಗಟ್ಟಿಗೊಳಿಸಿದ್ದರು ಎಂಬುದು ಅರಿವಾಗುತ್ತದೆ.

ಉತ್ತರ (ನಂತರದ) ವೇದಗಳ ಕಾಲದಲ್ಲಿ ಆರ್ಯರು ತಮ್ಮ ಪೂರ್ಣ ಚಟುವಟಿಕೆಗಳನ್ನು ಪಂಜಾಬಿನಿಂದ ಈಗಿನ ಉತ್ತರ ಪ್ರದೇಶದ ಪಶ್ಚಿಮ ಭಾಗಕ್ಕೆ ವೃದ್ಧಿಸಿಕೊಂಡಿದ್ದರು. ಅದು ಇಡೀ ಗಂಗಾ-ಯಮುನಾ ಬಯಲು ಪ್ರದೇಶವನ್ನು ಆವರಿಸಿತ್ತು. ಈ ಹೊತ್ತಿಗೆ 'ಭರತ' ಮತ್ತು 'ಪುರುಶ್' ಎಂಬ ಎರಡು ಪ್ರಬಲ ಕುಲಗಳು ಪರಸ್ಪರ ವಿಲೀನಗೊಂಡು 'ಕುರು' ಎಂಬ ಹೊಸ ಗುಂಪನ್ನು ರಚಿಸಲಾಯಿತು. ಈ ಗುಂಪು ಗಂಗಾ-ಯಮುನಾ ಬಯಲು ಪ್ರದೇಶದಲ್ಲಿ ತಮ್ಮ ನೆಲೆಯನ್ನು ಭದ್ರಗೊಳಿಸಿ ಕುರುಕ್ಷೇತ್ರ ಅಥವಾ 'ಕುರು' ಎಂಬ ಹೆಸರಿನ ಊರು ಅಸ್ತಿತ್ವಕ್ಕೆ ಬಂತು. ನಂತರ ಪಾಂಚಾಲರೊಂದಿಗೆ ಸೇರಿಕೊಂಡರು. ಅವರೊಂದಿಗೆ ಸೇರಿ ದೆಹಲಿ ಸುತ್ತಮುತ್ತಲಿನ ಪ್ರದೇಶಕ್ಕೆ ವಿಸ್ತರಿಸಿ ಮೀರತ್ ಜಿಲ್ಲೆಯ ಹಸ್ತಿನಾಪುರದಲ್ಲಿ ತಮ್ಮ ರಾಜಧಾನಿಯನ್ನು ಸ್ಥಾಪಿಸಿದರು. ಉತ್ತರ ವೇದ ಕಾಲದ ಅಂತ್ಯಕ್ಕೆ ಆರ್ಯರ ಹರಡುವಿಕೆ ಮುಂದುವರಿದು ಉತ್ತರ ಪ್ರದೇಶದ ಪೂರ್ವದಲ್ಲಿರುವ ಕೋಸಲವನ್ನು, ಉತ್ತರ ಬಿಹಾರಿನ ವಿದೇಶವನ್ನು ಆಕ್ರಮಿಸಿಕೊಂಡರು. ಈ ಪೂರ್ವಾಭಿಮುಖವಾದ ಅವರ ಚಲನೆ ಯಿಂದ ತಾಮ್ರ ಉಪಕರಣಗಳನ್ನು ಬಳಸುವ ಜನರನ್ನು ಭೇಟಿಯಾದರು. ಈ ಹೊಸ ಜನ ಸಮೂಹ ಮುಖ್ಯವಾಗಿ ಕಾವಿ ಬಣ್ಣದ ಮತ್ತು ಕಪ್ಪು ಮತ್ತು ಕೆಂಪು ಪಾತ್ರೆಗಳನ್ನು ತಯಾರಿಸುವ ಗುಂಪುಗಳಾಗಿದ್ದರು. ಈ ಹಂತದಲ್ಲಿ ಈ ಆರ್ಯರು ತಾವು ಆರಂಭದಲ್ಲಿ ನೆಲೆಸಿರುವ ಪಂಜಾಬ್ ಮತ್ತು ಸುತ್ತಲಿನ ಮೂಲ ಸ್ಥಳಗಳನ್ನು ಮರೆತಿರುವಂತೆ ಭಾಸವಾಗುತ್ತದೆ. ಏಕೆಂದರೆ ಉತ್ತರ ವೇದ ಸಾಹಿತ್ಯದಲ್ಲಿ ಆ ಸ್ಥಳಗಳ ಹೆಸರುಗಳು ತುಂಬಾ ವಿರಳವಾಗಿ ಉಲ್ಲೇಖ ವಾಗುತ್ತವೆ. ಅಲ್ಲಿ ಇಲ್ಲಿ ದಾಖಲಾಗಿದ್ದರೂ ಅವುಗಳನ್ನು ಅಪವಿತ್ರ ಭೂಮಿಯೆಂದೂ ಕರೆಯ ಲಾಗುತ್ತಿದ್ದು ಅಲ್ಲಿ ಯಾವುದೇ ಯಜ್ಞ-ಯಾಗ ಕ್ರಿಯೆಗಳನ್ನು ನಡೆಸಲಾಗುತ್ತಿರಲಿಲ್ಲ.

ಒಂದು ಅಭಿಪ್ರಾಯದ ಪ್ರಕಾರ ಆರ್ಯರ ಈ ಪೂರ್ವಾಭಿಮುಖವಾದ ಚಲನೆಯು ಗಂಗಾ ನದಿಗೆ ಉತ್ತರದ ಹಿಮಾಲಯ ತಪ್ಪಲಿನಲ್ಲಿ ನಡೆದಿದೆ ಎನ್ನಲಾಗಿದೆ. ಆದರೆ ಈ ನದಿ ದಕ್ಷಿಣಕ್ಕೂ ಇರುವ ಪ್ರದೇಶದಲ್ಲಿಯೂ ಆಗುವ ವೃದ್ಧಿಯನ್ನು ನಿರ್ಬಂಧಿಸುವ ಯಾವ ಶಕ್ತಿಗಳು ಇರಲಿಲ್ಲ. ಅಂದರೆ ಆರಂಭದಲ್ಲಿ ಈ ದಟ್ಟ ಅರಣ್ಯ ಪ್ರದೇಶವನ್ನು ಅಗ್ನಿಯಿಂದ ಸುಟ್ಟು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಯಿತು. ಇದನ್ನು ಸಮರ್ಥಿಸಲು 'ಶತಪಥ ಬ್ರಾಹ್ಮಣ'ದಲ್ಲಿ ನಮಗೆ ಒಂದು ಸ್ವಾರಸ್ಯಕರ ಕಥೆ ತಿಳಿದುಬರುತ್ತದೆ. ಅಗ್ನಿ ದೇವನು ಸರಸ್ವತಿ ನದಿ (ಪೂರ್ವ ಪಂಜಾಬ್) ಮತ್ತು ಸದನೀರ ನದಿ (ಪಶ್ಚಿಮ ಬಿಹಾರದ ಗಂಡಕ ನದಿ)ಗಳ ನಡುವೆ ಇರುವ ಭೂಮಿಯನ್ನು ಸುಟ್ಟುಕೊಂಡು ಹೋಗುತ್ತಾನೆ. ರಾಜ ಮಾಧವ ವಿದೇಹನು ಹೀಗೆ ಅಗ್ನಿಯಿಂದ ಲಭಿಸಿದ ಭೂಮಿಯಲ್ಲಿ ಪೂರ್ವ ಭಾಗಕ್ಕೆ ಮುಂದುವರಿದುಕೊಂಡು ಹೋಗುತ್ತಾನೆ. ಈ ಕಥೆಯ ಪ್ರಕಾರ ರಾಜನೂ, ಅವನ ಪ್ರಜೆಗಳೂ ಸದನೀರ ನದಿಯ

ಪೂರ್ವ ಭಾಗದಲ್ಲೂ ವಾಸಿಸಲು ಅರ್ಹವಾದ ಭೂಮಿಯನ್ನು ವಶಪಡಿಸಿಕೊಳ್ಳುವುದರಲ್ಲಿ ಯಶಸ್ವಿಯಾದರು. ಈ ವೇದ ಕಥೆಯು ಇಂಡೋ-ಆರ್ಯರು ಹರಡಿಕೊಂಡು ಹೋಗಿರ ಬಹುದಾದ ದಿಕ್ಕನ್ನು ಸೂಚಿಸುತ್ತದೆ. ಮತ್ತು ಬ್ರಾಹ್ಮಣ ಕಾಲದಲ್ಲಿ ಅವರು ನೆಲೆ ನಿಂತ ಅತ್ಯಂತ ಪೂರ್ವದ ಪ್ರದೇಶವೆಂದರೆ ವಿದೇಹ ಪ್ರದೇಶ (ಇಂದಿನ ಬಿಹಾರದ ಉತ್ತರ ಭಾಗ) ಎಂದು ತೋರಿಸಿಕೊಡುತ್ತದೆ. ಇದಲ್ಲದೆ, ಇಂಡೋ-ಆರ್ಯರು ಹರಡಿಕೊಂಡು ಹೋದುದು ದಟ್ಟವಾದ ಕಾಡಿನಿಂದ ಆವೃತವಾದ ಪ್ರದೇಶವಾಗಿದ್ದು, ತಮ್ಮ ಮಾರ್ಗದಲ್ಲಿ ಭಾರಿ ಮರಗಳನ್ನು ಕಡಿದು ಹಾಕಿ ಸ್ಥಳ ಪಡೆದುಕೊಳ್ಳಬೇಕಿತ್ತು. ಜೊತೆಗೆ ಮರಗಿಡಗಳನ್ನು ಸುಟ್ಟು ಹಾಕಬೇಕಿದ್ದಿತು. ಇದು ಆ ಕಾಲದಲ್ಲಿ ಅವರಿಗೆ ಎದುರಾದ ಸಹಜವಾದ ವಾತಾವರಣವೂ ಹೌದು. ಇಲ್ಲಿ ಕಬ್ಬಿಣದ ಉಪಕರಣವು ಬಳಕೆಯಾಗಿರುವುದು ಸ್ಪಷ್ಟ. ಇದಕ್ಕೆ ಸಂಬಂಧಿಸಿದಂತೆ ಉತ್ತರ ವೇದ ಸಾಹಿತ್ಯದಲ್ಲಿ ಶ್ಯಾಮ ಆಯಾಸ್ ಎಂಬ (ಕಪ್ಪುಲೋಹ) ಕಬ್ಬಿಣದ ಆಯುಧ ವನ್ನು ಬಳಸಿರುವುದನ್ನು ಉಲ್ಲೇಖಿಸುತ್ತದೆ. ಉತ್ತರ ಪ್ರದೇಶದ ಪಶ್ಚಿಮಕ್ಕಿರುವ ಅತ್ರಾಂಜಿಖೇರ ಮತ್ತು ಜಖೇರದಲ್ಲಿ ನಡೆಸಿದ ಉತ್ಖನನದ ವೇಳೆ ಇಂತಹ ಲೋಹದ ಆಯುಧಗಳು ದೊರಕಿದ್ದು, ಅವುಗಳು ವೇದಗಳ ನಂತರದ ಕಾಲಕ್ಕೆ ಸೇರಿರುವುದೆಂದು ಅಭಿಪ್ರಾಯ ಪಡಲಾಗಿದೆ. ಆಯುಧಗಳಿಗಿಂತ ಕೃಷಿಗೆ ಬಳಸಿದ ಕಬ್ಬಿಣದ ಉಪಕರಣಗಳು ಕಡಿಮೆ ದೊರಕಿರುವುದರಿಂದ ಕೆಲವು ವಿದ್ವಾಂಸರು ಭೂಮಿಯಲ್ಲಿನ ಕಾಡನ್ನು ಕಡಿದಿರುವ ಸಂಭವ ಕಡಿಮೆ ಎಂದು ಹೇಳುತ್ತಾರೆ. ಮತ್ತು ತಂತ್ರಜ್ಞಾನದ ಬೆಳವಣಿಗೆಗೂ ಸಾಮಾಜಿಕ ಬದಲಾವಣೆಗೂ ಯಾವುದೇ ಸಂಬಂಧವಿಲ್ಲವೆಂದೂ ಅವರು ತೀರ್ಮಾನಿಸುತ್ತಾರೆ.

**ಚಿತ್ರಿತ ಕಂದು ಕುಂಬಾರಿಕೆ, ಕೃಷಿ ಮತ್ತು ಅರ್ಥವ್ಯವಸ್ಥೆ**

ಉತ್ತರ ಪ್ರದೇಶದ ಪಶ್ಚಿಮದ ಭಾಗ ಮತ್ತು ಅದಕ್ಕೆ ಹೊಂದಿಕೊಂಡಿರುವ ಅನೇಕ ಸ್ಥಳಗಳಲ್ಲಿ ಕಬ್ಬಿಣ ಹಂತದ ಸಂಸ್ಕೃತಿಗೆ ಸಂಬಂಧಿಸಿದ ಚಿತ್ರಿತ ಕಂದು ಮಡಕೆಗಳು ಬಹಳ ಸಂಖ್ಯೆಯಲ್ಲಿ ಉತ್ಖನನದ ವೇಳೆ ದೊರಕಿವೆ. ಗಂಗಾ ನದಿ ಬಯಲಿಗೆ ಮೇಲಿನ ಪ್ರದೇಶಗಳಲ್ಲಿ ಇಂತಹ ನಿವೇಶನಗಳು ೭೦೦ ಕ್ಕೂ ಹೆಚ್ಚು ಇರಬಹುದು ಎಂದು ಅಂದಾಜಿಸಲಾಗಿದೆ. ಆದರೆ ಉತ್ಖನನ ಮಾಡಿರುವುದು ಕೆಲವೇ ಭಾಗಗಳಲ್ಲಿ ಮಾತ್ರ. ಇಲ್ಲಿ ದೊರಕಿರುವ ಚಿತ್ರಿತ ಕಂದು ಬಣ್ಣದ ಮಡಕೆಗಳು ಉತ್ತರ ವೇದ ಕಾಲದ ಜನ ಜೀವನಕ್ಕೆ ಸೇರಿದವುಗಳಾಗಿವೆ. ಮಣ್ಣು ಇಟ್ಟಿಗೆ ಅಥವಾ ಮರದ ಕಂಬಗಳ ಸಹಾಯದಿಂದ ಮನೆಗಳನ್ನು ನಿರ್ಮಿಸಿ ಅದರಲ್ಲಿ ವಾಸಿಸುತ್ತಿದ್ದರು. ಈ ನಿವೇಶನಗಳಲ್ಲಿ ಒಲೆಗಳು ಮತ್ತು ಧಾನ್ಯಗಳ ಅವಶೇಷಗಳು ದೊರೆತಿರು ವುದರಿಂದ ಚಿತ್ರಿತ ಕಂದು ಕುಂಬಾರಿಕೆಯ ಜನರು ಕೃಷಿಕರಾಗಿದ್ದು. ಸ್ಥಿರ ಜೀವನ ನಡೆಸುತ್ತಿದ್ದ ರೆಂದು ತಿಳಿಯಬಹುದು. ಈ ಕಾಲದ ಸಾಹಿತ್ಯಗಳು ಪಶು ಸಂಪತ್ತು ಮುಖ್ಯವಾದ ಆಸ್ತಿ ಯೆಂದು ಚಿತ್ರಿಸಿದರೂ ಕೂಡ ಕೃಷಿಯೂ ಈ ಕಾಲದ ಪ್ರಾಮುಖ್ಯವಾದ ಜೀವನೋ ಪಾಯದ ಆಧಾರವಾಗಿತ್ತು. ಜೊತೆಗೆ ಖಾಸಗಿ ಭೂಮಾಲಿಕತ್ವದ ಲಕ್ಷಣಗಳು ನಿಧಾನವಾಗಿ ಬೆಳೆಯಲು ಆರಂಭವಾದವು. *ಶಥಪಥ ಬ್ರಾಹ್ಮಣ* ಸಾಹಿತ್ಯದಲ್ಲಿ ಉಳುಮೆಗೆ ಸಂಬಂಧಿಸಿದ ಸಂಸ್ಕಾರ

ಗಳನ್ನು ವಿವರವಾಗಿ ತಿಳಿಸಿದೆ. ಕೃಷಿ ಭೂಮಿಯನ್ನು ಉಳುವ ಆರು, ಎಂಟು, ಹನ್ನೆರಡು ಅಥವಾ ಇಪ್ಪತ್ನಾಲ್ಕು ಎತ್ತುಗಳನ್ನು ಬಳಸುತ್ತಿದ್ದರು ಎಂದು ದಾಖಲಾಗಿದೆ. ಅಂದರೆ ಕೃಷಿ ಭೂಮಿಯನ್ನು ತುಂಬಾ ಆಳವಾಗಿ ಉಳುತ್ತಿದ್ದರು. ಗಂಗಾ ಬಯಲಿನ ಮೇಲು ಭಾಗದಲ್ಲಿ ಮೆದು ಮಣ್ಣು ಇದ್ದು ಅದನ್ನು ಉಳಲು ಮರದ ನೇಗಿಲನ್ನು ಬಳಸುತ್ತಿದ್ದರು. ಅಥರ್ವವೇದದಲ್ಲಿ ನದಿ ನೀರನ್ನು ಕಾಲುವೆಗೆ ಹರಿದು ಬಿಡುವಾಗ ಮಾಡುತ್ತಿರುವ ಸಂಸ್ಕಾರಗಳ ವಿವರಗಳು ಸಿಗುತ್ತವೆ. ಅಧಿಕ ಮಳೆಯಾದಾಗ ನೆರೆಯಂತಹ ಪ್ರಕೃತಿ ವಿಕೋಪಗಳನ್ನು ಎದುರಿಸಲು ಜನರು ತೆಗೆದುಕೊಳ್ಳುವ ಕ್ರಮಗಳ ಬಗ್ಗೆಯೂ ವಿಶ್ಲೇಷಣೆ ಇವೆ. ಭೂಮಿಯನ್ನು ಉಳಲು ಎತ್ತುಗಳನ್ನು ಹೆಚ್ಚಾಗಿ ಬಳಸುತ್ತಿದ್ದರು. ಬಾರ್ಲಿ ಅಲ್ಲದೆ ಗೋಧಿ (ಗೋದುಮ) ಬೆಳೆಯು ಈ ಕಾಲದಲ್ಲಿ ಪ್ರಾಮುಖ್ಯತೆ ಪಡೆದಿದ್ದು ಪಂಜಾಬ ಮತ್ತು ಉತ್ತರ ಪ್ರದೇಶದಲ್ಲಿ ಮುಖ್ಯ ಆಹಾರವು ಆಗಿದ್ದಿತು. ಭತ್ತದ ಬಗ್ಗೆ ಮೊದಲ ಬಾರಿಗೆ ಈ ಕಾಲದ ಸಾಹಿತ್ಯದಲ್ಲಿ ಉಲ್ಲೇಖವಾಗಿದ್ದರೂ ಗಂಗಾ ನದಿ ಮೇಲು ಭಾಗದಲ್ಲಿ ಅದು ಅಷ್ಟೊಂದು ಮುಖ್ಯ ಬೆಳೆಯಾಗಿರಲಿಲ್ಲ. ಭತ್ತವನ್ನು 'ವ್ರೀಹಿ' ಎಂದು ಈ ಕಾಲದ ಗ್ರಂಥಗಳಲ್ಲಿ ಕರೆಯಲಾಗಿದೆ. ಬೀನ್ಸ್ ಮತ್ತು ಎಳ್ಳು ಬೆಳೆಯು ಅವರಿಗೆ ಪರಿಚಯವಿದ್ದು, ಎಳ್ಳು ಮುಖ್ಯವಾಗಿ ಸಂಸ್ಕಾರ ಕ್ರಿಯೆಗಳಲ್ಲಿ ಪ್ರಶಸ್ತವೆಂದು ಪರಿಗಣಿತವಾಗಿತ್ತು. ಇವೆಲ್ಲವನ್ನು ಗಮನಿಸುವಾಗ ಕೃಷಿ ಮತ್ತು ಹಲವಾರು ಕಸುಬುಗಳು ಉತ್ತರ ವೇದ ಕಾಲದ ಜನರು ಸ್ಥಿರವಾಗಿ ನೆಲೆಗೊಂಡು ನಡೆಸಲು ಅವಕಾಶ ಮಾಡಿಕೊಟ್ಟಿತ್ತು. ಆದರೆ ಸಂಪೂರ್ಣವಾಗಿ ಅಲೆಮಾರಿ ಜೀವನದ ಎಲ್ಲಾ ಲಕ್ಷಣ ಗಳು ಸಂಪೂರ್ಣವಾಗಿ ನಶಿಸಿ ಹೋಗಲಿಲ್ಲ. ಇದು ಹಸ್ತಿನಾಪುರ, ಅತ್ರಾಂಜಿಖೇರ ಇತ್ಯಾದಿ ಸ್ಥಳಗಳಲ್ಲಿ ನಡೆಸಿದ ಉತ್ಖನನದ ವೇಳೆ ದೊರಕಿದ ಪ್ರಾಣಿಗಳ ಮೂಳೆಯ ಮೇಲೆ ಇರುವ ಗುರುತುಗಳಿಂದ ತಿಳಿದುಬರುತ್ತದೆ. ಇದಲ್ಲದೆ ಉತ್ತರ ವೇದ ಸಾಹಿತ್ಯ ಅದರಲ್ಲೂ *ಶಥಪಥ ಬ್ರಾಹ್ಮಣವು* ಹಸುವಿನ ಮಾಂಸದ ಭಕ್ಷಣೆಯ ಪರವಾಗಿ ಯಜ್ಞವಲ್ಕ್ಯನು ನಡೆಸಿದ ವಾಗ್ವಾದವು ಇಂತಹ ಲಕ್ಷಣಗಳಿಗೆ ಆಧಾರವಾಗಿದೆ. ಅಷ್ಟಾಗ್ಯೂ ಕೃಷಿಯ ವೃದ್ಧಿಯಿಂದಾಗಿ ನಿಧಾನವಾಗಿ ಆರಂಭದ ಆರ್ಯರು ಪಾಲಿಸಿದ ಜೀವನ ಕ್ರಮವು ದುರ್ಬಲಗೊಳ್ಳುತ್ತ ಹೋದವು ಎಂಬುದು ಸತ್ಯ ಸಂಗತಿ.

### ಕರಕುಶಲ ಕಸುಬುಗಳು ಮತ್ತು ಕಲೆ

ಅಲೆಮಾರಿ ಜೀವನದಿಂದ ಕೃಷಿ ಸಮಾಜಕ್ಕೆ ಪರಿವರ್ತನೆಗೊಂಡ ವಾತಾವರಣದ ಜೊತೆ ಜೊತೆಗೆ ವಿವಿಧ ಕುಶಲಕಲೆಗಳು ಮತ್ತು ಕಸುಬುಗಳು ಹುಟ್ಟಿಕೊಂಡವು. ಇವೆಲ್ಲವುಗಳ ಬಗ್ಗೆ ಉತ್ತರ ವೇದ ಸಾಹಿತ್ಯದ ಉಲ್ಲೇಖಗಳಿವೆ. ಲೋಹಗಾರರು ಮತ್ತು ಕಮ್ಮಾರರ ಕುರಿತು ದಾಖಲೆಗಳಿರುವುದರಿಂದ ಮೊದಲಿನಿಂದ ಇದ್ದ ತಾಮ್ರ ಲೋಹಗಾರಿಕೆಗೆ ಈಗ ಕಬ್ಬಿಣ ಇನ್ನೊಂದು ರೂಪ ನೀಡಿ ಕಮ್ಮಾರಿಕೆ ಕಸುಬು ಬೆಳೆಯಿತು. ಚಿತ್ರಿತ ಕಂದು ಕಂಬಾರಿಕೆ ನಿವೇಶನಗಳಲ್ಲಿ ಈ ಎರಡೂ ಲೋಹಗಳ ವಸ್ತುಗಳು ಉತ್ಖನನದ ವೇಳೆ ದೊರಕಿವೆ. ಚಮ್ಮಾರಿಕೆ, ಕುಂಬಾರಿಕೆ, ಬಡಗಿ ಕೆಲಸ, ನೇಯ್ಗೆ, ಆಭರಣಗಳ ತಯಾರಿ, ಕಬ್ಬಿಣ ಕೆಲಸ,

ಲೋಹ ಕರಗಿಸುವ ಕುರಿತಾಗಿ ಅನೇಕ ಉಲ್ಲೇಖಗಳು ಉತ್ತರ ವೇದ ಸಾಹಿತ್ಯದಲ್ಲಿ ಕಂಡು ಬರುತ್ತದೆ. ನೇಯ್ಗೆ ಕೆಲಸ ಈ ಕಾಲದಲ್ಲಿ ಅತ್ಯಂತ ಹೆಚ್ಚು ಪ್ರಚಾರವಾಗಿದ್ದು ಬಹುಶಃ ಹೆಂಗಸರಿಗೆ ಮಾತ್ರ ಸೀಮಿತವಾಗಿತ್ತು. ಉತ್ತರ ವೇದ ಕಾಲದ ಜನರಿಗೆ ಕಪ್ಪು-ಕೆಂಪು, ನಯಗೊಳಿಸಿದ ಕಪ್ಪು, ಚಿತ್ರಿತ ಕಂದು ಮತ್ತು ಕೆಂಪು ಹೀಗೆ ನಾಲ್ಕು ಬಗೆಯ ಕುಂಬಾರಿಕೆಗಳ ಬಗ್ಗೆ ಜ್ಞಾನವಿತ್ತು. ಈಗಾಗಲೇ ಹೇಳಿರುವಂತೆ ಕೆಂಪು ಕುಂಬಾರಿಕೆ ಅತ್ಯಂತ ಜನಪ್ರಿಯವಾಗಿದೆ. ಇದನ್ನು ಉತ್ತರ ಪ್ರದೇಶದ ಪಶ್ಚಿಮ ಭಾಗದ ನಿವೇಶನಗಳಲ್ಲಿ ನಡೆಸಿದ ಉತ್ಖನನದ ಅವಶೇಷಗಳು ತಿಳಿಸುತ್ತವೆ. ಆದರೆ ಚಿತ್ರಿತ ಕುಂಬಾರಿಕೆಯು ಉತ್ತರ ವೇದ ಕಾಲದ ವಿಶಿಷ್ಟ ಕುಶಲಕಲೆಯಾಗಿತ್ತು. ಇಂತಹ ಚಿತ್ರಿತ ಕಂದು ಬಣ್ಣದ ಪಾತ್ರೆಗಳನ್ನು ಉನ್ನತ ವರ್ಗದವರು ಕೈಗೊಳ್ಳುವ ಸಂಸ್ಕಾರ ಕ್ರಿಯೆಗಳಲ್ಲೋ ಅಥವಾ ಊಟಕ್ಕಾಗಿಯೋ ಬಳಕೆಯಾಗುತ್ತಿದ್ದಿರಬೇಕು. ಉತ್ಖನನದ ವೇಳೆ ಗಾಜಿನ ವಸ್ತುಗಳು, ಬಳೆಗಳು ದೊರಕಿದ್ದು, ಅವುಗಳು ಕೂಡ ಈ ಚಿತ್ರಿತ ಕಂದು ಕುಂಬಾರಿಕೆ ಸಂಸ್ಕೃತಿ ಕಾಲಕ್ಕೆ ಸೇರಿದವುಗಳೆಂದು ಊಹಿಸಲಾಗಿದೆ. ಈ ಕಾಲದ ಸಾಹಿತ್ಯಕ ಆಕರಗಳು ಅಂದಿನ ಕರಕುಶಲಗಳು ಮತ್ತು ಕಸುಬುಗಳ ಕುರಿತು ಮಾಹಿತಿ ನೀಡಿ, ಬದಲಾದ ಆರ್ಥಿಕ ವಾತಾವರಣ ಜನರ ಬದಲಾದ ಜೀವನ ಕ್ರಮಗಳನ್ನು ದಾಖಲಿಸುತ್ತಾ ಸಮುದ್ರ ಯಾನದ ಕುರಿತು ಮಾಹಿತಿ ನೀಡುತ್ತವೆ. ಇದು ಈ ಕಾಲದಲ್ಲಿ ನಿಧಾನವಾಗಿ ಸಣ್ಣಮಟ್ಟದ ವ್ಯಾಪಾರ ಚಟುವಟಿಕೆಗಳು ಆರಂಭವಾಗಿದ್ದು, ಅದನ್ನು ವೈಶ್ಯ ವರ್ಗ ನಿರ್ವಹಿಸುತ್ತಿತ್ತು ಎಂಬುದನ್ನು ಸೂಚಿಸುತ್ತದೆ. 'ಶಥಪಥ ಬ್ರಾಹ್ಮಣ'ದಲ್ಲಿ ಪ್ರಥಮ ಬಾರಿಗೆ ಬಡ್ಡಿಗಾಗಿ ಹಣ ಬಳಕೆಯನ್ನು ತಿಳಿಸುತ್ತದೆ. 'ಕುಶಿದಿನ್' ಎಂಬ ಪದವು 'ಬಡ್ಡಿಗಾಗಿ ಹಣ ಉಪ ಯೋಗಿಸುವ' ಎಂಬ ಅರ್ಥ ಕಲ್ಪಿಸುತ್ತದೆ. ಹಾಗೇ 'ನಿಷ್ಕ' ನಾಣ್ಯದ ಬಗ್ಗೆ ಮಾಹಿತಿ ನೀಡುತ್ತದೆ. ಇಷ್ಟೆಲ್ಲಾ ಮಾಹಿತಿ ಈ ಕಾಲದ ಸಾಹಿತ್ಯ ನೀಡಿದರೂ ನಾಣ್ಯಗಳ ಚಲಾವಣೆ ಈ ಕಾಲದಲ್ಲಿ ನಡೆದಿದೆ ಎನ್ನುವುದಕ್ಕೆ ಉತ್ಖನನದ ವೇಳೆ ಯಾವುದೇ ನಾಣ್ಯ ದೊರಕಲಿಲ್ಲ.

## ಸಾಮಾಜಿಕ ವ್ಯವಸ್ಥೆ-ವರ್ಣಪದ್ಧತಿ

ಸ್ಥಿರ ಜೀವನ ಮತ್ತು ಉತ್ಪಾದನಾ ಸಮಾಜದ ಉಗಮದ ಜೊತೆಗೆ ವರ್ಗೀಕೃತ ಸಮಾಜವು ಬೆಳೆಯಿತು. ಯಜುರ್ವೇದ ಸಾಹಿತ್ಯದಲ್ಲಿ ಯಾವುದೇ ಸಂದೇಹಗಳಿಗೆ ಎಡೆಕೊಡದಷ್ಟು ಸ್ಪಷ್ಟವಾಗಿ ವರ್ಣವ್ಯವಸ್ಥೆಯ ನಿರ್ಮಾಣ, ಅದರ ಉದ್ದೇಶಗಳೆರಡನ್ನು ವಿವರಿಸಲಾಗಿದೆ. ಆರಂಭದಲ್ಲಿ ಪುರೋಹಿತರಲ್ಲಿ ೧೬ ವರ್ಗಗಳಿದ್ದು, ಅವುಗಳಲ್ಲಿ ಬ್ರಾಹ್ಮಣರು ಸಾಮಾಜಿಕ ಘನತೆ ಮತ್ತು ಸ್ಥಾನಮಾನದ ಆಧಾರದಲ್ಲಿ ಸಮಾಜದ ಮೇಲ್‌ಸ್ತರವನ್ನು ಅಲಂಕರಿಸಿದರು, ಯಾಗ, ಯಜ್ಞ ಮೊದಲಾದ ದೇವೋಪಾಸನಾ ಸಂಸ್ಕಾರ ಕ್ರಿಯೆಗಳನ್ನು ರಾಜನ್ಯರು-ಕ್ಷತ್ರಿಯರ ಪರವಾಗಿ ಬ್ರಾಹ್ಮಣರು ನೆರವೇರಿಸುವುದರಿಂದ ಸಾಮಾಜಿಕ ಮತ್ತು ರಾಜಕೀಯ ಶ್ರೇಷ್ಠತೆ ಯನ್ನು ಪಡೆದರು. ತಮ್ಮ ಆಶ್ರಯದಾತನಿಗೆ ಯುದ್ಧದಲ್ಲಿ ಯಶಸ್ಸು ಸಿಗಲೆಂದು ದೇವರಿಗೆ ಪ್ರಾರ್ಥನೆ, ಪೂಜೆಗಳನ್ನು ಸಲ್ಲಿಸುತ್ತಿದ್ದರು. ಕ್ಷತ್ರಿಯರು ಯೋಧರಾಗಿದ್ದು ರಕ್ಷಣೆ ಮತ್ತು ಪಾಲನೆ ಮಾಡುತ್ತಿದ್ದರು. ರಾಜನನ್ನು ಸಾಮಾನ್ಯವಾಗಿ ಈ ವರ್ಗದಿಂದಲೇ ನೇಮಿಸ

ಲಾಗುತ್ತಿತ್ತು. ವೈಶ್ಯರು ವ್ಯಾಪಾರ, ಕೃಷಿ, ಪಶುಪಾಲನೆ ಮುಂತಾದ ಉತ್ಪಾದನಾ ಕೆಲಸದಲ್ಲಿ ಭಾಗವಹಿಸುತ್ತಾ, ಕುಶಲ ಕೈಗಾರಿಕೆಗಳನ್ನು ನೋಡಿಕೊಳ್ಳುತ್ತಿದ್ದರು. ಇವರು ಒಂದು ಸಂಘಟಿತ ತೆರಿಗೆ ನೀಡುವ ವರ್ಗವೂ ಆಗಿದ್ದು ಆರ್ಥಿಕವಾಗಿ ಬಲಿಷ್ಠವಾಗಿದ್ದರು. ಶೂದ್ರರು ಮೇಲೆ ಹೇಳಿದ ಮೂರು ವರ್ಗಗಳ ಸೇವೆ ಮಾಡುವ ಸೇವಕರಾಗಿಯಷ್ಟೆ ಇದ್ದರು. ಇವರು ಅವರ ಪಶುಗಳನ್ನು ಮೇಯಿಸಬೇಕು, ಅವರ ಮನೆಗಳಲ್ಲೂ, ಹೊಲಗಳಲ್ಲೂ ಚಾಕರಿ ಮಾಡಬೇಕು. ಅದು ಅವರ ಧರ್ಮವೂ ಕೂಡ. ಸಮುದಾಯದ ನಿಯಂತ್ರಣಕ್ಕೆ ಒಳಪಟ್ಟ ಶೂದ್ರ ವರ್ಗದ ವರನ್ನು ಯಾವುದೇ ಮೇಲ್ವರ್ಗವು ಗುಲಾಮರನ್ನಾಗಿ ಅವರ ಮೇಲೆ ಮಾಲಿಕತ್ವವನ್ನು ಹೊಂದಿರಲಿಲ್ಲ.

ಹೀಗೆ ಹುಟ್ಟಿಕೊಂಡ ಜಾತಿ ವ್ಯವಸ್ಥೆಯ ಜೊತೆಗೆ ಸಾಮಾಜಿಕ ಕಟ್ಟು-ಪಾಡುಗಳು ಸೃಷ್ಟಿಯಾದವು. ಒಂದೇ ಗೋತ್ರದ ಸದಸ್ಯರೊಳಗೆ ವೈವಾಹಿಕ ಸಂಬಂಧವನ್ನು ನಿಷೇಧಿಸ ಲಾಯಿತು. ಇದು ಬ್ರಾಹ್ಮಣ ವರ್ಗಕ್ಕೆ ಹೆಚ್ಚು ಅನ್ವಯವಾಗುತ್ತಿದ್ದು ಅವರಲ್ಲಿ ಹಲವು ಗೋತ್ರಗಳು ಅನುಷ್ಠಾನಕ್ಕೆ ಬಂದವು. ಉನ್ನತ ವರ್ಣಕ್ಕೆ ಸೇರಿದ ಗಂಡು ಶೂದ್ರ ವರ್ಗದ ಹೆಂಗಸನ್ನು ಮದುವೆಯಾಗಬಹುದಿತ್ತು. ಆದರೆ ಕೆಳವರ್ಗದ ಗಂಡಸರು ಮೇಲು ವರ್ಗದ ಹೆಣ್ಣುಮಕ್ಕಳನ್ನು ಮದುವೆಯಾಗುವ ಪದ್ಧತಿ ಪ್ರಚಾರದಲ್ಲಿರಲಿಲ್ಲ. ಇದು ಸಾಮಾಜಿಕ ಜೀವನದಲ್ಲಿ ವರ್ಣಭೇದ ನೀತಿಯ ಲಕ್ಷಣವನ್ನು ಹುಟ್ಟು ಹಾಕಿತು. ಸಮಾಜದಲ್ಲಿ ಬ್ರಾಹ್ಮಣ ರಿಗೆ ಮತ್ತು ಕ್ಷತ್ರಿಯರಿಗೆ ಗೌರವದ ಸ್ಥಾನವಿತ್ತು. ಆದರೆ ವೈಶ್ಯರಿಗೆ ಮತ್ತು ಶೂದ್ರರಿಗೆ ಅಂತಹ ಉನ್ನತ ಸ್ಥಾನ ದಕ್ಕಲಿಲ್ಲ.

ಕುಟುಂಬ ಹೆಚ್ಚು ಹೆಚ್ಚು ಪಿತೃಪ್ರಧಾನವಾಗಿ ಸಮಾಜದಲ್ಲಿ ಬದಲಾವಣೆಗೊಂಡು ತಳವೂರುತ್ತಿದ್ದಂತೆ ಗಂಡು ಮಗುವಿನ ಜನನವನ್ನು ವಿಜೃಂಭಣೆಯಿಂದ ಸ್ವಾಗತಿಸಲಾಗುತ್ತಿತ್ತು. ಅದೇ ವಾತಾವರಣ ಹೆಣ್ಣು ಮಗು ಹುಟ್ಟಿದಾಗ ಇರುತ್ತಿರಲಿಲ್ಲ. ಸಾಮಾನ್ಯವಾಗಿ ಹೆಣ್ಣಿನ ಸ್ಥಾನ ಕೆಳಹಂತಕ್ಕಿಳಿಯಿತು.

## ರಾಜಕೀಯ ವ್ಯವಸ್ಥೆ

'ರಾಜತ್ವ'ದ ಪರಿಕಲ್ಪನೆಯು ಮೊದಲಿನ ಅರ್ಥ ಕಳೆದುಕೊಂಡಿತು. ಉತ್ತರ ವೇದ ಕಾಲದಲ್ಲಿ ರಾಜನು ಅಲೆಮಾರಿ ಕುಟುಂಬದವರನ್ನು ಆಳುತ್ತಿರಲಿಲ್ಲ. ಬದಲಾಗಿ ಅವನು ಒಂದು ನಿರ್ದಿಷ್ಟ ಪ್ರದೇಶ (ರಾಷ್ಟ್ರ)ದ ಪ್ರಭುವಾಗಿ ಪರಿವರ್ತನೆಗೊಂಡನು. ವಿಶಾಲ ರಾಜ್ಯಗಳ ಉಗಮದಿಂದಾಗಿ ರಾಜನ ಅಧಿಕಾರವು ಹೆಚ್ಚಿತು. ಅಲೆಮಾರಿ ಕುಲದ ಮೇಲಿನ ಅವನ ಅಧಿಕಾರವು ಪ್ರಾದೇಶಿಕ ಅಧಿಕಾರವಾಗಿ ಮಾರ್ಪಡುತ್ತ ಹೋಯಿತು. ಅವನು ಈಗ ಕೇವಲ ಒಂದು ಕುಲದ ಮುಖ್ಯಸ್ಥನಾಗಿರುವುದಿಲ್ಲ. ಬದಲಾಗಿ ಅನೇಕ ಬಣಗಳು ಅಥವಾ ಕುಲಗಳು ನೆಲೆ ನಿಂತಿರುವ ಒಂದು ನಿರ್ದಿಷ್ಟ ಪ್ರದೇಶದಲ್ಲಿ ತನ್ನ ಅಧಿಪತ್ಯವನ್ನು ಸ್ಥಾಪಿಸುತ್ತಾನೆ. ವೇದಕಾಲದ ಸಾಹಿತ್ಯದಲ್ಲಿ ಇಂತಹ ಕುಲಗಳು ಉಲ್ಲೇಖವಾಗಿವೆ. ಕುರು, ಪಾಂಚಾಲ, ಮದ್ರ, ಮತ್ಸ್ಯ, ಭರತ ಮುಂತಾದ ಕುಲಗಳ ಹೆಸರೇ ನಂತರ ಸ್ಥಾಪನೆಗೊಂಡ ರಾಜ್ಯಗಳ

ಹೆಸರುಗಳಾಗುತ್ತವೆ. ಇವೆಲ್ಲ ಪಂಜಾಬ್, ದೆಹಲಿ, ಹರಿಯಾಣ ಪ್ರಾಂತಗಳಿಗೆ ಸೇರಿದವು. ಈ ಕುಲಗಳ ಕೆಲವು ರಾಜರು ಕುಲಗಳೊಂದಿಗೆ ಸಂಬಂಧಗಳನ್ನು ಸ್ವಲ್ಪಮಟ್ಟಿಗೆ ಸಡಿಲಿಸಿ ಕೊಂಡು ಸಾರ್ವಭೌಮತ್ವವನ್ನು ಪ್ರಕಟಿಸುವ ಯತ್ನವಾಗಿ ನಿಜವಾದ ರಾಜರುಗಳಾದರು. ಅಂದರೆ ಪಾಂಚಾಲ ಹಿಂದೆ ಒಂದು ಕುಲದ ಹೆಸರಾಗಿದ್ದು ಅದು ಒಂದು ಪ್ರದೇಶದ ಹೆಸರಾಗಿ ಆ ಪ್ರದೇಶದಲ್ಲಿ ಒಬ್ಬ ರಾಜನು ತನ್ನ ಪ್ರಭುತ್ವವನ್ನು ಸ್ಥಾಪಿಸಿದನು. ದೆಹಲಿ, ಮೀರತ್ ಮತ್ತು ಮಥುರದಲ್ಲಿ 'ಕುರು' ಕುಲದವರು ಹಸ್ತಿನಾಪುರದಿಂದ ಆಳತೊಡಗಿದರು. ಈ ಪ್ರದೇಶದಲ್ಲಿ ನಡೆಸಿದ ಉತ್ಖನನದ ಅವಶೇಷಗಳು ಕ್ರಿ.ಪೂ. ೧೦೦೦-೭೦೦ ರ ಕಾಲಕ್ಕೆ ಸೇರಿದ್ದು ಎಂದು ತೀರ್ಮಾನಿಸಲಾಗಿದೆ. ಕುರು ಸಮುದಾಯದವರು ಸುಮಾರು ಕ್ರಿ.ಪೂ. ೯೫೦ ರಲ್ಲಿ ಪಾಂಡವರೊಂದಿಗೆ ದೆಹಲಿಯ ಕುರುಕ್ಷೇತ್ರದಲ್ಲಿ ಯುದ್ಧ ಮಾಡಿದರೆಂದು 'ಮಹಾಭಾರತ' ಸಾಹಿತ್ಯದಲ್ಲಿ ಹೇಳಿದೆ. ಗಂಗಾ-ಯಮುನಾ ಬಯಲು ಪ್ರದೇಶದಲ್ಲಿ ಕೋಸಲ ರಾಜ್ಯ ಹುಟ್ಟಿತು. ಕೋಸಲದ ಉತ್ತರಕ್ಕೆ ಇರುವ ಬನಾರಸ್ ಪ್ರದೇಶದಲ್ಲಿ 'ಕಾಶಿ' ರಾಜ್ಯ ಸ್ಥಾಪನೆಯಾಯಿತು. ಇನ್ನೊಂದು ರಾಜ್ಯ 'ವಿದೇಹ'. ಜನಕ ಈ ರಾಜ್ಯದ ಪ್ರಭು. ಗಂಗಾ ನದಿ ಬಯಲಿನ ದಕ್ಷಿಣದಲ್ಲಿ ಮಗಧ ರಾಜ್ಯವು ಹುಟ್ಟಿಕೊಂಡಿತು.

ಪ್ರಾದೇಶಿಕ ಏಕಾಧಿಪತ್ಯದ ಬಲವು ವೃದ್ಧಿಯಾಗಿರುವುದು, ಆಗ ಆರಂಭವಾದ ತೆರಿಗೆ ಸಂಗ್ರಹದಿಂದ. ಸ್ಥಿರ ಜೀವನ ಮತ್ತು ಕೃಷಿ ಉತ್ಪಾದನಾ ಸಮಾಜದ ಭದ್ರತೆಯಿಂದ ಉತ್ಪಾದನಾ ಮಟ್ಟ ದ್ವಿಗುಣಗೊಂಡು ಹೆಚ್ಚುವರಿ ಸಂಪತ್ತು ಸಂಗ್ರಹವಾಯಿತು. ಈ ಹೆಚ್ಚುವರಿ ಉತ್ಪಾದನೆಯನ್ನು ರಾಜನಿಗೆ ತೆರಿಗೆ ರೂಪದಲ್ಲಿ ನೀಡಲಾಗುತ್ತಿತ್ತು. ಹೆಚ್ಚಾಗಿ ಧಾನ್ಯಗಳು ಮತ್ತು ಪಶುಗಳ ರೂಪದಲ್ಲಿ ನೀಡಲಾಗುತ್ತಿತ್ತು. *ಶಥಪಥ ಬ್ರಾಹ್ಮಣ*ದಲ್ಲಿ ರಾಜನನ್ನು 'ಭಕ್ಷಕ' ಎಂದು ಕರೆಯಲಾಗಿದ್ದು ಜನರು ಅವನಿಗೆ ನೀಡುವ ಸಂಪತ್ತಿನ ಆಧಾರದಲ್ಲಿ ಜೀವಿಸುವವ ಎಂಬರ್ಥ ಬರುತ್ತದೆ.

ಈ ರೀತಿಯಾಗಿ ರಾಜನು ಸಂಪಾದಿಸಿದ ಸಂಪತ್ತನ್ನು ಉಪಯೋಗಿಸಿಕೊಂಡು ಸುಸೂತ್ರ ವಾಗಿ ಆಡಳಿತ ನಡೆಸಲು ಅಧಿಕಾರಿಗಳ ನೇಮಕ ಮಾಡುವ ಪ್ರಕ್ರಿಯೆಗೆ ಚಾಲನೆ ನೀಡುತ್ತಾನೆ. ಸಾಹಿತ್ಯಗಳಲ್ಲಿ ೧೨ 'ರತ್ನಿನ್ಸ್'ಗಳ ಉಲ್ಲೇಖವಿದ್ದು ಅವರುಗಳು ಅಧಿಕಾರಿ ವರ್ಗ ಇರ ಬಹುದು. ರಾಜನಿಗೆ ಆಡಳಿತದಲ್ಲಿ ಪುರೋಹಿತ, ದಂಡನಾಯಕ, ಪಟ್ಟದ ರಾಣಿ ಮತ್ತು ಇತರ ಕೆಲವು ಉನ್ನತಾಧಿಕಾರಿಗಳು ಸಹಕರಿಸುತ್ತಿದ್ದರು. ಕೆಳ ಹಂತದಲ್ಲಿ ಪ್ರಮುಖ ಕುಲಗಳ ಮುಖಂಡರ ನಿಯಂತ್ರಣದಲ್ಲಿ ಗ್ರಾಮ ಸಭೆಗಳು ಆಡಳಿತ ನಡೆಸಲಾಗುತ್ತಿತ್ತು.

ಉತ್ತರ ವೇದ ಸಾಹಿತ್ಯದಲ್ಲಿ ರಾಜನನ್ನು ಆಯ್ಕೆ ಮಾಡುವ ಪದ್ಧತಿ ರೂಡಿಯಲ್ಲಿತ್ತು ಎಂಬ ಸೂಚನೆಗಳು ಇವೆ. ರಾಜನ ಆಯ್ಕೆ ಅವನ ಶರೀರ ಬಲ, ಮತ್ತು ಇತರ ಗುಣಗಳನ್ನು ಆಧರಿಸಿ ನಿರ್ಧರಿಸಲಾಗುತ್ತಿತ್ತು. ಯಜ್ಞ, ಯಾಗ ಮತ್ತು ಸಂಬಂಧಿಸಿದ ಸಂಸ್ಕಾರಗಳನ್ನು ಮಾಡಿ ರಾಜನು ತನ್ನ ಪ್ರಭಾವದ ಬಲವನ್ನು ಸಮರ್ಥಿಸಿಕೊಳ್ಳುತ್ತಿದ್ದನು. ಸಾರ್ವಭೌಮತ್ವ ವನ್ನು ಸ್ಥಾಪಿಸಲು ರಾಜನು ಕೈಗೊಳ್ಳುವ 'ರಾಜಸೂಯಯಾಗ' ಇದಕ್ಕೆ ಮುಖ್ಯ ಉದಾಹರಣೆ.

'ಅಶ್ವಮೇಧಯಾಗ'ವನ್ನು ಮಾಡುವುದರಿಂದ ಅನೇಕ ರಾಜ್ಯಗಳ ವಿರುದ್ಧ ಜಯ ಸಾಧಿಸಿ ಆ ಪ್ರದೇಶಗಳ ಮೇಲೆ ತನ್ನ ನಿಯಂತ್ರಣವನ್ನು ರಾಜ ಹೊಂದುತ್ತಿದ್ದನು. 'ವಾಜಪೇಯ'ದಲ್ಲಿ ರಾಜನ ರಥ ತನ್ನ ಸಂಬಂಧಿಕರ ರಥಗಳೊಂದಿಗೆ ಓಟದಲ್ಲಿ ಸ್ಪರ್ಧಿಸಬೇಕಾಗುತ್ತಿತ್ತು. ರಾಜನು ಮಾಡುವ ಈ ಸಂಸ್ಕಾರಗಳೆಲ್ಲವೂ ತನ್ನ ಪ್ರತಿಷ್ಠೆ, ಪ್ರತಾಪ ಮತ್ತು ಅಧಿಕಾರದ ಸಾರ್ವಭೌಮತ್ವವನ್ನು ಸಾಮಾನ್ಯ ಜನರಿಗೆ ತೋರ್ಪಡಿಸುವ ವಿಧಿ-ವಿಧಾನಗಳು.

## ದೇವತೆಗಳು ಮತ್ತು ಸಂಸ್ಕಾರಗಳು

ದೇವತಾ ಸಮೂಹದಲ್ಲಿ ಸೃಷ್ಟಿಕರ್ತನಾದ ಪ್ರಜಾಪತಿಯು ಅತ್ಯುಚ್ಚ ಸ್ಥಾನವನ್ನು ಪಡೆಯುತ್ತಾನೆ. ಋಗ್ವೇದ ಕಾಲದಲ್ಲಿ ಹೆಗ್ಗಳಿಕೆ ಗಳಿಸಿದ್ದ ದೇವತೆಗಳಾದ ಇಂದ್ರ ಮತ್ತು ಅಗ್ನಿ ತಮ್ಮ ಸ್ಥಾನಗಳನ್ನು ಕಳೆದುಕೊಂಡವು. ಆದರೆ ಆ ಕಾಲದ ಕೆಲವು ಸಣ್ಣ ದೇವತೆಗಳನ್ನು ಪೂಜಿಸಲಾಗುತ್ತಿತ್ತು. ಪಶುಪತಿಯಾದ ರುದ್ರನೂ ಮತ್ತು ವಿಷ್ಣುವೂ ಪ್ರಾಧಾನ್ಯತೆ ಗಳಿಸಿದರು. ವೇದಗಳ ನಂತರದ ಕಾಲದಲ್ಲಿ ಜನರು ನಿರ್ದಿಷ್ಟ ಪ್ರದೇಶದಲ್ಲಿ ಸ್ಥಿರ ಜೀವನ ನಡೆಸಲು ಆರಂಭಿಸಿರುವುದರಿಂದ ಕೆಲವು ವಸ್ತುಗಳನ್ನು ದೈವತ್ವದ ಸಂಕೇತಗಳೆಂದು ಭಾವಿಸಿ ಪೂಜಿಸುವ ಪ್ರವೃತ್ತಿಯು ಆರಂಭವಾಗುತ್ತದೆ. ಜೊತೆಗೆ ವಿಗ್ರಹಾರಾಧನೆಯೂ ಹೊಸದಾಗಿ ಪ್ರಚಾರವಾಗುತ್ತದೆ. ಈ ಸಮಯಕ್ಕೆ ಸಮಾಜವು ವರ್ಣವ್ಯವಸ್ಥೆಯ ಆಧಾರದ ಮೇಲೆ ರಚನೆಯಾಗಿರುವುದರಿಂದ ಬೇರೆ ಬೇರೆ ವರ್ಗಗಳಿಗೆ ಸೇರಿದವು. ತಮ್ಮ ತಮ್ಮದೇ ದೇವತೆಗಳನ್ನು ಅವರದ್ದೇ ಆದ ಆಚರಣೆಗಳೊಂದಿಗೆ ಪೂಜಿಸತೊಡಗಿದರು. 'ಪೂಷನ್' ಎಂಬ ಪಶುಗಳ ಪಾಲನೆಯ ದೇವತೆಯು ಕೇವಲ ಶೂದ್ರರಿಗೆ ಸೀಮಿತವಾಗುತ್ತದೆ. ಇಂತಹ ಬದಲಾವಣೆಗಳು ಎಲ್ಲಾ ವರ್ಣದ ಜನರು ದೇವರಿಗೆ ಪೂಜೆ ಪುರಸ್ಕಾರ ನಡೆಸುವ ಮುಖ್ಯ ಉದ್ದೇಶ ಲೌಕಿಕ ಇಚ್ಛೆಗಳೇ. ಆದರೆ ಯಜ್ಞ-ಯಾಗಗಳು ಎರಡು ರೂಪವನ್ನು ತಾಳುತ್ತವೆ. ಸಾರ್ವಜನಿಕ ಮತ್ತು ಗೃಹ್ಯ. ಸಾರ್ವಜನಿಕ ಯಜ್ಞ-ಯಾಗಗಳಲ್ಲಿ ರಾಜ ಮತ್ತು ಇಡೀ ಸಮುದಾಯವೇ ಭಾಗವಹಿಸುತ್ತದೆ. ಆದರೆ ಗೃಹ್ಯ ಯಜ್ಞಗಳು ಪ್ರತಿ ಕುಟುಂಬದೊಳಗೆ ತಮ್ಮ ತಮ್ಮ ಗೃಹಗಳಲ್ಲಿ ಆಚರಿಸಲಾಗುತ್ತಿತ್ತು. ಇಂತಹ ಯಜ್ಞ ಮತ್ತು ಯಾಗಗಳ ಸಂದರ್ಭದಲ್ಲಿ ಬೃಹತ್ ಪ್ರಮಾಣದಲ್ಲಿ ಪ್ರಾಣಿ ಬಲಿ, ಅದರಲ್ಲೂ ಪಶು ಸಂಪತ್ತು ನಾಶವಾಗುತ್ತಿತ್ತು. ಇಂತಹ ಸಮಯದಲ್ಲಿ ಆಗಮಿಸುವ ಅತಿಥಿಗಳಿಗೆ ಬಲಿಕೊಟ್ಟ ಪಶುಗಳ ಮಾಂಸದ ಊಟವನ್ನು ಬಡಿಸಲಾಗುತ್ತಿತ್ತು. 'ಗೋಘ್ನಾ' ಎಂದರೆ ಗೋವಿನ ಊಟ ಸ್ವೀಕರಿಸುವವ ಎಂದರ್ಥ.

ಸಾಮಾನ್ಯವಾಗಿ ಯಜ್ಞ-ಯಾಗಗಳು ಆಚರಣೆ ಮತ್ತು ಆ ಸಂದರ್ಭದಲ್ಲಿ ಮಂತ್ರ, ಸ್ತೋತ್ರಗಳನ್ನು ಪಠಿಸುವವರು ಬ್ರಾಹ್ಮಣರು. ಪೌರೋಹಿತ್ಯದಲ್ಲಿ ಏಕಸ್ವಾಮ್ಯತ್ವವನ್ನು ಸಾಧಿಸಿದ ಬ್ರಾಹ್ಮಣರು ಅನೇಕ ಬಗೆಯ ದಾನ-ದಕ್ಷಿಣೆ ಪಡೆಯಲು ಅರ್ಹರು. ಹೆಚ್ಚಾಗಿ ಪಶುಗಳನ್ನು ದಾನ ನೀಡಲಾಗುತ್ತಿತ್ತು. ಜೊತೆಗೆ ಯಜ್ಞಗಳ ಸಂದರ್ಭದಲ್ಲಿ ಚಿನ್ನ, ವಸ್ತ್ರ, ಕುದುರೆಗಳನ್ನು ದಕ್ಷಿಣೆಯಾಗಿ ಪುರೋಹಿತರಿಗೆ ನೀಡುವ ಪದ್ಧತಿ ಹೆಚ್ಚು ಹೆಚ್ಚು ಬೆಳೆಯಿತು.

ಉದಾಹರಣೆಗೆ ರಾಜಸೂಯಯಾಗದ ಪ್ರಮುಖ ಪುರೋಹಿತನಿಗೆ ೨,೪೦,೦೦೦ ದಷ್ಟು ಪಶುಗಳನ್ನು ದಕ್ಷಿಣೆಯಾಗಿ ನೀಡುತ್ತಿದ್ದರು ಎಂದು ಹೇಳಲಾಗಿದೆ.

ಇವೆಲ್ಲವೂಗಳಿಗೆ ಕ್ರಿ.ಪೂ. ೬೦೦ ರ ಸಮಯದಲ್ಲಿ ಅಂದರೆ ಉತ್ತರ ವೇದ ಕಾಲದ ಅಂತ್ಯಕ್ಕೆ ಪಾಂಚಾಲ, ವಿದೇಹ ಪ್ರದೇಶಗಳಲ್ಲಿ ಹೊಸ ಮತ-ಪಂಥಗಳು, ಆಲೋಚನೆಗಳು ಬಲವಾದ ಪ್ರತಿರೋಧವನ್ನು ವ್ಯಕ್ತಪಡಿಸಿದವು. ಮುಖ್ಯವಾಗಿ ಬೌದ್ಧ ಮತ್ತು ಜೈನ ಧರ್ಮದ ಮೂಲಕ ಹೊಸ ಬೋಧನೆಗಳು ಆರಂಭವಾಗಿ ಪೌರೋಹಿತ್ಯದ ಪ್ರಾಬಲ್ಯ ಸಂಸ್ಕಾರ- ಕ್ರಿಯೆಗಳನ್ನು ಪ್ರಶ್ನಿಸತೊಡಗಿದವು. ಹೊಸ ಸಾಮಾಜಿಕ ವಾತಾವರಣವನ್ನು ಸೃಷ್ಟಿಸಿ ಸರಿಯಾದ ನಂಬಿಕೆ ಹಾಗೂ ತಿಳುವಳಿಕೆಗಳ ಮಹತ್ವವನ್ನು ಎತ್ತಿಹಿಡಿದವು.

# ೨.೩ ಜೈನ ಮತ್ತು ಬೌದ್ಧ ಧರ್ಮ

## ಹಿನ್ನೆಲೆ

ಪ್ರಪಂಚದ ಇತಿಹಾಸದಲ್ಲಿ ಕ್ರಿ.ಪೂ. ೬ನೆ ಶತಮಾನವನ್ನು ಬಹು ಮಹತ್ವಪೂರ್ಣವಾದ ಕಾಲವೆಂದು ಪರಿಗಣಿಸಲಾಗಿದೆ. ಏಕೆಂದರೆ ಆ ಕಾಲದಲ್ಲಿ ವಿಚಾರಶಕ್ತಿ, ಆಧ್ಯಾತ್ಮ ಹಾಗೂ ಧಾರ್ಮಿಕ ವಲಯದಲ್ಲಿ ಒಂದು ಮಹತ್ತರ ಆಂದೋಲನವೇ ನಡೆಯಿತು. ವಿವಿಧ ಕ್ಷೇತ್ರಗಳಲ್ಲಿ ಕ್ರಾಂತಿಕಾರಕ ಸುಧಾರಣೆಗಳಾದವು. ಜನರ ವಿಚಾರ ಪ್ರಜ್ಞೆಯಲ್ಲಿ ಹೊಸತೊಂದು ಚೇತನ ಮೂಡಿತು. ಅನೇಕ ಪಂಗಡಗಳು, ಧರ್ಮ ಮತ್ತು ಮೋಕ್ಷದ ಬಗೆಗೆ ತಮ್ಮದೇ ಆದ ತತ್ವಗಳನ್ನು ಮತ್ತು ನಿಲುವುಗಳನ್ನು ರೂಪಿಸಿಕೊಂಡು ತಲೆ ಎತ್ತಿದವು. ಅನೇಕ ತತ್ವದರ್ಶಿಗಳು, ಆಧ್ಯಾತ್ಮವಾದಿಗಳು, ಧರ್ಮಬೋಧಕರು ಮತ್ತು ಸಮಾಜ ಸುಧಾರಕರು ಪ್ರಪಂಚದ ವಿವಿಧ ಭಾಗಗಳಲ್ಲಿ ಏಳಿಗೆಗೆ ಬಂದರು. ಇದೇ ಸಮಯದಲ್ಲಿ ಭಾರತದ ಈಶಾನ್ಯ ಭಾಗಗಳಲ್ಲಿ ಅಂದರೆ ಗಂಗಾ ಬಯಲಿನ ಮಧ್ಯ ಭಾಗದಲ್ಲಿ ಹುಟ್ಟಿಕೊಂಡ ೬೨ ಹೊಸ ಮತ ಪಂಥಗಳಲ್ಲಿ ಜೈನ ಮತ್ತು ಬೌದ್ಧ ಮತ ಪಂಥಗಳು ಬಹಳ ಮುಖ್ಯವಾದವುಗಳು. ಈ ಭಾಗದ ನಾನಾ ಜನರ ಪ್ರಾದೇಶಿಕ ಆಚರಣೆಗಳು ಹಾಗೂ ಸಂಸ್ಕಾರಗಳ ಆಧಾರದ ಮೇಲೆ ಉಗಮವಾದ ಈ ಎರಡೂ ಧರ್ಮಗಳು ಕ್ರಮೇಣ ಶಕ್ತಿಶಾಲಿ ಮತಧರ್ಮೀಯ ಸುಧಾರಣ ಚಳವಳಿಗಳಾಗಿ ರೂಪುಗೊಂಡವು.

ಕ್ರಿ.ಪೂ. ೬೦೦ ರ ನಂತರ ಆದ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಗೆ ಮೂಲ ಕಾರಣ ಈಶಾನ್ಯ ಭಾರತದಲ್ಲಿ ರೂಪುಗೊಂಡ ಹೊಸ ಕೃಷಿ ಆಧಾರಿತ ಅರ್ಥವ್ಯವಸ್ಥೆ. ಕ್ರಿ.ಪೂ. ೬೦೦ ರಿಂದ ೫೦೦ ರ ನಡುವೆ ಗಂಗಾ ನದಿ ಬಯಲು ಪ್ರದೇಶ, ಬಿಹಾರ ಮತ್ತು ಉತ್ತರ ಪ್ರದೇಶದ ಪೂರ್ವ ಭಾಗದಲ್ಲಿ ಬೆಂಕಿ ಹಾಗೂ ಕಬ್ಬಿಣದ ಸಾಧನಗಳನ್ನು ಉಪಯೋಗಿಸಿ ಕಾಡುಗಳನ್ನು ನಾಶ ಮಾಡಿ ಆ ಭಾಗವನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಯಿತು. ಹೊಸದಾಗಿ ವಿಸ್ತರಿಸಿದ ಪ್ರಾಂತದಲ್ಲಿ ಕಾಡುಗಳನ್ನು ಹೇಗೆ ಸವರಿ ಕೃಷಿ ಯೋಗ್ಯವಾಗಿಸಿದರು ಎಂಬುದನ್ನು ಯಜುರ್ವೇದ ಸಂಬಂಧಿ ಸಾಹಿತ್ಯದಲ್ಲಿ ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಕಾಡುಗಳನ್ನು ಸುಡುವುದು. ಮಂತ್ರ ಸಾಹಿತ್ಯದಲ್ಲಿ ಇದು ಕಾಡುಗಳನ್ನು ಅಗ್ನಿಗೆ ಅರ್ಪಿಸುವುದು ಎಂದೋ, ಅಗ್ನಿಯು ಕಾಡನ್ನು ಭಕ್ಷಿಸಿದನು ಎಂದೋ ವರ್ಣಿಸಲಾಗಿದೆ. ಈ ಕಾಲಕ್ಕೆ ಸೇರಿದ ಎಲ್ಲಾ ಜೈನ ಮತ್ತು ಬೌದ್ಧ ಗ್ರಂಥಗಳು ಗಂಗಾ-ಯಮುನಾ ನದಿ ಬಯಲಿನ ಕೆಳಭಾಗಕ್ಕೆ ಜನ ವಸತಿಗಳ ವಿಸ್ತರಣೆಯನ್ನು ಕುರಿತು ದಾಖಲಿಸಿವೆ. ಈ ಸಾಹಿತ್ಯ ಆಕರಗಳಲ್ಲಿ ಲಭ್ಯವಿರುವ ಮಾಹಿತಿಗಳನ್ನು ಪ್ರಾಚ್ಯಶಾಸ್ತ್ರಜ್ಞರು ಈ ಎಲ್ಲಾ ಪ್ರದೇಶಗಳಲ್ಲಿ ನಡೆಸಿದ ಉತ್ಖನನದ ಅವಶೇಷಗಳ ಮೂಲಕ ಸಮರ್ಥಿಸಿದ್ದಾರೆ. ಅಹಿಚ್ಛತ್ರ, ಹಸ್ತಿನಾಪುರ, ಕೌಸಾಂಬಿ, ಉಜ್ಜಯಿನಿ, ಶ್ರಾವಸ್ತಿ, ವೈಶಾಲಿ ಮತ್ತು ಇನ್ನಿತರ ಸ್ಥಳಗಳಲ್ಲಿ ಉತ್ಖನನದ ವೇಳೆ ಅನೇಕ ವಾಸಸ್ಥಳದ ನಿವೇಶನಗಳು, ಕಟ್ಟಡಗಳ ರಚನೆಗಳು ಮತ್ತು ಪಟ್ಟಣಗಳು ಬೆಳೆದಿರುವ ಮಾಹಿತಿಗಳು

ದೊರೆತಿವೆ. ಇವೆಲ್ಲವು ಕ್ರಿ.ಪೂ. ೬೦೦ ಮತ್ತು ೪೦೦ ರ ನಡುವಿನ ಕಾಲಕ್ಕೆ ಸೇರಿದ್ದವೆಂದು ತಿಳಿಯಲು ಇಲ್ಲಿ ಅನೇಕ ಕುಂಬಾರಿಕೆಯ ವಸ್ತುಗಳು, ಉತ್ತರದ ಕಪ್ಪು ಬಣ್ಣದ ನಯವಾದ ಮಡಕೆ ಮತ್ತು ಪಾತ್ರೆಗಳು ದೊರೆತಿವೆ. ಪ್ರಾಚ್ಯ ವಸ್ತುಗಳು ಮತ್ತು ಸಾಹಿತ್ಯಕ ಆಕರಗಳು ಮುಖ್ಯವಾಗಿ ಗಂಗಾ ನದಿ ಬಯಲಿನ ಮಧ್ಯಭಾಗದಲ್ಲಿ, ಬಿಹಾರ ಮತ್ತು ಉತ್ತರ ಪ್ರದೇಶದ ಪೂರ್ವಭಾಗಗಳಲ್ಲಿ ಕ್ರಿ.ಪೂ. ೬೦೦-೪೦೦ ರ ನಡುವೆ ಆದ ಸಾಮಾಜಿಕ ಹಾಗೂ ಆರ್ಥಿಕ ಪರಿವರ್ತನೆಯಿಂದ ಹೊಸ ಕೃಷಿ ಪ್ರಧಾನ ಅರ್ಥವ್ಯವಸ್ಥೆ ಉಗಮವಾಗಿರುವುದರ ಬಗ್ಗೆ ಸ್ಪಷ್ಟ ಚಿತ್ರಣವನ್ನು ನೀಡುತ್ತವೆ.

**ಹೆಚ್ಚಿನ ವಿಷಯ**

[ಈ ಕಾಲದ ಸಾಹಿತ್ಯಗಳಲ್ಲಿ ನಾಲ್ಕು ಪ್ರಸಿದ್ಧ ಅರಣ್ಯಗಳು ಉಲ್ಲೇಖವಾಗಿವೆ. ಅವುಗಳನ್ನು 'ಮಹಾ-ಅರಣ್ಯಗಳು' ಎಂದು ಕರೆಯಲಾಗಿದ್ದು ಗಂಗಾ-ಯಮುನಾ ಬಯಲು ಪ್ರದೇಶಗಳಲ್ಲಿ ಅವುಗಳನ್ನು ಗುರುತಿಸಲಾಗಿದೆ. ಉದಾಹರಣೆಗೆ, 'ಅರ್ರಾ' ಎಂಬುದು ಪ್ರಾಚೀನ ಅರಣ್ಯ (ಕಾಡು) ಎಂಬ ಶಬ್ದದಿಂದ ಬಂದಿರುವುದು. 'ಸರಾನ್' ಎಂಬುದು 'ನೈಮಿಶಾರಣ್ಯ' ಮತ್ತು 'ಚಂಪಾರನ್' ಎಂಬುದು ಚಂಪಾರಣ್ಯ ಎಂಬ ಪದಗಳಿಂದ ಬಂದಿರುವುದು. ಹಾಗೇಯೇ ಅನೇಕ ನಗರಗಳು ಬೌದ್ಧ ಧರ್ಮ ಕಾಲಕ್ಕೆ ಸೇರಿದವುಗಳು ಬೆಳಕಿಗೆ ಬಂದಿವೆ. ಅವುಗಳನ್ನು ಸಸ್ಯ ಸಂಪತ್ತಿನ ಹೆಸರುಗಳಿಂದ ಗುರುತಿಸುತ್ತಿದ್ದರು. ಇಂತಹ ನಗರಗಳ ಉಗಮಕ್ಕೆ ಅಲಹಾಬಾದಿನ ಬಳಿಯ ಕೌಶಾಂಬಿ, ಉತ್ತರ ಪ್ರದೇಶದ ದಿಯೋರಿಯಾ ಜಿಲ್ಲೆಯಲ್ಲಿರುವ ಕುಶೀನಗರ, ವಾರಣಾಸಿ, ಬಿಹಾರದಲ್ಲಿರುವ ವೈಶಾಲಿ, ಚಿರಾಂಡ್ ಮತ್ತು ರಾಜಗೃಹಗಳು ಉತ್ತಮ ಉದಾಹರಣೆಗಳು. ಜನವಸತಿ ಹರಡುವಿಕೆ, ನಗರಗಳ ಉಗಮ ಮತ್ತು ಕೃಷಿ ಉತ್ಪಾದನೆ ಗಂಗಾ-ಯಮುನಾ ಬಯಲಿನ ದಟ್ಟಾರಣ್ಯದ ಪ್ರದೇಶಗಳಲ್ಲಿ ಸಾಧ್ಯವಾಗಲು, ಮುಖ್ಯವಾಗಿ ಬೃಹತ್ ಪ್ರಮಾಣದ ಕಬ್ಬಿಣದ ಆಯುಧಗಳನ್ನು ಬಳಸಿ ಕಾಡುಗಳನ್ನು ನಾಶ ಮಾಡಿರುವುದು. ಇಂತಹ ಉಪಕರಣಗಳು ಹೊಸದಾಗಿ ಪರಿವರ್ತಿಸಲಾದ ಕೃಷಿ ಭೂಮಿಯನ್ನು ಉತ್ತು ಬೇಸಾಯ ಮಾಡಲು ಸಹಕಾರಿ ಯಾದವು. ಇದು ಆಶ್ಚರ್ಯಪಡುವ ಸಂಗತಿ ಏನೂ ಅಲ್ಲ. ಏಕೆಂದರೆ ಈ ಸ್ಥಳಗಳಲ್ಲಿ ನಡೆಸಿದ ಅನೇಕ ಉತ್ಖನನದ ಅವಶೇಷಗಳು ಇದನ್ನು ಶ್ರುತಪಡಿಸುತ್ತವೆ. ರೋಪಾರ್, ಜಖೇರ, ಕೌಶಾಂಬಿ, ರಘುವಾಸೊಯಿ, ವೈಶಾಲಿ ಮತ್ತು ಬನಾರಸ್‌ನಲ್ಲಿ ದೊರೆತ ಅವಶೇಷಗಳಲ್ಲಿ ಕೈಕೊಡಲಿ, ಪಿಕಾಸು ಹಾಗೂ ಮಚ್ಚಿನಂತಹ ಆಯುಧಗಳು ಸಾಕಷ್ಟು ದೊರೆತಿವೆ. ನೇಗಿಲಿನಂತಹ ಆಯುಧಗಳು ಕಡಿಮೆ ಪ್ರಮಾಣದಲ್ಲಿ ದೊರೆತರೂ ಕೂಡ, ಗಂಗಾ-ಯಮುನಾ ಬಯಲು ಪ್ರದೇಶದಲ್ಲಿ ಭೂಮಿಯನ್ನು ಕೃಷಿಗೆ ಅಳವಡಿಸಿಕೊಳ್ಳುವುದು ದೊಡ್ಡ ಸಮಸ್ಯೆಯಾಗಿ ಜನರನ್ನು ಕಾಡಿರಲಿಲ್ಲ. ಅಲ್ಲಿನ ಮಣ್ಣು ತುಂಬಾ ಮೆತ್ತಗಾಗಿರುವುದರಿಂದ 'ಕುದ್ದಲ' ಅಥವಾ ಅಲಗಿ ನಂತಿರುವ ಉಪಕರಣಗಳ ಸಹಾಯದಿಂದ ಮಣ್ಣನ್ನು ಕೃಷಿಗೆ ತಯಾರಿಸಬಹುದಿತ್ತು. ಬ್ರಾಹ್ಮಣ ಸಾಹಿತ್ಯಗಳಲ್ಲಿ ಇವರ ಬಗ್ಗೆ ಸಾಕಷ್ಟು ಮಾಹಿತಿಗಳಿವೆ. ಇವೆಲ್ಲವೂ ಕಬ್ಬಿಣ ತಂತ್ರಜ್ಞಾನದ ಪರಿಣಾಮ ಮತ್ತು ಅದರ ಫಲಿತಾಂಶವೆಂಬುದು ಸುಸ್ಪಷ್ಟ. ನಮಗೆ ಲಭ್ಯವಿರುವ ಆಧಾರಗಳಿಂದ ಕಬ್ಬಿಣದ ಸಾಧನಗಳು ಕೇವಲ ಯುದ್ಧದಲ್ಲಿ ಮಾತ್ರ ಉಪಯೋಗವಾಗುತ್ತಿರಲಿಲ್ಲ. ಬದಲಾಗಿ ದಟ್ಟಾ ರಣ್ಯಗಳಲ್ಲಿರುವ ಮರ ಗಿಡಗಳನ್ನು ಸವರಿ ಹೆಚ್ಚು ಹೆಚ್ಚು ಭೂಮಿಯನ್ನು ಕೃಷಿ

ಉತ್ಪಾದನೆಗೆ ಪರಿವರ್ತಿಸಲಾಗುತ್ತಿತ್ತು. ಬಹುಶಃ ಇಂತಹ ಕಾರ್ಯಗಳು ಯೋಜನಾಬದ್ಧವಾಗಿ ಹಾಗೂ ಸಂಘಟಿತವಾಗಿ ನಿರ್ವಹಿಸಲು ಸ್ಥಿರವಾಗಿ ನೆಲೆ ನಿಂತಿರುವ ಜನಸಮೂಹ ಮತ್ತು ಅದಾಗಲೇ ರೂಪುಗೊಳ್ಳುತ್ತಿರುವ ರಾಜ್ಯದ ಪ್ರೋತ್ಸಾಹ ಸಕಾರಾತ್ಮಕವಾಗಿ ದೊರೆತಿರಬೇಕು. ಬೃಹತ್ ಪ್ರಮಾಣದಲ್ಲಿ ನಡೆದಿರುವ ಈ ಪರಿವರ್ತನೆ ಒಬ್ಬ ವ್ಯಕ್ತಿಯಿಂದಲೇ ನಿರೀಕ್ಷಿಸಲು ಅಸಾಧ್ಯ.

ಕೃಷಿ ಉಪಕರಣಗಳನ್ನು ಸಮರ್ಪಕವಾಗಿ ಬಳಸುವುದರ ಜೊತೆಗೆ, ಜನರಲ್ಲಿ ಕೃಷಿಯ ಬಗ್ಗೆ ಜ್ಞಾನವು ಹೆಚ್ಚಾಗಿ ಉನ್ನತ ತಳಿಯ ಬೀಜಗಳನ್ನು ಬಳಸುವ ಪ್ರಯತ್ನಗಳು ಯಶಸ್ವಿಯಾಗಿ ನಡೆದಿವೆ. ಸುಪ್ರಸಿದ್ಧ ವ್ಯಾಕರಣಕಾರ ಪಾನಿನಿ ಕ್ರಿ.ಪೂ. ೫ನೇ ಶತಮಾನಕ್ಕೆ ಸೇರಿದವನಾಗಿದ್ದು, ಅವನ ಸಂಸ್ಕೃತ ಗ್ರಂಥಗಳಲ್ಲಿ ಕೃಷಿಗೆ ಉಪಯೋಗಿಸುವ ಭೂಮಿಯನ್ನು ವರ್ಷಕ್ಕೆ ಎರಡರಿಂದ ಮೂರು ಬಾರಿ ಉಳುತ್ತಿದ್ದರು ಎಂದು ತಿಳಿಸಲಾಗಿದೆ. ಬೌದ್ಧ ಗ್ರಂಥಗಳಲ್ಲಿ ಕೃಷಿ ಭೂಮಿಯನ್ನು ಫಲವತ್ತತೆಯ ಆಧಾರದ ಮೇಲೆ ವರ್ಗೀಕರಿಸಲಾಗಿದ್ದು, ಉತ್ತಮ, ಮಧ್ಯಮ ಮತ್ತು ನಿಕೃಷ್ಟ ಎಂದು ಹೆಸರಿಸಲಾಗಿದೆ. ಅಲ್ಲದೆ ಉತ್ತಮ ಇಳುವರಿ ಪಡೆಯಲು ಕೃತಕ ನೀರಾವರಿ ವ್ಯವಸ್ಥೆಯನ್ನು ಮಾಡಿರುವುದರ ಬಗ್ಗೆಯೂ ಸಾಕಷ್ಟು ಉಲ್ಲೇಖಗಳಿವೆ. ಕೃಷಿ ಬೆಳೆಗೆ ನಿರ್ದಿಷ್ಟ ಕಾಲಮಾನವನ್ನು ನಿಗದಿಪಡಿಸುವುದು ಆ ಕಾಲದ ಬರವಣಿಗೆಗಳಿಂದ ತಿಳಿದು ಬರುತ್ತದೆ. ಭತ್ತದ ಬೆಳೆ ಜೊತೆಗೆ ಬಾರ್ಲಿ, ಗೋಧಿ, ಜೋಳ, ಹತ್ತಿ ಮತ್ತು ಕಬ್ಬನ್ನು ಹೊಸತಾಗಿ ಪರಿವರ್ತಿಸಿದ ಭೂಮಿಯಲ್ಲಿ ವಿಪುಲವಾಗಿ ಬೆಳೆಸುತ್ತಿದ್ದರು. ವಿವಿಧ ನಮೂನೆಯ ಸಸ್ಯ ಸಂಪತ್ತನ್ನು ಹಣ್ಣಿನ ಗಿಡಗಳನ್ನು ಬೆಳೆಸಲು ಉತ್ತೇಜನ ನೀಡಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಮಾವಿನ ಹಣ್ಣು ಇದರಲ್ಲಿ ಮುಖ್ಯವಾದ ಹಣ್ಣು. ಗ್ರಂಥಗಳಲ್ಲಿ 'ಅಮ್ರ' ಎಂಬ ಪದ ಬಳಕೆಯಾಗಿದ್ದು ಅದು ಮಾವಿನ ಹಣ್ಣಿನ ಹೆಸರು ಎಂದು ಅಭಿಪ್ರಾಯ ಪಡಲಾಗಿದೆ. ಹೀಗೆ ಉಗಮವಾದ ಕೃಷಿ ಪ್ರಧಾನ ಉತ್ಪಾದನಾ ಸಮಾಜವು ಹಿಂದಿನಿಂದಲೂ ಮುಂದುವರಿಸಿಕೊಂಡ ಪಶುಸಂಗೋಪನಾ ಕಾರ್ಯಗಳೊಂದಿಗೆ ಪರಸ್ಪರ ಸಂಬಂಧವನ್ನು ಬೆಳೆಸಿಕೊಂಡಿತು. ಪ್ರಾಚ್ಯ ಶಾಸ್ತ್ರಜ್ಞರು ಉತ್ಖನನದ ವೇಳೆ ಅನೇಕ ಪ್ರಾಣಿಗಳ ಮೂಳೆಗಳನ್ನು ಕಂಡು ಹಿಡಿದಿದ್ದಾರೆ. ಹಸುಗಳು, ಕುರಿಗಳು, ಕುದುರೆಗಳು, ಹಂದಿಗಳು ಇತ್ಯಾದಿ ಸಾಕು ಪ್ರಾಣಿಗಳ ಮೂಳೆಗಳ ಅವಶೇಷಗಳು ದೊರೆತಿದ್ದು ಅವುಗಳು ಕ್ರಿ.ಪೂ. ೬ ರಿಂದ ೪ ನೇ ಶತಮಾನಕ್ಕೆ ಸೇರಿದವು ಎಂದು ತೀರ್ಮಾನಿಸಲಾಗಿದೆ. ಈ ಪ್ರಾಣಿಗಳನ್ನು ಆಹಾರಕ್ಕಾಗಿಯೂ ಕೊಂದಿರುವ ಸಾಧ್ಯತೆಗಳಿವೆ. ಆದರೆ ಅರಣ್ಯಗಳು ನಾಶಪಡಿಸಿದ ನಂತರ ಆ ಎಲ್ಲಾ ಪ್ರದೇಶಗಳಲ್ಲೂ ಕೃಷಿ ಉತ್ಪಾದನೆ ಮಾಡಿರುವ ಸಾಧ್ಯತೆ ಕಡಿಮೆ. ಏಕೆಂದರೆ ಕೆಲವೊಂದು ಪ್ರದೇಶಗಳಲ್ಲಿ ಬುಡಕಟ್ಟು ಜೀವನ ಕ್ರಮಗಳು ಮುಂದುವರಿದಿರುವ ಸಾಧ್ಯತೆಯನ್ನು ವಿದ್ವಾಂಸರು ಮನಗಂಡಿದ್ದಾರೆ. ಆದರೂ ಬಹುತೇಕ ಸ್ಥಳಗಳಲ್ಲಿ ಆಹಾರ ಉತ್ಪಾದನಾ ಪ್ರಕ್ರಿಯೆ ಆರಂಭವಾಗಿರುವುದು ಸತ್ಯ ಮತ್ತು ಜನವಸತಿಗಳು ವೃದ್ಧಿಸುತ್ತಾ ಹೋಗಿವೆ. ಸುಮಾರು ೫೫೦ ಕ್ಕೂ ಮಿಕ್ಕಿದ ಉತ್ಖನನ ಸ್ಥಳಗಳಲ್ಲಿ ಶ್ರೀಮಂತವಾಗಿರುವ ಉತ್ತರದ ಕಪ್ಪು ಬಣ್ಣದ ನಯವಾದ ಕುಂಬಾರಿಕೆ ವಸ್ತುಗಳು ಹೇರಳವಾಗಿ ದೊರೆತಿವೆ. ಇವುಗಳಲ್ಲಿ ಮಡಕೆ ಚೂರುಗಳು, ತಟ್ಟೆಯಂತಹ ಪಾತ್ರೆಗಳೂ ಸೇರಿವೆ. ಈ ವಸ್ತುಗಳು ಸುಮಾರು ಕ್ರಿ.ಪೂ. ೬ ರಿಂದ ಒಂದನೆ ಶತಮಾನದವರೆಗೆ ಅತೀ ಹೆಚ್ಚು ಬಳಕೆಯಲ್ಲಿದ್ದವು. ಈ ಎಲ್ಲಾ ಪ್ರಾಚ್ಯ ವಸ್ತುಗಳು ಗಂಗಾ-

ಯಮುನಾ ನದಿ ಬಯಲಿನ ಮೇಲು ಭಾಗ, ಕೆಳ ಮತ್ತು ಮಧ್ಯ ಭಾಗಗಳಲ್ಲಿ ಉತ್ಖನನದ ವೇಳೆ ಸಂಗ್ರಹಿಸಲಾಗಿದೆ.

ಕೃಷಿ ಉತ್ಪಾದನಾ ಸಮಾಜ ಸ್ಥಿರ ಹಾಗೂ ಭದ್ರಗೊಳ್ಳುತ್ತಾ ಹೋದ ಹಾಗೆ ಕೃಷಿ ಬೆಳೆಯ ಬಗ್ಗೆ ರೈತರಲ್ಲಿ ಜ್ಞಾನವು ವೃದ್ಧಿಸುತ್ತಾ ಹೋಯಿತು. ಉತ್ತಮ ಬೀಜಗಳನ್ನು, ಕೃಷಿ ಉಪಕರಣ ಗಳನ್ನು ಮತ್ತು ನೀರಾವರಿ ವ್ಯವಸ್ಥೆಯನ್ನು ಅಳವಡಿಸಿಕೊಂಡು ಕೃಷಿರಂಗದಲ್ಲಿ ಹೆಚ್ಚುವರಿ ಉತ್ಪಾದನೆ ಮಾಡಲು ಯಶಸ್ವಿಯಾದರು. ಇದು ಪರೋಕ್ಷವಾಗಿ ಪಟ್ಟಣಗಳು ಬೆಳೆಯಲು ಪ್ರೋತ್ಸಾಹ ನೀಡಿತು. ಈ ಕಾಲಕ್ಕೆ ಸೇರಿದ ಅನೇಕ ಬೌದ್ಧ ಮತ್ತು ಜೈನ ಸಾಹಿತ್ಯ ಗ್ರಂಥಗಳು ಅಂತಹ ದೊಡ್ಡ ದೊಡ್ಡ ನಗರ ಕೇಂದ್ರಗಳು ಬೆಳೆದಿರುವ ಬಗ್ಗೆ ಪ್ರಸ್ತಾಪಿಸುತ್ತಿವೆ. ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಭಾರತಕ್ಕೆ ಭೇಟಿ ಕೊಟ್ಟ ಅಲೆಕ್ಸಾಂಡರ್‌ನ ರಾಯಭಾರಿ ಅರಿಸ್ಟೋಬುಲಸ್‌ನ ಬರವಣಿಗೆಯಲ್ಲಿ ಸಿಂಧೂ ನದಿ ಪ್ರದೇಶದಲ್ಲಿ ಸುಮಾರು ೧೦೦೦ ಕ್ಕೂ ಹೆಚ್ಚು ನಗರಗಳಿದ್ದವೆಂದು ನಮೂದಿಸಿದ್ದಾನೆ. ಇದರಲ್ಲಿ ಸ್ವಲ್ಪ ಮಟ್ಟಿನ ಉತ್ಪ್ರೇಕ್ಷೆಯೂ ಇದ್ದಿರ ಬಹುದು. ಆದರೂ ಈ ಕಾಲದಲ್ಲಿ ತಲೆ ಎತ್ತಿದ ನಗರಗಳು ಉತ್ತರ ಭಾರತಕ್ಕೆ ಸೀಮಿತ ವಾಗಿರುವುದು ನಿಜ. ಕ್ರಿ.ಪೂ. ೬೦೦ ರಿಂದ ೩೦೦ ರ ನಡುವಿನ ಇಡೀ ಭಾರತವನ್ನೇ ತೆಗೆದು ಕೊಂಡರೆ ಸುಮಾರು ೬೦ ಬೃಹತ್ ನಗರಗಳಿದ್ದವು. ಶ್ರಾವಷ್ಟಿ ಎಂಬುದು ಆಗಿನ ೨೦ ಬೃಹತ್ ಮತ್ತು ಪ್ರಮುಖ ನಗರಗಳಲ್ಲಿ ಒಂದು. ಅವುಗಳಲ್ಲಿ ೬ ಪ್ರಮುಖ ನಗರಗಳು ಗೌತಮ ಕಾಲದಲ್ಲಿ ಪ್ರಸಿದ್ಧಿಯಾದವುಗಳು. ಅವುಗಳು - ಈಗಿನ ಭಾಗಲ್‌ಪುರ (ಬಿಹಾರ) ದಲ್ಲಿರುವ ಚಂಪಾ, ಪಾಟ್ನದಿಂದ ೯೬ ಕಿ.ಮೀ. ದೂರಕ್ಕಿರುವ ರಾಜಗೃಹ, ಉತ್ತರ ಪ್ರದೇಶದ ಪೂರ್ವಕ್ಕಿರುವ ಸಕೇತ, ಅಲಹಾಬಾದಿಗೆ ೬೪ ಕಿ.ಮೀ. ದೂರಕ್ಕಿರುವ ಕೌಶಾಂಬಿ, ಬನಾರಸ್ ಮತ್ತು ಉತ್ತರ ಪ್ರದೇಶದ ದಿಯೋರಿಯಾದಲ್ಲಿರುವ ಕುಶಿನಾರ (ಆಧುನಿಕ ಕಸಿಯಾ). ಅಲ್ಲದೆ, ಕ್ರಿ.ಪೂ. ೬೦೦-೩೦೦ ರ ಸಮಯದಲ್ಲಿ ಗಂಗಾ ಬಯಲಿನ ಮಧ್ಯ ಭಾಗದಲ್ಲಿಯೇ ಸುಮಾರು ೧೦ ಕ್ಕೂ ಮಿಕ್ಕಿ ನಗರಗಳಿದ್ದುದು ಉತ್ಖನನದ ವೇಳೆ ಬೆಳಕಿಗೆ ಬಂದಿವೆ. ಮತ್ತು ಅವುಗಳು ಆಗಿನ ಸಾಹಿತ್ಯಕ ಆಕರಗಳಲ್ಲಿ ಉಲ್ಲೇಖವಾಗಿವೆ. ಇದು ಕ್ರಿ.ಪೂ. ೬ ನೆ ಶತಮಾನ ದಿಂದ ಭಾರತದ ಈಶಾನ್ಯ ಭಾಗದಲ್ಲಿ ನಗರೀಕರಣದ ಲಕ್ಷಣಗಳು ಆರಂಭವಾಗಿರುವುದು ತಿಳಿದುಬರುತ್ತದೆ.

ಈ ಭಾಗದ ಭಾರತದಲ್ಲಿ ನಗರಗಳು ಬೆಳೆಯಲು ಮುಖ್ಯವಾದ ಕಾರಣ ಗ್ರೀಸ್‌ನಿಂದ ಭಾರತಕ್ಕೆ ಆಗಮಿಸಿದ ಅಲೆಕ್ಸಾಂಡ್ರನ ಸೈನ್ಯ ಮತ್ತು ಅದರ ಚಲನೆ. ಇದರಿಂದ ಅನೇಕ ವ್ಯಾಪಾರ ದಾರಿಗಳು ತೆರೆದು ಭಾರತ ಉಪಖಂಡದ ವಾಯುವ್ಯ ಭಾಗ ಮತ್ತು ಪಶ್ಚಿಮ ಏಷ್ಯಾಗಳ ನಡುವೆ ನೇರವಾದ ವ್ಯಾಪಾರ ಸಂಪರ್ಕ ಬೆಳೆಯಲು ಅವಕಾಶ ಕಲ್ಪಿಸಿತು. ಈ ಚಲನೆ ನಂತರ ಮುಂದು ವರಿದು ದಕ್ಷಿಣ ಭಾರತದೊಂದಿಗೂ ಉತ್ತರ ಭಾರತದ ಸಂಪರ್ಕ ಬೆಳೆಯಿತು. ಆದರಿಂದ ದಕ್ಷಿಣದಲ್ಲಿರುವ ಅನೇಕ ಮಾರುಕಟ್ಟೆಗಳು ಉತ್ತರಭಾರತದಲ್ಲಿ ಉತ್ಪಾದನೆಯಾದ ವಸ್ತುಗಳಿಗೆ ಲಭ್ಯವಾದವು. ಗಂಗಾ ನದಿ ಬಯಲು ಪ್ರದೇಶಕ್ಕೆ ಸೇರಿದ್ದ ಅನೇಕ ಉತ್ತರದ ಕಪ್ಪು ಬಣ್ಣದ ನಯವಾದ ಕುಂಬಾರಿಕೆ ವಸ್ತುಗಳು, ಮಡಕೆಗಳು, ಪಾತ್ರೆಗಳು ಮತ್ತು ಕಬ್ಬಿಣದ ಉಪಕರಣಗಳು ದಖ್ಖನಿನ ಉತ್ತರಕ್ಕೆ ಇರುವ ಸ್ಥಳಗಳಲ್ಲಿ ಉತ್ಖನನದ ವೇಳೆ ದೊರಕಿವೆ. ಅವೆಲ್ಲವು ಒಂದೇ ಕಾಲಕ್ಕೆ ಸೇರಿದವೆಂದು ತಿಳಿಯಲಾಗಿದ್ದು, ಅದು ಆ ನಗರಗಳ ನಡುವೆ ಬೆಳೆದು ಬಂದ ವ್ಯಾಪಾರ

ಸಂಪರ್ಕವನ್ನು ಸೂಚಿಸುತ್ತದೆ. ಮುಖ್ಯ ವ್ಯಾಪಾರ ಮಾರ್ಗಗಳು ಗಂಗಾ ನದಿ ಬಯಲಿನ ರಾಜಗೃಹ ದಿಂದ ಕೌಶಾಂಬಿವರೆಗಿನ ಹೆದ್ದಾರಿ ಮಧ್ಯ ಪ್ರದೇಶದ ಉಜ್ಜೈನಿಗೆ ಸಂಪರ್ಕ ಕಲ್ಪಿಸುತ್ತಿತ್ತು. ಅಲ್ಲಿಂದ ಪಶ್ಚಿಮದ ಮುಖ್ಯ ರೇವುಪಟ್ಟಣ ವಾದ ಬ್ರೋಚ್‌ಗೆ ನೇರ ಸಂಪರ್ಕ ಬೆಳೆಸುತ್ತದೆ. ಇನ್ನೊಂದು ಹೆದ್ದಾರಿ ಕೌಶಾಂಬಿಯಿಂದ ಆರಂಭವಾಗಿ ಪಂಜಾಬನ್ನು ಹಾದು ತಕ್ಷಿಲಾ (ತಕ್ಷಶಿಲಾ)ಕ್ಕೆ ತಲುಪುತ್ತದೆ. ಇದು ಮುಖ್ಯವಾಗಿ ಉಪಖಂಡದ ವಾಯುವ್ಯ ದಿಕ್ಕಿನಲ್ಲಿ ವ್ಯಾಪಾರ ವಹಿವಾಟು ನಡೆಸಲು ಭೂದಾರಿಯಾಗಿತ್ತು.

ವ್ಯಾಪಾರ ವಹಿವಾಟಿನ ವೃದ್ಧಿಯು ನಗರೀಕರಣಕ್ಕೆ ಕಾರಣವೂ ಹೌದು ಮತ್ತು ಪರಿಣಾಮವೂ ಹೌದು. ಬೌದ್ಧ ಸಾಹಿತ್ಯ ಮತ್ತು ಜಾತಕ ಕಥಾ ವಸ್ತುಗಳಲ್ಲಿ ಯಾತ್ರಿಕರು ಮತ್ತು ವ್ಯಾಪಾರಸ್ಥರು ಬಳಸುತ್ತಿದ್ದ ಹೆದ್ದಾರಿಗಳ ಬಗ್ಗೆ ವಿಪುಲವಾಗಿ ಉಲ್ಲೇಖವಾಗಿವೆ. ಈ ಹೆದ್ದಾರಿಗಳನ್ನು ಬಳಸಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುಮಾರು ೫೦೦ ರಿಂದ ೧೦೦೦ ಎತ್ತಿನ ಬಂಡಿಗಳು ಚಲಿಸುತ್ತಿದ್ದವು ಎಂದು ಹೇಳಲಾಗಿದೆ. ಅಂತಹ ೫೦೦ ಬಂಡಿಗಳ ಗುಂಪು ಗೌತಮಬುದ್ಧನು ತಪಸ್ಸು ಮಾಡಿದ ಸ್ಥಳದ ದಾರಿಯಾಗಿ ಹಾದುಹೋಗಿವೆ ಎಂದು ಜಾತಕದಲ್ಲಿ ಹೇಳಿದೆ. ರಾಜಗೃಹ ಮಾರ್ಗವಾಗಿ ಗೌತಮಬುದ್ಧನು ಪ್ರಯಾಣಿಸುವಾಗ ಬೆಲತ್ತಾ ಎಂಬುವನನ್ನು ಭೇಟಿಯಾಗಿದ್ದ ನೆಂದೂ, ಅವನು ಅಂಧಕೋಪಿಂದಕ್ಕೆ (ಇಂದಿಗೂ ಪತ್ತೆ ಯಾಗದ ಒಂದು ಸ್ಥಳದ ಹೆಸರು) ೫೦೦ ಬುಟ್ಟಿಯಲ್ಲಿ ಸಕ್ಕರೆಯನ್ನು ತುಂಬಿಕೊಂಡು ಪ್ರಯಾಣಿಸುತ್ತಿದ್ದನೆಂದು ಹೇಳಿದೆ. ಉತ್ತರ ಪಥದಿಂದ ವ್ಯಾಪಾರಿಗಳು ಹೆಚ್ಚಾಗಿ ಕುದುರೆ ಸವಾರರು ತಮ್ಮ ವಸ್ತುಗಳನ್ನು ಮಾರಾಟ ಮಾಡುತ್ತ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲಿಸುತ್ತಿದ್ದರು. ಬಟ್ಟೆಯು ವ್ಯಾಪಾರದ ಒಂದು ಮುಖ್ಯ ವಸ್ತುವಾಗಿದ್ದು ಪಾಲಿ ಗ್ರಂಥಗಳಲ್ಲಿ ಬುದ್ಧನ ಕಾಲದ ಈಶಾನ್ಯ ಭಾರತದಲ್ಲಿ ಸಾಮಾನ್ಯವಾಗಿ ಬಳಕೆಯಾಗುತ್ತಿತ್ತು ಎಂದು ಹೇಳಲಾಗಿದೆ. ಆದರೆ ವ್ಯಾಪಾರವು ಕೆಲವು ಶ್ರೀಮಂತ ವಸ್ತುಗಳಿಗೆ ಮಾತ್ರ ಸೀಮಿತವಾಗಿತ್ತು.

ವೇದೋತ್ತರ ಕಾಲದಲ್ಲಿ ವ್ಯಾಪಾರ ಚಟುವಟಿಕೆಗಳು ಹೆಚ್ಚು ವೃದ್ಧಿಯಾಗಲು ಮುಖ್ಯ ವಾಗಿ ಲೋಹದಿಂದ ನಿರ್ಮಿಸಿದ ನಾಣ್ಯಗಳ ಚಲಾವಣೆಯೇ ಕಾರಣ. ಆಗಿನ ಗ್ರಂಥಗಳಲ್ಲಿ ನಾಣ್ಯಗಳ ಬಳಕೆ ಇತ್ತು ಎಂಬ ಸ್ಪಷ್ಟ ಮಾಹಿತಿ ಇದ್ದರೂ ನಿರ್ದಿಷ್ಟವಾಗಿ ಅದನ್ನು ನಂಬಲು ಅಸಾಧ್ಯ. ನಾಣ್ಯಗಳ ಬಳಕೆ ಪ್ರಥಮವಾಗಿ ಬುದ್ಧನ ಕಾಲಕ್ಕೆ ಮೊದಲು ಇತ್ತು ಎಂಬುದು ಅಸಾಧ್ಯ. ಈ ಅತ್ಯಂತ ಪ್ರಾಚೀನ ನಾಣ್ಯಗಳು ಕ್ರಿ.ಪೂ. ಐದನೆಯ ಶತಮಾನದವುಗಳು. ಈ ಕಾಲದಲ್ಲಿ ವ್ಯಾಪಾರಿಗಳು ಕಚ್ಚು ಗುರುತಿನ ಅಥವಾ 'ಪಂಚ್‌ಮಾರ್ಕ್' ನಾಣ್ಯಗಳನ್ನು ಬಳಸುತ್ತಿದ್ದರು. ಇವು ಪೂರ್ವ ಉತ್ತರ ಪ್ರದೇಶದಲ್ಲಿ ಹಾಗೂ ಬಿಹಾರದಲ್ಲಿ ಚಲಾವಣೆಯಲ್ಲಿ ದ್ದವು. ಈ ನಾಣ್ಯಗಳ ಬಳಕೆ ವ್ಯಾಪಾರ ವ್ಯವಹಾರ ಬೆಳೆದಿರುವ ವಿಚಾರವನ್ನು ಬಲಪಡಿಸುತ್ತದೆ. ಒಂದು ಅಭಿಪ್ರಾಯದ ಪ್ರಕಾರ ಸುಮಾರು ೩೦೦ ಪಂಚ್‌ಮಾರ್ಕ್ ನಾಣ್ಯಗಳು ಬೆಳಕಿಗೆ ಬಂದಿವೆ. ಇವುಗಳಲ್ಲಿ ಹೆಚ್ಚು ಗಂಗಾ ಬಯಲಿನ ಮಧ್ಯ ಭಾಗದಲ್ಲಿಯೇ ದೊರೆತಿದ್ದು ಅಲ್ಲಿ ನಾಣ್ಯಗಳ ಚಲಾವಣೆಯನ್ನು ಸಮರ್ಥಿಸುತ್ತದೆ.

ನಗರಗಳ ಬೆಳವಣಿಗೆ, ವ್ಯಾಪಾರ ವಹಿವಾಟು ಮತ್ತು ಹಣಕಾಸು ಚಲಾವಣೆಯ ಲಕ್ಷಣ ಗಳು ಮುಖ್ಯ ರೀತಿಯ ಕರಕುಶಲ ಕಸುಬುಗಳು ಮತ್ತು ಕಲೆಗಳ ಅಭಿವೃದ್ಧಿಗೆ ಪ್ರೋತ್ಸಾಹ

ನೀಡಿತು. ಜೊತೆಗೆ ಇನ್ನೂ ಅನೇಕ ಕಲೆ ಮತ್ತು ಕಸುಬುಗಳ ಬಗೆಗೆ ಬೌದ್ಧ ಗ್ರಂಥಗಳು ತಿಳಿಸುತ್ತವೆ. ನೇಯ್ಗೆಕಾರರು, ಮಡಿಕೆ ತಯಾರಕರು, ಸೂಜಿ ತಯಾರಿಸುವವರು, ಅಕ್ಕಸಾಲಿಗರು, ಲೋಹ ಕೆಲಸಗಾರರು, ಬಡಗಿಗಳು, ಡೋಬಿಗಳು, ಶಿಲ್ಪಿಗಳು, ಕ್ಷೌರಿಕರು, ಹೂಮಾಲೇ ಕಾರರು, ರೇಶ್ಮೆ ಬಟ್ಟೆ ನೇಯ್ಯುವವರು ಇತ್ಯಾದಿ ವಿವರಗಳು ದಾಖಲೆಗಳಲ್ಲಿವೆ. ಈ ರೀತಿಯ ಕರಕುಶಲ ಕಸುಬುಗಾರರ ಬಗ್ಗೆ ಇಷ್ಟೊಂದು ವ್ಯಾಪಕ ಉಲ್ಲೇಖಗಳಿರುವುದನ್ನು ಗಮನಿಸಿದರೆ ವಿವಿಧ ಬಗೆಯ ವಸ್ತುಗಳ ಉತ್ಪಾದನಾ ಕ್ರಮದಲ್ಲಿ ವಿಶೇಷವಾದ ನೈಪುಣ್ಯತೆಯನ್ನು ಪಡೆದಿರು ವುದು ತಿಳಿದುಬರುತ್ತದೆ.

ಕರಕುಶಲ ಕಸುಬುಗಾರರು, ಶಿಲ್ಪಗಳು ಮತ್ತು ಚಿತ್ರಕಾರರು ಒಂದಾಗಿ ಸಂಘಟನೆಯಾಗಿ ರೂಪುಗೊಂಡು ಶ್ರೇಣಿಗಳಾಗಿ ತಲೆ ಎತ್ತಿರುವ ಬಗೆಗೂ ಅನೇಕ ಪುರಾವೆಗಳಿವೆ. ಉತ್ತರ ಬೌದ್ಧ ಸಾಹಿತ್ಯದಲ್ಲಿ ಇಂತಹ ೧೮ ಬಗೆಯ ಶ್ರೇಣಿಗಳ ರಾಜಗೃಹದಲ್ಲಿದ್ದವು ಎಂದು ನಮೂದಿಸಲಾಗಿದೆ. ಆದರೆ ಕೇವಲ ನಾಲ್ಕು ಶ್ರೇಣಿಗಳ ಹೆಸರು ಮಾತ್ರ ಉಲ್ಲೇಖವಾಗಿವೆ. ಬಡಗಿಗಳು, ಶಿಲ್ಪಿಕಾರರು, ಚಮ್ಮಾರರು ಮತ್ತು ಚಿತ್ರಕಾರರು. ಪ್ರತಿಯೊಂದು ಶ್ರೇಣಿಗೂ ಸೇರಿದ ಜನರು ಪಟ್ಟಣದ ಒಂದೊಂದು ಭಾಗದಲ್ಲಿ ನೆಲೆಸಿದ್ದರು. ಇದರಿಂದ ಕರಕುಶಲ ಕೈಗಾರಿಕೆಗಳು ಮತ್ತು ವಸ್ತುಗಳು ಪ್ರಾದೇಶಿಕರಣಗೊಂಡವು. ಜೊತೆಗೆ ಆನುವಂಶೀಯ ಲಕ್ಷಣಗಳು ಬೆಳೆಯಲಾರಂಭಿಸಿ, ಇಂತಹ ಕಸುಬುಗಳು ತಂದೆಯಿಂದ ಮಗನಿಗೆ ನಿಧಾನವಾಗಿ ಹಸ್ತಾಂತರವಾಗಿ ಮುಂದುವರಿಯುವ ಪ್ರಕ್ರಿಯೆ ಹುಟ್ಟಿಕೊಂಡಿತು. ಪ್ರತಿ ಶ್ರೇಣಿಗೂ ಒಬ್ಬನು ಮುಖಂಡನಿದ್ದು ಅವನನ್ನು 'ಜೆತ್ತಕ' ಎಂದು ಕರೆಯಲಾಗುತ್ತಿತ್ತು. 'ಸೆಟ್ಟಿ'ಗಳು ಕೆಲವೊಮ್ಮೆ ಶ್ರೇಣಿಯ ಮುಖಂಡರಾಗಿದ್ದರೂ ವ್ಯಾಪಾರ ಮತ್ತು ಕೈಗಾರಿಕೆ ಚಟುವಟಿಕೆಗಳಲ್ಲೂ ಪಾಲ್ಗೊಳ್ಳುತ್ತಿದ್ದರು. ಸಾಮಾನ್ಯವಾಗಿ ಶ್ರೇಣಿಗಳು ನಗರ ವಾಸಿಗಳು. ಆದರೆ ಕೆಲವೊಮ್ಮೆ ರಾಜನು ಅವರ ಜೀವನೋಪಾಯಕ್ಕೆ ಗ್ರಾಮಗಳನ್ನು ದಾನ ನೀಡುವ ಪದ್ಧತಿಗಳು ಪ್ರಚಲಿತ ವಾಗಿತ್ತು. ಅಂತಹ ಸಂದರ್ಭದಲ್ಲಿ ಆ ಗ್ರಾಮಗಳಲ್ಲಿ ವಸೂಲಿ ಮಾಡಲಾಗುವ ಕಂದಾಯ ವನ್ನೇ ತಮ್ಮ ಜೀವನ ನಡೆಸಲು ಬಳಸಿಕೊಳ್ಳುತ್ತಿದ್ದುದರಿಂದ ಗ್ರಾಮದೊಂದಿಗೂ ನಿಕಟ ಸಂಪರ್ಕ ಬೆಳೆಸಿಕೊಳ್ಳುತ್ತಿದ್ದರು. 'ಸೆಟ್ಟಿ'ಗಳು ಕೆಲವೊಮ್ಮೆ ಲೇವಾ ದೇವಿ, ಹಣಕಾಸು ವ್ಯವಹಾರಗಳಲ್ಲೂ ತೊಡಗಿಸಿಕೊಳ್ಳುತ್ತಿದ್ದರು. ವ್ಯಾಪಾರದಲ್ಲೂ ಭಾಗವಹಿಸಿ ರುವುದರಿಂದ ಈ ಸೆಟ್ಟಿಗಳು ಆರ್ಥಿಕವಾಗಿ ಬಲಿಷ್ಠವಾಗಿದ್ದುದರಿಂದ ಅವರು ಎಲ್ಲರಿಂದಲೂ ಗೌರವಿಸಲ್ಪಡುತ್ತಿದ್ದರು. ಹೀಗೆ ರೂಪುಗೊಂಡ ಕರಕುಶಲ ಕಸುಬುಗಾರರು, ಸೆಟ್ಟಿಗಳು, ವ್ಯಾಪಾರಿಗಳು ನಿಧಾನವಾಗಿ ಆಗಿನ ಸಮಾಜದಲ್ಲಿ ಪ್ರಧಾನವಾದ ಸಾಮಾಜಿಕ ಗುಂಪುಗಳಾಗಿ ಪರಿವರ್ತನೆ ಗೊಂಡರು.

ಗ್ರಾಮ ಮಟ್ಟದಲ್ಲೂ ಸಂಪತ್ತಿಗನುಸಾರವಾಗಿ ಹೊಸ ಹೊಸ ಗುಂಪುಗಳು ಹುಟ್ಟಿ ಕೊಂಡವು. ಅಲ್ಲಿರುವ ಹೆಚ್ಚಿನ ಭೂಮಿಯ ಮಾಲಿಕತ್ವವನ್ನು ರೈತ ಸಮುದಾಯದ ಮುಖಂಡ 'ಗಹಪತಿ' ಅನುಭವಿಸುತ್ತಿದ್ದನು. ಪ್ರಾಚೀನ ಕಾಲದಲ್ಲಿ 'ಗಹಪತಿ'ಗಳು ಸಾಮಾನ್ಯವಾಗಿ ಒಂದು ಕುಟುಂಬದ ಮುಖಂಡ ಅಥವಾ ನಾಯಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದನು. ಅವನ ಆರ್ಥಿಕ ಸ್ಥಾನಮಾನ ವನ್ನು ಅವನು ಹೊಂದಿರುವ ಪಶು ಸಂಪತ್ತನ್ನು ಆಧರಿಸಿ ನಿರ್ಧರಿಸ ಲಾಗುತ್ತಿತ್ತು. ಆದರೆ ಬುದ್ಧನ ಕಾಲಕ್ಕೆ ಬರುವಾಗ 'ಗಹಪತಿ'ಯ ಸ್ಥಾನ ಅವನು ಮಾಲಿಕತ್ವ ಹೊಂದಿರುವ ಭೂಮಿಯ

ಆಧಾರದ ಮೇಲೆಯೇ ಹೊರತು ಪಶು ಸಂಪತ್ತಿನಿಂದಲ್ಲ. ಇಂತಹ ಅನೇಕ 'ಗಹಪತಿ'ಗಳ ಕುರಿತು ಬೌದ್ಧ ಪಂಥೀಯ ಬರವಣಿಗೆಯಲ್ಲಿ ಕಾಣಬಹುದು. ಗಹಪತಿ 'ಮೆಂಡಕ'ನೆಂಬುವನು ರಾಜನ ಸೈನಿಕರಿಗೆ ಸಂಬಳವನ್ನು ನೀಡುತ್ತಿದ್ದುದಲ್ಲದೆ, ೧,೨೫೦ ಪಶುಗಳನ್ನು ಹೊಂದಿದ್ದು ಬುದ್ಧನ ಸಂಘದ ಚಟುವಟಿಕೆಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಜವಾಬ್ದಾರಿ ಹೊಂದಿದ್ದನೆಂದು ಹೇಳಲಾಗಿದೆ. ಅನಥಪಿಂಡಿಕಾ ಎಂಬ ಇನ್ನೊಬ್ಬ 'ಗಹಪತಿ'ಯು ಜಟವನ ಹೆಸರಿನ ಭೂಮಿಯನ್ನು ಹೆಚ್ಚು ಹಣವನ್ನು ನೀಡಿ ಖರೀದಿಸಿ ಆ ಭೂಮಿಯನ್ನು ಬುದ್ಧನಿಗೆ ದಾನ ಮಾಡಿದ್ದನೆಂದು ಹೇಳಲಾಗಿದೆ. ಸಕೇತ ಎಂಬ 'ಗಹಪತಿ'ಯು 'ಜೀವಿಕ' ಎಂಬ ಹೆಸರಿನ ವೈದ್ಯನಿಗೆ ೧೬,೦೦೦ ನಾಣ್ಯಗಳನ್ನು ದಾನವಾಗಿ ನೀಡಿದ್ದನು. ಕೆಲವೊಮ್ಮೆ ಈ ಗಹಪತಿಗಳು ಅಂಗಡಿ ಮಾಲೀಕರಿಗೂ ಸಾಲವಾಗಿ ಹಣ ನೀಡುತ್ತಿದ್ದರು. ಅಂದರೆ ಕ್ರಿ.ಪೂ. ೬೦೦ ರಿಂದ ४೦೦ ರ ಅವಧಿಯಲ್ಲಿ ಪ್ರಾಚೀನ ಗಹಪತಿಗಳು ಒಂದು ಕುಟುಂಬದ ಮುಖಂಡನ ಸ್ಥಾನದಿಂದ ಒಂದು ಸಮಾಜದ ಶ್ರೀಮಂತ ವ್ಯಕ್ತಿಗಳಾಗಿ ಪರಿವರ್ತನೆಗೊಂಡಿರುವುದು ಆ ಕಾಲದ ಸಮಾಜದಲ್ಲಿ ಹುಟ್ಟಿಕೊಂಡ ಆರ್ಥಿಕ ಅಸಮತೋಲನವನ್ನು ಚಿತ್ರಿಸುತ್ತದೆ. ಸಾಮಾನ್ಯ ಜನರು, ಸೇವಕರು ಮತ್ತು ದುಡಿಯುವ ವರ್ಗದವರು ಗಹಪತಿಗಳು ಅನುಭವಿಸುವ ಸಂಪತ್ತಿನ ಬಗ್ಗೆ ಅಸಮಾಧಾನವನ್ನು ವ್ಯಕ್ತ ಪಡಿಸಲು ಆರಂಭಿಸಿದರು.

ಗ್ರಾಮ ಮತ್ತು ಪಟ್ಟಣ ಪ್ರದೇಶಗಳಲ್ಲಿ ಉಗಮವಾದ ಶ್ರೀಮಂತ ವರ್ಗಗಳು ಮತ್ತು ಅದರ ಪರಿಣಾಮವಾಗಿ ಸಮಾಜದ ಅರ್ಥವ್ಯವಸ್ಥೆಯಲ್ಲಿ ಆರ್ಥಿಕ ಅಸಮಾನತೆ ಸಾಮಾನ್ಯ ವಾಗಿ ಹುಟ್ಟಿಕೊಂಡಿತು. ಇದು ಪ್ರಾಚೀನ ಕಾಲದಿಂದಲೂ ಮುಂದುವರಿದುಕೊಂಡು ಬಂದ ಬುಡಕಟ್ಟು ಆಧಾರಿತ ರಾಜತ್ವ ಮತ್ತು ಸಮಾನತೆಗೆ ಧಕ್ಕೆ ಉಂಟುಮಾಡಿತು. ಖಾಸಗಿ ಆಸ್ತಿಗಳ ಮಾಲಿಕತ್ವ ಕೆಲವೇ ವ್ಯಕ್ತಿಗಳ, ವರ್ಗಗಳ ನಿಯಂತ್ರಣಕ್ಕೊಳಪಟ್ಟ ಕಾರಣ ಬುಡಕಟ್ಟು ಸಮು ದಾಯಗಳು ದುರ್ಬಲಗೊಂಡವು. ಇಡೀ ಸಮಾಜವು ನಾಲ್ಕು ಪ್ರಮುಖ ವರ್ಗಗಳಾಗಿ ವಿಭಜಿಸಲ್ಪಟ್ಟು ವರ್ಣ ವ್ಯವಸ್ಥೆಯನ್ನು ವ್ಯವಸ್ಥಿತವಾಗಿ ಉಗಮವಾಗಲು ಪ್ರೋತ್ಸಾಹ ನೀಡಿತು. ಅವುಗಳೇ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು. ಮೊದಲ ಎರಡು ವರ್ಣಗಳು ಸಮಾಜದಲ್ಲಿ ಪವಿತ್ರರು ಎಂದು ನಿರೂಪಿಸಿ ಅತ್ಯುನ್ನತ ಸ್ಥಾನವನ್ನು ಅಲಂಕರಿಸಿ ಸಾಮಾಜಿಕ, ಕಾನೂನು ಮತ್ತು ಆರ್ಥಿಕ ಸವಲತ್ತುಗಳನ್ನು ಪಡೆಯಲಾರಂಭಿಸಿ ದರು. ಬ್ರಾಹ್ಮಣರು ಪುರೋಹಿತರಾಗಿ, ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದು ದಾನ ಸ್ವೀಕಾರದ ಅಧಿಕಾರ ಮತ್ತು ತೆರಿಗೆ ಹಾಗೂ ಶಿಕ್ಷೆಗಳಿಂದ ವಿನಾಯಿತಿ ಪಡೆಯುತ್ತಿದ್ದರು. ಕ್ಷತ್ರಿಯರು ಯೋಧರಾಗಿದ್ದು ಆಳುವ ವರ್ಗವಾಗಿ ಪರಿವರ್ತನೆಗೊಂಡು ಸಮಾಜದ ದುಡಿಯುವ ವರ್ಗದವರಿಂದ ವಸೂಲಿ ಮಾಡಿದ ಕಂದಾಯವನ್ನೇ ಅವಲಂಬಿಸಿ ತಮ್ಮ ವೈಭವದ ಜೀವನ ನಡೆಸುತ್ತಿದ್ದರು. ವೈಶ್ಯರು ಮುಖ್ಯವಾಗಿ ಕೃಷಿಕರೇ ಆಗಿದ್ದು ಪಶುಪಾಲನೆ ಮತ್ತು ವ್ಯಾಪಾರದಲ್ಲಿಯೂ ತೊಡಗಿ, ಹೆಚ್ಚುವರಿ ಉತ್ಪಾದನೆ ಯನ್ನು ಉಳಿದೆರಡು ವರ್ಣ ಗಳಿಗೆ ಒಪ್ಪಿಸುವುದು ಅವರ 'ಧರ್ಮ'. ವೈಶ್ಯರು ಪ್ರಮುಖ ತೆರಿಗೆದಾರರು ಆಗಿದ್ದು ಬ್ರಾಹ್ಮಣ ಕ್ಷತ್ರಿಯರಂತೆ ಯಜ್ಞೋಪವೀತಧಾರಣೆ, ವೇದಾಧ್ಯಯನಗಳಿಗೆ ಅರ್ಹತೆಯಿದ್ದ ದ್ವಿಜರು ಎಂಬ ಗೌರವವಿತ್ತು. ಶೂದ್ರರು ಉಚ್ಚ ವರ್ಣದವರ ಮನೆಯ ಆಳು ಗಳಾಗಿ, ಕೃಷಿ ಭೂಮಿಯಲ್ಲಿ ದುಡಿಯುವ ವರ್ಗವಾಗಿ, ಕೂಲಿ ಆಳು ಅಥವಾ ಸೇವಕರಾಗಿಯಷ್ಟೇ

ಕಾರ್ಯ ನಿರ್ವಹಿಸಲು ಅರ್ಹತೆ ಪಡೆದಿದ್ದರು. ಐತ್ತರೇಯ ಬ್ರಾಹ್ಮಣಗಳಲ್ಲಿ ಶೂದ್ರರನ್ನು ಸೇವಕ ರೆಂದೂ, ಇಷ್ಟಾನುಸಾರವಾಗಿ ಅವರನ್ನು ಭಂಜಿಸಲ್ಪಡುತ್ತಾರೆಂದೂ, ಮನ ಬಂದಂತೆ ಪೀಡನೆಗೆ ಒಳಗಾಗುತ್ತಾರೆಂದೂ ಚಿತ್ರಿಸಲಾಗಿದೆ. *ಶತಪಥ ಬ್ರಾಹ್ಮಣ*ದಲ್ಲಿ ವೈಶ್ಯ, ಶೂದ್ರ ಜನರನ್ನೂ ಪುರೋಹಿತರ ನೆರವಿನಿಂದ ಅಧೀನಪಡಿಸಿಕೊಳ್ಳುವುದಕ್ಕೆ ರಾಜರುಗಳು ಯಜ್ಞಗಳನ್ನು ಮಾಡಿದ ರೆಂಬುದಕ್ಕೆ ಪುರಾವೆಗಳಿವೆ. ಯಜ್ಞದ ಅಂಗವಾಗಿ ಪ್ರದಕ್ಷಿಣೆ ಮಾಡುವಾಗ ಪುರೋಹಿತರು ಒಂದು ಬದಿಗೆ, ರಾಜರುಗಳು ಇನ್ನೊಂದು ಬದಿಗೆ ನಿಂತು ವೈಶ್ಯ, ಶೂದ್ರ ಜನರನ್ನು ಮಧ್ಯಕ್ಕೆ ಬರುವಂತೆ ಆವರಿಸಿ ಅಧೀನಗೊಳಿಸಿಕೊಳ್ಳಬೇಕೆಂದು ಆ ಬ್ರಾಹ್ಮಣಗಳಲ್ಲಿ ಹೇಳಲಾಗಿದೆ.

ವೈಶ್ಯ, ಶೂದ್ರ ಜನರ ಹೆಚ್ಚುವರಿ ಉತ್ಪಾದನೆಯನ್ನು ಪಾಲಕ ವರ್ಗದವರು ಹೇಗೆ ದಕ್ಕಿಸಿಕೊಳ್ಳುತ್ತಿದ್ದರೆಂಬುದು ಕುತೂಹಲದ ವಿಷಯ. ಸಮುದಾಯ ವ್ಯವಸ್ಥೆಯಲ್ಲಿ ಸಮುದಾಯದ ಜನ ತಾವು ಶೇಖರಿಸಿದ ಆಹಾರದಲ್ಲಿ ಹೆಚ್ಚಾದದ್ದನ್ನು ಆಚರಣೆಯೊಂದಿಗೆ ಹಂಚಿಕೊಳ್ಳುತ್ತಿದ್ದರು. ಸಮುದಾಯದ ಸಾಮಾನ್ಯ ಜನ ತಮ್ಮ ಬಳಿಯಲ್ಲಿನ ಹೆಚ್ಚುವರಿ ಆಹಾರವನ್ನು ಪೂರ್ತಿಯಾಗಿಯೋ, ಸ್ವಲ್ಪ ಭಾಗವನ್ನು ಮಾತ್ರವೋ ಸಮುದಾಯ ಮುಖ್ಯನಿಗೆ ಕೊಡುತ್ತಿದ್ದರು. ಆತ ಅದನ್ನು ವಿಧಿಪೂರ್ವಕವಾಗಿ ದೇವರಿಗೆ ಅರ್ಪಿಸಿ ಎಲ್ಲರಿಗೂ ಹಂಚುತ್ತಾನೆ. ಯುದ್ಧಗಳಲ್ಲಿ ಗೆದ್ದು ತಂದ ಸಂಪತ್ತನ್ನು ಸಹ ಇದೇ ರೀತಿಯಲ್ಲಿ ದೇವರಿಗೆ ಅರ್ಪಿಸಿ ಹಂಚಿಕೊಳ್ಳಲಾಗುತ್ತದೆ. ಈ ವಿಧದಲ್ಲಿ ಸಮುದಾಯ ಮುಖ್ಯಸ್ಥರ ಮೂಲಕ ದೇವರಿಗೆ ಅರ್ಪಿಸಲಾಗುವ ಆಹಾರವನ್ನೇ 'ಬಲಿ' ಎನ್ನುತ್ತಿದ್ದರು. ಆದಿಮ ಸಮುದಾಯ ವ್ಯವಸ್ಥೆಯಲ್ಲಿ ಈ ಬಲಿಯ ಅರ್ಪಣೆಯ ಆಚಾರದಲ್ಲಿಯೇ ವರ್ಗ ವಿಭಜನೆಗೂ, ದೋಚುವಿಕೆಗೂ ಮೂಲ ಅವಕಾಶ ಇದೆ. ಬಲಿಗಳನ್ನು ಪಡೆದುಕೊಂಡು ಅರ್ಪಣೆ ಮಾಡುತ್ತಿದ್ದವರು ಸಮುದಾಯ ಮುಖ್ಯರೇ ಆದ್ದರಿಂದ ಅವರಿಗೆ ಇತರರಿಗಿಂತ ಉನ್ನತವಾದ ಸ್ಥಾನಮಾನವಿದ್ದಿರಬೇಕು. ಹಂಚಿಕೆಯ ಸಮಯದಲ್ಲಿ ಅವರು ಹೆಚ್ಚಿನ ಪಾಲನ್ನೂ ಪಡೆಯುತ್ತಿದ್ದರು. ಆಹಾರ ಸಂಗ್ರಹದ ಹಂತದಿಂದ ಆಹಾರ ಉತ್ಪಾದನಾ ಹಂತಕ್ಕೆ ಬರುವ ವೇಳೆಗೆ ಸಾಮಾಜಿಕ ಸಂಪತ್ತು ಹೆಚ್ಚಿದಂತೆ, ಬಲಿ ರೂಪದಲ್ಲಿ ಸಮುದಾಯ ಮುಖ್ಯರು ಪಡೆಯುತ್ತಿದ್ದ ಪಾಲು ಹೆಚ್ಚತೊಡಗುತ್ತದೆ. ಇವೆಲ್ಲವೂ ಆಚರಣಾವಿಧಿಗಳ ಅಂಗವಾಗಿ ನಡೆಯಲೇಬೇಕಾದ್ದು ಎಂಬುದನ್ನು ನಂಬಿಸುವ ಅಗತ್ಯವೂ ಬೀಳುತ್ತದೆಯಾದ್ದರಿಂದ ಇದರಲ್ಲಿ ಪುರೋಹಿತರ ನೆರವನ್ನು ತೆಗೆದುಕೊಳ್ಳ ಬೇಕಾಗುತ್ತದೆ. ಈ ಕ್ರಮದಲ್ಲಿ ಸಮುದಾಯ ಮುಖ್ಯರು (ರಾಜರು-ಕ್ಷತ್ರಿಯರು)ಗಳೆಂಬ ವರ್ಣದವರಾಗಿ, ಪುರೋಹಿತರ (ಬ್ರಾಹ್ಮಣರು) ನೆರವಿನಿಂದ ವೈಶ್ಯ, ಶೂದ್ರ ಪ್ರಜೆಗಳಿಂದ ಬಲಿಗಳ ನೆಪದಲ್ಲಿ ಹೆಚ್ಚುವರಿ ಉತ್ಪಾದನೆಯನ್ನು ದಕ್ಕಿಸಿಕೊಳ್ಳಲು ಯಶಸ್ವಿಯಾಗುತ್ತಾರೆ.

ಕ್ರಿ.ಪೂ. ೬೦೦ ರ ಹೊತ್ತಿಗೆ ಕ್ಷತ್ರಿಯ, ಬ್ರಾಹ್ಮಣ, ವೈಶ್ಯ ವರ್ಣಗಳು ಸಮುದಾಯ ವ್ಯವಸ್ಥೆಯ ಅಂತರ್ಭಾಗವಾಗಿಯೇ ಜಾರಿಗೆ ಬಂದವು. ಋಗ್ವೇದ ಕಾಲದಲ್ಲಿ 'ರಾಜ'ರೆಂದರೆ ಸರ್ವತಂತ್ರ ಸ್ವತಂತ್ರರಲ್ಲ. ಸಮುದಾಯ ಮುಖ್ಯರ ಸಭೆಯಲ್ಲಿ ಅವರನ್ನು ಪರಿಗಣಿಸ ಲಾಗುತ್ತಿತ್ತು. ಈ ಸಭೆಯ ಮೇರೆಗೆ ಅವರು ನಡೆದುಕೊಳ್ಳುತ್ತಿದ್ದರು. ಆದರೆ ಆರು ಮತ್ತು ಐದನೆ ಶತಮಾನದ ಹೊತ್ತಿಗೆ ರಾಜರು ಈ ಸಭೆಗಳ ನಿಯಂತ್ರಣದಿಂದ ಹೊರ ಬರುವ

ಪ್ರಯತ್ನಗಳನ್ನು ನಡೆಸಲಾರಂಭಿಸಿದರು. ಇದಕ್ಕೆ ರಾಜರಿಗೆ ಸಿಂಹಾಸನವೇರುವಾಗ ಅಭಿಷೇಕ ಆಚರಣೆಯೊಂದು ಹೊಸದಾಗಿ ಆರಂಭವಾಯಿತು. ರಾಜನು ಅಭಿಷಿಕ್ತನಾಗುವ ಸಂದರ್ಭದಲ್ಲಿ ಮಂತ್ರಗಳನ್ನು ಪಠಿಸುವುದು ಯಜ್ಞ-ಯಾಗ ಮಾಡುವುದು ಸಂಪ್ರದಾಯವಾಗಿ ಮೂಡಿಬಂತು. ಇದಕ್ಕೆ ಪುರೋಹಿತರ ನೆರವು ಅಗತ್ಯ. ಅದಕ್ಕಾಗಿಯೇ ಈ ಅಭಿಷೇಕ ವಿಧಿಗಳನ್ನು ಆಚರಿಸುವ ಪುರೋಹಿತರಿಗೆ ದೊಡ್ಡ ಮೊತ್ತದ ದಕ್ಷಿಣೆಗಳನ್ನು ನೀಡಲಾಗುತ್ತದೆ. ಹೀಗೆ ಕ್ಷತ್ರಿಯರೂ, ಬ್ರಾಹ್ಮಣರೂ ಪರಸ್ಪರ ಸಹಕಾರ ನೀಡುತ್ತಾ ತಮ್ಮ ತಮ್ಮ ಪ್ರಾಬಲ್ಯಗಳನ್ನು ಹೆಚ್ಚಿಸಿಕೊಂಡರು.]

ವೇದ ಕಾಲದಿಂದಲೂ ಪ್ರಬಲವಾಗಿ ಪ್ರಚಾರದಲ್ಲಿದ್ದ ಅನೇಕ ಬಗೆಯ ಸಂಸ್ಕಾರಗಳು, ಯಜ್ಞ-ಯಾಗಗಳು ಮತ್ತು ಪಶು ಬಲಿಗಳು ಅನೂಚಾನವಾಗಿ ಕ್ರಿ.ಪೂ. ೬ನೆ ಶತಮಾನದಲ್ಲೂ ಇದ್ದವು. ಆದರೆ ತದನಂತರ ರೂಪುಗೊಂಡ ಹೊಸ ಸಾಮಾಜಿಕ ಮತ್ತು ಆರ್ಥಿಕ ಜೀವನ ಕ್ರಮದ ಯಾವುದೇ ಲಕ್ಷಣಗಳು ಅಂತಹ ಸಂಸ್ಕಾರಗಳಿಗೆ ಸರಿಹೊಂದುತ್ತಿರಲಿಲ್ಲ. ಏಕೆಂದರೆ ವೈಶ್ಯರಿಂದಲೂ, ಶೂದ್ರರಿಂದಲೂ ಹೆಚ್ಚುವರಿ ಉತ್ಪತ್ತಿಯನ್ನು ದೋಚುವಿಕೆಗೆ ಬಳಸಲಾದ ಮುಖ್ಯ ಸಾಧನ ಯಜ್ಞವಿಧಿ ಆಚರಣೆ ಮತ್ತು ಪಶುಬಲಿ. ಪಶುಗಳನ್ನು ಬಲಿಕೊಡುವುದು, ಅವುಗಳನ್ನು ತಿನ್ನುವುದು ಹೊಸದಾಗಿ ಹುಟ್ಟಿಕೊಂಡಿದ್ದ ಕೃಷಿ ವರ್ಗಕ್ಕೆ (ವೈಶ್ಯರಿಗೆ) ಬಹಳ ಹೀನಾಯವಾಗಿ ಕಂಡ ಪದ್ಧತಿ. ಈ ಹಿಂದೆ ಅವರು ಪಶುಗಳನ್ನು ಸಾಕುತ್ತಿದ್ದುದು ಮಾಂಸಕ್ಕಾಗಿ ಅಲ್ಲ. ಬದಲಾಗಿ ಗೊಬ್ಬರಕ್ಕಾಗಿ, ಹಾಲಿಗಾಗಿ ಮತ್ತು ಕೃಷಿ ಭೂಮಿಯಲ್ಲಿ ದುಡಿಮೆಗಾಗಿ. ಆದರೆ ಹಳೆಯ ರೂಢಿ, ಬ್ರಾಹ್ಮಣರಿಗೆ ಜೀವನಾಧಾರ, ಆಚಾರ. ಈ ಸಂಘರ್ಷ, ಅಸಮಾಧಾನ 'ಶತಪಥ ಬ್ರಾಹ್ಮಣ'ದಲ್ಲಿ ದೊರಕುತ್ತವೆ.

ಆಹಾರದಲ್ಲಿ ಹೆಚ್ಚುವರಿ ಉತ್ಪನ್ನದ ಪ್ರಮಾಣ ವೃದ್ಧಿಸುತ್ತಾ ಹೋದಂತೆ ಸಾಮಾಜಿಕ ಶ್ರಮ ವಿಭಜನೆಯೂ ಸೃಷ್ಟಿಯಾಗುತ್ತದೆ. ಆಹಾರ ಮಾತ್ರವಲ್ಲದೆ ಇತರ ಅಗತ್ಯಗಳು ಹುಟ್ಟಿಕೊಳ್ಳುತ್ತವೆ. ಮುಖ್ಯವಾಗಿ ಪಾಲಕ ವರ್ಗವು ತಾನು ಕೃಷಿಕರಿಂದ ದೋಚಿಕೊಂಡ ಹೆಚ್ಚುವರಿ ಆಹಾರ ಉತ್ಪನ್ನವನ್ನು ಆಹಾರವಾಗಿಯೆ ತಿಂದು ಮುಗಿಸುತ್ತಿರಲಿಲ್ಲ. ಈ ಉತ್ಪನ್ನಗಳನ್ನು ಬಳಸಿ ಶ್ರಮಿಕರನ್ನು ಪೋಷಿಸಿ ಅವರಿಂದ ವಿಲಾಸ ವಸ್ತುಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಬೇರೆ ಪ್ರಾಂತಗಳೊಂದಿಗೆ, ವರ್ತಕರೊಂದಿಗೆ ಸಂಪರ್ಕ ಬೆಳೆಸಿ ಇಲ್ಲಿ ದೊರೆಯದ ವಸ್ತುಗಳನ್ನು ತರಿಸಿಕೊಳ್ಳುತ್ತಿದ್ದರು. ಇವರ ಈ ಅಗತ್ಯದ ಪೂರೈಕೆಗಾಗಿ ವರ್ತಕ ವರ್ಗವೊಂದು ಈಗಾಗಲೇ ಚರ್ಚಿಸಿದಂತೆ ಅವರಿಗೆ ಸಹಕರಿಸುತ್ತದೆ. ಆದರೆ ಈ ವರ್ತಕ ವರ್ಗವು ಯಜ್ಞ ಬಲಿಗಳ ರೂಪದಲ್ಲಿ ಹೆಚ್ಚುವರಿ ಉತ್ಪನ್ನಗಳು ವೃಥಾ ಹಾಳಾಗುತ್ತಿದ್ದುದನ್ನು ವಿರೋಧಿಸಲು ಆರಂಭಿಸಿದರು. ನೂತನ ವರ್ಗ ವ್ಯವಸ್ಥೆಯಲ್ಲಿ ಇವರೇ ಪ್ರಬಲರು ಮತ್ತು ಬುದ್ಧನ ಅನುಯಾಯಿಗಳಲ್ಲಿ ಪ್ರಮುಖರು.

ಬ್ರಾಹ್ಮಣ ಸಾಹಿತ್ಯದಲ್ಲಿ 'ಪೌರ ಜಾನಪದ'ರೆಂಬ ವರ್ಗವೊಂದು ಪ್ರಸ್ತಾಪವಾಗುತ್ತದೆ. ಪೌರರು ಎಂದರೆ ಆ ಕಾಲದಲ್ಲಿ ಹುಟ್ಟಿಕೊಂಡ ಪಟ್ಟಣಗಳ ಮುಖಂಡರು, ಅಂದರೆ ವರ್ತಕರು, ರಾಜನ್ಯರು ಪುರೋಹಿತರು ಎಂದರ್ಥ. 'ಜಾನಪದ'ರು ಎಂದರೆ ಗ್ರಾಮಗಳ ಮುಖಂಡರು.

ಈ ಕಾಲದ ಎಲ್ಲಾ ಗ್ರಂಥಗಳನ್ನು ಪರಾಮರ್ಶಿಸಿದರೆ ಸಮುದಾಯದ ರೂಢಿ ಸಂಕೋಲೆಗಳನ್ನು ಮುರಿದು ತಮ್ಮ ಇಚ್ಛಾನುಸಾರವಾಗಿ ಸಂಪತ್ತನ್ನು ವಿನಿಯೋಗಿಸುವುದನ್ನು ರೂಢಿಸಿಕೊಳ್ಳುತ್ತಾ ಈ ಹೊಸ ವರ್ಗಗಳು ತಲೆ ಎತ್ತಿರುವುದು ಸ್ಪಷ್ಟವಾಗಿ ಕಾಣುತ್ತದೆ. ಈ ಶ್ರೀಮಂತರಷ್ಟೇ ಅಲ್ಲದೆ ಸಾಮಾನ್ಯ ಕೃಷಿಕರು ಕೂಡ ರೂಢಿ ಸಂಕೋಲೆಗಳಿಂದ ವಿಮುಕ್ತರಾಗಲು ಬಯಸ ತೊಡಗಿದ್ದರು. ಇವೆಲ್ಲವೂ ವೈದಿಕ ಆಚಾರಗಳನ್ನು ವಿರೋಧಿಸುವ ಪ್ರಕ್ರಿಯೆಯೊಂದಿಗೆ ಆರಂಭವಾಯಿತು. ಹೀಗೆ ವೇದ ಕಾಲದ ಸಂಸ್ಕಾರಗಳು ಮತ್ತು ಹೊಸ ವರ್ಗಗಳ ನಿರೀಕ್ಷೆಗಳ ನಡುವೆ ಸಂಘರ್ಷ ಆರಂಭವಾಗಿ ಅವರು ಹೊಸತೊಂದು ಧರ್ಮದ ಹುಡುಕಾಟಕ್ಕೆ ಚಾಲನೆ ನೀಡಿದರು. ಹೊಸ ಜೀವನ ಕ್ರಮಕ್ಕೆ ಹೊಂದಿಕೊಳ್ಳುವಂತಹ ಧಾರ್ಮಿಕ ಮತ್ತು ಭೌತಿಕ ಸಿದ್ಧಾಂತಗಳ ಹುಡುಕಾಟದಲ್ಲಿ ಜನರು ತೊಡಗಿದರು. ಹಾಗೆ ಕ್ರಿ.ಪೂ. ಆರನೆಯ ಶತಮಾನ ದಲ್ಲಿ ಗಂಗಾ ನದಿ ಬಯಲು ಪ್ರದೇಶದಲ್ಲಿ ಇಂತಹ ಹಲವು ಧಾರ್ಮಿಕ ಶಿಕ್ಷಕರು ತಲೆ ಎತ್ತಿ ವೇದ ಕಾಲಕ್ಕೆ ಸೇರಿದ ಧಾರ್ಮಿಕ ಆಚರಣೆಗಳನ್ನು ಕಟುವಾಗಿ ಟೀಕಿಸತೊಡಗಿದರು ಅಲ್ಲದೆ ಸಂಘಟಿತವಾಗಿ ವಿರೋಧಿಸಲು ಮುಂದಾದರು. ಬುದ್ಧನ ಕಾಲದ ಬರವಣಿಗೆಗಳು ಈ ಕಾಲ ದಲ್ಲಿ ಸುಮಾರು ೬೨ ಕ್ಕೂ ಹೆಚ್ಚು ಮತ-ಪಂಥಗಳು ಹುಟ್ಟಿಕೊಂಡವು ಎಂದು ಹೇಳುತ್ತವೆ. ಅಂತೆಯೇ ಜೈನ ಗ್ರಂಥಗಳಲ್ಲಿ ಇಂತಹ ೩೬೩ ಮತ-ಪಂಥಗಳು ಹುಟ್ಟಿಕೊಂಡವು ಎಂದು ತಿಳಿಸುತ್ತವೆ. ಇವೆಲ್ಲವುಗಳು ಪ್ರಾದೇಶಿಕ ಆಚರಣೆಗಳು ಮತ್ತು ಸಂಸ್ಕಾರಗಳನ್ನು ಆಧರಿಸಿ ಬೆಳೆದವುಗಳು.

ಇವುಗಳಲ್ಲಿ ಮುಖ್ಯವಾದವುಗಳು (ಕ್ರಿ.ಪೂ. ೬ನೇ ಶತಮಾನಕ್ಕೆ ಸಂಬಂಧಿಸಿದಂತೆ) ಬೌದ್ಧ ಮತ್ತು ಜೈನ ಧರ್ಮ. ಈ ಎರಡೂ ಧರ್ಮಗಳು ಹೆಚ್ಚು ಪ್ರಸಿದ್ಧಿಯಾಗಲು ಅನೇಕ ಕಾರಣಗಳೂ ಇವೆ.

೧. ಆರಂಭದ ಹಂತದಲ್ಲಿ ಜೈನ ಹಾಗೂ ಬೌದ್ಧ ಮತಗಳು ಪ್ರಚಲಿತವಾಗಿದ್ದ ವರ್ಣ ವ್ಯವಸ್ಥೆಗೆ ಯಾವುದೇ ಮಹತ್ವ ನೀಡಲಿಲ್ಲ.
೨. ಅವೆರಡೂ ಮತಗಳು ರಾಜ್ಯ ರಾಜ್ಯಗಳ ನಡುವಣ ಯುದ್ಧಗಳಿಗೆ ತಡೆ ವಿಧಿಸಿ ವ್ಯಾಪಾರ, ವಾಣಿಜ್ಯಗಳಿಗೆ ಪ್ರೋತ್ಸಾಹ ನೀಡಬಹುದಾದಂತಹ ಅಹಿಂಸೆಯನ್ನು ಪ್ರತಿಪಾದಿಸು ತ್ತಿದ್ದವು.
೩. ವೈದಿಕ ಸಂಪ್ರದಾಯದಲ್ಲಿ ಸಮುದ್ರ ದಾಟುವುದು ಅಪರಾಧವೆಂದು ಪರಿಗಣಿಸಿದರೆ ಬೌದ್ಧ ಮತ್ತು ಜೈನ ಧರ್ಮಗಳು ಅದನ್ನು ವಿರೋಧಿಸಿದವು. ಇದರಿಂದ ಸಮುದ್ರ ಯಾನದಿಂದ ವ್ಯಾಪಾರಿಗಳಿಗೆ ಸಂಪರ್ಕ ಜಾಲ ಜಾಸ್ತಿಯಾಯಿತು.
೪. ಧರ್ಮಸೂತ್ರಗಳು, ಬಡ್ಡಿಯ ಮೇಲೆ ಹಣವನ್ನು ಸಾಲ ನೀಡುವುದನ್ನು ಧಿಕ್ಕರಿಸಿ, ಅಂತವರನ್ನು ಖಂಡಿಸುತ್ತಿದ್ದವು. ಆ ಕಾರಣದಿಂದ ವಿಸ್ತಾರಗೊಳ್ಳುತ್ತಿದ್ದ ವ್ಯಾಪಾರ-ವಾಣಿಜ್ಯಗಳಿಗಾಗಿ ಬಡ್ಡಿಗೆ ಹಣ ನೀಡುತ್ತಿದ್ದ ವೈಶ್ಯರಲ್ಲಿ ಸಮಾಜವು ಗೌರವಭಾವ ತಳೆದಿರಲಿಲ್ಲ. ಅವರು ತಮ್ಮ ಸ್ಥಾನ-ಮಾನಗಳನ್ನು ಉತ್ತಮಪಡಿಸಿಕೊಳ್ಳುವುದಕ್ಕೆ

ಕಾತುರರಾಗಿದ್ದರು. ಅಲ್ಲದೆ ವರ್ಣವಿಭಜಿತ ಸಮಾಜದಲ್ಲಿ ಮೂರನೆಯ ಸ್ಥಾನದಲ್ಲಿದ್ದ ವೈಶ್ಯರು ಬೇರಾವುದಾದರೂ ಮತಧರ್ಮದತ್ತ ಗಮನ ನೀಡಿದರು. ಸಹಜವಾಗಿ ಅವರು ಮಹಾವೀರ ಮತ್ತು ಗೌತಮ ಬುದ್ಧರಿಗೆ ಧಾರಾಳವಾಗಿ ಬೆಂಬಲ ನೀಡಿದರು.

೫. ಹೊಸದಾಗಿ ನೆಲೆಗೊಂಡಿದ್ದ ನಾನಾ ರೀತಿಯ ಖಾಸಗಿ ಆಸ್ತಿಯ ಸ್ವರೂಪಗಳು ಸಹ ತೀವ್ರ ಪ್ರತಿಕ್ರಿಯೆಗಳನ್ನು ಎದುರಿಸಿದವು. ಹೊಸ ಬಗೆಯ ಆಸ್ತಿಗಳು ಆರ್ಥಿಕವಾಗಿ ಸಾಮಾಜಿಕ ಅಸಮತೋಲಗಳನ್ನು ಹುಟ್ಟಿಸಿ, ಜನಸಾಮಾನ್ಯರನ್ನು ದರಿದ್ರ ಮತ್ತು ಹಿಂಸೆಗಳಿಗೆ ಗುರಿ ಮಾಡಿದವು. ಆದರೆ ಜೈನ ಮತ್ತು ಬೌದ್ಧ ಮತಗಳೆರಡೂ ಸರಳ, ಶುದ್ಧ, ವಿರಕ್ತ ಜೀವನವನ್ನೆತ್ತಿ ಹಿಡಿದವು. ಎರಡೂ ಮತಗಳು ತಮ್ಮ ಶ್ರವಣ ಹಾಗೂ ಭಿಕ್ಷುಗಳನ್ನು ಜೀವನದ ಆಕರ್ಷಕ ಅಂಶಗಳಿಂದ ದೂರವಿರುವಂತೆ ಬೋಧಿಸಿದವು. ತಮ್ಮ ಅನುಯಾಯಿಗಳಿಂದ ಜೀವಂತವಾಗಿರಲು ಎಷ್ಟು ಅಗತ್ಯವೋ ಅಷ್ಟನ್ನು ಮಾತ್ರ ಸ್ವೀಕರಿಸಬೇಕು ಎಂದು ಕರೆನೀಡಿದವು. ಈ ಮತ ಪಂಥಗಳು ಗಂಗಾ ಬಯಲಿನಲ್ಲಿ ಉಗಮವಾದ ಹೊಸ ಜೀವನ ವಿಧಾನದ ಐಹಿಕ ಸೌಲಭ್ಯಗಳ ವಿರುದ್ಧ ಕ್ರಿ.ಪೂ. ೬ ನೆಯ ಶತಮಾನದಲ್ಲಿ ಎದ್ದ ಬಂಡಾಯಗಳು.

## ಜೈನ ಧರ್ಮ ಮತ್ತು ಅದರ ಬೋಧನೆಗಳು

ಜೈನ ಧರ್ಮವು ಭಾರತದಲ್ಲಿ ಆರಂಭ ಕಾಲದ ಸಂಪ್ರದಾಯ ವಿರೋಧಿ ಧರ್ಮಗಳಲ್ಲಿ ಒಂದಾಗಿದ್ದಿತು. ಇದನ್ನು ಸಂಸ್ಥಾಪಿಸಿದವನು 'ವರ್ಧಮಾನ' ಎಂಬ ವಿದೇಹ (ಈಗಿನ ಬಿಹಾರ) ದೇಶದ ಒಬ್ಬ ಕ್ಷತ್ರಿಯ. ಇವನ ತಂದೆಯಾದ ಜ್ಞಾತೃಕ ಸಿದ್ಧಾರ್ಥನು ವೈಶಾಲಿಯ ಕುಂದ ಗ್ರಾಮಕ್ಕೆ ಸೇರಿದವನು. ವರ್ಧಮಾನನ ತಾಯಿಯಾದ ತ್ರಿಶಳೆಯು ವೈಶಾಲಿಯ ಲಿಚ್ಛವಿ ವಂಶಕ್ಕೆ ಸೇರಿದವಳು. ವರ್ಧಮಾನನು ಯಶೋಧಾ ಎಂಬುವವಳನ್ನು ವಿವಾಹವಾಗಿ ಅವಳಿಂದ ಒಬ್ಬ ಪುತ್ರಿಯನ್ನು ಪಡೆದನು. ಆದರೆ ಅವನ ವಯಸ್ಸು ಐಹಿಕ ಸುಖಗಳಿಂದ ದೂರವಾಗಿಯೇ ಇದ್ದಿತು. ಕೊನೆಗೆ ತನ್ನ ತಂದೆತಾಯಿಗಳ ಮರಣಾನಂತರ, ತನ್ನ ಹಿರಿಯ ಅಣ್ಣನ ಅನುಮತಿಯನ್ನು ಪಡೆದು ಮನೆಯನ್ನು ತ್ಯಜಿಸಿ, ಸನ್ಯಾಸಿಯಾಗಿ ಘೋರ ತಪಸ್ಸನ್ನು ಹನ್ನೆರಡು ವರುಷಗಳ ಕಾಲ ಮಾಡಿ ಕೇವಲ ಜ್ಞಾನವನ್ನು ಪಡೆದ 'ಜಿನ' (ಜಯಿಸಿದವನು) ಮತ್ತು 'ಮಹಾವೀರ'ನಾದನು.

ಜೈನರು ತಮ್ಮ ಅತ್ಯಂತ ಮುಖ್ಯ ಮತಧರ್ಮ ಗುರುವಾದ ಮಹಾವೀರನಿಗಿಂತ ಮೊದಲು ತೀರ್ಥಂಕರರೆಂದು ಕರೆಯಲಾಗುವ ೨೩ ಮಂದಿ ಗುರುಗಳಿದ್ದರೆಂದು ನಂಬುತ್ತಾರೆ. ಅವರಲ್ಲಿ ವೃಷಭನಾಥನನ್ನು ಮೊದಲ ಹಾಗೂ ಜೈನಧರ್ಮದ ಸ್ಥಾಪಕ ತೀರ್ಥಂಕರನೆಂದು ನಂಬ ಲಾಗಿದೆ. ವೃಷಭದೇವನು ಅಯೋಧ್ಯೆಯ ರಾಜ ಮನೆತನಕ್ಕೆ ಸೇರಿದವನು. ನಾಭಿರಾಜ ಮತ್ತು ಪುರುದೇವಿ ಇವನ ತಂದೆ-ತಾಯಿಗಳು. ಪುರುದೇವನೆಂತಲೂ ಕರೆಯಲ್ಪಡುವ ವೃಷಭದೇವನಿಗೆ ನೂರು ಜನ ಮಕ್ಕಳು ಇದ್ದರೆಂದು ಪ್ರತೀತಿ. ಅವರಲ್ಲಿ ಭರತ, ಬಾಹುಬಲಿ ಗಳು ಪ್ರಮುಖರು. ಜೈನ ಮಹಾಪುರಾಣದಲ್ಲಿ ೨೪ ತೀರ್ಥಂಕರರ ಬಗ್ಗೆಯೂ ಹೆಚ್ಚಿನ

ಮಾಹಿತಿಗಳಿವೆ. ವೃಷಭದೇವನೇ ಜೈನಧರ್ಮದ ಮೂಲಪುರುಷನೆಂದು ನಂಬಲಾಗಿರುವುದರಿಂದ ಮೊದಲ ಆದ್ಯತೆ ಇವನಿಗೆ ಸಲ್ಲುತ್ತದೆ. ಆದ್ದರಿಂದಲೇ ಈತನನ್ನು 'ಆದಿನಾಥ' ಎಂದು ಕರೆಯುತ್ತಾರೆ. ಆದಿನಾಥನು ಬ್ರಹ್ಮಚರ್ಯ, ಅಹಿಂಸೆ, ಸತ್ಯ, ನಿಸ್ವಾರ್ಥದಂಥ ತತ್ವಗಳನ್ನು ಬೋಧಿಸುವುದರ ಜೊತೆಗೆ ಹೆಣ್ಣು ಮಕ್ಕಳು ಮೊದಲು ಶಿಕ್ಷಿತರಾಗಬೇಕು ಎಂದು ಹೇಳಿದವನು. ವೃಷಭದೇವನ ಅನಂತರ ಅಜಿತನಾಥ, ನೇಮಿನಾಥ, ಪಾರ್ಶ್ವನಾಥ, ವರ್ಧಮಾನ ಮೊದಲಾದ ತೀರ್ಥಂಕರರು ಜೈನ ಧರ್ಮದ ತತ್ವಗಳನ್ನು ಮುಂದುವರೆಸಿಕೊಂಡು ಬಂದರು. ಇವರಲ್ಲಿ ೨೩ ನೆಯ ತೀರ್ಥಂಕರನೇ ಪಾರ್ಶ್ವನಾಥ.

ಕಾಶಿಯ ದೊರೆ ಅಶ್ವಸೇನನ ಮಗನೇ ಪಾರ್ಶ್ವನಾಥ (ಕ್ರಿ.ಪೂ. ೮೫೦). ಮಹಾವೀರನಿಗಿಂತಲೂ ಎರಡು ನೂರು ವರುಷಗಳಿಗೆ ಮುಂಚೆ ಪಾರ್ಶ್ವನಾಥ ಬದುಕಿದ್ದ. ಪಾರ್ಶ್ವನಾಥನು ಸಾಂಸಾರಿಕ ಜೀವನವನ್ನು ಪರಿತ್ಯಜಿಸಿ, ತಪಸ್ಸಿನಿಂದ ಮುಕ್ತಿ ಪಡೆದು ಅನಂತರ ಜೈನಧರ್ಮದ ತತ್ವಗಳನ್ನು ಪ್ರಚುರಪಡಿಸಿದ. ಇವನನ್ನು 'ಜೈನಧರ್ಮದ ನಿಜವಾದ ಸ್ಥಾಪಕ'ನೆಂತಲೂ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇವನು ನೂರು ವರುಷಗಳ ಕಾಲ ಜೀವಿಸಿದ್ದನು. ಪಾರ್ಶ್ವನಾಥನ ನಂತರ ೨೪ ನೆಯ ತೀರ್ಥಂಕರನಾಗಿ ಕಾಣಿಸಿಕೊಂಡವನೇ ಮಹಾವೀರ. ವರ್ಧಮಾನ ಮಹಾವೀರ ಕ್ರಿ.ಪೂ. ೫೪೩ ರಲ್ಲಿ ಉತ್ತರ ಬಿಹಾರದ ವೈಶಾಲಿ ಜಿಲ್ಲೆಯಲ್ಲಿರುವ ಬಸಾರ್ ಎಂದು ಗುರುತಿಸಲ್ಪಡುವ ಪ್ರಾಚೀನ ವೈಶಾಲಿಯ ಬಳಿಯ ಒಂದು ಹಳ್ಳಿಯಲ್ಲಿ ಹುಟ್ಟಿದನು.

ಹನ್ನೆರಡು ವರ್ಷಗಳ ತಪಶ್ಚರ್ಯದ ನಂತರ ಹೊಸ ಬೋಧನೆಯೊಂದರ ಸೂತ್ರಗಳು ಅವನ ಮನಸ್ಸಿನಲ್ಲಿ ರೂಪುಗೊಂಡಿದ್ದವು. ನಂತರ ಇವನು ತನ್ನ ಹೊಸ ಸಿದ್ಧಾಂತಗಳನ್ನು ಜನಗಳಿಗೆ ಬೋಧಿಸಲು ಆರಂಭಿಸಿ, ಮಗಧ, ಅಂಗ ಮುಂತಾದ ರಾಜ್ಯಗಳಲ್ಲಿ ಸಂಚರಿಸಿದನು. ಅದೇ ಹೊತ್ತಿನಲ್ಲಿ ತನ್ನ ಅನುಯಾಯಿಗಳ ಮಹಾಪೂರವನ್ನು ಭಾರಿ ಸಂಖ್ಯೆಯಲ್ಲಿ ಸಂಘಟಿಸಿದ. ಆರಂಭದಲ್ಲಿ ಅವನ ಬೋಧನೆಗಳು ಬಿಹಾರದಲ್ಲಷ್ಟೇ ಪ್ರಚಾರವಾಗಿದ್ದವು. ಅಲ್ಲಿ ಅವನು ಪ್ರಭಾವಶಾಲಿ ಪೋಷಕರನ್ನು ಹೊಂದಿದ್ದ. ಅನಂತರ ಅವನ ಬೋಧನೆಯ ಕೇಂದ್ರಗಳು ಭಾರತದ ಮೂಲೆ ಮೂಲೆಗಳಲ್ಲೂ ಬೆಳೆದವು. ಈ ಹೊಸ ಧರ್ಮಕ್ಕೆ ಸನ್ಯಾಸ ಜೀವನ ನಡೆಸುತ್ತಿದ್ದವರಲ್ಲದೆ ಅನೇಕ ಸಾಮಾನ್ಯ ಜನರೂ ಸೇರಿಕೊಂಡು, ಮಹಾವೀರನ ಅನುಯಾಯಿಗಳ ಸಂಖ್ಯೆಯನ್ನು ಹೆಚ್ಚಿಸಿದರು. ಈ ಸಾಮಾನ್ಯ ಜನರು ಆಸ್ತಿಪಾಸ್ತಿಗಳನ್ನಾಗಲಿ, ಕೌಟುಂಬಿಕ ಜೀವನವನ್ನಾಗಲಿ ಬಿಟ್ಟುಕೊಡಲಿಲ್ಲ. ಆದರೆ ಜೈನ ಬೋಧನೆಯಲ್ಲಿ ತಿಳಿಸಲಾದ ವಿಶಿಷ್ಟ ಕರ್ಮಗಳನ್ನು ಆಚರಿಸುತ್ತಿದ್ದರು. ಅನಂತರ ಜೈನ ಮತ ಧರ್ಮವು ಭಾರತದ ಸಾಂಸ್ಕೃತಿಕ ಜೀವನದಲ್ಲಷ್ಟೇ ಅಲ್ಲ ಸಾಮಾಜಿಕ ಜೀವನದಲ್ಲೂ ಮಹತ್ವಪೂರ್ಣ ಅಂಶವಾಯಿತು.

ಮಹಾವೀರನು ಮೂರು ತತ್ವಗಳನ್ನು ಒತ್ತಿ ಹೇಳಿದ್ದಾನೆ. ಅವುಗಳನ್ನು ಜೈನ ಧರ್ಮದ 'ತ್ರಿರತ್ನ'ಗಳೆಂದು ಕರೆಯುತ್ತಾರೆ. ಅವುಗಳು - 'ಸಂಯಕ್ ದರ್ಶನ', 'ಸಂಯಕ್ ಜ್ಞಾನ'

ಮತ್ತು 'ಸಂಯಕ್ ಚರಿತ'. 'ಸಂಯಕ್ ದರ್ಶನ' ಎಂದರೆ ಮಹಾವೀರನ ಉಪದೇಶಗಳಲ್ಲಿ ನಿಜವಾದ ಶ್ರದ್ಧೆ ಮತ್ತು ನಂಬಿಕೆ. 'ಸಂಯಕ್ ಜ್ಞಾನ'ವೆಂದರೆ ಪ್ರಪಂಚವು ಜೀವ ಮತ್ತು ಅಜೀವಗಳಿಂದ ತುಂಬಿರುವುದೆಂದೂ, ಪ್ರತಿಯೊಂದು ಜೀವವು ತನ್ನ ಸ್ವಪ್ರಯತ್ನದಿಂದ ಕರ್ಮಗಳನ್ನು ಮಾಡಿ ತನ್ನ ನಿರ್ವಾಣವನ್ನು ಸಾಧಿಸಿಕೊಳ್ಳಬೇಕು ಎಂಬ ಜ್ಞಾನ. 'ಸಂಯಕ್ ಚರಿತ'ವೆಂದರೆ ಒಳ್ಳೆಯ ನಡತೆ. ಒಳ್ಳೆಯ ನಡತೆಯು ಐದು ತತ್ವಗಳನ್ನುಳ್ಳದ್ದಾಗಿರುತ್ತದೆ. ಅವುಗಳೇ ಅಹಿಂಸಾ, ಸತ್ಯ, ಅಸ್ತೇಯ (ಕಳ್ಳತನ ಮಾಡದಿರುವುದು), ಬ್ರಹ್ಮಚರ್ಯ ಮತ್ತು ಅಪರಿಗ್ರಹ. ಮಹಾವೀರನು ಅಹಿಂಸೆಯನ್ನು ಬಹು ಕಠಿಣತರಕ್ಕೆ ಕೊಂಡೊಯ್ದನು. ಮನುಷ್ಯ, ಪ್ರಾಣಿಗಳು, ಗಿಡಮರಗಳು ಮಾತ್ರವಲ್ಲದೆ ಇತರ ಪದಾರ್ಥಗಳಿಗೂ ಜೀವವಿರುವುದೆಂದೂ ಆದರಿಂದ ಹಿಂಸೆಯನ್ನು ತ್ಯಜಿಸಬೇಕೆಂದೂ ಪ್ರತಿಪಾದಿಸಿದನು.

ಜೈನ ಧರ್ಮದಲ್ಲಿ ಉಂಟಾದ ಏಕೈಕ ಗಹನವಾದ ಒಡಕು ಸನ್ಯಾಸ ಆಚರಣೆಗೆ ಸಂಬಂಧಿಸಿದ್ದು, ಅವರಲ್ಲಿ 'ಶ್ವೇತಾಂಬರರು' ಹಾಗೂ 'ದಿಗಂಬರರು' ಎಂಬ ಎರಡು ಪಂಗಡಗಳು ಹುಟ್ಟಿಕೊಂಡವು. ಉಡುಪನ್ನೆ ತೊರೆದಂಥ ಹೆಚ್ಚು ಸಂಪ್ರದಾಯಬದ್ಧರಾದ ದಿಗಂಬರ ಪಂಥದವರು ಬಿಳಿ ಉಡುಪುಧಾರಿಗಳಾದ ಶ್ವೇತಾಂಬರರನ್ನು ಟೀಕಿಸತೊಡಗಿದರು.

ದಕ್ಷಿಣ ಭಾರತದಲ್ಲಿ ಜೈನ ಧರ್ಮ ಹರಡಲು ಮುಖ್ಯವಾಗಿ ಪಾಟಲಿಪುತ್ರದಲ್ಲಿ ಉದ್ಭವಿಸಿದ ಕ್ಷಾಮವೇ ಕಾರಣವೆಂದು ಹೇಳಲಾಗಿದೆ. ಕ್ರಿ.ಪೂ. ನಾಲ್ಕನೆಯ ಶತಮಾನದ ಕೊನೆಯ ಭಾಗದಲ್ಲಿ ದಕ್ಷಿಣ ಬಿಹಾರಿನಲ್ಲಿ ಹುಟ್ಟಿಕೊಂಡ ಕ್ಷಾಮದಿಂದ ತೊಂದರೆಗೀಡಾದ ಜೈನರ ಒಂದು ಗುಂಪು ಭದ್ರಬಾಹುವಿನ ನೇತೃತ್ವದಲ್ಲಿ ಮೈಸೂರಿನ ಸಮೀಪದಲ್ಲಿರುವ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದರು. ಹೀಗೆ ದಕ್ಷಿಣಕ್ಕೆ ವಲಸೆ ಬಂದ ಜೈನ ಧರ್ಮ ಅನುಯಾಯಿಗಳು ದಕ್ಷಿಣ ಭಾರತದಲ್ಲಿ ಮಹಾವೀರನ ಸಿದ್ಧಾಂತಗಳನ್ನು ಮತ್ತು ಬೋಧನೆಗಳನ್ನು ಪ್ರಚಾರ ಮಾಡಿದರು.

ಪಾಟಲೀಪುತ್ರದಲ್ಲಿ ಕ್ಷಾಮ ಮುಗಿದ ನಂತರ ದಕ್ಷಿಣಕ್ಕೆ ವಲಸೆ ಬಂದ ಜೈನರು ಅಲ್ಲಿಗೆ ವಾಪಾಸಾದರು. ಆದರೆ ಪಾಟಲೀಪುತ್ರದಲ್ಲಿಯೇ ಕ್ಷಾಮದ ವೇಳೆ ನೆಲೆಸಿದ್ದ ಜೈನರು ಅವರನ್ನು ಟೀಕಿಸತೊಡಗಿದರು. ದಕ್ಷಿಣದಿಂದ ಹಿಂದಿರುಗಿದ ಜೈನ ಸನ್ಯಾಸಿಗಳು ಸರಿಯಾಗಿ ಧರ್ಮದ ನಿಯಮ ಪಾಲನೆ ಮಾಡಿರಲಿಲ್ಲವೆಂದು ಅಪಾದಿಸಿ, ತಾವು ಮಾತ್ರ ಅವನ್ನು ಪಾಲಿಸುತ್ತಾ ಬಂದವರೆಂದು ಸಮರ್ಥಿಸಲು ಹೊರಟರು. ಇದರಿಂದ ಈ ಎರಡೂ ಗುಂಪುಗಳ ನಡುವೆ ಬಿರುಕು ಹುಟ್ಟಿಕೊಂಡಿತು. ಇದನ್ನು ಪರಿಹರಿಸಲು ಪಾಟಲೀಪುತ್ರದಲ್ಲಿ ಒಂದು ಧರ್ಮ ಸಮ್ಮೇಳನವನ್ನು ಮಾಡಿ ಅಲ್ಲಿಯೇ ಉಳಿದಿದ್ದ ಜೈನರು ಕೆಲವು ಸಿದ್ಧಾಂತಗಳನ್ನು ಒಪ್ಪಿಕೊಂಡರು. ಬಿಳಿಯ ಶುಭ್ರವಾದ ಬಟ್ಟೆಯನ್ನು ಧರಿಸುವ ನಿರ್ಧಾರವು ಆ ಸಿದ್ಧಾಂತಗಳಲ್ಲಿ ಒಂದು. ಮಹಾವೀರನ ಸಿದ್ಧಾಂತಗಳಲ್ಲಿ ಬದಲಾವಣೆಗಳನ್ನು ಒಪ್ಪದ ದಕ್ಷಿಣದಿಂದ ವಾಪಾಸಾದ ಜೈನರು ಒಪ್ಪಲಿಲ್ಲ ಮತ್ತು ಆ ಸಮ್ಮೇಳನವನ್ನು ಬಹಿಷ್ಕರಿಸಿದರು. ಹಾಗೆ ದಕ್ಷಿಣಕ್ಕೆ ವಲಸೆ ಬಂದ ಜೈನರು 'ದಿಗಂಬರ'ರೆಂದು ಪ್ರಸಿದ್ಧಿಯಾದರು. ಆದರೆ

ಪಾಟಲೀಪುತ್ರದಲ್ಲಿದ್ದು ಬಿಳಿ ಬಟ್ಟೆಯನ್ನು ಧರಿಸುತ್ತಿದ್ದ ಜೈನರು 'ಶ್ವೇತಾಂಬರ'ರೆಂದು ಕರೆಯಲ್ಪಟ್ಟರು.

ಕರ್ನಾಟಕದಲ್ಲಿ ಜೈನ ಮತ ಹರಡಿರುವುದಕ್ಕೆ ಶಾಸನಗಳ ಪ್ರಕಾರ ಅತ್ಯಂತ ಹಳೆಯ ದಾಖಲೆ ದೊರೆಯುವುದು ಕ್ರಿ.ಶ. ಮೂರನೆಯ ಶತಮಾನದಿಂದ. ಒಂದು ಐತಿಹ್ಯದ ಪ್ರಕಾರ ಕರ್ನಾಟಕಕ್ಕೆ ಜೈನ ಮತವನ್ನು ತಂದವನು ಚಂದ್ರಗುಪ್ತ ಮೌರ್ಯ (ಕ್ರಿ.ಪೂ. ೩೨೨-೨೯೮). ಈ ಚಕ್ರವರ್ತಿಯು ಜೈನ ಸನ್ಯಾಸಿಯಾಗಿ, ಸಿಂಹಾಸನವನ್ನು ಬಿಟ್ಟು ತನ್ನ ಕೊನೆಗಾಲವನ್ನು ಕರ್ನಾಟಕದಲ್ಲಿ ಕಳೆದನೆಂದು ಹೇಳಲಾಗಿದೆ. ಬೇರೆ ಯಾವ ಮೂಲವು ಇದನ್ನು ಸಮರ್ಥಿಸುವುದಿಲ್ಲ. ಆದರೆ ಸುಮಾರು ಐದನೆಯ ಶತಮಾನದ ನಂತರ ಕರ್ನಾಟಕದಲ್ಲಿ 'ಜೈನ ಬಸದಿಗಳು' ಎಂಬ ಜಿನಾಲಯಗಳು ತಲೆ ಎತ್ತಿದವು. ಅವುಗಳು ರಾಜಾಶ್ರಯದಲ್ಲಿ ಹೆಚ್ಚು ಬಲಪಡೆದವು.

ಜೈನ ಧರ್ಮವು ಬೇಗನೆಯೇ ಇನ್ನುಳಿದ ಕಡೆಗೂ ಹರಡಿತು. ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಅದು ಕಳಿಂಗಕ್ಕೂ ಹರಡಿತು. ನಂತರ ತಮಿಳುನಾಡು, ಗುಜರಾತ್, ಆಂಧ್ರ, ರಾಜಾಸ್ತಾನಗಳಿಗೂ ಹರಡಿತು. ಈಗಲೂ ಈ ಪ್ರದೇಶಗಳಲ್ಲಿ ಗಣನೀಯ ಸಂಖ್ಯೆಯಲ್ಲಿ ಜೈನರು ಇದ್ದು, ವಾಣಿಜ್ಯ ವ್ಯವಹಾರಗಳಲ್ಲಿ ತೊಡಗಿದ್ದರು. ಮಹಾವೀರನ ಉಪದೇಶಗಳು ಎಷ್ಟೊಂದು ಜನಾನುರಾಗಿಯಾಗಿದ್ದಿತೆನ್ನುವುದಕ್ಕೆ ಇದೇ ಸಾಕ್ಷಿ.

ಪುರಾತನ ಕಾಲದಲ್ಲಿಯೂ, ಮಧ್ಯಯುಗದಲ್ಲಿಯೂ ಭಾರತೀಯ ಸಂಸ್ಕೃತಿಯ ಮೇಲೆ ಜೈನ ಧರ್ಮದ ಪ್ರಭಾವ ಗಣನೀಯವಾಗಿದ್ದಿತು. ಜೈನ ಧರ್ಮವು ವಿಪುಲ ಸಾಹಿತ್ಯ ಸೃಷ್ಟಿಗೆ ಸ್ಫೂರ್ತಿ ನೀಡಿತು. ಅದರ ತತ್ವಶಾಸ್ತ್ರದಲ್ಲಿ ಅಂತರ್ಗತವಾದ ವಾಸ್ತವಿಕತೆಯು ಜೈನರು ವಿಜ್ಞಾನದ ನಾನಾ ಕ್ಷೇತ್ರಗಳಲ್ಲಿ ಆಸಕ್ತಿ ತಳೆಯುವಂತೆ ಮಾಡಿತು. ಪುರಾತನ ಭಾರತದ ವೈಜ್ಞಾನಿಕ ಸಾಧನೆಯ ಕ್ಷೇತ್ರದಲ್ಲಿ ಜೈನರು ನೀಡಿದ ಕಾಣಿಕೆ ಗಮನಾರ್ಹವಾಗಿದೆ. ಮಧ್ಯಯುಗದ ಕಲೆ ಹಾಗೂ ಶಿಲ್ಪಗಳಿಗೂ ಜೈನರ ಕೊಡುಗೆ ಅಪಾರವಾದುದು. ಕರ್ನಾಟಕ, ಗುಜರಾತ್, ರಾಜಾಸ್ತಾನ ಮತ್ತು ಮಧ್ಯಪ್ರದೇಶಗಳಲ್ಲಿ ಅತ್ಯಂತ ಸುಂದರವೂ ಮತ್ತು ಕೆಲವೆಡೆ ಬೃಹದಾಕಾರದವೂ ಆದ ಜೈನ ತೀರ್ಥಂಕರರ ಶಿಲಾ ಪ್ರತಿಮೆಗಳಿವೆ.

## ಬೌದ್ಧ ಧರ್ಮ: ಆರಂಭ, ತತ್ವಗಳು ಮತ್ತು ಹರಡುವಿಕೆ

ಬೌದ್ಧ ಧರ್ಮದ ಸ್ಥಾಪಕ ಗೌತಮ ಬುದ್ಧ. ಸಿದ್ಧಾರ್ಥನು ನೇಪಾಳ ಬೆಟ್ಟಗಳ ತಪ್ಪಲಿನಲ್ಲಿರುವ ಕಪಿಲವಸ್ತುವಿನ ಒಂದು ಶಾಕ್ಯ ಸಮುದಾಯಕ್ಕೆ ಸೇರಿದವನು. ಕ್ರಿ.ಪೂ. ೫೬೩ ರಲ್ಲಿ 'ಲುಂಬಿಣಿ' ಎಂಬಲ್ಲಿ ಜನಿಸಿದರು. ಅವನ ತಂದೆ ಕಪಿಲವಸ್ತುವಿನ ರಾಜ ಶುದ್ಧೋದನ. ತಾಯಿ ಮಾಯಾದೇವಿ, ಕೋಸಲದ ರಾಜವಂಶಕ್ಕೆ ಸೇರಿದವಳು. ಜೈನ ಪ್ರವರ್ತಕನಾದ ಮಹಾವೀರನ ಸಮಕಾಲೀನ. ಸಮುದಾಯ ಸಮಾಜದಲ್ಲಿ ಹುಟ್ಟಿದ ಈ ಇಬ್ಬರೂ, ತಮ್ಮ ಸಮುದಾಯಗಳನ್ನು ತೊರೆದು, ಸಮುದಾಯ ಬಂಧನಗಳನ್ನು ದಾಟಿ,

ಭಿಕ್ಷುಗಳಾಗಿ, ನೂತನ ಕೃಷಿ ಸಮಾಜಕ್ಕೆ ಅನುಕೂಲಕರವೆನಿಸುವ ಸಿದ್ಧಾಂತಗಳನ್ನು ರೂಪಿಸಿದರೆಂಬ ಅಂಶವು ಗಮನಾರ್ಹವಾದುದು.

ಸಿದ್ಧಾರ್ಥನು ಯಶೋಧರೆಯನ್ನು ವಿವಾಹವಾಗಿ ರಾಹುಲ ಎಂಬ ಮಗನನ್ನು ಪಡೆದನು. ಕಾಲಕ್ರಮೇಣ ಸಿದ್ಧಾರ್ಥನಿಗೆ ತನ್ನ ಸುಖಮಯ ಜೀವನ ನಶ್ವರವೆಂದೂ, ಜೀವನದಲ್ಲಿ ಮುಪ್ಪು, ಮರಣ ಮುಂತಾದ ನ್ಯೂನತೆಗಳಿರುವುದೆಂದೂ ತಿಳಿಯಿತು. ಈ ಜಗತ್ತಿನಲ್ಲಿ ಜನರು ಪಡುವ ಕಷ್ಟಗಳಿಂದ ಅವನ ಮನಸ್ಸು ನೊಂದಿತು. ಅವನ ಮನಸ್ಸು ಈ ದುಃಖಕ್ಕೆ ಕಾರಣ ಹೋಗಲಾಡಿಸುವ ಉಪಾಯವನ್ನು ಹುಡುಕತೊಡಗಿತು. ಕೊನೆಗೆ ತನ್ನ ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ಮನೆಯನ್ನು ತ್ಯಜಿಸಿ ಏಳುವರ್ಷಗಳ ಕಾಲ ಪರ್ಯಟನ ಮಾಡಿ, ಕೊನೆಗೆ ಈಗಿನ 'ಬುದ್ಧಗಯೆ'ಯಲ್ಲಿ ಬೋಧಿವೃಕ್ಷದ ಕೆಳಗೆ ಕುಳಿತುಕೊಂಡು ಏಕಚಿತ್ತತೆಯಿಂದ ಧ್ಯಾನವನ್ನು ಆರಂಭಿಸಿದನು. ಈ ವೃಕ್ಷದ ಕೆಳಗೆ ಅವನಿಗೆ ಜ್ಞಾನೋದಯವಾಯಿತು. ಅವನು 'ತಥಾಗತ' (ಸತ್ಯವನ್ನು ಕಂಡವನು)ನಾದನು. ಅಂದಿನಿಂದ ಅವನು 'ಬುದ್ಧ' ಅಂದರೆ 'ಜ್ಞಾನವನ್ನು ಸಾಧಿಸಿದವನು' ಎಂದು ಕರೆಯಲ್ಪಟ್ಟನು. ಸತ್ಯವನ್ನು ಅರಿತ ಕೂಡಲೇ ಆ ಜ್ಞಾನವನ್ನು ಇತರ ಜನಗಳಿಗೆ ಬೋಧಿಸಿ ಅವರ ದುಃಖವನ್ನು ನೀಗಿಸಿ ಅವರಿಗೆ ಮಾರ್ಗದರ್ಶನ ಮಾಡಬೇಕೆಂಬ ಉತ್ಕಟಾಕಾಂಕ್ಷೆಯಿಂದ ಬುದ್ಧನು ಹೊರಟನು. ಕಾಶಿಯ ಹತ್ತಿರವಿರುವ ಸಾರನಾಥದಲ್ಲಿ ಮೊಟ್ಟ ಮೊದಲನೆಯದಾಗಿ ತನ್ನ ಉಪದೇಶವನ್ನು ಆರಂಭಿಸಿ 'ಧರ್ಮಚಕ್ರ' ಪ್ರವರ್ತನೆಯನ್ನು ಮಾಡಿದನು. ನಲವತ್ತು ವರ್ಷಗಳಷ್ಟು ದೀರ್ಘಕಾಲ ಈ ರೀತಿ ಊರಿನಿಂದ ಊರಿಗೆ ಅಲೆಯುತ್ತಾ ಜನರಿಗೆ ತಾನು ಕಂಡಿದ್ದ ಜ್ಞಾನದ ಪರಿಚಯವನ್ನು ಮಾಡಿಕೊಟ್ಟನು. ರಾಜಗೃಹದಲ್ಲಿ ಸಾರಿಪುತ್ರ, ಮೊಗ್ಗಲಾಯನ, ಆನಂದ, ಅನುರುದ್ಧ, ಉಪಲಿ ಮುಂತಾದ ಅನುಯಾಯಿಗಳನ್ನು ಪಡೆದನು. ಅವರೊಂದಿಗೆ ಬುದ್ಧನು ಕಾಶಿ, ರಾಜಗೃಹ, ಶ್ರಾವಸ್ತಿ, ವೈಶಾಲಿ, ನಳಂದ ಮುಂತಾದ ಕಡೆಗಳಲ್ಲಿ ಸಂಚರಿಸಿದನು. ಈ ದೀರ್ಘ ಅವಧಿಯಲ್ಲಿ ಬ್ರಾಹ್ಮಣರೂ ಸೇರಿದಂತೆ ವಿರುದ್ಧ ಪಂಥಗಳ ಕಟ್ಟಾ ಬೆಂಬಲಿಗರನ್ನು ವಾಗ್ವಾದದಲ್ಲಿ ಸೋಲಿಸಿದನು. ಧರ್ಮ ಪ್ರಸಾರ ಕಾರ್ಯದಲ್ಲಿ ಮಗ್ನನಾಗಿದ್ದಾಗ ಬುದ್ಧನು ಬಡವ, ಶ್ರೀಮಂತ, ಮೇಲು, ಕೀಳು, ಗಂಡಸು, ಹೆಂಗಸು ಎಂಬ ಯಾವುದೇ ಭೇದವನ್ನು ಮಾಡಿದವನಲ್ಲ. ಕ್ರಿ.ಪೂ. ೪೮೩ ರಲ್ಲಿ ತನ್ನ ಎಂಬತ್ತನೆಯ ವಯಸ್ಸಿನಲ್ಲಿ ಕುಶೀ ನಗರದಲ್ಲಿ ಪರಿನಿರ್ವಾಣವನ್ನು ಹೊಂದಿದನು.

### ತತ್ವಗಳು

ಬುದ್ಧನ ಉಪದೇಶಗಳು ಬಹಳ ಸರಳವಾಗಿದ್ದು ತಾತ್ವಿಕ ಸಿದ್ಧಾಂತಗಳಿಂದ ದೂರವಾಗಿದ್ದವು. ಅವನು ಜನಗಳಿಗೆ ಅರ್ಥವಾಗುವಂತೆ ಪಾಲಿ ಭಾಷೆಯಲ್ಲಿ ತನ್ನ ಉಪದೇಶವನ್ನು ಮಾಡಿದನು. ಬುದ್ಧನು ನಾಲ್ಕು ಸತ್ಯಗಳನ್ನು ಬೋಧಿಸಿದನು.

೧. ಜೀವನವು ದುಃಖಮಯವಾದುದು.

೨. ದುಃಖಕ್ಕೆ ಆಸೆಯೇ ಮೂಲಕಾರಣ.

೩. ಆಸೆಯನ್ನು ತೊಡೆದು ಹಾಕಿದರೆ ಪುನರ್ಜನ್ಮವಿರುವುದಿಲ್ಲ. ಅದೇ ನಿರ್ವಾಣ.

೪. ಅದಕ್ಕೊಂದು ಮಾರ್ಗವಿದೆ. ಆ ಮಾರ್ಗವು ಎಂಟು ವಿಧವಾದ ಆಚರಣೆಗಳಿಂದ ಕೂಡಿರುತ್ತದೆ. ಅವುಗಳೇ ಯುಕ್ತ ದೃಷ್ಟಿ, ಯುಕ್ತ ಸಂಕಲ್ಪ, ಯುಕ್ತ ಮಾತು, ಯುಕ್ತ ಕಾರ್ಯ, ಯುಕ್ತ ಜೀವನೋಪಾಯ, ಯುಕ್ತ ಸಾಧನೆ, ಯುಕ್ತ ಜ್ಞಾಪಕ ಮತ್ತು ಯುಕ್ತ ಧ್ಯಾನ.

ಇವುಗಳನ್ನು ಬುದ್ಧನು 'ಮಧ್ಯಮ ಮಾರ್ಗ'ವೆಂದು ಕರೆದನು. ಈ 'ಅಷ್ಟಾಂಗ ಮಾರ್ಗ'ವನ್ನು ಅನುಸರಿಸುವವನು ಯಾವ ಪುರೋಹಿತನ ಸಹಾಯವಿಲ್ಲದೆ ಮುಕ್ತಿ ಸಾಧಿಸಬಲ್ಲನು ಎಂದು ಪ್ರತಿಪಾದಿಸಿದನು. ಈ ಮಧ್ಯಮ ಮಾರ್ಗಗಳನ್ನು ಪಾಲಿಸಲು ಅನುಕೂಲವಾಗುವಂತೆ ಹತ್ತು ನಿಬಂಧನೆಗಳನ್ನು ಬೋಧಿಸಿದನು. ಅವುಗಳು - ಮತ್ತೊಬ್ಬರ ಆಸ್ತಿಯನ್ನು ಕಸಿದುಕೊಳ್ಳದಿರುವುದು, ಹಿಂಸಿಸದಿರುವುದು, ಮಧ್ಯಪಾನ ಮಾಡದಿರುವುದು, ಸುಳ್ಳು ಹೇಳದಿರುವುದು, ವ್ಯಭಿಚಾರ ಮಾಡದಿರುವುದು, ಅತಿಯಾದ ವಿನೋದಗಳಲ್ಲಿ ಪಾಲ್ಗೊಳ್ಳದಿರುವುದು, ಅತಿಯಾದ ಸುಗಂಧ ದ್ರವ್ಯಗಳನ್ನು ಬಳಸದಿರುವುದು, ಸಮಯವಲ್ಲದ ಸಮಯದಲ್ಲಿ ಭೋಜನ ಮಾಡದಿರುವುದು, ಅತಿ ನಿದ್ರೆ ಮಾಡದಿರುವುದು, ದ್ರವ್ಯವನ್ನು ಹೊಂದದೆ ಇರುವುದು-ಇವುಗಳೇ ಆ ಹತ್ತು ನಿಬಂಧನೆಗಳು. ಈ ಎಲ್ಲಕ್ಕಿಂತಲೂ ಬುದ್ಧನು ನೇರವಾದ ಆಚರಣೆ, ಪರಿಶುದ್ಧವಾದ ಜೀವನ ಮತ್ತು ಒಳ್ಳೆಯ ಆಲೋಚನೆಗಳಿಗೆ ಹೆಚ್ಚು ಮಹತ್ವವನ್ನು ನೀಡಿದ್ದನು.

## ವಿಶಿಷ್ಟ ಲಕ್ಷಣಗಳು ಮತ್ತು ಹರಡಿಕೆ

ಸಮಕಾಲೀನ ಇತರ ಧಾರ್ಮಿಕ ಸುಧಾರಣೆಯ ಬೋಧನೆಗಳಂತೆ ಬೌದ್ಧ ಮತ ಬೋಧನೆಯೂ ಉತ್ತರ ಭಾರತದಲ್ಲಿ, ಅದರಲ್ಲೂ ನಿರ್ದಿಷ್ಟವಾಗಿ ಮಗಧ ರಾಜ್ಯದಲ್ಲಿ, ಅತ್ಯಂತ ವಿಸ್ತೃತವಾಗಿ ಪ್ರಸಾರದಲ್ಲಿತ್ತು. ಮಗಧ ರಾಜ್ಯವು ಆ ಕಾಲದಲ್ಲಿ ಸಂಪ್ರದಾಯ ವಿರೋಧಿ ಬೋಧನೆಗಳ ಕೇಂದ್ರವಾಗಿ, ಬ್ರಾಹ್ಮಣ ತತ್ವಗಳನ್ನು ಒಪ್ಪಿಕೊಳ್ಳಲು ತುಂಬ ಹಿಂಜರಿಯುತ್ತಿದ್ದ ರಾಜ್ಯವಾಗಿ ಪ್ರಖ್ಯಾತಿ ಪಡೆದಿತ್ತು. ಗಡುಸಾದ ಜಾತಿ ಪ್ರತಿಬಂಧಕಗಳನ್ನು ತಿರಸ್ಕರಿಸಿ ಹುಟ್ಟಿನ ಪರಿವೆ ಇಲ್ಲದ ಎಲ್ಲ ಜನರೂ ಸಮಾನರು ಎಂಬುದಕ್ಕೆ ಬೆಂಬಲ ನೀಡಿದ ಬೌದ್ಧ ಧರ್ಮದ ಬೋಧನೆಯು ಸಮಾಜದ ವಾಣಿಜ್ಯ ವೃತ್ತಿಯ ಸ್ತರದವರಿಗೆ, ವೈಶ್ಯರಲ್ಲಿ ಹೆಚ್ಚು ಧನಿಕರಾದವರಿಗೆ, ವಿಶೇಷ ಆಕರ್ಷಕವಾಗಿ ಕಂಡುಬಂದಿತು. ಬ್ರಾಹ್ಮಣ ತತ್ವವು ಈ ಸ್ತರದ ಜನರಿಗೆ ಸಮಾಜದ ಅಂತಸ್ತಿನಲ್ಲಿ ಅತ್ಯಂತ ಸಾಮಾನ್ಯ ಸ್ಥಾನವನ್ನಷ್ಟೆ ನೀಡಿತ್ತು. ಬೌದ್ಧ ಮತ ತತ್ವವು ಕ್ಷತ್ರಿಯರ ಮಧ್ಯೆಯೂ ಜನಪ್ರಿಯವಾಯಿತು. ಆ ಕಾಲದಲ್ಲಿ ಕ್ಷತ್ರಿಯರು ಹೆಚ್ಚು ಹೆಚ್ಚು ಅಧಿಕಾರವನ್ನು ತಮ್ಮ ಕೈಗಳಲ್ಲೇ ಕೇಂದ್ರಿಕರಿಸಿಕೊಳ್ಳುತ್ತಿದ್ದರೂ ಬ್ರಾಹ್ಮಣರ ಕಡೆಯಿಂದ ಬರುತ್ತಿದ್ದ ಪ್ರಬಲವಾದ ಸೈದ್ಧಾಂತಿಕ ಒತ್ತಡಗಳ ಅರಿವೂ ಅವರಿಗಿದ್ದಿತು. ಬ್ರಾಹ್ಮಣರು ತಾವಷ್ಟೆ ಅತ್ಯಂತ ಉನ್ನತ ಹಾಗೂ ಪವಿತ್ರ ವರ್ಣದವರು ಎಂದೂ, ತಾವು ವಾಸ್ತವವಾಗಿ ಭೂಮಿ ಮೇಲಿನ ದೇವತೆಗಳೆಂದೂ ಸಹ ಘೋಷಿಸಿಕೊಳ್ಳುತ್ತಿದ್ದರು. ಎಲ್ಲ ವರ್ಣಗಳ ಸ್ವತಂತ್ರ ಪ್ರತಿನಿಧಿಗಳನ್ನು ಬೌದ್ಧ ಸಮುದಾಯ ಅಥವಾ ಸಂಘಕ್ಕೆ ಸೇರಿಸಿಕೊಳ್ಳ

ಕಾಗುತ್ತಿತ್ತು. ಇದರಿಂದ ಅದರ ಪ್ರಭಾವ ವಲಯವನ್ನು ಗಣನೀಯವಾಗಿ ವಿಸ್ತರಿಸಿಕೊಂಡಿತು. ಸಂಘ ಸೇರದೆ ಇದ್ದವರಿಗೂ ಈ ಬೋಧನೆಯು ಸ್ವರ್ಗದ ಭರವಸೆಯನ್ನು ನೀಡಿತು. ಬುದ್ಧನು ಈ ಆದರ್ಶವನ್ನು ಸಾಮಾನ್ಯ ಜನರ ಮುಂದಿರಿಸಿದನು.

ಬುದ್ಧನು ವೈದಿಕ ಆಚರಣೆಗಳನ್ನು ಖಂಡಿಸಿದ್ದರ ಜೊತೆಗೆ ನೂತನ ಕೃಷಿಕ ವರ್ಗ ಸಮಾಜಕ್ಕೆ ಅನುಗುಣವಾದ ನಿಲುವುಗಳನ್ನೂ, ಆಧುನಿಕ 'ದೃತ್ವಫ'ವನ್ನೂ ಪ್ರತಿಪಾದಿಸಿದನು. ಹಾಗಾಗಿ ನೂತನ ಕೃಷಿಕ ವರ್ಗ ಸಮಾಜಕ್ಕೆ ಬೌದ್ಧ ಧರ್ಮವು ಸಮಗ್ರವಾದ ದಾರ್ಶನಿಕ ಸಿದ್ಧಾಂತವಾಗಿ ಕಂಡು ಒಪ್ಪಿಗೆಯಾಯಿತು.

ಯಜ್ಞಗಳು ಉಪಯೋಗಕ್ಕೆ ಬಾರದವು, ಹಾನಿಕಾರಕವು ಎಂದು ಟೀಕಿಸಿ ತಿರಸ್ಕರಿಸುವುದು ಎಂದರೆ ಕೇವಲ ಬ್ರಾಹ್ಮಣರನ್ನು ವಿರೋಧಿಸುವುದು ಎಂಬ ಅರ್ಥವಲ್ಲ. ವೈದಿಕ ಸಂಸ್ಕೃತಿ ಯುಡಿ ಇಂದ್ರಾದಿ ದೇವತೆಗಳು ಯಜ್ಞಗಳಲ್ಲಿ ಅರ್ಪಿಸಲಾದ ಬಲಿಗಳನ್ನು ಸ್ವೀಕರಿಸಿ, ಅದಕ್ಕೆ ಪ್ರತಿಫಲವಾಗಿ ಸಂಪತ್ತು, ಪಶುಗಳು ಹಾಗೂ ಜಲಮೂಲಗಳ ಸಮೃದ್ಧಿಯನ್ನು ತಮಗೆ ಕೃಪೆ ಮಾಡುವರೆಂದೂ ನಂಬಲಾಗಿತ್ತು. ಕ್ರಿ.ಪೂ. ಆರನೆಯ ಶತಮಾನದಲ್ಲಿ ಹಲವು ತಾತ್ವಿಕರು ತೀವ್ರವಾದ ಚಿಂತನೆಗಳನ್ನು ಮಂಡಿಸುತ್ತಾ ಹೊಸದಾದ ಉಪಯುಕ್ತ ದೃಷ್ಟಿಕೋನದತ್ತ ಗಮನ ಹರಿಸಿದರು. ಅಸಲಿಗೆ ಈ ಯಜ್ಞಫಲ ಎನ್ನುವುದಿರಲಿ ದೇವರುಗಳ ಅಸ್ತಿತ್ವವನ್ನೇ ನಿರಾಕರಿಸ ತೊಡಗಿದರು. ಒಳಿತು-ಕೆಡುಕು, ಆತ್ಮ ಎಂಬಂತಹವೆಲ್ಲ ಬರೀ ಸುಳ್ಳು ಎಂದು ವಾದಿಸಿದರು. ಮನುಷ್ಯನು ಸತ್ತ ಮೇಲೆ ಪಾಪ-ಪುಣ್ಯಗಳ ಪ್ರಮೇಯಗಳಿಗೇನು ಅಂಟಿಕೊಳ್ಳದೆ, ನೇರವಾಗಿ ಗಾಳಿ, ನೀರು, ಭೂಮಿ, ಅಗ್ನಿ, ಆಕಾಶಗಳೆಂಬ ಪಂಚಭೂತಗಳಲ್ಲಿ ಬೆರತು ಹೋಗುತ್ತಾನೆಂದು ಪ್ರತಿಪಾದಿಸಿದರು. ಇದೊಂದು ಮುಂದೆ ಒಂದು ನಿರ್ದಿಷ್ಟ ಚಿಂತನೆಯಾಗಿ ಭೌತಿಕ ವಾದವಾಗಿ ರೂಪುಗೊಂಡಿತು. ಅದುವೇ 'ಕರ್ಮ ಸಿದ್ಧಾಂತ'. ವೇದಗಳಲ್ಲಿ ಅಥವಾ ಉಪನಿಷತ್ತುಗಳಲ್ಲಾಗಲಿ ಈ ಕರ್ಮ ಸಿದ್ಧಾಂತದ ಪ್ರಸ್ತಾಪವಿಲ್ಲ. ವೇದಗಳಲ್ಲಿ ಬರುವ 'ಕರ್ಮಗಳು' ಎಂಬ ಮಾತಿಗೆ ಯಜ್ಞದಲ್ಲಿ ಜಾರಿಗೊಳ್ಳುವ ಆಚರಣಾ ಕಾರ್ಯಕ್ರಮ ಎಂದಷ್ಟೇ ಅರ್ಥ. ಈ ಅರ್ಥದ ಸಿದ್ಧಾಂತವೂ ಕೃಷಿ ಸಮಾಜದ ಹಂತದಲ್ಲೇ ಆರಂಭವಾಗಿರುವ ಸಾಧ್ಯತೆ ಹೆಚ್ಚು. ಅಂದರೆ ಭೂಮಿಯಲ್ಲಿ ಬಿತ್ತಿದ ಬೀಜವನ್ನಾಧರಿಸಿ ಅದರಿಂದ ಫಲವನ್ನು ನಿರೀಕ್ಷಿಸಬಹುದು. ಈ ಅನುಭವವನ್ನು ಆಧರಿಸಿಯೇ ನಾವು ಮಾಡಿದ (ಕರ್ಮ) ಕೆಲಸಗಳ 'ಪರಿಪಕ್ವತೆ'ಗಳಿಗೆ ಅನುಗುಣವಾಗಿ ಪ್ರತಿಫಲಗಳು ನಮಗೆ ದೊರೆಯುತ್ತವೆ ಎಂಬ ಸಿದ್ಧಾಂತ ರೂಪು ತಳೆದಿರುವುದು ಸಹಜ.

ಹೀಗೆ ಆರನೆ ಶತಮಾನದಲ್ಲಿ ಬೆಳಕಿಗೆ ಬಂದ ಈ ಹೊಸ ಆಲೋಚನೆಗಳ ಪೈಕಿ ಪ್ರಬಲವಾಗಿ ಉಳಿದು ನಿಂತ ಅಹಿಂಸೆ, ಕರ್ಮ ಸಿದ್ಧಾಂತಗಳು ವಾಸ್ತವವಾಗಿ ಜನ್ಮತಾಳಿದ್ದು ಮಾತ್ರ ಬ್ರಾಹ್ಮಣ ವಿರೋಧಿ ಚಿಂತನೆಗಳಲ್ಲಿಯೇ. ಬೌದ್ಧ ಧರ್ಮದಲ್ಲಿ ಇವೆರಡೂ ಪ್ರಮುಖ ಸಿದ್ಧಾಂತಗಳು. ಪಶುಪಾಲನೆಯ ಬದಲಿಗೆ ಕೃಷಿಕ ವರ್ಗ ಸಮಾಜ, ಆಹಾರ ಸಂಗ್ರಹಣೆಯ ಬದಲಿಗೆ ಆಹಾರ ಉತ್ಪಾದನೆ, ಸಮುದಾಯದ ವ್ಯವಸ್ಥೆಯ ಬದಲಿಗೆ ವರ್ಗ ವ್ಯವಸ್ಥೆ ಏರ್ಪಟ್ಟ

ವೆಂಬುದಕ್ಕೆ ಅಹಿಂಸೆ ಮತ್ತು ಕರ್ಮ ಸಿದ್ಧಾಂತಗಳು ಸೂಚಕಗಳಾಗುತ್ತವೆ. ಒಂದು ಭೂಭಾಗ ದಲ್ಲಿ ಪಶುಗಳನ್ನು ಪೋಷಿಸಿ, ಅದೇ ಪಶುಗಳ ಮಾಂಸವನ್ನು ತಿನ್ನುತ್ತಾ ಬದುಕುವುದಕ್ಕಿಂತ ಅದೇ ಪಶುಗಳನ್ನು ಬಳಸಿಕೊಂಡು, ನೇಗಿಲು ಕಬ್ಬಿಣದ ಉಪಕರಣಗಳಿಂದ ಉತ್ತು ಬೇಸಾಯ ಮಾಡಿದರೆ ಹತ್ತರಷ್ಟು ಮಂದಿಯ ಜೀವನಕ್ಕೆ ಆಹಾರ ಉತ್ಪಾದನೆ ಆಗುತ್ತದೆ ಎಂಬ ವಾಸ್ತವ ಸತ್ಯ ಕಂಡದ್ದು 'ಅಹಿಂಸಾ ಸಿದ್ಧಾಂತ'ದ ಮುಖ್ಯ ಪರಿಣಾಮ.

ಸಮುದಾಯ ವ್ಯವಸ್ಥೆಯ ವ್ಯಾವಹಾರಿಕ ದೃಷ್ಟಿಕೋನದಲ್ಲೂ ಕರ್ಮ ಸಿದ್ಧಾಂತವು ತಂದ ಬದಲಾವಣೆ ಕೂಡ ಮುಖ್ಯವಾದುದು. ಸಮುದಾಯ ವ್ಯವಸ್ಥೆಯಲ್ಲೂ ಪುರ್ನಜನ್ಮದ ಕಲ್ಪನೆ ಇತ್ತು. ಒಬ್ಬ ವ್ಯಕ್ತಿ ಸತ್ತ ನಂತರದಲ್ಲಿ ತನ್ನ ಸಮುದಾಯ ಚಿಹ್ನೆಯ ಪ್ರಾಣಿಯಾಗಿ ಜನ್ಮ ತಳೆಯುತ್ತಾನೆ. ಸಮುದಾಯ ಚಿಹ್ನೆ ಹಾವಾಗಿದ್ದರೆ ಅವನೂ ಹಾವಾಗಿ ಹುಟ್ಟುತ್ತಾನೆ. ಅದರಲ್ಲಿ ಒಳಿತು-ಕೆಡಕು ಎಂಬುದರ ಸಂಬಂಧವಿಲ್ಲ. ಪಾಪ-ಪುಣ್ಯಗಳಿಂದ ಯಾವುದೇ ಬದಲಾವಣೆಯೂ ಸಾಧ್ಯವಿಲ್ಲ. ಒಂದು ಸಮುದಾಯದಿಂದ ಇನ್ನೊಂದು ಸಮುದಾಯಕ್ಕೆ ಪರಿವರ್ತನೆಗೊಂಡು ಸೇರುವುದು ಜೀವಿತಾವಧಿಯಲ್ಲಷ್ಟೇ ಅಲ್ಲ, ಮರಣಾನಂತರವೂ ಸಾಧ್ಯವಿಲ್ಲ. ಬೌದ್ಧ ಧರ್ಮದ ಕರ್ಮ ಸಿದ್ಧಾಂತವು ಇದಕ್ಕೆ ಭಿನ್ನವಾದುದು. ಮುಂದಿನ ಜನ್ಮದಲ್ಲಿ ಏನಾಗಿ ಹುಟ್ಟುತ್ತೇವೆ ಎಂಬುದು ಈ ಜನ್ಮದಲ್ಲಿ ಮಾಡಿದ ಕೆಲಸಗಳನ್ನು ಅವಲಂಬಿಸಿರುತ್ತದೆ. ಒಳ್ಳೆಯ ಕೆಲಸಗಳನ್ನು ಮಾಡಿದರೆ ಈಗಿನದಕ್ಕಿಂತ ಉತ್ತಮವಾದ ಜನ್ಮ ದೊರೆಯುತ್ತದೆ. ಹಾಗೆಯೆ ಕೆಟ್ಟ ಕೆಲಸಗಳಿಗೆ ಪ್ರತಿಫಲ ನೀಚ ಜನ್ಮ. ವ್ಯಾಪಾರಿಯು ಎಷ್ಟೆಷ್ಟು ಮೂಲಧನವನ್ನು ಹೂಡಿಡುತ್ತಾನೋ, ಅಷ್ಟಷ್ಟು ಲಾಭವನ್ನು ಹೆಚ್ಚಿಗೆ ಗಳಿಸಲು ಸಮರ್ಥನಾಗುತ್ತಾನೆ ಎಂಬಂತೆ, ಕೃಷಿಕನು ಎಷ್ಟು ಜಾಗರೂಕತೆಯಿಂದ ಬೇಸಾಯ ಮಾಡು ತ್ತಾನೋ ಅಷ್ಟು ಉತ್ತಮ ಫಸಲನ್ನು ಪಡೆಯುತ್ತಾನೆ. ಬರಲಿರುವ ಜನ್ಮದಲ್ಲಿ ನಮ್ಮ ಪಾಲಿಗೆ ಬರುವ ಒಳಿತು-ಕೆಡುಕುಗಳು ನಾವು ಈ ಜನ್ಮದಲ್ಲಿ ಮಾಡಿದ ಕೆಲಸಗಳನ್ನು ಅವಲಂಬಿಸಿರುತ್ತದೆ.

ಈ ಎರಡೂ ಚಿಂತನೆಗಳು ಹೊಸದಾಗಿ ಉಗಮವಾಗುತ್ತಿದ್ದ ಸಮಾಜದಲ್ಲಿ ಪ್ರಭಾವಶಾಲಿ ಯಾಗಿ ನೆಲೆ ನಿಂತಿತು. ಹೊಸ ಸಮಾಜ ವರ್ಗ ವ್ಯವಸ್ಥೆಯು ದೋಚುವಿಕೆ, ಶೋಷಣೆ ಗಳನ್ನಾಧರಿಸಿದ ವ್ಯವಸ್ಥೆಯಾದ್ದರಿಂದ ತೊಂದರೆಗಳಿಗೂ, ದುಃಖಿಗಳಿಗೂ ಕೊರತೆಯೇ ಇರಲಿಲ್ಲ. ಬುದ್ಧನು ಸ್ಪಂದಿಸಿದ್ದು ಈ ಕಷ್ಟಕೋಟಲೆಗಳಿಗೆ, ಅವುಗಳ ನಿರ್ಮೂಲನಕ್ಕೆ ಉಪಾಯಗಳ ಹುಡುಕಾಟ ನಡೆಸಿದನು. ಈಗಿದ್ದ ಸಮಾಜವನ್ನು ಸಂಪೂರ್ಣ ತ್ಯಜಿಸಿ ಹೊಸತೊಂದನ್ನು ಹುಟ್ಟು ಹಾಕುವ ಪ್ರಯತ್ನ ಅದಾಗಿರಲಿಲ್ಲ. ಬದಲಾಗಿ ಆ ಸಮಾಜದ ಪರಿಧಿಯಲ್ಲಿಯೇ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಹಿಡಿಯಲು ಬುದ್ಧ ಪ್ರಯತ್ನಿಸಿದ. ಹಾಗದ್ದರಿಂದಲೇ ಸುಲಭವಾಗಿ ನೂತನ ಕೃಷಿಕ ವರ್ಗ ಸಮಾಜಕ್ಕೆ ಸರಿ ಹೊಂದುವ ಹೊಸ ಚಿಂತನೆಗಳನ್ನು, ಆಲೋಚನೆಗಳನ್ನು, ತತ್ವಗಳನ್ನು ಯಶಸ್ವಿಯಾಗಿ ಪರಿಚಯಿಸಿದನು. ಬುದ್ಧನ ಅನ್ವೇಷಣೆಯ ಸ್ವರೂಪ ಅಂದಿಗೆ ಅತ್ಯಂತ ಕ್ರಮಬದ್ಧವಾದುದೇ ಎನ್ನಬಹುದು. ಅವನ

ವಿಧಾನವೆಂದರೆ ಸಮಸ್ಯೆಗಳಿಗೆ ಕಾರಣವಾದ ಅಂಶಗಳನ್ನು ಮೊದಲಿಗೆ ಗುರುತಿಸುವುದು. ನಂತರದಲ್ಲಿ ಆ ಕಾರಣಗಳನ್ನು ನಿವಾರಿಸುವುದು ಹೇಗೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಯತ್ನಿಸುವುದು.

ಬುದ್ಧನು ಉಪದೇಶಿಸಿದ ತತ್ವಗಳನ್ನೆಲ್ಲಾ ಅವನ ಅನುಯಾಯಿಗಳು ಮತ್ತು ಶಿಷ್ಯರು ಸಂಗ್ರಹಿಸಿ ಬೌದ್ಧ ಗ್ರಂಥಗಳನ್ನು ಸಂಪಾದಿಸಿದರು. ಈ ಗ್ರಂಥಗಳೆಲ್ಲಾ ಪಾಲಿ ಭಾಷೆಯಲ್ಲಿವೆ. ಬೌದ್ಧ ಸಾಹಿತ್ಯವನ್ನು ಮೂರು ಪ್ರಕಾರಗಳಾಗಿ ವಿಭಾಗಿಸಬಹುದು. ಅವುಗಳು - 'ಸೂತ್ರ ಪಿಟಕ', 'ವಿನಯ ಪಿಟಕ' ಮತ್ತು 'ಅಭಿಧಮ್ಮ ಪಿಟಕ'. ಸೂತ್ರ ಪಿಟಕದಲ್ಲಿ ಐದು ನಿಕಾಯಗಳಿವೆ. ಇವುಗಳಲ್ಲಿ ಮತೀಯ ವಿಚಾರಗಳನ್ನು ಕಾಣಬಹುದು. ವಿನಯ ಪಿಟಕದಲ್ಲಿ ಬೌದ್ಧ ಸಂಘಕ್ಕೆ ಸಂಬಂಧಿಸಿದ ವಿಷಯಗಳಿವೆ. ಅಭಿಧಮ್ಮ ಪಿಟಕದಲ್ಲಿ ತಾತ್ವಿಕ ವಿಷಯಗಳ ಚರ್ಚೆಗಳಿವೆ.

ಬುದ್ಧನ ಮರಣದ ನಂತರ ಸುಮಾರು ಇನ್ನೂರು ವರ್ಷಗಳು ಕಳೆದ ಮೇಲೆ ಮೌರ್ಯ ಚಕ್ರವರ್ತಿ ಅಶೋಕನು ಬೌದ್ಧಮತವನ್ನು ಸ್ವೀಕರಿಸಿದನು. ಇದು ಇತಿಹಾಸದಲ್ಲಿ ಒಂದು ಮುಖ್ಯ ಘಟನೆ. ಈ ಧರ್ಮದ ಹರಡುವಿಕೆಗೆ ವಿಶೇಷ ಕಾಳಜಿ ವಹಿಸಿ ಅಶೋಕನು ಹೆಚ್ಚಿನ ಸಂಖ್ಯೆಯಲ್ಲಿ ಮತ ಪ್ರಸಾರಕರನ್ನು ನೇಮಿಸಿ ಬೌದ್ಧಮತದ ಬೋಧನೆಗಳನ್ನು ಮಧ್ಯ ಏಷ್ಯಾ, ಪಶ್ಚಿಮ ಏಷ್ಯಾ ಮತ್ತು ಶ್ರೀಲಂಕಾದಲ್ಲಿ ನೆಲೆ ನಿಲ್ಲಲು ಕಾರಣನಾದನು. ಇಂದಿಗೂ ಶ್ರೀಲಂಕಾ, ಬರ್ಮಾ, ಟಿಬೇಟ್, ಭಾಗಶಃ ಚೀನಾ ಮತ್ತು ಜಪಾನ್‌ಗಳಲ್ಲಿ ಅನೇಕ ಮಂದಿ ಬೌದ್ಧ ಮತೀಯರಿದ್ದಾರೆ. ಭಾರತದಲ್ಲಿ ಅವರ ಪ್ರಭಾವ ದುರ್ಬಲವಾಗಿದ್ದರೂ, ದಕ್ಷಿಣ, ಆಗ್ನೇಯ ಹಾಗೂ ಪೂರ್ವ ಏಷ್ಯಾ ಖಂಡದಲ್ಲಿ ಈ ಧರ್ಮ ಪ್ರಭಾವಶಾಲಿಯಾಗಿ ಉಳಿದಿದೆ.

## ೨.೪ ಮೌರ್ಯ ಸಾಮ್ರಾಜ್ಯ

### ಐತಿಹಾಸಿಕ ಹಿನ್ನೆಲೆ

ಮೌರ್ಯ ಸಾಮ್ರಾಜ್ಯವು ಪ್ರಾಚೀನ ಭಾರತ ಇತಿಹಾಸದಲ್ಲಿ ಮೊತ್ತಮೊದಲನೆಯ ಸಾಮ್ರಾಜ್ಯ. ಚಂದ್ರಗುಪ್ತನು ಮೌರ್ಯ ರಾಜವಂಶದ ಮೊದಲ ಚಕ್ರವರ್ತಿಯಾಗಿದ್ದ. ಆದರೆ ಅವನು ಈ ಉಚ್ಚತೆಯನ್ನು ಗಳಿಸಿಕೊಳ್ಳುವುದಕ್ಕೆ ಮುನ್ನ, ಕೆಲವೊಂದು ಪೂರಕ ಅಂಶಗಳು ರಾಜಕೀಯ ರಂಗದಲ್ಲಿ ಅವನಿಗೆ ಲಭಿಸಿದ್ದವು. ಅದನ್ನು ಸಂಕ್ಷಿಪ್ತವಾಗಿ ಪರಾಮರ್ಶಿಸುವ ಅಗತ್ಯವಿದೆ.

ಕ್ರಿ.ಪೂ. ೬ನೇ ಶತಮಾನದಲ್ಲಿ ಉಗಮವಾಗಿದ್ದ ಮಹಾಜನಪದಗಳಲ್ಲೆಲ್ಲ, ಔನ್ನತ್ಯಕ್ಕೇರಿ ಸಾರ್ವಭೌಮತ್ವ ಸ್ಥಾಪಿಸಲು ಪ್ರಯತ್ನಿಸಿದ ಮೊದಲ ರಾಜ್ಯ 'ಮಗಧ ರಾಜ್ಯ'ವೆಂದು ಬ್ರಾಹ್ಮಣ ಪರಂಪರೆಯ, ಬೌದ್ಧ ಮತ್ತು ಜೈನ ಮತೀಯ ವಿವಿಧ ಮೂಲ ಆಕರಗಳು ಒಕ್ಕೊರಳಿನಿಂದ ಸಾಕ್ಷ್ಯ ಒದಗಿಸುತ್ತವೆ. ಮೊದಲನೆಯ ಕಾಲವು ಮಗಧ ಸಾಮ್ರಾಜ್ಯಶಾಹಿಯ ಯುಗ. ಅನೇಕ ಶತಮಾನಗಳ ಕನಸಾಗಿದ್ದ, ಒಬ್ಬ ಚಕ್ರವರ್ತಿಯ ಅಧೀನದಲ್ಲಿ ರಾಜಕೀಯ ವಾಗಿ ಭಾರತದ ಐಕ್ಯದ ಸಿದ್ಧಿಯನ್ನು ಆಗ ಕಾಣಲಾಯಿತು. ಈ ಕಾರ್ಯಗತಿ ಆರಂಭವಾದಾಗ ೧೬ ಮಹಾಜನ ಪದಗಳು, ಮಗಧ ಮತ್ತು ಅವಂತಿಗಳ ಹಾಗೆ ರಾಜಾಧೀನ ರಾಜ್ಯ ಗಳಾಗಿಯೋ, ಇಲ್ಲವೇ ಲಿಚ್ಛವಿ ಮತ್ತು ಯೌಧೇಯರ ಗಣರಾಜ್ಯಗಳ ಹಾಗೆಯೋ ಸಂಘಟಿತವಾಗಿದ್ದವು. ಇವುಗಳಲ್ಲಿ ಒಂದೊಂದೂ ಬದುಕುಳಿಯಲು ಹೋರಾಡುತ್ತಾ, ಪರಸ್ಪರ ಕಾದಾಡುತ್ತಾ, ದುರ್ಬಲ ರಾಜ್ಯಗಳನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಾ ಸಾಗಿದ್ದವು.

ಸುಮಾರು ೮೦೦ ವರುಷಗಳವರೆಗೆ ಆರ್ಯೀಕರಣಕ್ಕೆ ತುತ್ತಾದ ಮಗಧವು ನಿರಾಡಂಬರ ಅಧಿಕಾರದ ಚೈತನ್ಯದಿಂದ ವೀರ್ಯವತ್ತಾಗಿತ್ತು. ಕ್ರಿ.ಪೂ. ೫೪೪ ರಿಂದ ಕ್ರಿ.ಪೂ. ೧೫೦ ರವರೆಗೆ ಆಳಿದ ಪ್ರಬಲ ರಾಜವಂಶದವರ ಪ್ರಭಾವದಿಂದಾಗಿ ಈ ಧರ್ಮಭೂಮಿಗೆ ಅದು ಒಂದು ಚಕ್ರವರ್ತಿಗಳ ಶ್ರೇಣಿಯನ್ನೇ ನೀಡಿತು. ಈ ಶ್ರೇಣಿಯಿಂದಾಗಿ ಭಾರತವು ಒಂದು ಏಕ ಘಟಕ ವಾಯಿತು. ಆ ಶ್ರೇಣಿಯೇ ದೇಶದ ಸಮಸ್ತ ಪ್ರಜ್ಞೆಯು ಅಸ್ತಿತ್ವದಲ್ಲಿ ಬರುವಂತೆ ತನ್ನ ಸಂಕಲ್ಪ ಶಕ್ತಿಯನ್ನು ಮೆರೆಯಿತು.

ಬಿಂಬಸಾರನು (ಸುಮಾರು ಕ್ರಿ.ಪೂ. ೫೪೪ ರಿಂದ ೪೯೩) ಈ ಚಕ್ರವರ್ತಿಗಳಲ್ಲಿ ಮೊದಲಿಗನು. ಅಜಾತಶತ್ರು (ಸುಮಾರು ೪೯೩ ರಿಂದ ೪೬೨), ಬಹು ಪ್ರಬಲನೂ, ಅಜೇಯನೂ ಎನಿಸಿ, ೧೬ ವರುಷಗಳ ಸತತ ಹೋರಾಟದ ತರುವಾಯ ಲಿಚ್ಛವಿಗಳ ಮಹಾನ್ ಗಣರಾಜ್ಯವನ್ನು ಅಡಗಿಸಿದನು. ಅಲ್ಲದೆ ಕೋಸಲವನ್ನು ಸೋಲಿಸಿ, ನಂತರ ಕಾಶಿಯನ್ನೂ ತನ್ನದಾಗಿಸಿಕೊಂಡ.

ಈ ಕಾಲವು ಇಬ್ಬರು ಸುಧಾರಕರಾದ 'ಬುದ್ಧ' ಮತ್ತು 'ಮಹಾವೀರ'ರ ವ್ಯಕ್ತಿತ್ವದಿಂದ ಪ್ರಭಾವಿತವಾಗಿತ್ತು. ಮಹಾಪದ್ಮನಂದನು ಕ್ರಿ.ಪೂ. ಸುಮಾರು ೩೬೪ ರಲ್ಲಿ ಮಗಧದ

ಪ್ರಭುತ್ವವನ್ನು ಪಡೆದನು. ಆದರೆ ಧರ್ಮದ ಪಾರಮ್ಯವನ್ನು ನಿರಾಕರಿಸಿದನು. ಆರ್ಯ ರಾಜರನ್ನು ನಾಶ ಮಾಡಿ ಅವನು 'ದ್ವಿತೀಯ ಪರಶುರಾಮ' ಎಂಬ ಬಿರುದನ್ನು ಸಂಪಾದಿಸಿದನು. ನಿರ್ದಯನೂ, ಲೋಭಿಯೂ, ಧರ್ಮನಿರಪೇಕ್ಷಿಯೂ ಆಗಿದ್ದ, ಇವನು ಉತ್ತರ ಭಾರತದ ಮೊದಲ ಮಹಾನ್ ಐತಿಹಾಸಿಕ ಚಕ್ರವರ್ತಿ.

ಮಹಾಪದ್ಮನಂದನ ಕಾಲದಲ್ಲಿ (ಕ್ರಿ.ಪೂ. ೨೩೬) ಮ್ಯಾಸಿಡೋನಿಯಾದ ಅಲೆಗ್ಸಾಂಡರ್‌ನು, ತನ್ನ ಪ್ರಚಂಡ ಸೈನ್ಯಗಳೊಡನೆ ಭಾರತದ ವಾಯುವ್ಯ ದಿಕ್ಕನ್ನು ಪ್ರವೇಶಿಸಿದನು. ಆದರೆ ಕೆಲವೇ ತಿಂಗಳಲ್ಲಿ ಅವನು ಭಾರತದಿಂದ ಹಿನ್ನಡೆಯಬೇಕಾಯಿತು. ಅವನ ಯೋಧರು ಸಿಂಧೂವನ್ನು ದಾಟಲು ನಿರಾಕರಿಸಿದರು. ಅವನು ನಂದ ಸಾಮ್ರಾಜ್ಯವನ್ನು ಎದುರಿಸಲು ಶಕ್ತನಾಗಲಿಲ್ಲ. ಸ್ವಲ್ಪ ಕಾಲದಲ್ಲೇ ಭಾರತೀಯರು ವೀರಾವೇಶ ಮೆರೆದರು. ಚಂದ್ರಗುಪ್ತನ ನೇತೃತ್ವದಲ್ಲಿ ಪ್ರಚಂಡ ಸ್ವಾತಂತ್ರ್ಯ ಯುದ್ಧವನ್ನು ಮಾಡಿ ಪಂಜಾಬಿನಿಂದ ಗ್ರೀಕರನ್ನು ಹೊಡೆದೋಡಿಸಿದರು ಎಂದು ಈ ಘಟನೆಯನ್ನು ಬಣ್ಣಿಸಲಾಗಿದೆ. ಚಾಣಕ್ಯನು ಚಂದ್ರಗುಪ್ತನಿಗೆ ಉತ್ತೇಜನ ನೀಡಿದನು. ಆತ ಪಾಟಲೀಪುತ್ರದ ಮೇಲೆ ದಂಡೆತ್ತಿ ಹೋದನು; ದನನಂದನನ್ನು ಕೊಂದು, ಮಗಧದ ಚಕ್ರವರ್ತಿ ಪದವಿಯನ್ನು ಸಂಪಾದಿಸಿದನು. ಅಲೆಗ್ಸಾಂಡರನ ಸಾಮ್ರಾಜ್ಯದ ಭಾಗಗಳಾಗಿದ್ದು ಈಗ ಸ್ವತಂತ್ರಗೊಂಡಿದ್ದ ಪ್ರಾಂತಗಳನ್ನು ಪುನಃ ಗೆಲ್ಲಲೆಂದು ಭಾರತದ ಮೇಲೆ ದಂಡೆತ್ತಿ ಬಂದ ಗ್ರೀಕರ ಸೇನಾಪತಿ ಸೆಲ್ಯೂಕಸ್‌ನನ್ನು ಸೋಲಿಸಿದನು. ಒಂದು ಅಖಿಲ ಭಾರತ ಸಾಮ್ರಾಜ್ಯದ ಶಿಲ್ಪಿಯಾಗುವ ಆದರ್ಶದತ್ತ ತನ್ನ ಜೀವನವನ್ನು ಕ್ರಮಬದ್ಧಗೊಳಿಸಿದನು. ಇದರಿಂದ ಮೊತ್ತಮೊದಲ ಬಾರಿಗೆ ಒಬ್ಬನೇ ಸಾಮ್ರಾಟನ ಅಧಿಕಾರ ಇಡಿಯ ದೇಶದುದ್ದಕ್ಕೂ (ಉತ್ತರ ಭಾರತ) ಕೇಂದ್ರ ನಿಯಮಿತ ಅಧಿಕಾರಿಗಳ ಮೂಲಕ ಪ್ರಭಾವಶಾಲಿಯಾಗಿ ವ್ಯಾಪಿಸುವಂತೆ ಆಯಿತು.

## ಮೌರ್ಯ ಸಾಮ್ರಾಜ್ಯದ ಉದಯ

ಚಂದ್ರಗುಪ್ತನು ಅಧಿಕಾರಕ್ಕೆ ಬರಲು ನಡೆಸಿದ ಹೋರಾಟದ ವಿವಿಧ ಘಟ್ಟಗಳಿಗೆ ಸಂಬಂಧಿಸಿ ಅನೇಕ ಸ್ವಾರಸ್ಯಕರ ಅಂಶಗಳನ್ನು ಭಾರತೀಯ ಹಾಗೂ ಗ್ರೀಕ್ ಗ್ರಂಥಗಳಲ್ಲಿ ನೋಡಬಹುದು. ಮೌರ್ಯರ ಹುಟ್ಟಿನ ವಿಚಾರವು ವಿವಾದಸ್ಪದವಾಗಿಯೇ ಉಳಿದಿದೆ. ಕೆಲವು ವಿದ್ವಾಂಸರು ಮೌರ್ಯರನ್ನು ನಂದ ವಂಶದೊಂದಿಗೆ ಸಂಬಂಧಿಸಿ, ಚಂದ್ರಗುಪ್ತನು ನಂದ ದೊರೆಯ ಮಕ್ಕಳಲೊಬ್ಬನೆಂದೇ ಹೇಳುತ್ತಾರೆ. *ವಿಷ್ಣುಪುರಾಣ*ದ ಕರ್ತೃ, ಚಂದ್ರಗುಪ್ತನ ತಾಯಿಯು ಹೆಸರು ಮುರಾ ಎಂದೂ, ಆಕೆಯು ನಂದರಾಜನೊಬ್ಬನ ಪತ್ನಿಯಾಗಿದ್ದಳೆಂದೂ ಉಲ್ಲೇಖಿಸುತ್ತಾನೆ. ಜೈನ ಗ್ರಂಥಗಳಲ್ಲಿ ಚಂದ್ರಗುಪ್ತನ ತಾಯಿಯ ಒಂದು ಗ್ರಾಮದ ಮುಖಂಡನ ಮಗಳೆಂದೂ ಮತ್ತು ಈ ಗ್ರಾಮದ ಜನಗಳ ಮುಖ್ಯ ಕಸುಬು ನವಿಲುಗಳ ಪೋಷಣೆ (ಮಯೂರ ಪೋಷಕಾ) ಆಗಿತ್ತೆಂದೂ ತಿಳಿಸಿದೆ. ಆದರೆ ಬೌದ್ಧ ಗ್ರಂಥಗಳು ಚಂದ್ರಗುಪ್ತನು ಮಗಧ ರಾಜ್ಯದ ಕ್ಷತ್ರಿಯ ವಂಶದವನೆಂದೂ, ಅವನ ವಂಶೀಯರು 'ಮೊರಿಯಾ' ಎಂಬ ಕುಲಕ್ಕೆ ಸೇರಿದವನೆಂದೂ, 'ಪಿಪ್ಪಲಿವನ' ಎಂಬಲ್ಲಿ ರಾಜ್ಯಭಾರ

ಮಾಡುತ್ತಿದ್ದರೆಂದೂ ಉಲ್ಲೇಖಿಸುತ್ತವೆ. ಕೌಟಿಲ್ಯನ *ಅರ್ಥಶಾಸ್ತ್ರವೂ* ಒಂದು ಮುಖ್ಯವಾದ ಆಕರವಾಗಿದ್ದು ಮೌರ್ಯರ ಕಾಲಕ್ಕೆ ಸೇರಿದ್ದು ಎಂದು ಹೇಳಲಾಗುತ್ತಿದ್ದು, ಮೌರ್ಯ ಕಾಲದ ಕೆಲವು ಬೆಳವಣಿಗೆಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ವಿಶಾಖದತ್ತನು ಕ್ರಿ.ಶ. ಒಂಬತ್ತನೆಯ ಶತಮಾನದಲ್ಲಿ ಬರೆದಿರುವ *ಮುದ್ರಾರಾಕ್ಷಸ* ಎಂಬ ನಾಟಕವು ಚಂದ್ರಗುಪ್ತನ ಸೈನಿಕ ಕಾರ್ಯಾಚರಣೆಗಳ ಯಶಸ್ಸಿಗೆ ಕೌಟಿಲನ್ಯನ ಕಾರ್ಯತಂತ್ರಗಳು ಕಾರಣವೆಂದು ಸೂಚಿಸುತ್ತದೆ. ಜಸ್ಟಿನ್ ಎಂಬ ಗ್ರೀಕ್ ಸಮಕಾಲೀನ ಚರಿತ್ರಕಾರನು, ಚಂದ್ರಗುಪ್ತನು ರಾಜವಂಶಕ್ಕೆ ಸೇರಿರಲಿಲ್ಲವೆಂದೂ, ಸಾಮಾನ್ಯ ಕುಟುಂಬದಲ್ಲಿ ಜನಿಸದವನೆಂದೂ ಹೇಳುತ್ತಾನೆ. ಮೌರ್ಯ ಸಾಮ್ರಾಜ್ಯವನ್ನು ಕುರಿತು ಯುರೋಪಿನವರ ಜ್ಞಾನ ವೃದ್ಧಿಸುವಲ್ಲಿ ಸಹಕಾರಿಯಾದ ಇನ್ನೊಂದು ವಿದೇಶಿ ಆಕರ ಮೆಗಾಸ್ತನೀಸ್ ಬರೆದ *ಇಂಡಿಕಾ*. ಇವನು ಸೆಲ್ಯೂಕಸ್‌ನ ರಾಯಭಾರಿಯಾಗಿ ಪಾಟಲೀಪುತ್ರದಲ್ಲಿ ಚಂದ್ರಗುಪ್ತನ ಆಸ್ಥಾನಕ್ಕೆ ಭೇಟಿ ಕೊಟ್ಟಾಗ, ಅವನು ನೋಡಿದ ವಿಷಯಗಳನ್ನು ಸಂಗ್ರಹಿಸಿದ್ದನು. ಇಂಡಿಕಾ ಗ್ರಂಥದ ಕಾಲದ ಬಗ್ಗೆ ಭಿನ್ನಾಭಿಪ್ರಾಯ ಗಳಿದ್ದವು. ಅದರಲ್ಲಿರುವ ಎರಡು ಭಾಗಗಳು ಇತಿಹಾಸಕಾರರ ಮನ ಸೆಳೆಯುತ್ತವೆ. ಒಂದು ಮೌರ್ಯರ ರಾಜಧಾನಿ ಪಾಟಲೀಪುತ್ರದ ವಿಚಾರವಾಗಿ ಅವನು ನೀಡುವ ಚಿತ್ರಣ. ಇನ್ನೊಂದು ಆ ಕಾಲದ ಭಾರತೀಯ ಸಮಾಜ ಏಳು ಶ್ರೇಣಿಗಳಲ್ಲಿ ವರ್ಗೀಕರಿಸಲ್ಪಟ್ಟಿದ್ದವು ಎಂಬ ಖಚಿತ ಮಾಹಿತಿ. ಇದರಲ್ಲಿ ಬರುವ ಹೆಚ್ಚಿನ ಮಾಹಿತಿಗಳು ಕೌಟಿಲ್ಯನ *ಅರ್ಥಶಾಸ್ತ್ರದಲ್ಲಿರುವ* ಮಾಹಿತಿಗಳಿಗೆ ಸಾಮ್ಯತೆಯನ್ನು ಕಂಡುಕೊಳ್ಳಲಾಗಿದೆ. ಈ ಎಲ್ಲಾ ಆಕರಗಳ ಕುರಿತು, ಪ್ರಸ್ತಾಪಿಸುವ ವಿಷಯ ಮತ್ತು ಕಾಲಗಣನೆಯ ಬಗ್ಗೆ ಯತಾರ್ಥತೆ ಸರಿಯಾಗಿ ಇಲ್ಲ.

ಆದರೆ, ಈ ದೃಷ್ಟಿಯಿಂದ ಮೌರ್ಯರ ಇತಿಹಾಸದ ಮರು ನಿರೂಪಣೆಗೆ ಅತ್ಯಂತ ದೃಢೀಕೃತ ಆಕರಗಳು ಅಶೋಕನ ಶಿಲಾಶಾಸನಗಳು. ಭಾರತ ಉಪಖಂಡ ಮತ್ತು ಅಫ್ಘಾನಿಸ್ತಾನದ ನಡುವೆ ಹಾದುಹೋಗುವ ಹೆದ್ದಾರಿಗಳಲ್ಲಿ ಸುಮಾರು ೪೫ ಸ್ಥಳಗಳಲ್ಲಿ ಇಂತಹ ಶಾಸನಗಳು ದೊರೆತಿವೆ. ಇವು ಪ್ರಾಕೃತ ಭಾಷೆಯಲ್ಲಿ ಬರೆದು ಬ್ರಾಹ್ಮೀ ಲಿಪಿಯಲ್ಲಿವೆ. ಇವುಗಳು ಮೌರ್ಯರ ರಾಜಕೀಯ ರೀತಿ-ನೀತಿಗಳ ಬಗೆಗೆ ಬಹುಮುಖ್ಯವಾದ ಮಾಹಿತಿ ಒದಗಿಸುತ್ತವೆ.

### ಚಂದ್ರಗುಪ್ತನ ಕಾಲದ ಆಡಳಿತ ವ್ಯವಸ್ಥೆ

ಪರ್ಶಿಯಾದಿಂದ ದಕ್ಷಿಣ ಭಾರತದವರೆಗೂ, ಅವುಗಳ ವೈಪರೀತ್ಯಗಳೊಂದಿಗೆ ವಿಸ್ತರಿಸಿದ್ದ ಪ್ರದೇಶದ ಆಡಳಿತವನ್ನು ದಕ್ಷತೆಯಿಂದ ನಿರ್ವಹಿಸಲು ಸೂಕ್ತ ವ್ಯವಸ್ಥೆಯೊಂದನ್ನು ನಿರೂಪಿಸುವುದು ಚಂದ್ರಗುಪ್ತನಿಗೆ ಕಷ್ಟದ ಕೆಲಸವಾಗಿತ್ತು. ವಿಶಾಲ ಸಾಮ್ರಾಜ್ಯವೊಂದರ ವಿವಿಧ ಭಾಗಗಳ ನಡುವೆ ಶ್ರೇಷ್ಠ ಮತ್ತು ಸುಲಭ ಸಂಪರ್ಕ ಇರದಿದ್ದ ಆ ಕಾಲದಲ್ಲಿ ಪಾಟಲೀಪುತ್ರದಂತಹ ಒಂದು ಕೇಂದ್ರದಿಂದ ಆಡಳಿತವನ್ನು ನಿಯಂತ್ರಿಸುವುದು ವಿಶೇಷ ಜವಾಬ್ದಾರಿಯೂ ಹೌದು.

ಮೆಗಾಸ್ತನಿಸ್‌ನ ಬರಹ ಮತ್ತು ಕೌಟಿಲ್ಯನ *ಅರ್ಥಶಾಸ್ತ್ರಗಳಿಂದ* ಚಂದ್ರಗುಪ್ತನ ಆಡಳಿತ ವ್ಯವಸ್ಥೆ ಪಕ್ವವಾಗಿತ್ತು ಎಂದು ತಿಳಿಯಬಹುದು. ಮೆಗಾಸ್ತನಿಸ್‌ನು ಚಂದ್ರಗುಪ್ತ ಮೌರ್ಯನ

ಆಸ್ಥಾನಕ್ಕೆ ಭೇಟಿಕೊಟ್ಟ ಸೆಲ್ಯೂಕಸ್‌ನ ರಾಯಭಾರಿ. ಅವನ ಬರಹವಲ್ಲಿ ಮುಖ್ಯವಾಗಿ ಮೌರ್ಯರ ರಾಜಧಾನಿ ಪಾಟಲಿಪುತ್ರ, ಸಾಮ್ರಾಜ್ಯದ ಆಡಳಿತ ವ್ಯವಸ್ಥೆ ಮತ್ತು ಸಮಾಜ ರಚನಾ ಸ್ವರೂಪವನ್ನು ಕುರಿತು ಉತ್ತಮ ವಿಶ್ಲೇಷಣೆಯನ್ನು ಕಾಣಬಹುದು. ಅವನು ಚಂದ್ರಗುಪ್ತನ ಕಾಲದಲ್ಲಿ ತಾನು ಕಂಡ ವಿಷಯಗಳನ್ನು *ಇಂಡಿಕಾ* ಎಂಬ ಗ್ರಂಥದಲ್ಲಿ ಸಂಗ್ರಹಿಸಿದ್ದಾನೆ. ಈ ಗ್ರಂಥವು ಅಪೂರ್ಣವಾಗಿದ್ದರೂ, ಅದರಲ್ಲಿ ದೊರೆತಿರುವ ಮಾಹಿತಿಗಳು ಮೌರ್ಯರ ವಿಷಯವನ್ನು ತಿಳಿಯಲು ಪ್ರಧಾನವಾದ ಮಾಹಿತಿಗಳಾಗಿವೆ.

ಮೆಗಾಸ್ತನಿಸ್‌ನು ಸ್ಥಳೀಯ ಸಂಸ್ಥೆಗಳ ವಿಚಾರವಾಗಿ ಸ್ಪಷ್ಟ ಚಿತ್ರಣವನ್ನು ನೀಡಿದ್ದಾನೆ. ಅದರಲ್ಲಿಯೂ ಪಾಟಲೀಪುತ್ರದ ನಗರಸಭೆಯ ಕಾರ್ಯಕಲಾಪಗಳನ್ನು ಕುರಿತು ವರ್ಣಿಸಿದ್ದಾನೆ. ನಗರಪಾಲಕನೆಂಬ ಅಧಿಕಾರಿ ನಗರಸಭೆಯ ಮುಖಂಡತ್ವವನ್ನು ವಹಿಸುತ್ತಿದ್ದನು. ನಗರಾಡಳಿತವನ್ನು ಸುಸೂತ್ರವಾಗಿ ನೆರವೇರಿಸಲು ನಗರಸಭೆಯನ್ನು ಆರು ವಿಭಾಗಗಳನ್ನಾಗಿ ವಿಭಾಗಿಸಲಾಗಿದ್ದು, ಪ್ರತಿಯೊಂದು ವಿಭಾಗಗಳಲ್ಲಿ ಐದು ಮಂದಿ ಪ್ರತಿನಿಧಿಗಳಿರುತ್ತಿದ್ದರು. ಈ ವಿಭಾಗಗಳು ಕ್ರಮವಾಗಿ ಔದ್ಯೋಗಿಕ ಕಾರ್ಯಗಳನ್ನು ನೋಡಿಕೊಳ್ಳುವುದು; ವಿದೇಶೀಯರ ವಸತಿ ಸೌಕರ್ಯ ಮತ್ತು ಅವರ ಕಾರ್ಯಚಟುವಟಿಕೆಗಳ ಮೇಲೆ ನಿಗಾ ಇಡುವುದು, ಜನನ ಮತ್ತು ಮರಣಗಳ ದಾಖಲೆಯನ್ನು ಮಾಡುವುದು; ವ್ಯಾಪಾರ ವಹಿವಾಟಿನ ನಿರ್ವಹಣೆ; ತಯಾರಾಗುವ ಕಬ್ಬಿಣ, ಚಿನ್ನ ಮತ್ತು ಇತರ ಲೋಹದ ವಸ್ತುಗಳ ಉತ್ಪಾದನೆಯನ್ನು ಕುರಿತು ತನಿಖೆ ಮಾಡುವುದು ಮತ್ತು ಕೊನೆಯದಾಗಿ, ಮಂಡಳಿಯ ಮುಖ್ಯ ಕರ್ತವ್ಯ ತೆರಿಗೆಗೆ ಸಂಬಂಧಿಸಿದುದು. ಇವುಗಳನ್ನು ಈ ಆರು ಮಂಡಳಿಗಳು ಸಮರ್ಥವಾಗಿ ನಿರ್ವಹಿಸಿ ನಗರಾಭಿವೃದ್ಧಿಗೆ ಹೆಚ್ಚು ಉತ್ತೇಜನ ನೀಡುತ್ತಿದ್ದವು. ಇವುಗಳಲ್ಲದೆ ಆರೋಗ್ಯ, ಕಟ್ಟಡ ನಿರ್ಮಾಣ, ದೇವಾಲಯಗಳ ರಕ್ಷಣೆ ಮತ್ತು ಬಂದರುಗಳ ನಿರ್ವಹಣೆಯನ್ನೂ ನಗರಸಭೆ ವಹಿಸಿಕೊಳ್ಳುತ್ತಿತ್ತು.

ಚಂದ್ರಗುಪ್ತನು ತನ್ನ ವಿಶಾಲ ಸಾಮ್ರಾಜ್ಯವನ್ನು ನಿರ್ವಹಣೆಗೆ ಯೋಗ್ಯವಾದ ಹಲವು ಪ್ರಾಂತ್ಯಗಳನ್ನಾಗಿ ವಿಂಗಡಿಸಿದ್ದನು. ಇವುಗಳ ಆಡಳಿತವನ್ನು ರಾಜ್ಯಪಾಲರು ಮತ್ತು ರಾಜಪ್ರತಿನಿಧಿಗಳು ನಿರ್ವಹಿಸುತ್ತಿದ್ದರು. ಕೆಲವು ವೇಳೆ ರಾಜಮನೆತನದವರೇ ಈ ಹುದ್ದೆಗಳಿಗೆ ನೇಮಕಗೊಳ್ಳುತ್ತಿದ್ದರು. ಮಧ್ಯ ಮತ್ತು ಪೂರ್ವ ಭಾಗಗಳ ಆಡಳಿತವನ್ನು ರಾಜನೇ ಸ್ವತಃ ನೋಡಿಕೊಳ್ಳುತ್ತಿದ್ದ. ಸಾರ್ವಜನಿಕ ಆಡಳಿತದಲ್ಲಿ ರಾಜನಿಗೆ ಸಲಹೆ ನೀಡುತ್ತಿದ್ದ ಮಂಡಳಿಯೊಂದರ ಬಗ್ಗೆ ಹಲವಾರು ಗ್ರೀಕ್ ಲೇಖಕರು ತಿಳಿಸುತ್ತಾರೆ. ಈ ಮಂಡಳಿಯ ಸದಸ್ಯರು ರಾಜ್ಯಪಾಲರು, ಪ್ರಾಂತಗಳ ಮುಖ್ಯಾಧಿಕಾರಿಗಳು, ಉಪ ರಾಜ್ಯಪಾಲರು, ರಾಜ್ಯ ಕೋಶಾಧ್ಯಕ್ಷರು, ದಂಡನಾಯಕರು, ನ್ಯಾಯಾಧೀಶರಂತಹ ಇತರ ಉನ್ನತಾಧಿಕಾರಿಗಳನ್ನು ಆರಿಸುತ್ತಿದ್ದರು.

ಪ್ರಾಂತ್ಯಗಳನ್ನು, ಆಡಳಿತದ ಅನುಕೂಲಕ್ಕಾಗಿ ಸಣ್ಣ ಸಣ್ಣ ವಿಭಾಗಗಳನ್ನಾಗಿ ವಿಭಜಿಸಿ ಹಲವು ಗ್ರಾಮಗಳನ್ನಾಗಿ ಪರಿವರ್ತಿಸಲಾಗಿತ್ತು. ಪ್ರತಿಯೊಂದು ಗ್ರಾಮ ಸಮುದಾಯ ಸ್ವಾಯತ್ತ ನಿಗಮದಂತೆ ಅಥವಾ ಒಂದು ಗಣರಾಜ್ಯದಂತೆ ಕೆಲಸ ಮಾಡುತ್ತಿತ್ತು. ಇದರಿಂದ

ಗ್ರಾಮದ ಜನರಿಗೆ ಆಡಳಿತ ತಂತ್ರದಲ್ಲಿ ನಿಸ್ಸೀಮರಾಗಲು ವಿಪುಲ ಅವಕಾಶಗಳು ದೊರೆಯು ತ್ತಿದ್ದವು. ತಮ್ಮ ಸ್ಥಳೀಯ ಸಮಸ್ಯೆಗಳು ಮತ್ತು ವ್ಯವಹಾರಗಳನ್ನು ತಾವೇ ನಿರ್ವಹಿಸಿಕೊಳ್ಳಲು ಗ್ರಾಮಸ್ಥರಿಗೆ ಅವಕಾಶಗಳಿದ್ದವು. ಹೀಗೆ ದೂರದ ಮತ್ತು ಸಂಪರ್ಕ ಸಂವಹನಗಳ ಸಂಕಷ್ಟ ಗಳನ್ನು ವಿಕೇಂದ್ರಿಕೃತ ಆಡಳಿತವೊಂದರಿಂದ ಪರಿಹರಿಸಿಕೊಳ್ಳಲಾಗುತ್ತಿತ್ತು. ಚಂದ್ರಗುಪ್ತನು ಎಲ್ಲಾ ಅಧಿಕಾರವನ್ನು ಅನುಭವಿಸುತ್ತಿದ್ದು, ನಿರಂಕುಶ ಪ್ರಭುವೆಂದು *ಅರ್ಥಶಾಸ್ತ್ರ* ಬಣ್ಣಿಸು ತ್ತದೆ. ಅವನ ಮುಖ್ಯ ಕರ್ತವ್ಯ ಪ್ರಜೆಗಳ ಬೇಡಿಕೆಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುವುದು. ಈ ವಿಚಾರವಾಗಿ ರಾಜನಿಗೆ ಒಂದು ಸಮಿತಿ ಸಹಾಯ ಮಾಡುತ್ತಿತ್ತೆಂದೂ ಮೆಗಾಸ್ತನಿಸ್ ತಿಳಿಸುತ್ತಾನೆ.

ರಾಜನು ಗುಪ್ತಾಚಾರರ ಒಂದು ದೊಡ್ಡ ಮಂಡಳಿಯನ್ನು ಸಹ ನೇಮಿಸುತ್ತಿದ್ದ. ಮೆಗಾಸ್ತನಿಸ್ ಇವರನ್ನು ಮೇಲ್ವಿಚಾರಕರು ಎಂದು ಕರೆದಿದ್ದಾನೆ. ಕೃಷಿ ಅಭಿವೃದ್ಧಿಗೆ ಸಂಬಂಧಿಸಿ ದಂತೆ ಮೆಗಾಸ್ತನಿಸ್‌ನ *ಇಂಡಿಕಾ* ಸಾಕಷ್ಟು ಮಾಹಿತಿ ನೀಡುತ್ತದೆ. ನದಿಗಳ ಮೇಲ್ವಿಚಾರಣೆ ನಡೆಸಲು, ಭೂಮಿಯನ್ನು ಅಳತೆ ಮಾಡಲು, ಮುಖ್ಯ ಕಾಲುವೆಯಿಂದ ಉಪ ಕಾಲುವೆಗೆ ನೀರನ್ನು ಹೊರ ಬಿಡುತ್ತಿದ್ದ ಬಾಗಿಲುಗಳ ಪರಿಶೀಲನೆ ಮಾಡಲು ಅನೇಕ ಅಧಿಕಾರಿಗಳಿದ್ದರು. ಪ್ರತಿಯೊಂದು ರೈತ ಸಮುದಾಯಕ್ಕೆ ಸಮಾನ ಪ್ರಮಾಣದಲ್ಲಿ ನೀರು ಲಭಿಸುವಂತೆ ನೋಡಿಕೊಳ್ಳಲು ಬಾಗಿಲುಗಳನ್ನು ಪರಿಶೀಲಿಸುತ್ತಿದ್ದುದರ ಉದ್ದೇಶವಾಗಿತ್ತು. ಇಷ್ಟೇ ಅಲ್ಲದೆ ಬೇಸಾಯ, ಅರಣ್ಯೋದ್ಯಮ, ಮರದ ದಿಮ್ಮಿಗಳು, ಲೋಹ ಎರಕ ಹೊಯ್ಯುವ ಕಾರ್ಯಾ ಗಾರಗಳು, ಗಣಿಗಳು ಮತ್ತು ರಸ್ತೆಗಳು ಇವುಗಳಿಗೆ ಸಂಬಂಧಿಸಿದ ಅಧಿಕಾರಿಗಳು ಸಹ ಇದ್ದರೆಂದು ಮೆಗಾಸ್ತನಿಸ್‌ನು ತಿಳಿಸುತ್ತಾನೆ.

ಸೈನ್ಯಾಡಳಿತದ ವಿವರಗಳನ್ನು ನೀಡುವ ಈತ, ಹೊಸದಾಗಿ ಸ್ಥಾಪಿತವಾದ ಈ ಸಾಮ್ರಾಜ್ಯದ ಭದ್ರತೆಗೆ ಚಂದ್ರಗುಪ್ತನ ಬಳಿ ಆರು ಲಕ್ಷ ಯೋಧರನ್ನು ಒಳಗೊಂಡ ಒಂದು ಸುಸಜ್ಜಿತ ಸೇನಾಬಲವಿತ್ತು ಎಂದು ವರ್ಣಿಸುತ್ತಾನೆ. ಅವನ ರಾಜಧಾನಿ ಗಂಗಾ ಮತ್ತು ಸೋನ್ ನದಿಗಳ ಸಂಗಮಸ್ಥಾನವಾಗಿದ್ದ ಪಾಟಲೀಪುತ್ರದಲ್ಲಿದ್ದು, ಅದರ ಸುತ್ತಲೂ ೬೦ ಅಡಿಗಳಷ್ಟು ಆಳದ ಮತ್ತು ೨೦೦ ಗಜಗಳಷ್ಟು ಅಗಲದ ಕಂದಕವಿದ್ದು, ಇದರಲ್ಲಿ ಸೋನ್ ನದಿಯ ನೀರು ತುಂಬಿತ್ತು ಎಂದು ಮೆಗಾಸ್ತನಿಸ್ ವಿವರಿಸುತ್ತಾನೆ. ಇದಕ್ಕೆ ಪೂರಕವೆಂಬಂತೆ ರೋಮ್‌ನ ಬರಹಗಾರ ಪ್ಲಿನ್ನಿ, ಚಂದ್ರಗುಪ್ತನಲ್ಲಿ ಆರುಲಕ್ಷ ಕಾಲ್ಬಲ, ಮೂವತ್ತು ಸಾವಿರ ಕುದುರೆಗಳು ಮತ್ತು ಆನೆಗಳಿದ್ದವು ಎಂದು ಹೇಳುತ್ತಾನೆ. ಜೊತೆಗೆ ಎಂಟು ಸಾವಿರ ರಥಗಳೂ ಇದ್ದವು ಎಂದು ಇನ್ನೊಂದು ಮೂಲದಿಂದ ತಿಳಿಯುತ್ತದೆ. ಇಂಥ ಸಂಘಟಿತ ಸೇನಾಬಲದ ಉಸ್ತುವಾರಿಯನ್ನು ಪ್ರತ್ಯೇಕ ಮಂಡಳಿಗಳು ನೋಡಿಕೊಳ್ಳುತ್ತಿದ್ದವು. ಇಂತಹ ಆರು ಮಂಡಳಿ ಗಳಿದ್ದು ಪ್ರತಿಯೊಂದು ಮಂಡಳಿಯು ಐದು ಸದಸ್ಯರನ್ನು ಹೊಂದಿದ್ದು ಸುಮಾರು ೩೦ ಅಧಿಕಾರಿಗಳ ಅಧೀನದಲ್ಲಿತ್ತೆಂದು ಮೆಗಾಸ್ತನಿಸ್ ತಿಳಿಸುತ್ತಾನೆ. ಕಾಲ್ಬಲ, ರಾವುತರು, ಗಜ

ಸೇನೆ, ರಥಗಳು, ನೌಕಾಸೇನೆ ಮತ್ತು ಸಾರಿಗೆ ಹಾಗೂ ಸರಬರಾಜು-ಹೀಗೆ ಆರು ವಿಭಾಗ ಗಳು ಒಂದೊಂದು ಮಂಡಳಿಯ ನಿಯಂತ್ರಣದಲ್ಲಿದ್ದವು.

ಭೂಕಂದಾಯವು ರಾಜ್ಯದ ಖಜಾನೆಗೆ ಬರುವ ಮುಖ್ಯ ಆದಾಯವಾಗಿತ್ತು ಎಂದು ಕೌಟಿಲ್ಯನ *ಅರ್ಥಶಾಸ್ತ್ರ* ತಿಳಿಸುತ್ತದೆ. ಭೂಕಂದಾಯ ಸಾಮಾನ್ಯವಾಗಿ ಒಂದನೇ ಹತ್ತು ಭಾಗದಿಂದ ಹಿಡಿದು ಒಂದನೇ ಆರು ಭಾಗದವರೆಗೆ ಇತ್ತು. ಇದಲ್ಲದೆ, ಉದ್ಯೋಗಗಳು, ಗಣಿಗಳು, ಕಾಡುಗಳು ಮುಂತಾದವುಗಳ ಮೇಲಿನ ತೆರಿಗೆ, ನ್ಯಾಯಾಲಯದ ದಂಡಗಳು ಇತ್ಯಾದಿ ಗಳಿಂದಲೂ ಖಜಾನೆಗೆ ಸಂಪತ್ತು ಹರಿದುಬರುತ್ತಿತ್ತು. ಸಾಮಂತ ಅರಸರು ಒಪ್ಪಿಸುತ್ತಿದ್ದ ಕಪ್ಪ-ಕಾಣಿಕೆಗಳೂ ರಾಜನ ಬೊಕ್ಕಸಕ್ಕೆ ಬರುವ ಇನ್ನೊಂದು ಮುಖ್ಯ ಆದಾಯದ ಮೂಲ.

ಸಾಮ್ರಾಜ್ಯದೊಳಗಿನ ಆರ್ಥಿಕ ಚಟುವಟಿಕೆಗಳು ಪ್ರಭುತ್ವದ ಅಧೀನಕ್ಕೊಳಪಟ್ಟಿದ್ದವು. ಹೊಸ ಭೂಮಿಯನ್ನು ಕೃಷಿ ಚಟುವಟಿಕೆಗಳಿಗೆ ಬಳಸಿಕೊಳ್ಳಲು ಕೃಷಿಕರು ಮತ್ತು ಶೂದ್ರ ಕಾರ್ಮಿಕರ ಸೇವೆಯನ್ನು ಪಡೆಯಲಾಗುತ್ತಿತ್ತು. ಕಾಡು ಪ್ರದೇಶಗಳನ್ನು ಕೃಷಿ ಭೂಮಿಗಳನ್ನಾಗಿ ಪರಿವರ್ತಿಸುವ ಪ್ರಯತ್ನಗಳನ್ನು ಸರಕಾರ ಮಾಡಿತ್ತು. ಹೀಗೆ ಹೊಸದಾಗಿ ಸೃಷ್ಟಿಸಿದ ಜಮೀನು ಗಳಲ್ಲಿ ಉತ್ಪಾದನೆಯನ್ನು ಹೆಚ್ಚಿಸುವುದರಿಂದ ರೈತರಿಂದ ಹೆಚ್ಚು ಆದಾಯವನ್ನು ನಿರೀಕ್ಷಿಸ ಲಾಗುತ್ತಿತ್ತು. ಪಟ್ಟಣಗಳಲ್ಲಿ ಮಾರಲ್ಪಡುವ ಕೃಷಿ ಉತ್ಪನ್ನಗಳಿಗೆ ಸುಂಕವನ್ನು ವಿಧಿಸಲಾಗು ತ್ತಿತ್ತು. ಹೀಗೆ ಬಂದ ಬಹುಭಾಗ ಹಣವು ಪ್ರಜೆಗಳ ಉಪಯೋಗಕ್ಕಾಗಿಯೇ ವಿನಿಯೋಗ ವಾಗುತ್ತಿದ್ದಿತು. ಅದರಲ್ಲಿಯೂ ಚಂದ್ರಗುಪ್ತನು ವ್ಯವಸಾಯದಲ್ಲಿ ವಿಶೇಷ ಆಸಕ್ತಿ ವಹಿಸಿದ್ದ ನೆಂದು ತಿಳಿದುಬರುತ್ತದೆ.

ಗ್ರೀಕ್ ಚರಿತ್ರಕಾರರು ಚಕ್ರವರ್ತಿಯ ಜೀವನವೇ ಅಲ್ಲದೆ, ಸಾಮಾನ್ಯ ಜನರ ವಿಷಯ ವಾಗಿಯೂ ಉತ್ತಮ ಮಾಹಿತಿಗಳನ್ನು ನೀಡುತ್ತಾರೆ. ರಾಜ್ಯವು ಸಮೃದ್ಧಿಯಿಂದ ಕೂಡಿದ್ದು ಜನರು ತೃಪ್ತರಾಗಿದ್ದರು. ಕುಶಲಕಲೆಗಳಲ್ಲಿ ಮತ್ತು ಇತರ ಉದ್ಯೋಗಗಳಲ್ಲಿ ಜನರು ಬಹಳ ಪರಿಶ್ರಮ ಹೊಂದಿದವರಾಗಿದ್ದರು. ಭೂಮಿಯು ಫಲವತ್ತಾಗಿದ್ದು ಕೃಷಿಯಲ್ಲಿ ರೈತಾಪಿ ಜನರು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಯುದ್ಧ ಕಾಲದಲ್ಲಿಯೂ ರೈತರು ಕೃಷಿ ಚಟುವಟಿಕೆ ಗಳಲ್ಲಿ ನಿರತರಾಗಿರುತ್ತಿದ್ದರು. ಹಾಗಾಗಿ ಸಾಮ್ರಾಜ್ಯ ಆರ್ಥಿಕವಾಗಿ ಸುಸ್ಥಿತಿಯಲ್ಲಿತ್ತು.

## ಕೌಟಿಲ್ಯನ ಅರ್ಥಶಾಸ್ತ್ರ

ಕೌಟಿಲ್ಯನ ಕಾಲದ ವಿಚಾರವಾಗಿ ಅನೇಕ ಸಿದ್ಧಾಂತಗಳಿದ್ದರೂ, ಅವನು ಚಂದ್ರಗುಪ್ತನ ಸಮಕಾಲೀನನೆಂದು ಎಲ್ಲರೂ ಒಪ್ಪಿಕೊಂಡಿದ್ದಾರೆ. ಅವನ ಅತ್ಯಂತ ಅಮೂಲ್ಯವಾದ ಕೊಡುಗೆ ಎಂದರೆ *ಅರ್ಥಶಾಸ್ತ್ರ* ಗ್ರಂಥ. ಇದು ರಾಜನೀತಿ ಶಾಸ್ತ್ರದಲ್ಲಿಯೇ ಒಂದು ಮುಖ್ಯವಾದ ಮೈಲಿಗಲ್ಲು. ಇದನ್ನು ಮೊತ್ತಮೊದಲ ಬಾರಿಗೆ ೧೯೦೫ ರಲ್ಲಿ ಮೈಸೂರಿನ ಓರಿಯಂಟಲ್ ಸಂಶೋಧನಾಲಯದ ಅಧ್ಯಕ್ಷರಾಗಿದ್ದ ಶಾಮಶಾಸ್ತ್ರಿಯವರು ಬೆಳಕಿಗೆ ತಂದರು. ಈ ಗ್ರಂಥವು ಮೌರ್ಯರ ಕಾಲಕ್ಕೆ ಪೂರ್ವದವರಾದ ನಂದರಾಜರ ಕಾಲಕ್ಕೆ ಸೇರಿದ್ದೆಂದೂ, ಆಗಿನ

ರಾಜನೀತಿಗೆ ಅದು ಮುಖ್ಯವಾದ ಆಕರವೆಂದೂ ನಂಬಲಾಗಿದೆ. ಇದಕ್ಕೆ ಕೌಟಿಲ್ಯನು ಮೊದಲ ಮೌರ್ಯ ರಾಜನಾದ ಚಂದ್ರಗುಪ್ತನ ಅಮಾತ್ಯ ಎಂಬ ಮಾತು ಸಮರ್ಥಿಸುತ್ತದೆ.

ಕೌಟಿಲ್ಯನು ಚಂದ್ರಗುಪ್ತನ ಪ್ರಧಾನಮಂತ್ರಿಯಾಗಿದ್ದು, ಅವನಿಗೆ ಮುಖ್ಯ ಸಲಹೆಗಾರನೂ ಆಗಿ ಕಾರ್ಯ ನಿರ್ವಹಿಸುತ್ತಿದ್ದನು. ಅವನು ಬರೆದ ಗ್ರಂಥ ಚಂದ್ರಗುಪ್ತನ ಕಾಲದಲ್ಲಿರುವ ಆಡಳಿತದ ಚಿತ್ರಣವನ್ನು ನೀಡುತ್ತದೆ. ಸಾಮ್ರಾಜ್ಯದ ಆಡಳಿತವು ಕೇಂದ್ರೀಕೃತವಾಗಿದ್ದು, ಸಾರ್ವಜನಿಕ ಜೀವನ ಮತ್ತು ಅರ್ಥವ್ಯವಸ್ಥೆಯ ನಿರ್ವಹಣೆ ಸಾಮ್ರಾಟನ ಅಧೀನಕ್ಕೊಳ ಪಟ್ಟಿತ್ತು ಎಂದು ತಿಳಿಸುತ್ತದೆ. ಈ ಗ್ರಂಥ ಬಹುಪಾಲು ಭಾಗಗಳಿಗೆ ಕೌಟಿಲ್ಯನೇ ರಚನಕಾರ ನಾಗಿದ್ದನು ಎಂದು ಹೇಳಲಾಗಿದ್ದು, ಕೊನೆಯ ಕೆಲವು ಭಾಗಗಳನ್ನು ನಂತರವಷ್ಟೆ ಸೇರಿಸ ಲಾಗಿತ್ತು ಎಂಬ ಅಭಿಪ್ರಾಯವನ್ನು ಬಹಳಷ್ಟು ವಿದ್ವಾಂಸರು ಒಪ್ಪಿಕೊಳ್ಳುತ್ತಾರೆ.

*ಅರ್ಥಶಾಸ್ತ್ರ* ಗ್ರಂಥವನ್ನು ಕೇವಲ ಸಾಮ್ರಾಜ್ಯದ ಇತಿಹಾಸವನ್ನು ತಿಳಿದುಕೊಳ್ಳಲು ಒಂದು ಉತ್ತಮ ಆಕರವಾಗಿದೆ ಎಂದು ತಿಳಿಯಬಾರದು. ಬದಲಾಗಿ ಅದು ಆ ಕಾಲದಲ್ಲಿ ರಾಜ್ಯದ ರಚನಾ ಪ್ರಕ್ರಿಯೆಯು ಹಂತ ಹಂತವಾಗಿ ಹೇಗೆ ನಡೆದು ಬಂದಿತು ಎಂಬ ವಿಷಯಕ್ಕೆ ಸಂಬಂಧಿಸಿದ ಒಂದು ಉತ್ತಮ ದಾಖಲೆ ಎಂದೇ ಹೇಳಬೇಕಾಗುತ್ತದೆ. ಏಕೆಂದರೆ ಕೌಟಿಲ್ಯನು ತನ್ನ ಗ್ರಂಥದಲ್ಲಿ ಮುಖ್ಯವಾಗಿ ಮೌರ್ಯ ಸಾಮ್ರಾಜ್ಯದ ಅಧಿಪತ್ಯ ಮಗಧದಲ್ಲಿ ಸ್ಥಾಪನೆ ಯಾಗುವ ಮೊದಲು ಇದ್ದಿರುವ ರಾಜಕೀಯ ಚಿತ್ರಣವನ್ನು ವಿವರವಾಗಿ ತಿಳಿಸುತ್ತಾನೆ. ಮಗಧ ಒಂದು ಬಲಾಢ್ಯ ಸಾಮ್ರಾಜ್ಯದ ಕೇಂದ್ರವಾಗಿ ಪರಿವರ್ತನೆಗೊಳ್ಳುವ ಮೊದಲು ಈ ಪ್ರದೇಶ ಗಳಲ್ಲಿ ಅನೇಕ ಸಣ್ಣ ಪುಟ್ಟ ಅರಸು ಮನೆತನಗಳು ಪ್ರಭುತ್ವಕ್ಕಾಗಿ ಪರಸ್ಪರ ಪೈಪೋಟಿಯಲ್ಲಿ ಮಗ್ನವಾಗಿದ್ದವು. ಇಂತಹ ಪ್ರಕ್ಷುಬ್ಧ ವಾತಾವರಣದಲ್ಲಿ ಚಂದ್ರಗುಪ್ತ ಮೌರ್ಯನು ಕೌಟಿಲ್ಯನ ಸಲಹೆ ಸೂಚನೆಗಳನ್ನು ಸಕಾರಾತ್ಮಕವಾಗಿ ಪಾಲಿಸಿ ಅವನ ಸಮಕಾಲೀನ ಅರಸರನ್ನು ಸದೆ ಬಡಿದು, ಮಗಧವನ್ನು ಆಕ್ರಮಿಸಿದನು. ನಂತರ ಅವನ ಚಕ್ರಾಧಿಪತ್ಯ ಸಮೀಕರಣಗೊಂಡು ಒಂದು ಸಾಮ್ರಾಜ್ಯದ ರಾಜಕೀಯ ಕೇಂದ್ರವಾಗಿಯೂ ಮಗಧ ಪ್ರಾಂತ್ಯ ಪರಿವರ್ತನೆ ಗೊಂಡಿತು. ಜೊತೆಗೆ ಅಲ್ಲಿ ಬಲಿಷ್ಠ ರಾಜ್ಯಾಂಗದ ರಚನೆಯು ಸ್ಥಾಪನೆಗೊಂಡಿತು ಎಂದು ಅರ್ಥಶಾಸ್ತ್ರ ತಿಳಿಸುತ್ತದೆ. ಹಾಗಾಗಿ ಅರ್ಥಶಾಸ್ತ್ರ ಗ್ರಂಥವು ಪ್ರಾಚೀನ ಭಾರತ ರಾಜಕೀಯ ಪರಿಸ್ಥಿತಿ ಮತ್ತು ಅದರ ಪರಿವರ್ತನೆಯನ್ನು ತಿಳಿದುಕೊಳ್ಳಲು ಒಂದು ಉತ್ತಮ ಆಕರವಾಗಿದೆ.

ರಾಜ್ಯದ ಆಡಳಿತಕ್ಕೆ ಸಂಬಂಧಿಸಿದಂತೆ, ಅರ್ಥಶಾಸ್ತ್ರವು ಮೂರು ಮುಖ್ಯವಾದ ಉಪಾಯ ಗಳನ್ನು ಉಪದೇಶಿಸುತ್ತದೆ. ಒಂದನೆಯದು ವಿಶಾಲವಾಗಿ ಸಮೃದ್ಧಿಗೊಂಡಿದ್ದ ಕೃಷಿಕ ಸಮಾಜದಿಂದ ರಾಜ್ಯವು ಹೆಚ್ಚುವರಿ ಉತ್ಪಾದನೆಯನ್ನು ವಸೂಲಿ ಮಾಡುವುದು. ಎರಡನೆ ಯದು, ಆ ಹೆಚ್ಚುವರಿ ಉತ್ಪಾದನೆಯನ್ನು ರಾಜ್ಯಾಡಳಿತದ ಉಸ್ತುವಾರಿಯಲ್ಲಿ ಕೇಂದ್ರ ವ್ಯವಸಾಯೇತರ ಸರಕುಗಳ ಉತ್ಪಾದನೆಗಾಗಿ ವರ್ತಕರಿಗೆ ಹಸ್ತಾಂತರಿಸುವುದು ಹಾಗೂ ಮೂರನೆಯದಾಗಿ ಅರಣ್ಯ ಪ್ರದೇಶಗಳನ್ನು ಕೃಷಿ ಭೂಮಿಯನ್ನಾಗಿ ಅಭಿವೃದ್ಧಿಪಡಿಸಲು ದಟ್ಟ ಕಾಡುಗಳನ್ನು ಕಡಿದು ಕೃಷಿ ಉತ್ಪಾದನಾ ಚಟುವಟಿಕೆಗಳಿಗೆ ಉತ್ತೇಜನ ನೀಡುವುದು.

ಕೌಟಿಲ್ಯನು ರಾಜ್ಯವನ್ನು ಒಂದು ಶರೀರಕ್ಕೆ ಹೋಲಿಸಿ, ಅವುಗಳ ಏಳು ಅಂಶಗಳನ್ನು 'ಸಪ್ತಾಂಗ' ಎಂದು ವಿವರಿಸುತ್ತಾನೆ. ಅವುಗಳು ಸ್ವಾಮಿ (ರಾಜ), ಅಮಾತ್ಯ (ಮಂತ್ರಿ), ರಾಷ್ಟ್ರ, ದುರ್ಗ, ಬಲ, ಕೋಶ ಮತ್ತು ಮಿತ್ರ. ಈ ಎಲ್ಲಾ ಅಂಗಗಳೂ ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದರ ಬಗ್ಗೆ ವಿವರವಾಗಿ ತಿಳಿಸಿದ್ದಾನೆ. ಇವುಗಳಲ್ಲದೆ, ರಾಜಕುಮಾರನ ಶಿಕ್ಷಣ ಮತ್ತು ಅರ್ಹತೆಗಳು, ಮಂತ್ರಿಗಳನ್ನು ನೇಮಿಸುವ ಕ್ರಮಗಳು, ಗೂಢಚಾರರ ನೇಮಕ ಮತ್ತು ಸಾಮ್ರಾಜ್ಯದ ರಕ್ಷಣೆಯ ದೃಷ್ಟಿಯಿಂದ ಅವರ ಅವಶ್ಯಕತೆಗಳ ಬಗ್ಗೆಯೂ ಬೆಳಕು ಚೆಲ್ಲುತ್ತಾನೆ. ಕೋಟೆಗಳ ನಿರ್ಮಾಣ, ನೀರಾವರಿ ವ್ಯವಸ್ಥೆ, ವ್ಯಾಪಾರ ವಹಿವಾಟು, ಬರಡು ಭೂಮಿಯಲ್ಲಿ ಕೃಷಿ ಉತ್ಪಾದನೆ, ಗಣಿಗಾರಿಕೆ, ಅರಣ್ಯಗಳ ರಕ್ಷಣೆ ಇತ್ಯಾದಿ ವಿಷಯವಾಗಿ ರಾಜನು ಪಾಲಿಸಬೇಕಾದ ನಿರ್ಧಾರಗಳ ಬಗ್ಗೆ ಅರ್ಥಶಾಸ್ತ್ರ ಸೂಕ್ತ ಸಲಹೆಗಳನ್ನು ವಿವರಿಸುತ್ತದೆ. ರಾಷ್ಟ್ರಕ್ಕೆ ಬಂದೊದಗಬಹುದಾದ ವಿಪತ್ತುಗಳು ಪ್ರವಾಹ, ಅಗ್ನಿಭಯ, ಕ್ಷಾಮ ಮುಂತಾದವುಗಳನ್ನು ಎದುರಿಸಲು ರಾಜ್ಯ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ವಿಶ್ಲೇಷಿಸಲಾಗಿದೆ. ಸೈನ್ಯಾಡಳಿತ ಮತ್ತು ಸ್ಥಳೀಯ ಸಂಸ್ಥೆಗಳ ಆಡಳಿತ ಕುರಿತಂತೆ ಉಲ್ಲೇಖವಿದೆ. ಜೊತೆಗೆ ಯುದ್ಧಗಳನ್ನು ಗೆಲ್ಲುವ ಮಾರ್ಗೋಪಾಯಗಳು, ಗೆದ್ದ ರಾಜ್ಯಗಳ ಅರಸರ ವಿಶ್ವಾಸವನ್ನು ಹೇಗೆ ಸಂಪಾದಿಸಬೇಕು ಎಂಬ ವಿಚಾರವಾಗಿಯೂ ಚರ್ಚಿಸಲಾಗಿದೆ.

ಸಾಮ್ರಾಜ್ಯದೊಳಗೆ ರಾಜಕೀಯ ಅಧಿಕಾರದ ಕ್ರೋಢೀಕರಣವು ಆರ್ಥಿಕ ಸಮೃದ್ಧಿಯನ್ನು ಅವಲಂಭಿಸಿರುತ್ತದೆ ಎಂದು ಕೌಟಿಲ್ಯ ನಂಬಿದ್ದನು. ಹಾಗಾಗಿ ಅದಕ್ಕೆ ಸಂಬಂಧಿಸಿದ ಎಲ್ಲಾ ರಂಗಗಳು- ಗಣಿಗಾರಿಕೆ, ವ್ಯಾಪಾರ, ಕರಕುಶಲ ಕೈಗಾರಿಕೆ ಮತ್ತು ಕೃಷಿ ಅಭಿವೃದ್ಧಿಗೆ ರಾಜ್ಯದ ಪ್ರೋತ್ಸಾಹವೇ ಆರ್ಥಿಕ ಅಭಿವೃದ್ಧಿಯನ್ನು ನಿರ್ಧರಿಸುತ್ತದೆ ಎಂದು ತಿಳಿಸಲಾಗಿದೆ.

ಕೌಟಿಲ್ಯನು ರಾಜನಿಗೆ ಅತ್ಯಂತ ಗೌರವದ ಸ್ಥಾನವನ್ನು ನೀಡಿ ಅವನನ್ನು 'ಸ್ವಾಮಿ' ಎಂದು ಸಂಬೋಧಿಸಿದ್ದಾನೆ. ಅವನನ್ನು ರಾಜ್ಯಪಾಲಕ, ಧರ್ಮಚಕ್ರ ಪ್ರವರ್ತಕ ಮತ್ತು ದಂಡಾಧರ ಎಂಬ ಹೆಸರುಗಳಿಂದಲೂ ಈ ಗ್ರಂಥದಲ್ಲಿ ಕರೆಯಲಾಗಿದೆ. ರಾಜನು ಸ್ವೇಚ್ಛಾಚಾರಿ ಅಥವಾ ನಿರಂಕುಶ ಅಧಿಕಾರಿಯೂ ಅಲ್ಲದ ಅವನು ಧರ್ಮದ ಚೌಕಟ್ಟಿನಲ್ಲಿ ತನ್ನ ಕೆಲಸವನ್ನು ನಿರ್ವಹಿಸಬೇಕು ಎಂದು ಕೌಟಿಲ್ಯ ಚಿತ್ರಿಸಿದ್ದಾನೆ. ಅವನ ಕಾರ್ಯ ನಿರ್ವಹಣೆಗೆ ರಾಜನು ಉತ್ತಮ ಮಂತ್ರಿಗಳ ಸಹಾಯವನ್ನು ಪಡೆಯಬೇಕು. ಈ ವಿಚಾರವಾಗಿ ಮಂತ್ರಿ ಪರಿಷತ್ತು ರಾಜನಿಗೆ ಸಲಹೆಗಳನ್ನು ಕೊಟ್ಟು ಮಾರ್ಗದರ್ಶನ ಮಾಡುತ್ತಿತ್ತು ಎಂದು ಅರ್ಥಶಾಸ್ತ್ರ ತಿಳಿಸುತ್ತದೆ. ರಾಜ್ಯಾಡಳಿತದ ವಿವಿಧ ಶಾಖೆಗಳನ್ನು ಚಿತ್ರಿಸಿ, ಅವುಗಳು 'ಅಧ್ಯಕ್ಷ' ಎಂಬ ಅಧಿಕಾರಿಯ ಮುಖಂಡತ್ವದಲ್ಲಿ ಕೆಲಸ ಮಾಡುತ್ತಿದ್ದವು. ಅವನು ವಸೂಲಿ ಮಾಡುವ ತೆರಿಗೆಗಳಲ್ಲಿ ಮುಖ್ಯವಾದವುಗಳು ಆಮದು ಮತ್ತು ರಫ್ತಿನ ಮೇಲಿನ ತೆರಿಗೆ, ಭೂಕಂದಾಯ, ರಸ್ತೆ ಸುಂಕ, ದೋಣಿ ತೆರಿಗೆ, ಕರಕುಶಲ ವಸ್ತುಗಳ ಮೇಲಿನ ಸುಂಕ, ಮೀನುಗಾರಿಕೆ ತೆರಿಗೆ, ಮಧ್ಯಪಾನೀಯ ತೆರಿಗೆ, ಗಣಿಗಳ ಮೇಲಿನ ತೆರಿಗೆ ಇತ್ಯಾದಿ. 'ಸಮೂಹರ್ತ' ಎಂಬ ಅಧಿಕಾರಿಯು ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದನು.

ರಾಜ್ಯಾಡಳಿತದ ವೈಭವ ಮತ್ತು ವ್ಯಾಪ್ತಿಯನ್ನು ಚಿತ್ರಿಸುವ ಕೌಟಿಲ್ಯ, ಅತ್ಯಂತ ಉನ್ನತ ಸ್ಥಾನವನ್ನು ಅಲಂಕರಿಸುವ ಅಧಿಕಾರಿ 'ಪುರೋಹಿತ'ನಿಗೆ ೪೮,೦೦೦ ಪಣಗಳನ್ನು ಸಂಬಳವಾಗಿ ನೀಡಲಾಗುತ್ತಿತ್ತು ಮತ್ತು ಅತ್ಯಂತ ಕೆಳದರ್ಜೆಯ ಅಧಿಕಾರಿಗೆ ೬೦ ಪಣಗಳನ್ನು ಸಂಬಳವಾಗಿ ನೀಡಲಾಗುತ್ತಿತ್ತು ಎಂದು ವಿವರಿಸಲಾಗಿದೆ. ಇದರಿಂದ ರಾಜ್ಯವು ಸಾಮ್ರಾಜ್ಯದಲ್ಲಿ ಉತ್ಪಾದಿಸಿದ ಸಂಪತ್ತನ್ನು ಸಮರ್ಥವಾಗಿ ನಿರ್ವಹಿಸುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ. ಪ್ರಜೆಗಳ ಆಸಕ್ತಿಗಳನ್ನು ರಕ್ಷಿಸುವುದು ರಾಜಕೀಯ ಅಧಿಕಾರದ ಯಶಸ್ಸಿಗೆ ಮುಖ್ಯ ಕಾರಣವೆಂದೂ ತಿಳಿಸಲಾಗಿದೆ.

ನ್ಯಾಯಾಂಗ ಕುರಿತು ಚರ್ಚಿಸುವ ಕೌಟಿಲ್ಯ, ನ್ಯಾಯಾಧೀಶರು, ಧರ್ಮಶಾಸ್ತ್ರ ಮತ್ತು ನೀತಿಶಾಸ್ತ್ರಗಳನ್ನು ಚೆನ್ನಾಗಿ ಬಲ್ಲವರಾಗಿರಬೇಕು ಎಂದು ವರ್ಣಿಸುತ್ತಾನೆ. ಅವರು ನೀಡುವ ನ್ಯಾಯವು ಧರ್ಮಶಾಸ್ತ್ರಕ್ಕೆ ಅನುಗುಣವಾಗಿರಬೇಕು. ಅದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ನ್ಯಾಯಾಧೀಶನನ್ನೂ ಶಿಕ್ಷಿಸಬೇಕು ಎಂದು ಹೇಳಲಾಗಿದೆ.

*ಅರ್ಥಶಾಸ್ತ್ರ*ದಲ್ಲಿ ಕೌಟಿಲ್ಯನು ಚಿತ್ರಿಸಿರುವಂತೆ ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಆಡಳಿತವನ್ನು ನಡೆಸಲಾಗುತ್ತಿತ್ತು ಎಂದು ತಿಳಿಯಬಹುದು. ಇದಕ್ಕೆ ಕಾರಣ, ಕೌಟಿಲ್ಯನು *ಅರ್ಥಶಾಸ್ತ್ರ* ಗ್ರಂಥವನ್ನು ಚಂದ್ರಗುಪ್ತನಿಗೆ ಮಾರ್ಗದರ್ಶಿಯಾಗಿ ಬರೆದಿದ್ದನೆಂದೂ ವಿದ್ವಾಂಸರು ಒಪ್ಪಿಕೊಳ್ಳುತ್ತಾರೆ.

**ಅಶೋಕ** (ಕ್ರಿ.ಪೂ. ೨೭೩-೨೩೨)

ಅಶೋಕ ಚಕ್ರವರ್ತಿಯ ಕಾಲದಲ್ಲಿ ಮೌರ್ಯ ಸಾಮ್ರಾಜ್ಯವು ತನ್ನ ಪ್ರಭುತ್ವದ ಅತ್ಯುನ್ನತ ಶಿಖರವನ್ನು ಮುಟ್ಟಿತ್ತು. ಅಶೋಕನ ಕಾಲದ ಇತಿಹಾಸ, ಆಡಳಿತ ಮತ್ತು ರಾಜಕೀಯ ರೀತಿ-ನೀತಿಗಳನ್ನು ಕುರಿತು ಅವನು ಹೊರಡಿಸಿದ ಶಾಸನಗಳು ಉಪಯುಕ್ತ ಮಾಹಿತಿ ಒದಗಿಸುತ್ತವೆ. ಈ ಶಾಸನಗಳಲ್ಲಿ ಅಶೋಕನನ್ನು 'ದೇವನಾಂಪ್ರಿಯ, ಪಿಯದರ್ಶಿ' ಎಂದು ಕರೆಯಲಾಗಿದೆ. ಕ್ರಿ.ಶ. ೧೮೩೦ ರ ದಶಕದಲ್ಲಿ ಬ್ರಿಟಿಷ್ ವಿದ್ವಾಂಸ ಜೇಮ್ಸ್ ಪ್ರಿನ್ಸೆಪ್, ಈ ಶಾಸನಗಳನ್ನು ಮೊತ್ತಮೊದಲ ಬಾರಿಗೆ ಓದಿದನು. ನಂತರ ಅನೇಕ ಪೌರ್ವಾತ್ಯಶಾಸ್ತ್ರಜ್ಞರು, ಇತಿಹಾಸಕಾರರು ಈ ಶಾಸನಗಳ ಪಾಠವನ್ನು ಅಭ್ಯಸಿಸಿ ಅದರಲ್ಲಿರುವ ಅಂಶಗಳನ್ನು ಜಾಗೃತ ವಾಗಿ ವಿವರಿಸಿದ್ದಾರೆ. ಅವು ಪ್ರಾಕೃತ ಭಾಷೆಯ ಆರಂಭದ ಮಾದರಿಗಳೆಂದು ನಂಬಲಾಗಿದೆ. ಸಾಮಾನ್ಯವಾಗಿ ಬಂಡೆಗಳ ಮೇಲೆ, ಸ್ತಂಭಾಗ್ರಗಳಿರುವಂತಹ ನಯಗೊಳಿಸಿದ ಕಲ್ಲು ಕಂಬಗಳ ಮೇಲೆ ಮತ್ತು ಗುಹೆಗಳಲ್ಲಿ ಅಶೋಕನ ಶಾಸನಗಳನ್ನು ಬರೆಸಲಾಗಿದೆ. ಒಂದೇ ಒಂದು ಶಾಸನ ಮಣ್ಣು ಬೋಗುಣಿಯ ಮೇಲೆ ಕೊರೆದಿರುವುದು ಕಂಡುಬರುತ್ತದೆ. ಭಾರತ ಉಪ ಖಂಡದಾಚೆ ಆಫ್ಘಾನಿಸ್ಥಾನದಲ್ಲೂ ಇಂತಹ ಶಾಸನಗಳು ದೊರೆತಿವೆ. ಇದುವರೆಗೆ ೪೫ ಜಾಗ ಗಳಲ್ಲಿ ಅಶೋಕನ ಶಾಸನಗಳು ದೊರೆತಿವೆ. ಸಾಮ್ರಾಜ್ಯದ ಬಹುಭಾಗದಲ್ಲಿ ದೊರೆತ ಶಾಸನ ಗಳು ಬ್ರಾಹ್ಮಿ ಲಿಪಿಯಲ್ಲಿ ಬರೆದ ಪ್ರಾಕೃತ ಭಾಷೆಯಲ್ಲಿವೆ. ವಾಯುವ್ಯ ಭಾರತದಲ್ಲಿ ಆರಾಮೈಕ್ ಹಾಗೂ ಖರೋಷ್ಠಿ ಲಿಪಿಗಳಲ್ಲಿವೆ. ಆಫ್ಘಾನಿಸ್ತಾನದಲ್ಲಿರುವ ಶಾಸನಗಳು ಆರಾ

ಮೈಕ್ ಹಾಗೂ ಗ್ರೀಕ್ ಭಾಷೆ ಮತ್ತು ಲಿಪಿಗಳಲ್ಲಿವೆ. ಸಾಮಾನ್ಯವಾಗಿ ಅಶೋಕನ ಶಾಸನಗಳು ಪುರಾತನ ಹೆದ್ದಾರಿಗಳಲ್ಲಿವೆ. ಅವುಗಳಲ್ಲಿ ಲಭಿಸುವ ಅಂಶಗಳು ಅವನ ಜೀವನ, ವಿದೇಶಿ ಹಾಗೂ ಸ್ವದೇಶಿ ನೀತಿಗಳು, ಅವನ ಸಾಮ್ರಾಜ್ಯದ ವಿಸ್ತಾರ ಇತ್ಯಾದಿ ವಿಷಯಗಳನ್ನು ತಿಳಿಯಲು ಸಹಕರಿಸುತ್ತವೆ.

ಅಶೋಕನು ತನ್ನ ರಾಜಕೀಯ ಜೀವನವನ್ನು ವಾಯುವ್ಯ ಭಾರತದಲ್ಲಿರುವ ತಕ್ಷಶಿಲೆಯಲ್ಲಿ ರಾಜ್ಯಪಾಲನಾಗಿ ನೇಮಕಗೊಂಡು ಆರಂಭಿಸಿದನು. ಈ ಪ್ರಾಂತ್ಯದಲ್ಲಿ ರಾಜನ ಅಧಿಕಾರಿಗಳ ವಿರುದ್ಧ ಸ್ಥಳೀಯ ಜನರು ದಂಗೆ ಎದ್ದದ್ದನ್ನು ಅಡಗಿಸಲು, ಅವನ ತಂದೆ ಬಿಂದುಸಾರನು ಇಲ್ಲಿಗೆ ಕಳುಹಿಸಿಕೊಟ್ಟಿದ್ದನು. ನಂತರ ಮಧ್ಯಭಾರತದ ಆವಂತಿ ಪ್ರಾಂತದಲ್ಲಿರುವ ಹೆಸರಾಂತ ಪಟ್ಟಣ ಉಜ್ಜಯನಿಗೆ ಕಳುಹಿಸಲಾಯಿತು.

**ಕಳಿಂಗ ಯುದ್ಧ**

ಅಶೋಕನ ಅಧಿಕಾರ ಅವಧಿಯಲ್ಲಿ ಘಟಿಸಿದ ಏಕೈಕ ರಾಜಕೀಯ ಘಟನೆ ಎಂದರೆ ಅವನು ಕಳಿಂಗದ ವಿರುದ್ಧ ಸಾರಿದ ಯುದ್ಧ. ಇದು ಅವನ ಜೀವನದಲ್ಲಿ ಒಂದು ಹೊಸ ತಿರುವನ್ನು ಮೂಡಿಸಿತು. ಬಂಗಾಳಕೊಲ್ಲಿಯ ತೀರದಲ್ಲಿದ್ದ ಒಂದು ಪ್ರಬಲ ರಾಜ್ಯವಾಗಿದ್ದ (ಈಗಿನ ಒರಿಸ್ಸಾ) ಕಳಿಂಗವನ್ನು ಅಶೋಕನು ಕ್ರಿ.ಪೂ. ೨೬೧ ರಲ್ಲಿ ಆಕ್ರಮಿಸಿದನು. ಈ ರಾಜ್ಯವು ಹಿಂದೆ ನಂದ ಸಾಮ್ರಾಜ್ಯದ ಒಂದು ಭಾಗವಾಗಿದ್ದು, ನಂತರ ಸ್ವತಂತ್ರವಾಗಿತ್ತು. ಮೌರ್ಯರ ಅಧಿಪತ್ಯ ವೃದ್ಧಿಯನ್ನು ನಿರಂತರ ವಿರೋಧಿಸುತ್ತಲೇ ಇದ್ದ ಕಳಿಂಗ ರಾಜ್ಯದ ಮೇಲೆ ಅಶೋಕನು ಯುದ್ಧ ಸಾರಬೇಕಾಯಿತು. ಈ ಯುದ್ಧದ ಪರಿಣಾಮಗಳನ್ನು ಅವನ ಶಾಸನದಲ್ಲಿ ಬರೆಸಲಾಗಿತ್ತು. ಈ ಯುದ್ಧದಲ್ಲಿ ಒಂದು ಲಕ್ಷ ಐವತ್ತು ಸಾವಿರ ಜನರನ್ನು ಯುದ್ಧ ಖೈದಿಗಳನ್ನಾಗಿ ಸೆರೆ ಹಿಡಿಯಲಾಗಿತ್ತು. ಒಂದು ಲಕ್ಷಕ್ಕೂ ಅಧಿಕ ಮಂದಿ ಸತ್ತಿದ್ದರೆಂದೂ ಅಶೋಕನೇ ಹೇಳಿಕೊಂಡಿದ್ದಾನೆ. ಕಳಿಂಗವನ್ನು ಜಯಿಸಿದಕ್ಕೆ ಸಂಬಂಧಿಸಿದಂತೆ ದಾಖಲಿಸಿದ ವಿಶೇಷ ಶಾಸನದಲ್ಲಿ ಅಶೋಕನೇ ಮೌರ್ಯರ ಆಡಳಿತವನ್ನು ವಿರೋಧಿಸಿದ ಸಾಮಾನ್ಯ ಜನರ ಮತ್ತು ಕುಲೀನ ವರ್ಗಗಳ ವಿರುದ್ಧ ಅನಿವಾರ್ಯವಾಗಿ ಉಗ್ರ ಕ್ರಮಗಳನ್ನು ಕೈಗೊಳ್ಳಬೇಕಾಯಿತು ಎಂದು ವಿಷಾದದಿಂದಲೇ ಒಪ್ಪಿಕೊಳ್ಳುತ್ತಾನೆ. ಹೊಸದಾಗಿ ಆಕ್ರಮಿಸಿದ ಪ್ರಾಂತ್ಯಗಳಲ್ಲಿ ಬಿಕ್ಕಟ್ಟು ಮರುಕಳಿಸದಂತೆ ನೋಡಿಕೊಳ್ಳಲು ವಿಶೇಷ ಕ್ರಮಗಳನ್ನು ಅನುಷ್ಠಾನಗೊಳಿಸಿದನು. ಯುದ್ಧದ ನಂತರವೂ ಕಳಿಂಗ ರಾಜ್ಯಕ್ಕೆ ವಿಶೇಷ ಸ್ವಾತಂತ್ರ್ಯವನ್ನು ಅಶೋಕನು ನೀಡಿದರೂ ಅಲ್ಲಿದ್ದ ತನ್ನ ಅಧಿಕಾರಿಗಳ ಚಟುವಟಿಕೆಗಳ ಮೇಲೆ ವೈಯಕ್ತಿಕವಾಗಿ ನಿಗಾ ಇಟ್ಟಿದ್ದ. "ಕಾರಣವಿಲ್ಲದೆ ಸಾಮಾನ್ಯ ಪ್ರಜೆಗಳನ್ನು ಬಂಧಿಸುವುದು ಮತ್ತು ಉದ್ದೇಶವಿಲ್ಲದೆ ಅವರಿಗೆ ನೋವುಂಟು ಮಾಡುವುದು" ಪ್ರಬುದ್ಧ ರಾಜನ ನೀತಿಯಲ್ಲವೆಂದೇ ಅವನು ಭಾವಿಸಿದ್ದನು.

ಯುದ್ಧದಲ್ಲಿ ಮಡಿದವರ ಸಂಖ್ಯೆ ಶಾಸನಗಳಲ್ಲಿ ದಾಖಲಾಗಿದ್ದರೂ ಅದರಲ್ಲಿ ಉತ್ಪ್ರೇಕ್ಷೆ ಇರುವುದು ಸತ್ಯ. ಆದರೂ ಈ ಘಟನೆಯಲ್ಲಾದ ಸಾವು-ನೋವುಗಳ ತೀವ್ರತೆಯನ್ನು ಸ್ವತಃ

ಅಶೋಕನೇ ಅನುಭವಿಸಿರುವುದರಿಂದ, ಅವನ ಮನಸ್ಸು ಮಹತ್ತರವಾದ ಪರಿವರ್ತನೆ ಕಂಡಿತು. ಇದರಿಂದ ನೊಂದ ಅವನು ಇನ್ನು ಮುಂದೆ ತಾನು ಯುದ್ಧವನ್ನು ನಿಲ್ಲಿಸಿ ಅಹಿಂಸಾ ನೀತಿಯನ್ನು ಪಾಲಿಸುವ ಗುರಿಯೊಂದಿಗೆ ಬೌದ್ಧ ಮತವನ್ನು ಸ್ವೀಕರಿಸುತ್ತಾನೆ. ಅಂದಿನಿಂದ ಅವನು 'ಧಮ್ಮ ಘೋಷ'ದ ಮಾರ್ಗ ಹಿಡಿದು ಸಾಂಸ್ಕೃತಿಕ ವಿಜಯಿಯಾಗಲು ಪ್ರಯತ್ನ ಪಡುತ್ತಾನೆ. ಈ ವಿಚಾರವಾಗಿ ಅವನ ಹತ್ತೊಂಬತ್ತನೆಯ ಪ್ರಮುಖ ಬಂಡೆ ಶಾಸನವು ಹೀಗೆ ಹೇಳುತ್ತದೆ: "ದೇವನಾಂಪ್ರಿಯ, ಪ್ರಿಯದರ್ಶಿ ರಾಜನು ತಾನು ಪಟ್ಟಾಭಿಷಿಕ್ತನಾದ ಎಂಟು ವರ್ಷಕ್ಕೆ ಕಳಿಂಗವನ್ನು ಜಯಿಸಿದನು. ೧,೫೦,೦೦೦ ರಷ್ಟು ಜನರು ದೇಶಾಂತರಗೊಳಿಸಲ್ಪಟ್ಟರು. ೧,೦೦,೦೦೦ ಕ್ಕೂ ಅಧಿಕ ಮಂದಿ ಹತರಾದರು ಮತ್ತು ಅದಕ್ಕಿಂತ ಎಷ್ಟೋ ಪಟ್ಟು ಜನರು ಗಾಯಗೊಂಡರು. ಕಳಿಂಗವನ್ನು ಆಕ್ರಮಿಸಿಕೊಂಡ ನಂತರ ದೇವನಾಂಪ್ರಿಯ ಧಮ್ಮವನ್ನು ನಿಷ್ಠೆಯಿಂದ ಪಾಲಿಸಿದನು, ಬಯಸಿದನು ಮತ್ತು ಬೋಧಿಸಿದನು. ಕಳಿಂಗವನ್ನು ಗೆದ್ದ ನಂತರ ದೇವನಾಂಪ್ರಿಯನಿಗೆ ಪಶ್ಚಾತ್ತಾಪವಾಯಿತು. ಒಂದು ಸ್ವತಂತ್ರ ದೇಶವನ್ನು ಆಕ್ರಮಿಸುವಾಗ ಸಂಭವಿಸುವ ನರಹತ್ಯೆ, ಸಾವು ಮತ್ತು ದೇಶಾಂತರಗಳು ದೇವನಾಂಪ್ರಿಯನಲ್ಲಿ ಅತೀವ ವೇದನೆಯುಂಟು ಮಾಡಿ, ಅವನ ಮನಸ್ಸನ್ನು ಭಿನ್ನಗೊಳಿಸುತ್ತವೆ. ಅಲ್ಲಿ ವಾಸಿಸುವವರು ಬ್ರಾಹ್ಮಣರಾಗಲಿ, ಶ್ರವಣರಾಗಲಿ, ಇತರ ಪಂಥಗಳವರಾಗಲಿ ಅಥವಾ ಗೃಹಪತಿಗಳಾಗಲಿ ತಮ್ಮ ತಮ್ಮ ಗುರುಗಳಿಗೆ ನಿಷ್ಠೆ ತೋರುತ್ತಾ ತಮ್ಮ ಮಿತ್ರರು, ಪರಿಚಯಸ್ಥರು, ಸಹೋದ್ಯಮಿಗಳು, ನೆಂಟರು, ದಾಸರು ಹಾಗೂ ಆಳುಗಳತ್ತ ದಯೆ-ದಾಕ್ಷಿಣ್ಯಗಳಿಂದ ನಡೆದುಕೊಳ್ಳುತ್ತಿರುವವರೆಲ್ಲಾ ಹಿಂಸೆ, ಹತ್ಯೆ ಮತ್ತು ತಮ್ಮ ಪ್ರೀತಿಯವರಿಂದ ಬೇರ್ಪಡುವುದು ಇವಕ್ಕೆಲ್ಲಾ ಗುರಿಯಾಗುತ್ತಾರೆ..... ಇಂದು ಕಳಿಂಗ ಯುದ್ಧದಲ್ಲಿ ಹತರಾದ ಇಲ್ಲವೇ ಸಾವಿಗೀಡಾದ, ಇಲ್ಲವೇ ದೇಶಾಂತರವಾಸಿಗಳಾದ ಮಂದಿಯಲ್ಲಿ ನೂರರಲ್ಲೊಂದು ಪಾಲು ಅಥವಾ ಸಾವಿರದಲ್ಲೊಂದು ಪಾಲು ಜನ ಅಂತಹ ಸಂಕಷ್ಟಗಳಿಗೆ ಸಿಲುಕಿದರೆ ದೇವನಾಂಪ್ರಿಯನ ಮನಸ್ಸು ಬಹಳ ಖಿನ್ನವಾಗುತ್ತದೆ. ದೇವನಾಂಪ್ರಿಯನು ಧರ್ಮದ ವಿಜಯವೇ ಅತ್ಯುನ್ನತ ವಿಜಯ ಎಂದು ಭಾವಿಸಿದ್ದಾನೆ".

### ಧರ್ಮ

ಅಶೋಕನಿಂದ ಪ್ರತಿಪಾದಿತವಾದ ಧರ್ಮಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಅವನು ಮಹಾತ್ವಾಕಾಂಕ್ಷೆಯಿಂದ ತನ್ನ ಸಾಮ್ರಾಜ್ಯದ ಮತ್ತು ಇತರ ಸಮಸ್ತ ಪ್ರಜೆಗಳೂ ಸುಖಶಾಂತಿಯಿಂದ ಬಾಳಬೇಕೆಂದು ಆಶಿಸಿದ್ದನು. ಈ ಸುಖಶಾಂತಿಯನ್ನು ಕೊಡುವುದು ಧರ್ಮ ಎಂದೂ ಅವನು ತಿಳಿದಿದ್ದನು. ಅವನು ಬೌದ್ಧ ಮತಾವಲಂಬಿಯಾಗಿದ್ದರೂ ಕೂಡ ಇತರ ಮತಗಳಲ್ಲಿ ಅವನಿಗಿದ್ದ ಗೌರವ ಮತ್ತು ಪ್ರೀತಿಗಳು ಬಹುಮುಖ್ಯವಾದುವು. ಅವನ ಒಂದು ಶಾಸನದಲ್ಲಿ 'ದೇವನಾಂಪ್ರಿಯನು ಎಲ್ಲಾ ಮತದವರನ್ನೂ, ಸನ್ಯಾಸಿಗಳನ್ನೂ, ಗೃಹಸ್ಥರನ್ನೂ ವಿವಿಧ ಪೂಜೆಗಳಿಂದ ಪುರಸ್ಕರಿಸುತ್ತಿರುವವನು' ಎಂದು ದಾಖಲಾಗಿದೆ. ಬ್ರಾಹ್ಮಣರ, ಜೈನ ಶ್ರವಣರ ದರ್ಶನ, ಅವರಿಗೆ ಸಲ್ಲುತ್ತಿದ್ದ ದಾನ, ಶುಶ್ರೂಷೆ ಮುಂತಾದವು

ಗಳನ್ನು ಅಶೋಕನು ತನ್ನ ಶಾಸನಗಳಲ್ಲಿ ಹೇಳಿದ್ದಾನೆ. ಇದು ಅವನಿಗೆ ವೈದಿಕ ಮತ್ತು ಜೈನ ಧರ್ಮದ ಬಗ್ಗೆಯೂ ಇದ್ದ ಗೌರವವನ್ನು ಸೂಚಿಸುತ್ತದೆ.

ಅಶೋಕನ ಶಾಸನಗಳಲ್ಲಿ ಕಂಡುಬರುವ ಧರ್ಮಸೂತ್ರಗಳು ಸಾಮ್ರಾಜ್ಯದ ಇಡೀ ಜನ ಸಮುದಾಯಕ್ಕೆ ಒಂದು ಸಾಮಾನ್ಯ ನೆಲೆ ಒದಗಿಸುವ ಗುರಿ ಉಳ್ಳದ್ದಾಗಿದ್ದವು. ಅವು ವಿವಿಧ ವರ್ಣಗಳ, ಸಂಸ್ಥೆಗಳ ಹಾಗೂ ನಾನಾ ಸಾಮಾಜಿಕ ವೃಂದಗಳ ಧರ್ಮಗಳಿಗೂ ಮೇಲೆ ನಿಂತಿರುವಂಥದ್ದಾಗಿದ್ದವು. ಧರ್ಮದ ನಿಯಮಗಳನ್ನು ಪ್ರಸಾರ ಮಾಡುವ ನೀತಿಯು ಧರ್ಮ ವಿಜಯದ ಸಂಕೇತವೆಂದು ಅಶೋಕ ನಂಬಿದ್ದನು. 'ಧರ್ಮಮಹಾಮಾತ್ರ'ರೆಂಬ ಅಧಿಕಾರಿಗಳನ್ನು ನೇಮಿಸಿ ಧರ್ಮಸೂತ್ರಗಳ ಅನುಷ್ಠಾನವು ಸುಸೂತ್ರವಾಗಿ ನಡೆಯುವುದನ್ನು ಅಶೋಕನು ಖಚಿತಪಡಿಸಿಕೊಳ್ಳುತ್ತಿದ್ದನು.

ವಿವಿಧ ಧರ್ಮಗಳ ಅನುಯಾಯಿಗಳ ಪ್ರೀತಿ ವಿಶ್ವಾಸವನ್ನು ಗಳಿಸುವ ಈ ಅಧಿಕಾರಿಗಳನ್ನು ತನ್ನ ಸಾಮ್ರಾಜ್ಯದ ನಾನಾ ಭಾಗಗಳಿಗೆ ಕಳುಹಿಸಲಾಗುತ್ತಿತ್ತು. ಬೌದ್ಧರ, ಬ್ರಾಹ್ಮಣರ, ಜೈನರ ಹಾಗೂ ಅಜೀವಕರು ತಮ್ಮ ಧರ್ಮ ಸೂತ್ರಗಳನ್ನು ಹೇಗೆ ಅನುಷ್ಠಾನಕ್ಕೆ ತರುತ್ತಿದ್ದರೆಂಬುದನ್ನು ತಿಳಿದುಕೊಳ್ಳಲು ಇಂತಹ 'ಧರ್ಮಮಹಾಮಾತ್ರ'ರನ್ನು ನೇಮಿಸಲಾಗಿದೆ ಎಂದು ಅಶೋಕನು ತನ್ನ ಶಾಸನಗಳಲ್ಲಿಯೇ ತಿಳಿಸಿದ್ದಾನೆ.

ಈ ರೀತಿಯ ಧೋರಣೆಗಳಿಂದ ಬೇರೆ ಬೇರೆ ಜನ ಸಮುದಾಯದವರ ಮೇಲೆ ತನ್ನ ನಿಯಂತ್ರಣ ಹೇರಿ, ಅವರು ಸಂಘಟಿಸಬಹುದಾದ ರಾಜವಿರೋಧಿ ಚಟುವಟಿಕೆಗಳನ್ನು ಹತ್ತಿಕ್ಕಲು ಸಹಕಾರಿಯಾಗಬಹುದೆಂದು ಅಶೋಕ ಭಾವಿಸಿದ್ದನು.

ಕಳಿಂಗ ಯುದ್ಧದ ನಂತರ ಅಶೋಕನು ತನ್ನ ಸಾಮ್ರಾಜ್ಯದ ವಿಸ್ತರಣೆಯಲ್ಲಿ ಹೆಚ್ಚು ಆಸಕ್ತಿ ತೋರಿಸಿಲ್ಲ ಎಂಬ ಒಂದು ಅಭಿಪ್ರಾಯವಿದೆ. ಆದರೆ ಅವನ ಕಾಲದ ಐತಿಹಾಸಿಕ ಆಕರಗಳನ್ನು ಪರಿಶೀಲಿಸಿದಾಗ ಅಶೋಕನು ತನ್ನ ಕ್ರಿಯಾಶೀಲ ವಿದೇಶಾಂಗ ನೀತಿಯನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿಲ್ಲ ಎಂಬುದು ತಿಳಿಯುತ್ತದೆ. ತನ್ನ ಶಕ್ತಿಯನ್ನು ಮರೆಯದೆ, ಅವಶ್ಯಬಿದ್ದಾಗ ಬಲಪ್ರಯೋಗ ಮಾಡುತ್ತ ಸೈದ್ಧಾಂತಿಕ ಹಾಗೂ ರಾಜತಾಂತ್ರಿಕ ಸಾಧನಗಳನ್ನೆಲ್ಲ ಬಳಸಿದ. ವಿಶೇಷವಾಗಿ ನೇಮಿಸಿದ ಅಧಿಕಾರಿಗಳ ಮೇಲೆ ಮತ್ತು ರಾಯಭಾರಿಗಳ ಮೇಲೆ ನಂಬಿಕೆ ಇಟ್ಟು, ಸಾಮ್ರಾಜ್ಯದೊಂದಿಗೆ ವಿಲೀನವಾಗಿರದ ಪ್ರದೇಶಗಳಲ್ಲೆಲ್ಲ ತನ್ನ ಪ್ರಭಾವವನ್ನು ದೃಢೀಕರಿಸಲು ಎಲ್ಲಾ ಪ್ರಯತ್ನಗಳನ್ನು ಅವನು ಮಾಡಿದ್ದನು. ಆ ಪ್ರದೇಶಗಳ ನಿವಾಸಿಗಳನ್ನು ಅಶೋಕನು ವಿಶೇಷ ಪ್ರೀತ್ಯಾದರಗಳಿಂದ ಪಿತೃವಾತ್ಸಲ್ಯದಿಂದ ನೋಡಿಕೊಳ್ಳುವುದಾಗಿ, ಅವರಿಗೆ ಎಲ್ಲ ರೀತಿಯ ಬೆಂಬಲ ನೀಡುವುದಾಗಿ ವಚನ ನೀಡಿದ. ಅರಣ್ಯವಾಸಿಗಳನ್ನೂ, ಗಡಿ ರಾಜ್ಯಗಳ ಜನರನ್ನೂ ಸೈದ್ಧಾಂತಿಕವಾಗಿ ಒಲಿಸಿಕೊಂಡನು. ತನ್ನ ಶಾಸನವೊಂದರಲ್ಲಿ ಅಶೋಕ ತನ್ನ ಅಧಿಕಾರಿಗಳಿಗೆ ಹೀಗೆ ಆದೇಶ ನೀಡಿದ : "ನಮ್ಮ ದೃಷ್ಟಿಯಲ್ಲಿ ರಾಜನು ತಂದೆ ಇದ್ದಂತೆ ಎಂದು ನಾವು ಇನ್ನೂ ಗೆಲ್ಲದಿರುವ ಪ್ರದೇಶಗಳ ಜನರು ದೃಢವಾಗಿ ಮನಗಾಣುವಂತಾಗಬೇಕು. ದೊರೆಯು ತನ್ನ ಜನರ ಬಗೆಗೆ ತನ್ನ ಬಗೆಗೆ ಹೊಂದಿರುವಂತಹ

ಭಾವನೆಗಳನ್ನೇ ಹೊಂದಿದ್ದಾನೆ. ಅವರು ಅವನಿಗೆ ತನ್ನ ಮಕ್ಕಳಂತೆಯೇ ಪ್ರೀತಿ ಪಾತ್ರರು''.

ಅಶೋಕನು ತನ್ನ ವೈಭವದ ಆಡಳಿತ ಮತ್ತು ಧರ್ಮ ಪ್ರಚಾರದ ಉದ್ದೇಶಗಳನ್ನು ದೇಶದ ಹೊರಕ್ಕೂ ಪ್ರಚಾರ ಮಾಡಲು ವಿಶೇಷ ಅಧಿಕಾರಿಗಳನ್ನು ನೇಮಿಸಿದ್ದನು. ಪಶ್ಚಿಮ ರಾಷ್ಟ್ರಗಳಿಗೆ ಇಂತಹ ಅನೇಕ ರಾಯಭಾರಿಗಳನ್ನು ಅಥವಾ ಧೂತರನ್ನು ಕಳುಹಿಸಿದ್ದುದು ಶಾಸನಗಳು ದಾಖಲಿಸಿವೆ. ಭಾರತದ ಇತಿಹಾಸದಲ್ಲಿಯೇ ವಿಶಿಷ್ಟ ಸಂಪ್ರದಾಯವು ಅಶೋಕನ ೧೩ನೆ ಬಂಡೆ ಶಾಸನದಲ್ಲಿ ದಾಖಲಾಗಿರುವ ಬೇರೆ ಬೇರೆ ದೇಶದ ರಾಜರ ಹೆಸರುಗಳು ಸಮರ್ಥಿಸುತ್ತವೆ. ಅವರಲ್ಲಿ ಸೆಲ್ಯೂಕಸ್ಸರ ದೊರೆ ದ್ವಿತೀಯ ಆಂಟಿಯೋಖಿಸ್ಮ್ ಥಿಯೋಸ್ (ಸೆಲ್ಯೂಕಸ್ಸ್‌ನ ಮೊಮ್ಮಗ) ಈಜಿಪ್ಟ್‌ನ ದೊರೆ ದ್ವಿತೀಯ ಟಾಲೆಮಿ ಫಿಲಡೆಲ್ಫಸ್; ಮಾಸಿಡೋನಿಯಾದ ರಾಜ ಆಂಟಿಗೊನಸ್ ಗೊನಾಟಸ್, ಸಿರೀನ್‌ನ ರಾಜ ಮಗಾಸ್, ಎಪಿರಸ್‌ನ ರಾಜ ಅಲೆಕ್ಸಾಂಡರ್ ಮೊದಲಾದವರು ಪ್ರಮುಖರು. ಈ ಎಲ್ಲಾ ರಾಜರುಗಳ ಉಲ್ಲೇಖದಿಂದ ಅಶೋಕನು ಅನೇಕ ದೇಶಗಳೊಂದಿಗೆ ನಿಕಟ ಸಂಬಂಧ ಬೆಳೆಸಿದ್ದನು ಎಂದು ತಿಳಿದುಬರುತ್ತದೆ. ಶ್ರೀಲಂಕಾ ಮತ್ತು ಮಧ್ಯ ಏಷ್ಯಾ ದೇಶಗಳಿಗೆ ತನ್ನ ರಾಯಭಾರಿಗಳನ್ನು ಕಳುಹಿಸಿ ಧರ್ಮ ಪ್ರಚಾರದ ಯಶಸ್ಸನ್ನು ಅಶೋಕನು ಕಂಡಿದ್ದನು. ಇದು ಅವನು ಸೈದ್ಧಾಂತಿಕವಾಗಿ ಅನುಭವಿಸಿದ ಧರ್ಮವಿಜಯವೆಂದು ಭಾವಿಸಿದ್ದನು. ಎಲ್ಲಕ್ಕಿಂತ ಮಿಗಿಲಾಗಿ ಶಾಂತಿ, ಅನಾಕ್ರಮಣ ಮತ್ತು ಸಾಂಸ್ಕೃತಿಕವಾದ ವಿಜಯ ಎಂಬ ನೀತಿಗಳಿಂದಾಗಿ ಅಶೋಕನು ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದಿದ್ದನು.

**ಆಡಳಿತ**

ಅಶೋಕನ ಶಾಸನಗಳು ಸಾಮ್ರಾಜ್ಯದ ಆಡಳಿತ ಸಂಘಟನೆಯನ್ನು ಕುರಿತು ಉಪಯುಕ್ತ ಮಾಹಿತಿಗಳನ್ನು ನೀಡುತ್ತವೆ. ಇಡೀ ಸಾಮ್ರಾಜ್ಯವನ್ನು ಐದು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಕೇಂದ್ರ ಭಾಗವು ಮಗಧ ಮತ್ತು ಸುತ್ತಲಿನ ಪ್ರದೇಶಗಳನ್ನೊಳಗೊಂಡಿತ್ತು. ಪೂರ್ವದ ಮಹಾ ಜನಪದ ಕೇಂದ್ರಗಳ ಭಾಗವು ನೇರವಾಗಿ ಚಕ್ರವರ್ತಿಯ ನಿಯಂತ್ರಣದಲ್ಲಿತ್ತು. ಇಲ್ಲಿನ ಆಡಳಿತದ ಸ್ವರೂಪವನ್ನು ಕುರಿತು ಹೆಚ್ಚು ಮಾಹಿತಿ ಲಭ್ಯವಿಲ್ಲದಿದ್ದರೂ, ಮೆಗಾಸ್ತನಿಸ್ ಮತ್ತು ಕೌಟಿಲ್ಯನು ದಾಖಲಿಸಿರುವ ರಾಜತಂತ್ರವನ್ನೇ ಈ ಪ್ರದೇಶದ ಆಡಳಿತದಲ್ಲಿ ಅಳವಡಿಸಿಕೊಳ್ಳಲಾಗಿತ್ತು ಎಂದು ಊಹಿಸಲಾಗಿದೆ. ಇದಲ್ಲದೆ, ಇನ್ನೂ ನಾಲ್ಕು ದೊಡ್ಡ ಆಡಳಿತ ವಿಭಾಗಗಳಿದ್ದು ಅವುಗಳಿಗೆ ವಿಶೇಷ ಸ್ಥಾನಮಾನವನ್ನು ನೀಡಲಾಗಿತ್ತು. ಅವುಗಳು, ತಕ್ಷಶಿಲೆ ರಾಜಧಾನಿಯಾಗಿದ್ದ ವಾಯುವ್ಯ ಪ್ರಾಂತ, ಉಜ್ಜಯಿನಿ ರಾಜಧಾನಿಯಾಗಿದ್ದ ಪಶ್ಚಿಮ ಪ್ರಾಂತ, ತೊಸಾಲಿ ರಾಜಧಾನಿಯಾಗಿದ್ದ ಪೂರ್ವ ಪ್ರಾಂತ, ಕಳಿಂಗ ಹಾಗೂ ಸುವರ್ಣಗಿರಿ ರಾಜಧಾನಿಯಾಗಿದ್ದ ದಕ್ಷಿಣ ಪ್ರಾಂತ. ಈ ಒಂದೊಂದು ಪ್ರಾಂತಕ್ಕೂ ರಾಜನ ಒಬ್ಬೊಬ್ಬ ಮಗ ಆಡಳಿತಗಾರನಾಗಿದ್ದ. ಈ ಪ್ರಧಾನ ಪ್ರಾಂತಗಳು ಸಾಕಷ್ಟು ಸ್ವಾಯತ್ತತೆಯನ್ನು ಹೊಂದಿದ್ದವು.

ಈ ಪ್ರಾಂತಗಳನ್ನು ಪುನಃ ವಿಂಗಡಿಸಿ ಜನಪದಗಳನ್ನಾಗಿ, ಪ್ರದೇಶಗಳನ್ನಾಗಿ ಹಾಗೂ 'ಅಹಲೆ' (ಈಗಿನ ಜಿಲ್ಲೆಗೆ ಸಮಾನ)ಗಳನ್ನಾಗಿ ಪುರ್ನಸಂಘಟಿಸಲಾಗಿತ್ತು. ಪ್ರಾಂತೀಯ ಆಡಳಿತದ ಅತ್ಯಂತ ತಳ ಘಟಕವೆಂದರೆ ಗ್ರಾಮ. ಜನಪದಗಳಿಗೆ 'ರಜುಕ'ಗಳೆಂಬ ಪ್ರಮುಖ ಅಧಿಕಾರಿಗಳು ಮುಖಂಡರಾಗಿದ್ದರು. ಇವರು ತಮ್ಮ ಪ್ರಾಂತಗಳಲ್ಲಿ ನ್ಯಾಯಾಧೀಶರ ಕರ್ತವ್ಯ ಗಳನ್ನೂ ನಿರ್ವಹಿಸುತ್ತಿದ್ದರು. ಅಶೋಕನ ಕಾಲದ ಈ ರಜುಕರು ಚಂದ್ರಗುಪ್ತನ ಸಾಮ್ರಾಜ್ಯ ದಲ್ಲಿದ್ದ ಗ್ರಾಮಾಧಿಕಾರಿಗಳನ್ನು ಹೋಲುತ್ತಿದ್ದರು. ಅಹಲೆಗಳಲ್ಲಿ ಮಹಾಮಾತ್ರರು ಮುಖಂಡ ರಾಗಿದ್ದು, ಪ್ರಾಯಶಃ ಅವರು ರಜುಕರ ಕೈ ಕೆಳಗಿದ್ದರು. ಇವರಲ್ಲದೆ, ಶಾಸನಗಳಲ್ಲಿ 'ಪ್ರಾದೇಶಿಕ' ಮತ್ತು 'ಯುಕ್ತ' ಎಂಬ ಅಧಿಕಾರಿಗಳ ಉಲ್ಲೇಖ ಬರುತ್ತದೆ. ಇವರು ಕೆಳದರ್ಜೆಯ ಅಧಿಕಾರಿಗಳಾಗಿದ್ದು ಶಿಲ್ಪಿಕಾರರು ಮತ್ತು ಕಂದಾಯ ವಸೂಲಿಕಾರರಾಗಿ ಆಡಳಿತ ದಲ್ಲಿ ಕಾರ್ಯ ನಿರ್ವಹಿಸಿದ್ದಿರಬಹುದು. 'ಪ್ರಾದೇಶಿಕರು' ನೋಡಿಕೊಳ್ಳುತ್ತಿದ್ದ ಆಡಳಿತ ಘಟಕವು ಆಧುನಿಕ ಕಾಲದಲ್ಲಿ ಬ್ರಿಟಿಷ್ ಆಡಳಿತದ ಜಿಲ್ಲೆಗೆ ಸಮಾನವೆಂದು ಹೇಳಲಾಗಿದೆ. ನಾಲ್ಕನೇ ಸ್ಥಂಭ ಶಾಸನವು, ಅಶೋಕನ ೨೬ನೇ ವರ್ಷದ ಆಳ್ವಿಕೆಗೆ ಸೇರಿದ್ದು, ಅದರಲ್ಲಿ 'ರಜುಕ' ಅಧಿಕಾರಿ ಎರಡು ಲಕ್ಷದಿಂದ ಮೂರು ಲಕ್ಷದಷ್ಟು ಜನರು ವಾಸಿಸುವ ಪ್ರದೇಶಕ್ಕೆ ಮುಖಂಡನಾಗಿದ್ದನೆಂದು ದಾಖಲಿಸಿದೆ. ಮತ್ತು ಅವನಿಗೆ ಆ ಪ್ರದೇಶದಲ್ಲಿ ವಿಶೇಷ ನ್ಯಾಯಾಂಗ ಅಧಿಕಾರವನ್ನು ನೀಡಲಾಗಿತ್ತು ಎಂದು ಸೂಚಿಸುತ್ತದೆ. ಆದರೆ ಅದೇ ಶಾಸನದ ಕೊನೆಯಲ್ಲಿ 'ರಜುಕ' ಅಧಿಕಾರಿ ಎಲ್ಲಾ ಕಾಲದಲ್ಲೂ ಚಕ್ರವರ್ತಿಯ ಆಜ್ಞೆಗಳಿಗೆ ವಿಧೇಯ ನಾಗಿರಬೇಕು ಮತ್ತು ಅವುಗಳನ್ನು ಯಥಾವತ್ತಾಗಿ ಪಾಲಿಸಬೇಕು ಎಂದೂ ಹೇಳಲಾಗಿದೆ.

ಇಂತಹ ಉಲ್ಲೇಖಗಳು ಅವರು ಅನುಭವಿಸುವ ಸ್ವಾಯತ್ತತೆಯನ್ನು ಪ್ರಶ್ನಿಸುತ್ತದೆ. ಅಂದರೆ ಸಾಮ್ರಾಜ್ಯದ ಉದ್ದಗಲಕ್ಕೂ ಅಶೋಕನೆ ಅಧಿಪತಿಯಾಗಿದ್ದು ಕೇಂದ್ರೀಕೃತ ಆಡಳಿತವನ್ನು ನೇರವಾಗಿ ನಿರ್ವಹಿಸುತ್ತಿದ್ದನು ಎಂಬುದನ್ನು ಸಮರ್ಥಿಸುತ್ತದೆ. ಬೇರೆ ಬೇರೆ ಆಡಳಿತ ವಿಭಾಗಗಳಿಗೆ ಅವನು ತನ್ನ ಪ್ರತಿನಿಧಿಗಳನ್ನು ನೇಮಿಸಿದರೂ, ಅವರು ರಾಜಾಜ್ಞೆ ಯನ್ನು ತಪ್ಪದೇ ಪಾಲಿಸಬೇಕಿತ್ತು ಎಂದು ಮೇಲಿನ ಶಾಸನದಿಂದ ತಿಳಿಯುತ್ತದೆ. ಆದಾಗ್ಯೂ, ಮೇಲೆ ಪ್ರಸ್ತಾಪಿಸಿರುವ ವಿಷಯಗಳನ್ನು ದಾಖಲಿಸುವ ಶಾಸನಗಳು ಕೇವಲ ಗಂಗಾ ನದಿ ಬಯಲಿಗೆ ಮಾತ್ರ ಸೀಮಿತವಾಗುತ್ತವೆ. ಅಂತಹ ಒಂದು ಶಾಸನ ಉತ್ತರ ದೆಹಲಿಯ ತೋಪ್ರಾ ದಲ್ಲಿ ದೊರೆತಿದೆ. ಇನ್ನೊಂದು ಉಜ್ಜೈಯಿನಿ ಪೂರ್ವಕ್ಕೆ ೧೦೦ ಕಿ.ಮೀ. ದೂರದಲ್ಲಿರುವ ಸಾಂಚಿಯಲ್ಲಿ ಕಂಡುಹಿಡಿಯಲಾಗಿದೆ. ಇನ್ನೂ ದೂರದ ಸ್ಥಳಗಳಲ್ಲಿ ಇಂತಹ ಶಾಸನಗಳನ್ನು ಸಂಶೋಧಕರು ಕಂಡುಹಿಡಿಯಲೂಬಹುದು. ಆದರೆ ಒಂದು ವಿಷಯ ಸ್ಪಷ್ಟ, ಮೇಲಿನ ಶಾಸನದಲ್ಲಿ ಪ್ರಸ್ತಾಪವಾಗುವ ಆಡಳಿತ ವ್ಯವಸ್ಥೆ ಕೇವಲ ಸಾಮ್ರಾಜ್ಯದ ಮಧ್ಯ ಭಾಗದಲ್ಲಿ ಮಾತ್ರ ಅನುಷ್ಠಾನದಲ್ಲಿತ್ತು ಮತ್ತು ಪ್ರಾಂತಗಳು ಆಡಳಿತಾತ್ಮಕವಾಗಿ ಹೆಚ್ಚು ಸ್ವಾಯತ್ತತೆ ಯನ್ನು ಅನುಭವಿಸುತ್ತಿದ್ದವು. ಕಳಿಂಗ ಮಾತ್ರ ಇದಕ್ಕೆ ಹೊರತಾಗಿದೆ. ಏಕೆಂದರೆ, ಇಲ್ಲಿ ಬಂಡೆ ಶಾಸನದಲ್ಲಿ ಸಮಪಾ (ಜೌಗಡ) ಆಡಳಿತ ವಿಭಾಗ ಉಲ್ಲೇಖ ಬರುತ್ತದೆ. ಈ ವಿಭಾಗ

ತೋಸಲಿಯ ರಾಜ್ಯಪಾಲನ ಅಧೀನಕ್ಕೆ ಒಳಪಡುತ್ತದೆ. ಆದರೂ, ಶಾಸನವು ಈ ವಿಭಾಗದ ಬಗ್ಗೆ ಪ್ರಸ್ತಾಪಿಸುವಾಗ ರಾಜ್ಯಪಾಲನ ಕುರಿತು ಯಾವುದೇ ಉಲ್ಲೇಖ ಬರುವುದಿಲ್ಲ. ಹಾಗಾದರೆ ಕಳಿಂಗ 'ಸ್ವತಂಗ' ಆಡಳಿತ ಘಟಕವೇ?

ಆಧುನಿಕ ಇತಿಹಾಸ ಭೂಪಟದಲ್ಲಿ ಅಶೋಕನ ಸಾಮ್ರಾಜ್ಯದ ವಿಸ್ತಾರ ಇಡೀ ಭಾರತ ಉಪಖಂಡವನ್ನು ಆವರಿಸಿತ್ತು ಎಂದು ಚಿತ್ರಿಸಲಾಗಿದೆ. (ದಕ್ಷಿಣ ತುದಿಯನ್ನು ಹೊರತು ಪಡಿಸಿ) ಆದರೆ, ಅಶೋಕನ ಶಾಸನಗಳು ಲಭಿಸಿರುವ ಸ್ಥಳಗಳನ್ನು ಗಮನಿಸಿದರೆ, ನಾವು ನಿರ್ದಿಷ್ಟವಾದ ಪ್ರಾದೇಶಿಕ ಮಾದರಿಯನ್ನು ಕಾಣಬಹುದು. ಈ ಸ್ಥಳಗಳು ಸಾಮ್ರಾಜ್ಯದ ಐದು ಪ್ರಮುಖ ಘಟಕಗಳಾಗಿ ಕಂಡುಬರುತ್ತವೆ. ಆಶ್ಚರ್ಯವೇನೆಂದರೆ ಅಶೋಕನ ಎಲ್ಲಾ ಬೃಹತ್ ಬಂಡೆ ಶಾಸನಗಳು ಇಲ್ಲಿಯವರೆಗೆ ಕಂಡುಬಂದಿರುವುದು ಸಾಮ್ರಾಜ್ಯದ ಪ್ರಾಂತೀಯ ಸ್ಥಳಗಳಲ್ಲಿಯೇ ವಿನಃ ಹೃತ್ಕೇಂದ್ರದಲ್ಲಿ ಅಲ್ಲ ಎಂಬುದು. ಆ ಸ್ಥಳಗಳು ಹೀಗಿವೆ - ವಾಯುವ್ಯ ಭಾರತದಲ್ಲಿ ಎರಡು (ಶಬಾಸ್‌ಗರ್ ಮತ್ತು ಮನ್‌ಸೆರ್ರಾ); ಪಶ್ಚಿಮದಲ್ಲಿ ಎರಡು (ಗಿರ್‌ನಾರ್ ಮತ್ತು ಸೊಪಾರ್); ದಕ್ಷಿಣದಲ್ಲಿ ಒಂದು (ಎರ್ರಾಗುಡಿ); ಪೂರ್ವದಲ್ಲಿ ಎರಡು (ಧೌಲಿ ಮತ್ತು ಜೌಗಡ); ಮತ್ತು ಇನ್ನೊಂದು ಕೇಂದ್ರ ಪ್ರದೇಶ ಮತ್ತು ವಾಯುವ್ಯ ಪ್ರಾಂತದ ನಡುವೆ ಬರುವ ಗಡಿಯಾದ ಕಲ್ಸಿಯಲ್ಲಿ. ಇನ್ನೊಂದು ಗಮನಿಸಬೇಕಾದ ಅಂಶ - ಸಣ್ಣ ಬಂಡೆ ಶಾಸನಗಳು ದಕ್ಷಿಣದ ಪ್ರಾಂತಗಳಲ್ಲಿ ಕಂಡುಬಂದಿವೆ ಮತ್ತು ಬಹುತೇಕ ಸ್ಥಂಭ ಶಾಸನಗಳು ಸಾಮ್ರಾಜ್ಯದ ಕೇಂದ್ರ ಭಾಗಗಳಿಗೆ ಸೀಮಿತವಾಗಿವೆ. ಹೀಗೆ ಅಶೋಕನ ಶಾಸನಗಳು ಒಂದಷ್ಟು ಕೇಂದ್ರ ಭಾಗದಲ್ಲಿ, ಇನ್ನೊಂದಿಷ್ಟು ಪ್ರಾಂತ್ಯಗಳಲ್ಲಿ ಕಂಡುಬರುತ್ತವೆ ಮತ್ತು ಸಾಮ್ರಾಜ್ಯದ ಒಳನಾಡಿನಲ್ಲಿ ಯಾವುದೇ ಶಾಸನ ಇನ್ನೂ ಲಭ್ಯವಾಗಿಲ್ಲ. ಇನ್ನೂ ಮುಂದೆಯೂ ಸಂಶೋಧಕರು ಅಶೋಕನ ಶಾಸನಗಳನ್ನು ಅಲ್ಲಿ ಇಲ್ಲಿ ಪತ್ತೆ ಮಾಡಬಹುದು. ಅದು ಸತ್ಯವಾದರೂ, ಈಗ ನಮಗೆ ಲಭ್ಯವಿರುವ ಆಧಾರಗಳನ್ನು ಆಧರಿಸಿ ಅಶೋಕನ ಕಾಲದಲ್ಲಿ ಗುರುತಿಸಲಾದ 'ಪ್ರಾದೇಶಿಕ ಮಾದರಿ'ಯನ್ನು ಮರು ವ್ಯಾಖ್ಯಾನಿಸುವ ಅಗತ್ಯವಿದೆ. ಇದರರ್ಥ ಈಗಿನ ಮಹಾರಾಷ್ಟ್ರ, ಆಂಧ್ರಪ್ರದೇಶ, ಕೇರಳ ಮತ್ತು ತಮಿಳುನಾಡು ಪ್ರದೇಶಗಳು ಅಶೋಕ ಸಾಮ್ರಾಜ್ಯದ ನೇರ ನಿಯಂತ್ರಣಕ್ಕೆ ಒಳಪಟ್ಟಿಲ್ಲ ಎಂಬುದು ಖಚಿತ. ಅಶೋಕನ ಶಾಸನಗಳಲ್ಲಿ ದಕ್ಷಿಣದ ಕೆಲವು ಜನಸಮುದಾಯಗಳಾದ ಚೋಳರು, ಪಾಂಡ್ಯರು, ಸತಿಯ ಪುತ್ರರು ಮತ್ತು ಕೇರಳಪುತ್ರರು ಇತ್ಯಾದಿಯವರ ಬಗ್ಗೆ ಪ್ರಸ್ತಾಪವಿದ್ದರೂ, ರಾಜಕೀಯವಾಗಿ ಈ ಪ್ರದೇಶಗಳು ಸಾಮ್ರಾಜ್ಯಕ್ಕೆ ಸೇರ್ಪಡೆಯಾಗಿರಲಿಕ್ಕಿಲ್ಲ. ಬದಲಾಗಿ ಈ ಸಮುದಾಯ ಗಳೊಂದಿಗೆ ಅಶೋಕನು ಸ್ನೇಹ ಬಾಂಧವ್ಯದಿಂದ ವ್ಯವಹರಿಸಿರಬೇಕು.

ವಿಂಧ್ಯಾ ಪರ್ವತ ಶ್ರೇಣಿಯ ದಕ್ಷಿಣಕ್ಕೆ ಮೌರ್ಯರ ಪ್ರಭುತ್ವ ಕರಾವಳಿ ಪ್ರದೇಶ ಮತ್ತು ಒಳನಾಡಿನ (ಈಗಿನ ಮೈಸೂರು) ಪ್ರದೇಶಗಳಿಗೆ ಮಾತ್ರ ಸೀಮಿತವಾಗಿತ್ತು. ಈ ಭಾಗವನ್ನು ಸುವರ್ಣಗಿರಿಯೆಂದೂ ಕರೆಯಲಾಗಿದ್ದು, ಇಲ್ಲಿ ಚಿನ್ನ ಅಧಿಕ ಪ್ರಮಾಣದಲ್ಲಿ ದೊರೆತಿದ್ದಿರ ಬೇಕು.

ಸಾಮ್ರಾಜ್ಯದೊಳಗೆ ಆರ್ಥಿಕ ಸ್ಥಿರತೆಯನ್ನು ಕಂಡುಕೊಳ್ಳಲು ವಾಣಿಜ್ಯ ವ್ಯವಹಾರ ಮುಖ್ಯವಾದ ವಾಹಿನಿ. ಇದಕ್ಕೆ ಮುಖ್ಯವಾಗಿ ಬೃಹತ್ ವ್ಯಾಪಾರ ಮಾರ್ಗಗಳನ್ನು ರಕ್ಷಿಸಿ ಕೊಳ್ಳುವುದು ಅನಿವಾರ್ಯ. ಒಂದು ಮಾರ್ಗ ರಾಜಧಾನಿ ಪಾಟಲೀಪುತ್ರದಿಂದ ಆರಂಭವಾಗಿ ಕೌಸಾಂಬಿ ಮೂಲಕ ಹಾದು ವಿಂಧ್ಯಾ ಪರ್ವತದ ಉತ್ತರ ತಪ್ಪಲು ದಾರಿಯಾಗಿ ವಿದಿಶ (ಸಾಂಚಿ) ಮತ್ತು ಉಜ್ಜಯಿನಿ ದಿಕ್ಕಿನಲ್ಲಿ ಮುಂದುವರಿದು ಭರುಕಚ್ ಬಂದರನ್ನು (ಬ್ರೋಚ್) ತಲುಪುತ್ತದೆ. ಅಲ್ಲಿಂದ ಇನ್ನೊಂದು ಮಾರ್ಗ ಮುಂದುವರಿದು ಪಶ್ಚಿಮದ ಕರಾವಳಿ ಮೂಲಕ ಈಗಿನ ಮುಂಬೈ ಪ್ರದೇಶವನ್ನು ಸೇರುತ್ತದೆ. ಇಲ್ಲಿನ ಸೋಪಾರದಲ್ಲಿ ಒಂದು ಬೃಹತ್ ಬಂಡೆ ಶಾಸನ ದೊರೆತಿದೆ. ದಕ್ಷಿಣದ ಭಾಗಗಳನ್ನು ಪೂರ್ವ ಕರಾವಳಿ ಮೂಲಕ ಅಥವಾ ಕೇಂದ್ರ ಹೆದ್ದಾರಿ ಉಜ್ಜಯಿನಿಯಿಂದ ಆರಂಭವಾಗಿ ಪ್ರತಿಷ್ಠಾನ(ಪೈಥಾನ್-ಔರಾಂಗ್‌ಬಾದ್‌ನ ಹತ್ತಿರ)ವನ್ನು ಹಾದು ಸುವರ್ಣಗಿರಿಗೆ ತಲುಪುತ್ತದೆ. ಈ ಹೆದ್ದಾರಿಯ ಉತ್ತರ ಭಾಗವು ಅಂದರೆ ಉಜ್ಜಯಿನಿವರೆಗಿನ ಮಾರ್ಗವು ವೇದ ಕಾಲಾನಂತರ ಪ್ರಸಿದ್ಧಿಯಾಗಿದ್ದು ಅದನ್ನು ದಕ್ಷಿಣಾ ಪಥ ಎಂದು (ದಕ್ಷಿಣ ಮಾರ್ಗ) ಕರೆಯಲಾಗುತ್ತಿತ್ತು. ಒಳನಾಡಿನ ಹೆಚ್ಚಿನ ಭಾಗಗಳಲ್ಲಿ ವಿವಿಧ ಕುಲ, ಗೋತ್ರಗಳಿಗೆ ಸೇರಿದ ಕಾಡುಜನರು ವಾಸವಾಗಿದ್ದರು. ಅವರನ್ನು ಮೌರ್ಯರಿಗೆ ಸೋಲಿಸಲಾಗಲಿಲ್ಲ. ಶಾಸನಗಳು ಈ ಜನ ಸಮೂಹದವರನ್ನು ಸೋಲಿಸ ಲಾಗದ 'ಅವಿಜಿತ'ರೆಂದೇ ಉದ್ಧರಿಸುತ್ತವೆ. ಅಂದರೆ, ಅಶೋಕನು ಇಂತಹ ಕುಲದವರನ್ನು ಸಾಮ್ರಾಜ್ಯದ ವಿರೋಧಿಗಳೆಂದೇ ಪರಿಗಣಿಸಿರಬೇಕು.

ಹೀಗೆ, ಮೌರ್ಯ ಸಾಮ್ರಾಜ್ಯದ ಮರು ನಿರೂಪಣೆಯಿಂದ ಅಶೋಕನ ಕಾಲದ ಅಖಿಲ ಭಾರತ ಕಲ್ಪನೆ ಮತ್ತು ಕ್ರಿ.ಪೂ. ೬ನೇ ಶತಮಾನದಲ್ಲಿ ಈ ಭಾಗದಲ್ಲಿ ಆರಂಭವಾದ ರಾಜ್ಯಾಂಗ ಪ್ರಕ್ರಿಯೆಯು ಮೌರ್ಯರ ಕಾಲಕ್ಕೆ ಅದು ಉತ್ತುಂಗ ಶಿಖರಕ್ಕೆ ತಲುಪಿತ್ತು ಎಂಬ ಅಭಿಪ್ರಾಯಕ್ಕೆ ಕಿಂಚಿತ್ತೂ ಧಕ್ಕೆ ಉಂಟಾಗುವುದಿಲ್ಲ. ಸಾಮ್ರಾಜ್ಯದ ಹೃದಯ ಭಾಗವು (ಹಳೆಯ ಮಹಾಜನಪದ ಪ್ರಾಂತಗಳು ಉಗಮವಾದ ತಾಣ) ದೆಹಲಿ - ಪಾಟಲೀಪುತ್ರ-ಉಜ್ಜಯಿನಿಯನ್ನು ಆವರಿಸಿರುವುದು ಸತ್ಯ. ನಂತರ ಮೌರ್ಯ ಅರಸರು ಕೈಗೊಂಡ ದಂಡಯಾತ್ರೆಗಳಿಂದ ವಾಯುವ್ಯ ಭಾಗದಲ್ಲಿ ಕಳಿಂಗ ಮತ್ತು ದಕ್ಷಿಣ ಭಾಗದಿಂದ ಹೊಸ ಪ್ರದೇಶಗಳು ಸಾಮ್ರಾಜ್ಯಕ್ಕೆ ಸೇರ್ಪಡೆಗೊಂಡವು. ಇದರಿಂದ ವ್ಯಾಪಾರ ಮಾರ್ಗಗಳು ಮತ್ತು ಕರಾವಳಿಗಳ ಮೇಲಿನ ನಿಯಂತ್ರಣವು ಸ್ಥಿರಗೊಂಡಿತು. ಇದು ವಾಣಿಜ್ಯ ವಹಿವಾಟಿಗೆ ಉತ್ತಮ ಅವಕಾಶಗಳನ್ನು ಕಲ್ಪಿಸಿದ್ದು, ಖಜಾನೆಗೆ ಸಂಪನ್ಮೂಲಗಳ ಹರಿವನ್ನು ಹೆಚ್ಚಿಸಲು ಸ್ಪೂರ್ತಿ ನೀಡಿತು.

ಅಶೋಕನ ಪ್ರಭುತ್ವದ ಮುಖ್ಯ ಅಂಶವೇನೆಂದರೆ, ಅವನು ದುಬಾರಿ ಯುದ್ಧಗಳನ್ನು ನಿಲ್ಲಿಸಿರುವುದು. ಕಳಿಂಗ ಯುದ್ಧದ ಪರಿಣಾಮವನ್ನು ಅನುಭವಿಸಿದ ಅಶೋಕನು ಸಾಮ್ರಾಜ್ಯದ ವೃದ್ಧಿಯನ್ನು ಕ್ರಾಂತಿಕಾರಿ ನಿಯಮಗಳಿಂದ ಸಾಧಿಸುವುದನ್ನು ನಿಲ್ಲಿಸಿದ್ದ. ಇದರಿಂದ ಸಾಮ್ರಾಜ್ಯ ವೃದ್ಧಿಯಾಗದೇ ಇದ್ದಿರಬಹುದು. ಆದರೂ ಸಾಮ್ರಾಜ್ಯದ

ಉದ್ವೇಗಗಳಿಗೂ ಸ್ಥಿರತೆಯನ್ನು ಸ್ಥಾಪಿಸಲು ಅನ್ಯ ಮಾರ್ಗಗಳನ್ನು ಅಶೋಕ ಪಾಲಿಸಿದನು. ಅದರಲ್ಲಿ ಯಶಸ್ಸನ್ನು ಕಂಡನು. ಒಳನಾಡಿನಲ್ಲಿರುವ ಅನೇಕ ಪ್ರದೇಶಗಳನ್ನು ಆಕ್ರಮಿಸಲು ಅಶೋಕ ಇನ್ನೆಷ್ಟೋ ರಕ್ತಸಿಕ್ತ ಯುದ್ಧಗಳನ್ನು ಮಾಡಬಹುದಿತ್ತು. ಅದು ದುಬಾರಿಯೂ ಹೌದು. ೨೦೦೦ ವರ್ಷಗಳ ನಂತರ ಮೊಗಲ್ ದೊರೆ ಔರಂಗಜೇಬನು ಅಶೋಕ ಏನು ಸಾಧಿಸಲಿಲ್ಲವೋ ಅದನ್ನು ಆಕ್ರಮಣಕಾರಿ ಯುದ್ಧಗಳಿಂದ ಸಾಧಿಸಬೇಕೆಂಬ ಕನಸು ನುಚ್ಚು ನೂರಾಗಿ ಸಾಮ್ರಾಜ್ಯ ಅವನತಿಯ ಹಾದಿ ಹಿಡಿದಿರುವುದು ಇತಿಹಾಸ. ಸಾಮ್ರಾಜ್ಯದೊಳಗೆ ಸ್ಥಿರತೆಯನ್ನು ಕಂಡುಕೊಳ್ಳಲು ಅಶೋಕ ಅಂತಹ ಮಾರ್ಗಗಳನ್ನು ಕೈಬಿಟ್ಟು, ಕಾನೂನು ಬದ್ಧವಾಗಿ ಧರ್ಮಯುದ್ಧ ಸಾರಿದನು. ಸಾಮ್ರಾಜ್ಯದ ಒಳಗೆ ಮತ್ತು ಹೊರಗೆ ಎಲ್ಲಾ ಜನರ ಪ್ರೀತಿಯನ್ನು ಗಳಿಸಿದ. ಭಾರತದ ಇತಿಹಾಸದಲ್ಲಿ ಒಬ್ಬ ಪ್ರಬುದ್ಧ ಚಕ್ರವರ್ತಿ ಸ್ಥಾನವನ್ನು ಅಲಂಕರಿಸಿದನು. ಬೌದ್ಧ ಮತೀಯರ ಆಧ್ಯಾತ್ಮಿಕ ಮತ್ತು ಸೈದ್ಧಾಂತಿಕ ನೆಲೆಗಳಲ್ಲಿ ಈ ಧರ್ಮಯುದ್ಧವನ್ನೇ ಮುಂದುವರಿಸಿದರೂ ತಾನು ಬೌದ್ಧ ಧರ್ಮ ಅನುಯಾಯಿ ಎಂದೇ ಪ್ರತಿಷ್ಠಾಪಿಸಲಿಲ್ಲ. ಎಲ್ಲಾ ಧರ್ಮಗಳಿಗೂ ಸಮಾನ ಗೌರವವನ್ನು [illegible], ಅಜೀವಿಕ, ಜೈನ ಧರ್ಮದ ಒಳ್ಳೆಯ ಗುಣಗಳನ್ನು ತನ್ನ ಧಾರ್ಮಿಕ [illegible] ಅಳವಡಿಸಿ ಕೊಂಡಿದ್ದನು.

ಮೌರ್ಯರ ಉದಯಕ್ಕೆ ಮೊದಲು ಮಗಧ ರಾಜ್ಯದಲ್ಲಿ ಹಲವು ರಾಜಮನೆತನಗಳ ನಡುವೆ ಅಧಿಕಾರಕ್ಕಾಗಿ ನಡೆದ ಪೈಪೋಟಿಯು ರಾಜಕೀಯ ಬೆಳವಣಿಗೆಗಳನ್ನು ಸೂಚಿಸಿದರೂ, ಅಶೋಕ ಚಕ್ರವರ್ತಿಯ ಕಾಲದಲ್ಲಿ ಅದೊಂದು ಪ್ರಬುದ್ಧ ಸಾಮ್ರಾಜ್ಯದ ಕೇಂದ್ರವಾಗಿ ಪರಿವರ್ತನೆಗೊಂಡಿತು. ಇದಕ್ಕೆ ಕೌಟಿಲ್ಯನ ರಾಜನೀತಿಯು ಹೆಚ್ಚು ಪ್ರಭಾವ ಬೀರಿರುವುದು ಸತ್ಯ. ಧರ್ಮಮಹಾಮಾತ್ರರು ಎಂಬ ಅಧಿಕಾರಿಗಳು ಒಂದರ್ಥದಲ್ಲಿ ಕೌಟಿಲ್ಯನು ಅರ್ಥಶಾಸ್ತ್ರ ದಲ್ಲಿ ಉಲ್ಲೇಖವಾಗಿರುವ ಗೂಢಾಚಾರರು ಮಾಡುವ ಕರ್ತವ್ಯವನ್ನೇ ಅಶೋಕನ ಕಾಲದಲ್ಲಿ ನಿರ್ವಹಿಸುತ್ತಿದ್ದರು. ಧರ್ಮಯುದ್ಧದ ಯಶಸ್ಸಿಗೆ ಈ ಅಧಿಕಾರಿಗಳ ಕೊಡುಗೆ ಮುಖ್ಯ ವಾಗಿದ್ದು ಆ ಮೂಲಕ ತನ್ನ ಚಕ್ರಾಧಿಪತ್ಯಕ್ಕೆ ಕಾನೂನುಬದ್ಧವಾದ ಗೌರವವನ್ನು ಪಡೆಯಲು ನಡೆಸಿದ ಪ್ರಯತ್ನ ಶ್ಲಾಘನೀಯ.

# ೨.೫ ಗುಪ್ತ ಸಾಮ್ರಾಜ್ಯ

**ಪೀಠಿಕೆ**

ಕುಶಾನ ಸಾಮ್ರಾಜ್ಯದ ಅವನತಿಯ ನಂತರ, ಉತ್ತರ ಭಾರತದಲ್ಲಿ ರಾಜಕೀಯವಾಗಿ ಅನೇಕ ಸಣ್ಣಪುಟ್ಟ ರಾಜ್ಯಗಳು ತಲೆಯೆತ್ತಿ, ಅವುಗಳ ರಾಜರು ಅಧಿಕಾರಕ್ಕಾಗಿ ತಮ್ಮ ತಮ್ಮಲ್ಲೇ ಕಚ್ಚಾಡುವ ಸಂದಿಗ್ಧ ಪರಿಸ್ಥಿತಿ ನಿರ್ಮಾಣವಾಯಿತು. ಪರಿಣಾಮವಾಗಿ ಗುಜರಾತ್, ರಾಜಸ್ತಾನ್ ಹಾಗೂ ಮಾಳವಗಳಲ್ಲಿ ಕ್ಷತ್ರಪರು ಅಧಿಕಾರದ ಚುಕ್ಕಾಣಿ ಹಿಡಿದರು. ಗಂಗಾ ನದಿ ಕಣಿವೆಯಲ್ಲಿ ಅನೇಕ ಸಣ್ಣಪುಟ್ಟ ರಾಜ್ಯಗಳು ರೂಪುಗೊಂಡವು. ಅವುಗಳಲ್ಲಿ ಕೆಲವು ಗಣರಾಜ್ಯಗಳೂ ಆಗಿದ್ದವು. ಮಗಧ ಕೇಂದ್ರದಲ್ಲಿಯೂ ಅನೇಕ ರಾಜವಂಶಗಳು ಅಧಿಕಾರಕ್ಕೆ ಬಂದು ಹೋಗಿದ್ದವು. ಆದರೂ, ಈ ರಾಜ್ಯಗಳು ಉತ್ತರ ಭಾರತದ ಆರ್ಥಿಕ ಹಾಗೂ ಸಾಂಸ್ಕೃತಿಕ ಜೀವನದಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತಲೇ ಹೋದವು.

**ಆರಂಭ**

ಈ ಬಿಕ್ಕಟ್ಟಿನ ನಡುವೆ, ಮೌರ್ಯ ಯುಗದಲ್ಲಿದ್ದಂತೆ, ಮತ್ತೊಮ್ಮೆ ಕ್ರಿ.ಶ. ನಾಲ್ಕನೆಯ ಶತಮಾನದ ಆರಂಭದಲ್ಲಿ ಮಗಧವು ಒಂದು ಹೊಸ ರಾಜಕೀಯ ಘಟಕದ ಕೇಂದ್ರವಾಯಿತು. ಇದು ಬಲಿಷ್ಠ ಗುಪ್ತ ಸಾಮ್ರಾಜ್ಯ ರೂಪುಗೊಳ್ಳುವುದಕ್ಕೆ ಅನುವು ಮಾಡಿಕೊಟ್ಟಿತು. ಗುಪ್ತರ ಉಗಮ ಮತ್ತು ಅವರ ನಿಜವಾದ ಮನೆತನ ಎಲ್ಲಿಂದ ಆರಂಭವಾಯಿತು ಎಂದು ನಿರ್ದಿಷ್ಟವಾಗಿ ಹೇಳುವುದು ಅಸಾಧ್ಯ. ಕ್ರಿ.ಶ. ೩೩೫ ರಿಂದ ೪೫೫ ರವರೆಗೆ ಸುಮಾರು ಒಂದು ಶತಮಾನಕ್ಕೂ ಹೆಚ್ಚು ಕಾಲ ಉತ್ತರ ಭಾರತವನ್ನು ಆಳಿದ್ದರು. ಮೌರ್ಯ ಸಾಮ್ರಾಜ್ಯದಷ್ಟು ವಿಶಾಲವಾದುದಲ್ಲದಿದ್ದರೂ, ಗುಪ್ತ ಸಾಮ್ರಾಜ್ಯ ಈ ಕಾಲದಲ್ಲಿ ರಾಜಕೀಯ ಒಗ್ಗಟ್ಟನ್ನು ಸ್ಥಾಪಿಸಲು ಯಶಸ್ವಿಯಾಗಿತ್ತು. ಆರಂಭದಲ್ಲಿ ಕುಶಾನರ ಸಾಮಂತರಾಗಿ ಅಧಿಕಾರ ವಹಿಸಿಕೊಂಡು, ನಂತರ ಹೆಚ್ಚು ಅಧಿಕಾರವನ್ನು ಪಡೆದು ಮಧ್ಯ ಗಂಗಾ ಜಲಾನಯನ ಪ್ರದೇಶವಾದ ಅಣುಗಂಗಾ, ಪ್ರಯಾಗ (ಈಗಿನ ಅಲಹಾಬಾದ್), ಸಾಕೇತ (ಈಗಿನ ಅಯೋಧ್ಯಾ) ಮತ್ತು ಮಗಧಗಳ ಮೇಲೆ ಅಧಿಕಾರವನ್ನು ಸ್ಥಾಪಿಸಿದರು. ಕ್ರಮೇಣ ಅವರ ಪ್ರಭುತ್ವವು ಉತ್ತರ ಭಾರತದ ಬಹುತೇಕ ಭಾಗಗಳಿಗೆ ಹರಡಿತು. ಅವರ ಅಧೀನಕ್ಕೊಳಪಟ್ಟ ಕೇಂದ್ರಗಳೆಂದರೆ ಬಿಹಾರ ಮತ್ತು ಉತ್ತರ ಪ್ರದೇಶಗಳನ್ನೊಳಗೊಂಡ ಫಲವತ್ತಾದ ಮಧ್ಯಪ್ರದೇಶ. ಮಧ್ಯಪ್ರದೇಶ ಮತ್ತು ದಕ್ಷಿಣ ಬಿಹಾರಗಳು ಆರ್ಥಿಕವಾಗಿ ಶ್ರೀಮಂತವಾಗಿದ್ದವು. ಅಲ್ಲಿರುವ ಕಬ್ಬಿಣದ ಅದಿರು ಮುಖ್ಯವಾದ ಸಂಪತ್ತಾಗಿದ್ದು, ಅವರಿಗೆ ಸುಲಭವಾಗಿ ದೊರೆಯುತ್ತಿತ್ತು. ರೇಷ್ಮೆ ವ್ಯಾಪಾರ ವಹಿವಾಟಿನಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ ಉತ್ತರ ಭಾರತದ ಪ್ರದೇಶಗಳಿಗೆ ಗುಪ್ತ ಸಾಮ್ರಾಜ್ಯದ ಗಡಿ ಅತ್ಯಂತ ಸಮೀಪವಾಗಿದ್ದುದೂ ಅನುಕೂಲ ವಾತಾವರಣವನ್ನು ಕಲ್ಪಿಸಿತ್ತು. ಇಂತಹ ಸೌಕರ್ಯಗಳು ಗುಪ್ತರಿಗೆ ಎಲ್ಲಾ ರಂಗಗಳಲ್ಲೂ ಪ್ರಬುದ್ಧತೆಯನ್ನು ಸಾಧಿಸಲು ಚೈತನ್ಯ ನೀಡಿತು.

ಗುಪ್ತ ರಾಜವಂಶದ ಆರಂಭಿಕ ರಾಜರುಗಳ ಬಗೆಗೆ ನಮಗೆ ಹೆಚ್ಚು ಮಾಹಿತಿ ಲಭ್ಯವಿಲ್ಲ. ಈ ಮನೆತನದ ಸಂಸ್ಥಾಪಕ 'ಶ್ರೀಗುಪ್ತ'. 'ರಾಜ' ಮತ್ತು 'ಮಹಾರಾಜ' ಎಂಬ ಬಿರುದುಗಳನ್ನು ಇವನು ಹೊಂದಿದ್ದನು. ಆದರೆ, ಕೆಲವು ಗುಪ್ತ ಶಿಲಾಶಾಸನಗಳು, ಈ ವಂಶದ ಇತಿಹಾಸವು ನಿಜಕ್ಕೂ ಶ್ರೀಗುಪ್ತನ ಮಗ ಘಟೋತ್ಕಜನಿಂದ ಆರಂಭವಾಗುವುದೆಂದು ತಿಳಿಸುತ್ತವೆ. ದುರದೃಷ್ಟವಶಾತ್ ಈ ಆರಂಭಿಕ ರಾಜರು ಆಳಿದ ಸಾಮ್ರಾಜ್ಯದ ಮೂಲ ಮೇರೆಗಳ ಬಗೆಗೆ ಹೆಚ್ಚು ಮಾಹಿತಿ ಇಲ್ಲ. ಆದಾಗ್ಯೂ, ಈ ಗಡಿಗಳು ಮಗಧ ಗಡಿಗಳೇ ಆಗಿರಬೇಕು ಎಂದು ಅನೇಕ ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಇನ್ನು ಕೆಲವರು ಇಂದಿನ ಪಶ್ಚಿಮ ಬಂಗಾಳದ ಕೆಲವು ಭಾಗಗಳು ಸೇರಿವೆ ಎಂದು ಹೇಳುತ್ತಾರೆ. ಈ ಗೊಂದಲಕ್ಕೆ ಕಾರಣ ನಿರ್ದಿಷ್ಟ ಶಿಲಾಶಾಸನ ಮಾಹಿತಿಗಳು ಇಲ್ಲದಿರುವುದಾಗಿದೆ. ಲಭ್ಯವಿರುವ ಏಕೈಕ ಲಿಖಿತ ಆಕರವೆಂದರೆ ಚೀನಿ ಪ್ರವಾಸಿಗ 'ಇತ್ಸಿಂಗ್'ನ ಬರವಣಿಗೆಗಳು ಮಾತ್ರ.

ಗುಪ್ತ ಮನೆತನದ ಪ್ರಭುದ್ಧ ರಾಜನೆನಿಸಿಕೊಂಡ ಸಮುದ್ರಗುಪ್ತನ ಅಲಹಾಬಾದ್ ಶಾಸನದಲ್ಲಿ ಶ್ರೀಗುಪ್ತ ಮತ್ತು ಘಟೋತ್ಕಜ, ಅವನ ಪೂರ್ವಜರು ಎಂದು ಉಲ್ಲೇಖವಿದೆ. ಈ ಹೆಸರುಗಳನ್ನು ಬಿಟ್ಟು ಗುಪ್ತರ ಇನ್ನು ಯಾವುದೇ ಶಾಸನಗಳಲ್ಲಿ ಬೇರೆ ಹೆಸರುಗಳ ಉಲ್ಲೇಖ ಬರುವುದಿಲ್ಲ. ಬಹುಶಃ ಈ ರಾಜಪುತ್ರರು ವಾರಣಾಸಿ ಅಥವಾ ಅಲಹಾಬಾದ್ ಸುತ್ತಮುತ್ತ ಇರುವ ಪ್ರದೇಶಗಳಿಗೆ ಒಡೆಯರಾಗಿದ್ದಿರಬಹುದು. ಗುಪ್ತರು ಪ್ರಬುದ್ಧತೆಯನ್ನು ಮುಟ್ಟುವ ಸಮಯದಲ್ಲಿ ಪಾಟಲೀಪುತ್ರ ಮತ್ತು ಮಗಧ ಕೇಂದ್ರಗಳು ಬೆಳೆದಿದ್ದರೂ ಕೂಡ, ಈ ಕೇಂದ್ರಗಳು ಆರಂಭದ ಅರಸರ ಆಡಳಿತ ವ್ಯಾಪ್ತಿಗೆ ಸೇರಿರುವ ಸಾಧ್ಯತೆ ಕಡಿಮೆ.

ಗುಪ್ತ ವಂಶವು ಇತಿಹಾಸದಲ್ಲಿ ಒಂದು ಮುಖ್ಯ ಘಟ್ಟವನ್ನು ತಲುಪಿರುವುದು ಪ್ರಥಮ ಚಂದ್ರಗುಪ್ತನ ಕಾಲದಲ್ಲಿ. ಇವನು ಕ್ರಿ.ಶ. ೩೨೦ ರಿಂದ ಸುಮಾರು ಕ್ರಿ.ಶ. ೩೩೫ ರವರೆಗೆ ಆಳಿದ್ದು, ಲಿಚ್ಛವಿ ಅರಸರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ್ದನು. ಈ ಕ್ಷತ್ರಿಯ ಕುಟುಂಬದೊಂದಿಗಿನ ವಿವಾಹ ಬಾಂಧವ್ಯವು ಗುಪ್ತರಿಗೆ ರಾಜಕೀಯ ರಂಗದಲ್ಲಿ ಒಂದು ಮುಖ್ಯ ತಿರುವುವಾಗಿರುತ್ತದೆ. ಸಮುದ್ರಗುಪ್ತನ ಪ್ರಸಿದ್ಧ ಅಲಹಾಬಾದ್ ಶಿಲಾಶಾಸನದಲ್ಲಿ ತನ್ನನ್ನು "ಲಿಚ್ಛವಿಗಳ ಪುತ್ರಿಯ" ಮಗನೆಂದು ಹೇಳಿಕೊಳ್ಳುತ್ತಾನೆ. ಅಂದರೆ, ಚಂದ್ರಗುಪ್ತನ ಹೆಂಡತಿ ಲಿಚ್ಛವಿ ಕ್ಷತ್ರಿಯ ಕುಲದವಳಾಗಿದ್ದಳೆಂದು ತಿಳಿದುಬರುತ್ತದೆ. ಮಗಧ ಸಾಮ್ರಾಜ್ಯದ ಯುಗ ಆರಂಭವಾದಂದಿನಿಂದಲೂ ಲಿಚ್ಛವಿಗಳು ಪ್ರಾಚೀನ ಭಾರತದ ರಾಜಕೀಯ ರಂಗದಲ್ಲಿ ಅಗ್ರಗಾಮಿ ಶಕ್ತಿಗಳಾಗಿದ್ದರು. ಲಿಚ್ಛವಿಗಳ ಗಣರಾಜ್ಯವು ಆರಂಭಿಕ ಗುಪ್ತ ರಾಜರುಗಳ ಆಳ್ವಿಕೆಯಲ್ಲೂ ತನ್ನ ಶಕ್ತಿ ಉಳಿಸಿಕೊಂಡಿದ್ದಿತು. ಲಿಚ್ಛವಿಗಳೊಂದಿಗೆ ಪ್ರಥಮ ಚಂದ್ರಗುಪ್ತನ ವಿವಾಹ ಸಂಬಂಧ ಗುಪ್ತ ಸಾಮ್ರಾಜ್ಯದ ಪ್ರತಿಷ್ಠೆಯನ್ನು ದೃಢೀಕರಿಸುತ್ತದೆ. ಲಿಚ್ಛವಿ ರಾಜ ವಂಶದವರೊಂದಿಗಿನ ಈ ವೈವಾಹಿಕ ಸಂಬಂಧ ಏರ್ಪಟ್ಟ ಬಗ್ಗೆ ಅಲಹಾಬಾದ್ ಶಿಲಾ ಶಾಸನದಿಂದಷ್ಟೆ ತಿಳಿದುಬರುವುದಿಲ್ಲ. ಬದಲಾಗಿ, ಚಂದ್ರಗುಪ್ತನ ಆಳ್ವಿಕೆ ಕಾಲದಲ್ಲೇ ಹೊರಡಿಸಲಾದ ಚಿನ್ನದ ನಾಣ್ಯಗಳಲ್ಲಿ ರಾಜನ ಜೊತೆಗೆ ಅವನ ಲಿಚ್ಛವಿ ಪತ್ನಿಯ

ಚಿತ್ರವಿರುವುದನ್ನು ನಾವು ಕಾಣುತ್ತೇವೆ. ಚಂದ್ರಗುಪ್ತನು ಲಿಚ್ಛವಿಗಳ ಪುತ್ರಿ ಕುಮಾರದೇವಿಯನ್ನು ವಿವಾಹವಾದುದು ಬಹುಶಃ ಅವನಿಗೆ ಭೂ ಪ್ರಾದೇಶಿಕ ಗಳಿಕೆಯನ್ನೂ ತಂದು ಕೊಟ್ಟಿರಬೇಕು. ಎರಡೂ ರಾಜ್ಯಗಳು ಸಮೀಕರಣಗೊಂಡು ಹೊಸ ಸಾಮ್ರಾಜ್ಯ ಉಗಮವಾಗಲು ಭದ್ರ ಬುನಾದಿ ಹಾಕಿರುವ ಸಾಧ್ಯತೆ ಇದೆ.

**ಸಮುದ್ರಗುಪ್ತ** (ಕ್ರಿ.ಶ. ೩೩೫-೩೮೦)

ಮೊದಲ ಚಂದ್ರಗುಪ್ತನು ಕ್ರಿ.ಶ. ೩೧೯-೩೨೦ ರಲ್ಲಿ ಪಟ್ಟಕ್ಕೆ ಬಂದಿದ್ದು ಕ್ರಿ.ಶ. ೩೨೦ನ್ನು 'ಗುಪ್ತ ಶಕವರ್ಷ'ವಾಗಿ ಆರಂಭಿಸಿದನು. 'ಮಹಾರಾಜಾಧಿರಾಜ' ಎಂಬ ಬಿರುದನ್ನು ಅಲಂಕರಿಸಿರುವ ಇವನ ಹಲವು ಶಾಸನಗಳು ಈ 'ಗುಪ್ತ ಶಕೆ'ಯಲ್ಲಿ ಕಾಲವನ್ನು ಸೂಚಿಸುತ್ತವೆ. ಪುರಾಣಗಳಲ್ಲಿ ಆರಂಭಿಕ ಗುಪ್ತರು ಗಂಗಾ ನದಿ ಪ್ರದೇಶದ ಪ್ರಯಾಗದಿಂದ ಮಗಧದವರೆಗೆ ಒಡೆಯರಾಗಿದ್ದರೆಂದು ತಿಳಿಸುತ್ತವೆ. ಚಂದ್ರಗುಪ್ತನ ಮಗ, ಸಮುದ್ರಗುಪ್ತನು ಸುಮಾರು ಕ್ರಿ.ಶ. ೩೩೫ ರಿಂದ ೩೮೦ ರವರೆಗೆ ಆಳಿದ್ದನ್ನು ಭಾರತದ ಇತಿಹಾಸದಲ್ಲಿ ಇವನು ಒಬ್ಬ ಪ್ರಸಿದ್ಧ ಹಾಗೂ ಆಕ್ರಮಣಕಾರಿ ರಾಜರ ಸಾಲಿಗೆ ಸೇರುತ್ತಾನೆ. ಈ ಶಿರೋನಾಮೆಗೆ ಅವನ ಅಲಹಾಬಾದ್ ಕಂಬ ಶಾಸನ ಸೂಕ್ತ ವಿವರಣೆ ನೀಡಿ ದೃಢೀಕರಿಸುತ್ತದೆ. ಸಮುದ್ರಗುಪ್ತನ ದಿಗ್ವಿಜಯಗಳನ್ನು ಹೊಗಳಿ ಕವಿ 'ಹರಿಷೇಣ'ನು ರಚಿಸಿರುವ ಈ ಶಾಸನವು, ಅವನು ಸದೆಬಡಿದ ಎಲ್ಲಾ ರಾಜರುಗಳ ಹೆಸರುಗಳನ್ನು ಮತ್ತು ಗೆದ್ದ ದೇಶಗಳನ್ನು ಪಟ್ಟಿ ಮಾಡುತ್ತದೆ. ಈ ಪಟ್ಟಿಯಿಂದ ಅವನು ಹಿಮ್ಮೆಟ್ಟಿಸಿದ ಅರ್ಧದಷ್ಟು ರಾಜರುಗಳನ್ನು ಮಾತ್ರ ನಿರ್ದಿಷ್ಟವಾಗಿ ಗುರುತಿಸಬಹುದು. ಉಳಿದ ಅಂಶಗಳು ಸಮುದ್ರಗುಪ್ತನು ಸಾಮ್ರಾಜ್ಯ ವೃದ್ಧಿಗೆ ಪಾಲಿಸಿದ ಧೋರಣೆಗಳ ಬಗೆಗೆ ಚಿತ್ರಣ ನೀಡುತ್ತದೆ. ಒಂದು ಕಾಲದಲ್ಲಿ 'ಆರ್ಯವರ್ತ' ವೆಂದೇ ಹೆಸರಾದ (ಆರ್ಯರು ಆಳಿದ ಭೂಮಿ) ಭೂ ಭಾಗದ ಪೂರ್ವದಲ್ಲಿ ಪಶ್ಚಿಮ ಬಂಗಾಳ, ಪಶ್ಚಿಮದಲ್ಲಿ ಮಥುರ, ಆಗ್ನೇಯ ದಿಕ್ಕಿನಲ್ಲಿ ವಿದಿಶ - ಈ ನಡುವೆ ಬರುವ ಎಲ್ಲಾ ರಾಜರನ್ನು ಸದೆಬಡಿದು ಆ ಪ್ರದೇಶಗಳನ್ನು ಸಮುದ್ರಗುಪ್ತನು ಆಕ್ರಮಿಸಿದ್ದನು. ಪಾಂಚಾಲ ಸಾಮ್ರಾಜ್ಯ ಮತ್ತು ಅನೇಕ ನಾಗಾ ವಂಶಕ್ಕೆ ಸೇರಿದ ರಾಜರನ್ನೂ ಸದೆಬಡಿದಿರು ತ್ತಾನೆ. ನಂತರ ಪ್ರಾಚೀನ ಭಾರತದಲ್ಲಿ ಅನೇಕ ರಾಜಮನೆತನಗಳ ಏಳುಬೀಳಿಗೆ ಕೇಂದ್ರವಾಗಿ ಹೆಸರಾದ 'ಪಾಟಲೀಪುತ್ರ'ವನ್ನು ಆಕ್ರಮಿಸಿ ಗುಪ್ತ ಸಾಮ್ರಾಜ್ಯದ ರಾಜಧಾನಿಯಾಗಿ ಪರಿವರ್ತನೆ ಗೊಂಡಿರುವುದು ಇವನ ಕಾಲದಲ್ಲಿಯೇ. ಸಮುದ್ರಗುಪ್ತನ ಸೈನಿಕ ಚಟುವಟಿಕೆಗಳು ಅವನ ಸಾಮ್ರಾಜ್ಯಕ್ಕೆ ಹೊಂದಿಕೊಂಡಂಥ ಭೂ ಪ್ರದೇಶಗಳಲ್ಲಿ, ಅದರಲ್ಲೂ ವಿಶೇಷವಾಗಿ ಗಂಗಾ ನದಿ ಕಣಿವೆ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿದ್ದವು. ಇವನು "ಅರಣ್ಯರಾಜ್ಯ"ಗಳನ್ನು ಗೆದ್ದುಕೊಂಡು ದಕ್ಕೂ ಶಾಸನದಲ್ಲಿ ಉಲ್ಲೇಖಗಳಿವೆ. ಅವು ನರ್ಮದಾ ಹಾಗೂ ಮಹಾನದಿ ಕಣಿವೆಗಳಲ್ಲಿನ ಬುಡಕಟ್ಟುಗಳ ಮೈತ್ರಿಕೂಟಗಳಿಗೆ ಸಂಬಂಧಿಸಿದ ಉಲ್ಲೇಖಗಳಿರಬಹುದು.

ಸಮುದ್ರಗುಪ್ತನ ಪ್ರಸಿದ್ಧ ದಂಡೆಯಾತ್ರೆಯು ದಕ್ಷಿಣ ಭಾರತವನ್ನು ಗುರಿಯಾಗಿಟ್ಟುಕೊಂಡಿತ್ತು. ದಕ್ಷಿಣ ಪಥದಲ್ಲಿ ಅವನು ಸರಿಸುಮಾರು ಹದಿಮೂರು ರಾಜರುಗಳನ್ನು ಮತ್ತು

ರಾಜಕುಮಾರರನ್ನು ಸೋಲಿಸಿರುವ ಪಟ್ಟಿಯನ್ನು ಅವನ ಶಾಸನ ತಿಳಿಸುತ್ತದೆ. ಈ ಸಣ್ಣ ಸ್ಥಳೀಯ ಅರಸರ ಹೆಸರು ಈ ಪಟ್ಟಿಯಲ್ಲಿ ಸೇರಿಸಿರುವುದರಿಂದಲೇ ಇಂದು ಅವರು ಇತಿಹಾಸದ ಬೆಳಕಿಗೆ ಬರುತ್ತಾರೆ. ಇಲ್ಲವಾಗಿದ್ದರೆ ಇತಿಹಾಸದ ವಿದ್ಯಾರ್ಥಿಗಳಿಗೆ ಆ ಅರಸರ ಪರಿಚಯವಾಗುತ್ತಿರಲ್ಲಿಲ್ಲ. ಆ ಕಾರಣಕ್ಕಾಗಿಯೇ ಸಮುದ್ರಗುಪ್ತನ 'ಅಲಹಾಬಾದ್ ಕಂಬ ಶಾಸನ' ದಕ್ಷಿಣ ಭಾರತದ ಇತಿಹಾಸ ಮರುನಿರೂಪಣೆಗೆ ಮುಖ್ಯವಾದ ಆಕರವಾಗಿದೆ.

ಸಮುದ್ರಗುಪ್ತನ ದಕ್ಷಿಣ ದಂಡಯಾತ್ರೆಯಲ್ಲಿ ಮೊಟ್ಟಮೊದಲು ಅವನು ದಕ್ಷಿಣ ಕೋಸಳದ ರಾಜ ಮಹೇಂದ್ರನನ್ನು ಸೋಲಿಸಿದ. ಅನಂತರ ಅದೇ ದಾರಿಯಲ್ಲಿ ಕಲಾಹಂದಿ ಮತ್ತು ಪಶ್ಚಿಮ ಒರಿಸ್ಸಾದ ಕೊರಪುಟ ಜಿಲ್ಲೆಗಳಲ್ಲಿನ ದಟ್ಟಾರಣ್ಯವನ್ನು ಹಾದು ಕಳಿಂಗ ಕರಾವಳಿಯನ್ನು ತಲುಪುತ್ತಾನೆ. ಕಳಿಂಗದ ಆಸುಪಾಸಿನಲ್ಲಿ ನಾಲ್ಕು ಅರಸರನ್ನು ಸೋಲಿಸು ತ್ತಾನೆ. ಅವರಲ್ಲಿ ಗೋದಾವರಿ ನದಿ ತೀರದ ಪಿಸ್ಟಾಪುರದ ಮಹೇಂದ್ರ ಮತ್ತು ವೆಂಗಿಯ ಹಸ್ತಿವರ್ಮರು ಮುಖ್ಯರಾದವರು. ದಕ್ಷಿಣದಲ್ಲಿ ಅವನ ಅತಿ ದೊಡ್ಡ ವಿಜಯ ಕಾಂಚೀಪುರಂ ಅರಸ ವಿಷ್ಣುಗೋಪನ ವಿರುದ್ಧದ್ದು. ಶಾಸನದಲ್ಲಿ ಸೂಚಿಸಲಾಗಿರುವ ಇತರ ಪ್ರದೇಶಗಳು ಯಾವುವೆಂದು ಖಚಿತವಾಗಿ ಗುರುತಿಸಲು ಇನ್ನೂ ಸಾಧ್ಯವಾಗಿಲ್ಲ. ಈ ಪ್ರಶ್ನೆಯು ಇತಿಹಾಸ ಕಾರರಲ್ಲಿ ಚರ್ಚೆಯ ವಿಷಯವಾಗಿ ಇಂದಿಗೂ ಇದೆ.

ಸಮುದ್ರಗುಪ್ತನು ದಕ್ಷಿಣದಲ್ಲಿ ಜಯಿಸಿದ ಪ್ರದೇಶಗಳನ್ನು ತನ್ನ ಸಾಮ್ರಾಜ್ಯದೊಂದಿಗೆ ಸಮೀಕರಿಸಿಕೊಂಡಿಲ್ಲವೆಂಬುದು ಈ ಶಾಸನದಿಂದ ತಿಳಿಯಬಹುದು. ಶಾಸನದಿಂದ ಈ ಎಲ್ಲಾ ರಾಜರನ್ನು ಸೋಲಿಸಿ, ಸೆರೆ ಹಿಡಿದು ನಂತರ ಬಿಡುಗಡೆ ಮಾಡಿ ಅದೇ ಪ್ರದೇಶಕ್ಕೆ ಅವರನ್ನು ಒಡೆಯರನ್ನಾಗಿ ಮರು ನೇಮಕ ಮಾಡಿರುವುದನ್ನು ನಾವು ತಿಳಿಯಬಹುದು. ಇದು ಅವನ ವಿಶಾಲ ಮನೋಭಾವನೆಯನ್ನು ಸೂಚಿಸುತ್ತಾದರೂ ಅವರು ಸ್ವತಂತ್ರರಾಗಿರುವುದಿಲ್ಲ. ಬದಲಾಗಿ ಸಮುದ್ರಗುಪ್ತನ ಅಧೀನ ಅಥವಾ 'ಆಶ್ರಿತ ರಾಜ್ಯ'ಗಳೆಂದು ಪರಿಗಣಿಸಲಾಗುತ್ತಿತ್ತು. ಈ ವಿಜಯಿ ಸಾಮ್ರಾಟನಿಗೆ ವಿಧೇಯರಾಗಿದ್ದು ಕಪ್ಪಕಾಣಿಕೆಯನ್ನು ತಪ್ಪದೇ ಸಲ್ಲಿಸಬೇಕಿದ್ದಿತು. ಇದು ಆ ಕಾಲದ ಒಂದು ರಾಜಕೀಯ ಸಂಪ್ರದಾಯವೂ ಆಗಿದ್ದು, ಅಂದಿನ ಯಶಸ್ವಿ ಸಾಮ್ರಾಟರು ತಮ್ಮ ದಂಡಯಾತ್ರೆಯನ್ನು ಕೈಗೊಂಡು ವಿಜಯಯಾತ್ರೆಯ ದುಂದುಭಿ ಮೊಳಗಿಸುವುದೇ ಮುಖ್ಯವಾಗಿರುತ್ತಿತ್ತು. ಯಾವುದೇ ಕಾರಣಕ್ಕೂ ಸೋಲಿಸಿದ ರಾಜರಿಗೆ ಸೇರಿದ ಪ್ರದೇಶಗಳನ್ನು ಖಾಯಂ ಆಗಿ ಆಕ್ರಮಿಸಿ ಅಲ್ಲಿ ಆಡಳಿತ ನಡೆಸುವ ಉದ್ದೇಶ ಹೊಂದಿರುತ್ತಿರಲಿಲ್ಲ. ಮತ್ತು ಅಷ್ಟೊಂದು ದೂರದಿಂದ ನಿರ್ವಹಿಸುವುದು ಕಷ್ಟಕರವೂ ಆಗಿರುತ್ತಿತ್ತು. ಅದಕ್ಕಾಗಿ ಅವರಿಂದ ಸೋತ ರಾಜರನ್ನೇ ಮರು ನೇಮಕ ಮಾಡಿ ತಮ್ಮ ಪ್ರಭುತ್ವದ ಪ್ರತಿನಿಧಿಗಳನ್ನಾಗಿ ಪರಿವರ್ತಿಸಿ ವಾಪಸ್ಸಾಗುತ್ತಿದ್ದರು. ಹೀಗೆ ದಕ್ಷಿಣ ಪಥದಲ್ಲಿ ಸಮುದ್ರಗುಪ್ತನು ದಿಗ್ವಿಜಯ ಸಾಧಿಸಿ 'ಅಶ್ವಮೇಧಯಾಗ'ವನ್ನು ನಡೆಸಿ ಉತ್ತರಕ್ಕೆ ಹಿಂದಿರುಗಿದನು. ನಂತರ ಈ ಎಲ್ಲಾ ರಾಜರು ಅವನ ಅಧೀನ ರಾಜರಾಗಿ ಯಥಾಪ್ರಕಾರ ತಮ್ಮ ಅಧೀನಕ್ಕೆ ಒಳಪಟ್ಟ ಪ್ರಾಂತಗಳಲ್ಲಿ ಅಧಿಕಾರವನ್ನು ಪುನರ್‌ಸ್ಥಾಪಿಸಿದರು. ಈ

ವಿಜಯಯಾತ್ರೆ ಮತ್ತು ಅಶ್ವಮೇಧಯಾಗವನ್ನು ಆಚರಿಸಿರುವ ಗುರುತಿಗಾಗಿ ಅನೇಕ ನಾಣ್ಯಗಳನ್ನು ಸಮುದ್ರಗುಪ್ತನು ಬಿಡುಗಡೆ ಮಾಡಿರುವುದನ್ನು ನಾವು ಗಮನಿಸಬಹುದು. ಅವುಗಳು ಅವನ ವೀರತ್ವದ ಪ್ರತೀಕಗಳಾಗಿವೆ.

ಪಶ್ಚಿಮ ಮತ್ತು ವಾಯುವ್ಯ ಭಾರತದ ಇತರ ಕೆಲವು ಗಣರಾಜ್ಯಗಳೂ ಗುಪ್ತ ಸಾಮ್ರಾಜ್ಯದ ಅಧೀನ ರಾಜ್ಯಗಳಾಗಿ ಸಮುದ್ರಗುಪ್ತನ ಕಾಲದಲ್ಲಿ ಪರಿವರ್ತನೆಗೊಂಡವು. ಅವರಲ್ಲಿ ಯೌಧೇಯರು, ಮಾಳವರು, ಮಾದ್ರರು, ಅರ್ಜುನಾಯನರು ಮುಖ್ಯರಾದವರು.

ಸಮುದ್ರಗುಪ್ತನಿಗೂ ಹಾಗೂ ಕ್ಷತ್ರಪರು ಮತ್ತು ಪಶ್ಚಿಮ ಪಂಜಾಬ ಹಾಗೂ ಆಫ್‌ಘಾನಿಸ್ಥಾನವ ಕೆಲವು ಭಾಗಗಳಲ್ಲಿ ಆಡಳಿತ ನಡೆಸುತ್ತಿದ್ದ ಕುಶಾಣರ ನಡುವಿನ ಸಂಬಂಧಗಳು ಬಹಳ ಸೂಕ್ಷ್ಮವಾಗಿಯೇ ಇದ್ದವು. ಅಲಹಾಬಾದ್ ಶಾಸನದಲ್ಲಿ ಗುಪ್ತರು ಕ್ಷತ್ರಪರು ಮತ್ತು ಕುಶಾಣರ ಮೇಲೂ ತಮ್ಮ ಸಾರ್ವಭೌಮತ್ವವನ್ನು ಪೊಂದಿದ್ದರು ಎಂಬ ಉಲ್ಲೇಖವಿದೆ. ಆದರೆ, ಸಮುದ್ರಗುಪ್ತನು ಈ ಪ್ರದೇಶಗಳ ಮೇಲೆ ಸ್ವಲ್ಪವಷ್ಟೇ ನಿಯಂತ್ರಣ ಹೊಂದಿರುವ ಸಾಧ್ಯತೆ ಇದೆ. ಏಕೆಂದರೆ ಕ್ರಿ.ಶ. ೩೩೨-೩೪೮ ಹಾಗೂ ೩೫೧-೩೬೩ ರ ನಡುವಿನ ವರ್ಷಗಳಲ್ಲಿ ಕ್ಷತ್ರಪ ನಾಣ್ಯಗಳು ಸಂಪೂರ್ಣವಾಗಿ ಇಲ್ಲದಿದ್ದುದು, ಅವರು ತಾತ್ಕಾಲಿಕವಾಗಿ ಗುಪ್ತರಿಗೆ ಅಧೀನರಾಗಿರುವುದನ್ನು ತಿಳಿಯಲು ಒಂದು ಮುಖ್ಯ ಸುಳಿವು ನೀಡುತ್ತದೆ. ಆ ಕಾಲದಲ್ಲಿ ಪಶ್ಚಿಮ ಕ್ಷತ್ರಪರ ಭೂಪ್ರದೇಶದಲ್ಲಿ ಗುಪ್ತರ ನಾಣ್ಯಗಳು ಚಲಾವಣೆಯಲ್ಲಿದ್ದವು. ಅನಂತರ ಪಶ್ಚಿಮ ಕ್ಷತ್ರಪರ ರಾಜ ತೃತೀಯ ರುದ್ರಸೇನನು ತನ್ನ ರಾಜ್ಯವನ್ನು ಅದರ ಹಿಂದಿನ ಸ್ಥಿತಿಗೆ ಕೊಂಡೊಯ್ಯುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದನು. ಸಿಂಹಸೇನನಂತೂ "ಮಹಾಕ್ಷತ್ರಪ" ಎಂಬ ಬಿರುದನ್ನೂ ಇಟ್ಟುಕೊಂಡಿದ್ದನು. ಈ ಬೆಳವಣಿಗೆಗಳು ಕ್ಷತ್ರಪ ಮತ್ತು ಕುಶಾಣ ರಾಜರು ಆ ಘಟ್ಟದಲ್ಲಿ ತಮ್ಮ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟಿರಲಿಲ್ಲವೆಂಬುದನ್ನು ದೃಢೀಕರಿಸುತ್ತವೆ.

ಸಮುದ್ರಗುಪ್ತನ ಪ್ರತಿಷ್ಠೆ ಹಾಗೂ ಪ್ರಭಾವಗಳು ಭಾರತದ ಹೊರಗಿನ ದೇಶಗಳಿಗೂ ಮುಟ್ಟಿತ್ತು. ಭಾರತದಲ್ಲಿ ಸಿಂಹಳದ ಸನ್ಯಾಸಿಗಳಿಗಾಗಿ ಗಯಾದಲ್ಲಿ ಒಂದು ಮಠ ನಿರ್ಮಿಸಲು ಅವಕಾಶ ಕೇಳಿಕೊಂಡು ಶ್ರೀಲಂಕಾದ ರಾಜ ಮೇಘವರ್ಣನು (ಕ್ರಿ.ಶ. ೩೫೨-೩೭೯) ಸಮುದ್ರಗುಪ್ತನ ಬಳಿಗೆ ಒಬ್ಬ ರಾಯಭಾರಿಯನ್ನು ಕಳುಹಿಸಿಕೊಟ್ಟಿದ್ದನೆಂದೂ ಆಕರಗಳು ತಿಳಿಸುತ್ತವೆ. ಸಮುದ್ರಗುಪ್ತನು ಇದಕ್ಕೆ ಅನುಮತಿ ನೀಡಿದ ಮತ್ತು ಪವಿತ್ರ ಬೋಧಿ ವೃಕ್ಷದ ಬಳಿ ಒಂದು ಬೌದ್ಧ ಸನ್ಯಾಸಿ ಮಠವನ್ನೂ ಸ್ಥಾಪಿಸಲಾಯಿತು.

ಗುಪ್ತರ ಸಾಮ್ರಾಜ್ಯವು ಸಮುದ್ರಗುಪ್ತನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಸಮಕಾಲೀನ ರಾಜ್ಯಗಳಲ್ಲಿಯೇ ಅತ್ಯಂತ ದೊಡ್ಡ ರಾಜ್ಯವೆಂದು ಹೇಳಲಾಗಿದೆ. ಅದರ ಪ್ರಭಾವ ಎಲ್ಲಾ ಕಡೆಗೂ ಹರಡಿದ್ದೂ ಇತರ ಅನೇಕ ರಾಜ್ಯಗಳೊಂದಿಗೆ ನಿಕಟ ಸಂಬಂಧವನ್ನು ಬೆಳೆಸಿತ್ತು. ಅವನ ಆಸ್ಥಾನ ಕವಿ ಹರಿಷೇಣನು ತನ್ನ ರಾಜನ ಶೌರ್ಯ ಪರಾಕ್ರಮಗಳನ್ನು ತನ್ನ ಸ್ತುತಿ ಗೀತೆಯಲ್ಲಿ ಹಾಡಿ ಹೊಗಳಿರುವುದಕ್ಕೆ ಸಮುದ್ರಗುಪ್ತನು ಹಲವು ಪ್ರದೇಶಗಳನ್ನು

ಜಯಿಸಿರುವುದೇ ಕಾರಣ. ಇಂತಹ ಮೌಲ್ಯ ನಿರ್ಣಯದ ಪ್ರಭಾವಕ್ಕೊಳಗಾದ ಅನೇಕ ವಿದ್ವಾಂಸರು ಸಮುದ್ರಗುಪ್ತನನ್ನು ಆದರ್ಶೀಕರಿಸುವ ಪ್ರಯತ್ನ ಮಾಡಿದ್ದಾರೆ. ವಿನ್ಸೆಂಟ್ ಎ. ಸ್ಮಿತ್ ಅವನನ್ನು 'ಭಾರತೀಯ ನೆಪೋಲಿಯನ್' ಎಂದೂ, 'ಅತ್ಯದ್ಭುತ ಗುಣಗಳನ್ನು ಹೊಂದಿದ್ದ ಒಬ್ಬ ಮಹಾಪುರುಷ' ಎಂದೂ ವರ್ಣಿಸಿದ್ದಾನೆ.

**ಎರಡನೆಯ ಚಂದ್ರಗುಪ್ತ** (ಕ್ರಿ.ಶ. ೩೮೦-೪೧೫)

ಸಮುದ್ರಗುಪ್ತನು ಕ್ರಿ.ಶ. ೩೮೦ ರವರೆಗೂ ಆಡಳಿತ ನಡೆಸಿದ. ಅನಂತರ ಅವನ ಮಗ ಎರಡನೆಯ ಚಂದ್ರಗುಪ್ತನು ಕ್ರಿ.ಶ. ೪೧೫ ರವರೆಗೂ ಆಳಿದ. ವಿಶಾಖದತ್ತನು ಬರೆದ *ದೇವಿಚಂದ್ರ ಗುಪ್ತಮ್* ಎಂಬ ನಾಟಕದ ಪ್ರಕಾರ ದ್ವಿತೀಯ ಚಂದ್ರಗುಪ್ತನು ತನ್ನ ಸೋದರ ರಾಮಗುಪ್ತನ ವಿರುದ್ಧ ಕಠಿಣ ಹೋರಾಟ ನಡೆಸಿದ ನಂತರವಷ್ಟೆ ಸಿಂಹಾಸನವೇರಿದನು ಎಂದು ಸೂಚಿಸುತ್ತದೆ. ತಂದೆಯಿಂದ ಪಡೆದ ವಿಶಾಲ ಸಾಮ್ರಾಜ್ಯವನ್ನು ಇನ್ನಷ್ಟು ವೃದ್ಧಿಸಲು ಮತ್ತು ಶತ್ರುಗಳಾದ ಶಕ-ಕುಶಾಣರನ್ನು ಸೋಲಿಸಲು ಹಲವು ಯೋಜನೆಗಳನ್ನು ಸಿದ್ಧಪಡಿಸಿದ್ದನು. ತನ್ನ ಸೈನಿಕ ಬಲವನ್ನು ಮತ್ತಷ್ಟು ವೃದ್ಧಿಸಲು ನಾಗರಾಜ ಕುಮಾರಿಯನ್ನು ವಿವಾಹವಾಗಿ ಅವಳಿಂದ ಹುಟ್ಟಿದ ಪ್ರಭಾವತೀ ಗುಪ್ತ ಎಂಬ ತನ್ನ ಮಗಳನ್ನು ವಾಕಾಟಕ ರಾಜ ದ್ವಿತೀಯ ರುದ್ರಸೇನನಿಗೆ ಕೊಟ್ಟು ವಿವಾಹ ಮಾಡಿಸಿದನು. ಹೀಗೆ ವೈವಾಹಿಕ ಸಂಬಂಧದಿಂದ ಪರಿಸ್ಥಿತಿಯನ್ನು ತನಗೆ ಅನುಕೂಲ ಮಾಡಿಕೊಂಡು ಶಕ-ಕುಶಾಣರ ಮೇಲೆ ದಂಡೆತ್ತಿ ಮಾಳವ, ಗುಜರಾತ್ ಮತ್ತು ಕಾಥೇವಾಡಗಳನ್ನು ವಶಪಡಿಸಿಕೊಂಡನು. ಇದರಿಂದ ಗುಪ್ತ ಸಾಮ್ರಾಜ್ಯಕ್ಕೆ ಸಮುದ್ರ ತೀರದ ರೇವು ಪಟ್ಟಣಗಳು ಸೇರ್ಪಡೆಗೊಂಡು ವಿದೇಶ ಗಳೊಂದಿಗೆ ವಾಣಿಜ್ಯ ವಹಿವಾಟುಗಳನ್ನು ಆರಂಭಿಸಲು ಅನುಕೂಲವಾಯಿತು. ಇದಕ್ಕೆ ಪೂರಕವಾಗಿ ಆಂತರಿಕ ವ್ಯಾಪಾರ ಕೇಂದ್ರಗಳು ಸುಭದ್ರ ಆಡಳಿತದ ವ್ಯಾಪ್ತಿಯಲ್ಲಿ ಅಭಿವೃದ್ಧಿ ಗೊಂಡವು. ಸಂಪತ್ತಿನಿಂದ ಶ್ರೀಮಂತವಾಗಿದ್ದ ಶಕರ ಪ್ರದೇಶಗಳಾದ ಗುಜರಾತ್, ಮಾಳವ, ಕಾಥೇವಾಡಗಳನ್ನು ಗುಪ್ತ ಸಾಮ್ರಾಜ್ಯದೊಂದಿಗೆ ಸೇರಿಸಿದ್ದರಿಂದ ಭಂಡಾರಕ್ಕೆ ಆದಾಯದ ಹರಿವು ಉಲ್ಬಣಗೊಂಡಿತು. ಸಾಮ್ರಾಜ್ಯದ ವ್ಯಾಪಾರಿಗಳು ಪಶ್ಚಿಮದ ದೇಶಗಳೊಂದಿಗೆ ನೇರವಾಗಿ ವ್ಯಾಪಾರ ಸಂಪರ್ಕವನ್ನು ಬೆಳೆಸಿದರು. ಮಾಳವದ ಉಜ್ಜಯಿನಿಯು ಗುಪ್ತ ಅರಸರ ಆಶ್ರಯದಲ್ಲಿ ಪ್ರಮುಖ ವ್ಯಾಪಾರಕೇಂದ್ರವೂ, ಎರಡನೆಯ ರಾಜಧಾನಿಯೂ ಆಗಿ ಪರಿವರ್ತನೆಗೊಂಡಿತು.

ದೆಹಲಿಯ ಬಳಿ ಇರುವ ಕಬ್ಬಿಣದ ಸ್ತಂಭದ ಮೇಲಿನ ಶಾಸನವು ಚಂದ್ರನೆಂಬ ರಾಜನ ಪರಾಕ್ರಮಗಳನ್ನು ಪ್ರಶಂಸೆ ಮಾಡುತ್ತದೆ. ಮತ್ತು ಅವನು ತನ್ನ ಸಾಮ್ರಾಜ್ಯವನ್ನು ವಾಲ್ಹೀಕ ವರೆಗೂ ವಿಸ್ತರಿಸಿದ್ದನೆಂದು ತಿಳಿಸುತ್ತದೆ. ಇದೇ ಚಂದ್ರನನ್ನು ಎರಡನೆ ಚಂದ್ರಗುಪ್ತನೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಹಾಗೆ ಆದಲ್ಲಿ ಅವನು ವಾಯುವ್ಯ ಭಾರತ ಮತ್ತು ಬಂಗಾಳದ ಹೆಚ್ಚಿನ ಭಾಗಗಳನ್ನು ಗುಪ್ತರ ಸಾಮ್ರಾಜ್ಯಕ್ಕೆ ಸೇರಿಸಿದ್ದ ಎಂದಾಯಿತು. ಆದಾಗ್ಯೂ ಶಾಸನದಲ್ಲಿರುವ ಪ್ರಶಂಸೆಯು ಉತ್ಪ್ರೇಕ್ಷೆಯಿಂದ ಕೂಡಿರುವುದನ್ನು ತಿಳಿಸುತ್ತದೆ.

ತನ್ನ ಸಾಮ್ರಾಜ್ಯದ ದಕ್ಷಿಣ ಹಾಗೂ ಪಶ್ಚಿಮ ಗಡಿಗಳನ್ನು ಸುಭದ್ರಗೊಳಿಸುವ ಗುರಿಯೊಂದಿಗೆ ಎರಡನೆ ಚಂದ್ರಗುಪ್ತನು ವಾಕಾಟಕ ಅರಸು ಮನೆತನದೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದನು. ತನ್ನ ಮಗಳನ್ನು ವಾಕಾಟಕ ರಾಜನಿಗೆ ವಿವಾಹ ಮಾಡಿಕೊಟ್ಟನು.

ಎರಡನೆ ಚಂದ್ರಗುಪ್ತನ ಆಳ್ವಿಕೆಯ ಸಮಯದಲ್ಲಿ ನಾಣ್ಯ ಸುಧಾರಣೆಯೊಂದನ್ನು ಜಾರಿಗೆ ತಂದನು. ಅವನ ಪೂರ್ವಿಕರು ಚಿನ್ನದ ನಾಣ್ಯಗಳನ್ನಷ್ಟೆ ಅಚ್ಚಾಕಿಸಿದ್ದರು. ಆದರೆ ಎರಡನೆಯ ಚಂದ್ರಗುಪ್ತನು ಬೆಳ್ಳಿಯ ಹಾಗೂ ತಾಮ್ರದ ನಾಣ್ಯಗಳನ್ನೂ ಚಲಾವಣೆಗೆ ತಂದನು. ಈ ನಾಣ್ಯಗಳ ಒಂದು ಭಾಗದಲ್ಲಿ ಪವಿತ್ರ ಗರುಡ ಪಕ್ಷಿಯ (ವಿಷ್ಣು ದೇವರ ವಾಹನ) ಚಿತ್ರವನ್ನು ಚಿತ್ರಿಸಲಾಗಿದೆ. ತಾಮ್ರದ ನಾಣ್ಯಗಳಲ್ಲೂ ಇದನ್ನು ನೋಡಬಹುದು. ಇದು ಅವನು ವೈಷ್ಣವ ಪಂಥದ ಅನುಯಾಯಿಯಾಗಿದ್ದ ಎನ್ನುವುದನ್ನು ತಿಳಿಸುತ್ತದೆ. ಜೊತೆಗೆ ಅವನು ಧರಿಸಿರುವ 'ಪರಮ ಭಾಗವತ' ಎಂಬ ಬಿರುದು ಇದನ್ನು ದೃಢೀಕರಿಸುತ್ತದೆ. ಇನ್ನೊಂದು ಅಭಿಪ್ರಾಯದ ಪ್ರಕಾರ ಇವನ ಕೆಲವು ನಾಣ್ಯಗಳಲ್ಲಿ ಸಿಂಹದೊಡನೆ ಕಾದಾಡುತ್ತಿರುವ ಚಿತ್ರಗಳು ಇದ್ದು, ಅದು ಸಿಂಹಗಳ ವಾಸಸ್ಥಾನವಾದ ಗುಜರಾತಿನ ಮೇಲೆ ಚಂದ್ರಗುಪ್ತನು ನಡೆಸಿದ ದಂಡೆಯಾತ್ರೆಯ ವಿಜಯೋತ್ಸವವನ್ನು ಸಮರ್ಥಿಸುತ್ತದೆ. ಹೂವಿನ ಚಿತ್ರವಿರುವ ನಾಣ್ಯಗಳು ರಾಜನ ಕಲಾಭಿರುಚಿಯನ್ನು ಪ್ರತಿಧ್ವನಿಸುತ್ತವೆ. ಇನ್ನು ಕೆಲವು ನಾಣ್ಯಗಳಲ್ಲಿ ಕುದುರೆ ಮತ್ತು ಕತ್ತಿಯ ಚಿತ್ರವಿದ್ದು, ಅವುಗಳು ಆತನ ಯುದ್ಧಾಕಾಂಕ್ಷೆ ಮತ್ತು ಧೈರ್ಯ ಪರಾಕ್ರಮಗಳ ಧ್ಯೋತಕವಾಗಿವೆ. ಶಕರಿಂದ ಗೆದ್ದುಕೊಂಡ ಪ್ರದೇಶಗಳಲ್ಲಿ ಬೆಳ್ಳಿಯ ನಾಣ್ಯಗಳ ಚಲಾವಣೆಯನ್ನು ಅನುಷ್ಠಾನಗೊಳಿಸಿದನೆಂಬ ಅಭಿಪ್ರಾಯವು ಸಹ ಇದೆ.

ಭಾರತೀಯ ಇತಿಹಾಸದಲ್ಲಿ ಎರಡನೆ ಚಂದ್ರಗುಪ್ತನನ್ನು ಸಾಹಸಿಯೂ, ಅಸಮ ಶೂರನೂ, ಧರ್ಮಿಷ್ಠ ಪ್ರಭುವೂ, ಶತ್ರುಗಳಾದ ಶಕರ ನಾಶಕನೂ ಆಗಿದ್ದನು ಎಂದು ಚಿತ್ರಿಸಲಾಗಿದೆ. ಅನೇಕ ಖ್ಯಾತ ಲೇಖಕರ, ಕವಿಗಳ ಹಾಗೂ ವಿದ್ವಾಂಸರ ಕೃತಿಗಳು ಇವನ ಕಾಲದಲ್ಲೇ ರಚಿತವಾದವು ಎಂದು ಹೇಳಲಾಗಿದೆ. ವಿದ್ಯೆಗೆ, ಕಲೆಗೆ, ವಾಸ್ತುಶಿಲ್ಪಕ್ಕೆ ಮತ್ತು ವಿಜ್ಞಾನಕ್ಕೆ ಆಶ್ರಯದಾತನಾಗಿದ್ದವನು ಎಂದು ಪರಂಪರೆ ವರ್ಣಿಸಿದೆ. ಈ ಎಲ್ಲಾ ವಿಶೇಷ ಗುಣಗಳು ಅವನಲ್ಲಿರುವುದರಿಂದಲೇ ಎರಡನೆ ಚಂದ್ರಗುಪ್ತನಿಗೆ 'ವಿಕ್ರಮಾದಿತ್ಯ' ಎಂಬ ಬಿರುದು ಬಂದಿತೆಂದು ಹೇಳಲಾಗಿದೆ. ಸಮಕಾಲೀನ ವಿದ್ವತ್ ಗ್ರಂಥಗಳಲ್ಲಿ ಎರಡನೆ ಚಂದ್ರಗುಪ್ತನ ಆಳ್ವಿಕೆಯನ್ನು 'ಗುಪ್ತರ ಸುವರ್ಣಯುಗ' ಎಂದು ಚಿತ್ರಿಸಲಾಗಿದೆ.

**ಪತನ**

ಎರಡನೆ ಚಂದ್ರಗುಪ್ತನ ನಂತರ ಅವನ ಮಗ 'ಕುಮಾರಗುಪ್ತ' ಅಧಿಕಾರಕ್ಕೆ ಬಂದನು. ಕ್ರಿ.ಶ. ೪೧೫ ರಿಂದ ೪೫೫ ರವರೆಗೂ ಇವನ ಆಡಳಿತ ಮುಂದುವರಿದಿದ್ದು, ಯಾವುದೇ ವಿಶೇಷ ಘಟನೆಗಳು ದಾಖಲಾಗಿಲ್ಲ. ಇವನು ಮತ್ತು ಇವನ ಉತ್ತರಾಧಿಕಾರಿ 'ಸ್ಕಂದಗುಪ್ತ'ನ ಕಾಲದಲ್ಲಿ ಗುಪ್ತ ಸಾಮ್ರಾಜ್ಯ ನಿರಂತರವಾಗಿ ಮಧ್ಯ ಏಷ್ಯಾದಿಂದ ದಂಡೆತ್ತಿ ಬಂದ ಹೂಣರ

ದಾಳಿಗೆ ತುತ್ತಾಯಿತು. ಪರಿಣಾಮವಾಗಿ ಸಾಮ್ರಾಜ್ಯ ಅವನತಿಯ ಹಾದಿಯನ್ನು ಅನಿವಾರ್ಯವಾಗಿ ಎದುರಿಸಬೇಕಾಯಿತು.

ಗುಪ್ತ ಸಾಮ್ರಾಜ್ಯದ ಪತನಕ್ಕೆ ಹೂಣರ ಆಕ್ರಮಣವಷ್ಟೆ ಕಾರಣವೆಂದು ಹೇಳಲಾಗದು. ಬದಲಾಗಿ, ಆ ಸಾಮ್ರಾಜ್ಯದ ರಚನಾವಿನ್ಯಾಸವನ್ನು ಗಮನಿಸಿದರೆ, ಅದರ ಅವನತಿಯು ತಡೆಯಲಸಾಧ್ಯವಾಗಿತ್ತೆಂಬುದು ಮನವರಿಕೆಯಾಗುತ್ತದೆ. ಮೌರ್ಯರಿಗಿಂತ ಭಿನ್ನವಾಗಿ ಗುಪ್ತರು 'ಪರಮೇಶ್ವರ', 'ಮಹಾರಾಜಾಧಿರಾಜ', 'ಪರಮಭಟ್ಟಾರಕ', ಮೊದಲಾದ ಆಡಂಬರದ ಬಿರುದುಗಳನ್ನು ಧರಿಸಿಕೊಂಡಿದ್ದರು. ಇದು ಸಾಮ್ರಾಜ್ಯದೊಳಗೆ ಹಲವಾರು ಅಧೀನ ಅರಸರ ಅಸ್ತಿತ್ವವನ್ನು, ಅವರು ಹೆಚ್ಚು ಅಧಿಕಾರ ಹೊಂದಿರುವುದನ್ನು ಸೂಚಿಸುತ್ತದೆ. ಗುಪ್ತ ಸಾಮ್ರಾಟರು ಆಕ್ರಮಿಸಿದ ಭೂ ಭಾಗದ ಬಹಳಷ್ಟು ಪ್ರದೇಶಗಳನ್ನು ಇಂತಹ ಸಾಮಂತ ಪ್ರಭುಗಳೇ ಆಳುತ್ತಿದ್ದರು. ಕೇವಲ ಬಂಗಾಳ, ಬಿಹಾರ ಮತ್ತು ಉತ್ತರ ಪ್ರದೇಶಗಳಷ್ಟೇ ಸಾಮ್ರಾಜ್ಯದ ಹೃದಯ ಭಾಗವಾಗಿದ್ದು ಸಾಮ್ರಾಜ್ಯಶಾಹಿ ಗುಪ್ತರ ನೇರ ನಿಯಂತ್ರಣದಲ್ಲಿದ್ದವು. ಗುಪ್ತ ಚಕ್ರವರ್ತಿಗಳ ಅಗ್ರಗಾಮಿ ಸಾಮಂತರೆಂದರೆ, ವಲ್ಲಭಿಯ ಮೈತ್ರೇಕರು, ಥಾನೇಶ್ವರದ ವರ್ಧನರು, ಕನೌಜಿನ ಮೌಖರಿಗಳು, ಬಂಗಾಳದ ಚಾಂದ್ರರು ಮತ್ತು ಮಗಧದ 'ನಂತರದ ಗುಪ್ತರು'. ಅವಕಾಶಗಳು ಬಂದಾಗಲೆಲ್ಲ, ಇವರು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು ಸಾಮ್ರಾಜ್ಯವನ್ನು ದುರ್ಬಲಗೊಳಿಸುತ್ತಿದ್ದರು.

ಮೌರ್ಯರಿಗೆ ಹೋಲಿಸಿದರೆ, ಗುಪ್ತರು ಅತೀ ದೊಡ್ಡ ಸೈನ್ಯವನ್ನೇನೂ ಹೊಂದಿದ್ದಂತಿಲ್ಲ. ಸಮುದ್ರಗುಪ್ತನದ್ದು ಸರ್ವವ್ಯಾಪಿ ದಂಡಯಾತ್ರೆಗಳೆಂದು ಬಣ್ಣಿಸುವ ಅವನ ಶಾಸನಗಳು, ಅವನ ಸೈನಿಕ ಕಾರ್ಯಾಚರಣೆ ಬಗ್ಗೆ ಏನನ್ನೂ ಹೇಳುವುದಿಲ್ಲ. ಅಥವಾ 'ಫಾಹಿಯಾನ್' ಕೂಡ ಗುಪ್ತರ ಸೇನಾಬಲದ ಸಂಖ್ಯೆಯನ್ನು ನೀಡುವುದಿಲ್ಲ. ಬಹುಶಃ ಸಾಮಂತರು ಸರಬರಾಜು ಮಾಡುತ್ತಿದ್ದ ಪಡೆಗಳೇ ಗುಪ್ತ ಸೈನ್ಯದ ಬಹುದೊಡ್ಡ ಶಕ್ತಿಮೂಲವಾಗಿದ್ದಿರಬಹುದು. ಅಲ್ಲದೆ, ಸೇನಾಬಲದ ಅತೀ ಮುಖ್ಯ ಘಟಕವಾಗಿದ್ದ ಅಶ್ವ ಮತ್ತು ಗಜ ದಳಗಳ ಏಕಸ್ವಾಮಿತ್ವವು ಗುಪ್ತರಿಗೆ ಸಾಕಷ್ಟಿರಲಿಲ್ಲ. ಇವೆಲ್ಲವೂ ಕೂಡ ಸಾಮಂತರನ್ನೇ ಅವಲಂಬಿಸಿರುವಂತೆ ಮಾಡಿತು. ಆದ್ದರಿಂದ, ಈ ಸಾಮಂತರು ಸಾಮ್ರಾಜ್ಯದಲ್ಲಿ ಗಣನೀಯ ಪಾತ್ರ ವಹಿಸುವಂತಾದರು.

### ಗುಪ್ತರ ಆಡಳಿತ ಮತ್ತು ಆರ್ಥಿಕತೆ

ಗುಪ್ತರು ವ್ಯವಸ್ಥಿತವಾದ ಮತ್ತು ಸಂಘಟಿತ ನೌಕರಶಾಹಿ ಜಾಲವನ್ನು ಹೊಂದಿರಲಿಲ್ಲ. ಆಡಳಿತಾತ್ಮಕ ಹುದ್ದೆಗಳು ಭಾಗಶಃ ಆನುವಂಶಿಕವಾಗಿದ್ದವು. 'ಕುಮಾರ ಮಾತ್ಯ' ಎಂಬ ಮಂತ್ರಿ ಪರಿಷತ್ತು ಸಾಮ್ರಾಜ್ಯದ ವಿವಿಧ ಖಾತೆಗಳಿಗೆ ಪರಿಣತ ಮಂತ್ರಿಗಳನ್ನು ನೇಮಿಸುತ್ತಿತ್ತು. ಅವರುಗಳು ಮಂತ್ರಿ, ಸೇನಾಧಿಪತಿ, ಮಹಾದಂಡನಾಯಕ ಹಾಗೂ ಸಂಧಿ ವಿಗ್ರಹಿಕಾ ಎಂಬ ಮಂತ್ರಿಗಳನ್ನೊಳಗೊಂಡ ಮಂತ್ರಿಮಂಡಲವು ಕಾರ್ಯ ನಿರ್ವಹಿಸುತ್ತಿತ್ತು. ಉನ್ನತ ಅಧಿಕಾರಿಗಳನ್ನು ನೇಮಿಸುವ ಅಧಿಕಾರ ರಾಜನಿಗಿತ್ತು. ಆದರೆ ಅನೇಕ ಖಾತೆಗಳ ಜವಾಬ್ದಾರಿ

ಯನ್ನು ಒಬ್ಬನೇ ವ್ಯಕ್ತಿ ನಿರ್ವಹಿಸುವ ಸಂಪ್ರದಾಯವೂ ಚಾಲ್ತಿಯಲ್ಲಿತ್ತು. ಉದಾಹರಣೆಗೆ ಅಲಹಾಬಾದ್ ಶಾಸನವನ್ನು ಬರೆದ ಕವಿ ಹರಿಷೇಣ ಸಮುದ್ರಗುಪ್ತನ ಕಾಲದಲ್ಲಿ ಒಂದಕ್ಕಿಂತಲೂ ಹೆಚ್ಚು ಖಾತೆಗಳ ಉಸ್ತುವಾರಿ ವಹಿಸಿಕೊಂಡಿದ್ದನು. ಇವೆಲ್ಲವೂ ಕೂಡ ಆಡಳಿತಾಂಗದ ಮೇಲೆ ಚಕ್ರವರ್ತಿಯ ಬಿಗಿ ಹಿಡಿತವನ್ನು ಬಲಹೀನಗೊಳಿಸಿತೆನ್ನಬಹುದು.

ಆಡಳಿತಾತ್ಮಕ ಅಧಿಕಾರದ ವಿಘಟನೆಗಿದ್ದ ಇನ್ನೊಂದು ಕಾರಣವೇನೆಂದರೆ ಭೂಮಿ ಮತ್ತು ಗ್ರಾಮಗಳ ದಾನ ನೀಡುವಿಕೆ. ಹೆಚ್ಚಾಗಿ ಪುರೋಹಿತರಿಗೆ ಮತ್ತು ದೇವಾಲಯಗಳಿಗೆ ಇಂತಹ ದಾನಗಳನ್ನು ನೀಡಲಾಗುತ್ತಿತ್ತು. 'ಭೂದಾನ ನೀಡುವ ಪದ್ಧತಿ' ಶಾತವಾಹನರ ಕಾಲದಿಂದಲೇ ಆರಂಭವಾಗಿದ್ದು ಮುಂದೆ ವಾಕಾಟಕರ ಕಾಲದಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆದು ಇಡೀ ಮಧ್ಯಭಾರತದಲ್ಲಿ ವ್ಯಾಪಕವಾಗಿ ಪ್ರಚಲಿತವಾಯಿತು. ರಾಮಾಯಣ, ಮಹಾಭಾರತ ಮತ್ತು ಪುರಾಣಗಳು ಇಂತಹ ಭೂದಾನ ಪದ್ಧತಿ ಬಗ್ಗೆ ಉಲ್ಲೇಖಿಸಿದ್ದು ಪ್ರಾಚೀನ ಭಾರತದಲ್ಲೂ ಚಾಲ್ತಿಯಲ್ಲಿತ್ತು. ತದನಂತರ ಅದು ಸಾಮಾಜಿಕ ಬಿಕ್ಕಟ್ಟಿಗೆ ಅನುವು ಮಾಡಿತು. ಏಕೆಂದರೆ ರಾಜ್ಯವೇ ನೇರವಾಗಿ ದುಡಿಯುವ ವರ್ಗಗಳಿಂದ ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದು ಆ ಸಂಪತ್ತನ್ನು ರಾಜ್ಯಾಡಳಿತದಲ್ಲಿ ಪಾಲ್ಗೊಳ್ಳುವ ವಿವಿಧ ಸೇವಕರಾದ ಸೈನಿಕ ವರ್ಗ, ಪುರೋಹಿತರು ಮತ್ತು ಇತರ ನೌಕರರಿಗೆ ಸಂಬಳವಾಗಿ ನೀಡುತ್ತಿತ್ತು. ಇದು ಮೇಲ್ವರ್ಗ ಮತ್ತು ಕೆಳವರ್ಗಗಳ ನಡುವೆ ಭಿನ್ನಾಭಿಪ್ರಾಯ ಹುಟ್ಟು ಹಾಕಿದ ಕಾರಣ ಶೂದ್ರರು ತಾವು ನಿರ್ವಹಿಸುತ್ತಿದ್ದ ಕಾರ್ಯವನ್ನು ಸ್ಥಗಿತಗೊಳಿಸಿದರು. ವೈಶ್ಯರು ರಾಜ್ಯಕ್ಕೆ ನೀಡಬೇಕಿದ್ದ ತೆರಿಗೆಯನ್ನು ಪಾವತಿ ಮಾಡುವುದಿಲ್ಲವೆಂದು ವಿರೋಧ ವ್ಯಕ್ತಪಡಿಸಿದ್ದರು. ಇಂತಹ ಘಟನೆ ಇತಿಹಾಸದಲ್ಲಿ ಬಂದು ಹೋದ ಕುರಿತು ಅರಿವಿದ್ದ ಗುಪ್ತ ಚಕ್ರವರ್ತಿಗಳು ಭೂದಾನ ಪದ್ಧತಿಯಲ್ಲಿ ಸ್ವಲ್ಪ ಬದಲಾವಣೆಯನ್ನು ಅಳವಡಿಸಿಕೊಂಡರು. ಹಿಂದಿನ ಪದ್ಧತಿಯಲ್ಲಿ ಹೆಚ್ಚಾಗಿ ಪುರೋಹಿತರು ಮತ್ತು ಧಾರ್ಮಿಕ ಕೇಂದ್ರಗಳಿಗೆ ಹೆಚ್ಚು ಅನುಕೂಲಕರವಾಗುತ್ತಿದ್ದು ಅದರ ಎಲ್ಲಾ ಸವಲತ್ತುಗಳು ಅವುಗಳಿಗೆ ಸೇರುತ್ತಿತ್ತು. ಆದರೆ ಗುಪ್ತರು ನೇರವಾಗಿ ಭೂಕಂದಾಯ ಮತ್ತು ತೆರಿಗೆಯನ್ನು ದುಡಿಯುವ ವರ್ಗದಿಂದ, ವಸೂಲಿ ಮಾಡುವುದನ್ನು ನಿಲ್ಲಿಸಿದರು. ಬದಲಾಗಿ ನೌಕರಶಾಹಿಯ ಪ್ರತಿನಿಧಿಗಳು ಮತ್ತು ಆಡಳಿತಾಂಗದ ಸದಸ್ಯರಿಗೆ ರಾಜ್ಯವು ಸಂಬಳವನ್ನು ನಗದು ರೂಪದಲ್ಲಿ ಕೊಡುವ ಬದಲು ಭೂಮಿಯನ್ನು (ಗ್ರಾಮಗಳನ್ನು) ದಾನ ಮಾಡಲು ಆರಂಭಿಸಿತು. ಹೀಗೆ ಗ್ರಾಮಗಳನ್ನು ದಾನವಾಗಿ ನೀಡುವಾಗ ಅಲ್ಲಿರುವ ಇಡೀ ಸಮುದಾಯವನ್ನೇ ವರ್ಗಾಯಿಸಲಾಗುತ್ತಿತ್ತು. ಅದರಲ್ಲಿ ಆ ಗ್ರಾಮದ ತೆರಿಗೆ, ಭೂಕಂದಾಯ ವಸೂಲಿ ಹಕ್ಕನ್ನು ದಾನ ಪಡೆದವನಿಗೆ ನೀಡಲಾಗುತ್ತಿತ್ತು. ಇಂತಹ ಪ್ರಕ್ರಿಯೆಯಿಂದ ಗ್ರಾಮ ಮಟ್ಟದಲ್ಲಿ ರಾಜ್ಯದ ಪ್ರತಿನಿಧಿಗಳಾದ ಸೇನಾಧಿಪತಿಗಳು, ದಂಡನಾಯಕರು, ಸರಕಾರಿ ನೌಕರರು ಭೂಮಾಲೀಕರಾಗಿಯೂ ಪರಿವರ್ತನೆಗೊಳ್ಳುತ್ತಿದ್ದರು. ಜೊತೆಗೆ ಗ್ರಾಮದ ಎಲ್ಲಾ ಹಕ್ಕುಗಳನ್ನು ಪಡೆದು ರೈತರ ಮತ್ತು ರಾಜ್ಯಾಂಗದ ನಡುವೆ ಪ್ರಬಲ ಮಧ್ಯವರ್ತಿಗಳಾಗಿ ಬೆಳೆದು ನಿಲ್ಲುತ್ತಿದ್ದರು.

ಗುಪ್ತರು ಬಹಳ ಕಡಿಮೆ ಭೂದಾನಗಳನ್ನು ಮಾಡಿರುವರಾದರೂ ಅದು ರಾಜ್ಯಕ್ಕೆ ಆರ್ಥಿಕ ಸಮಸ್ಯೆಯನ್ನು ತಂದೊಡ್ಡುತ್ತಿತ್ತು. ಮೌರ್ಯರ ಕಾಲದಲ್ಲಿ ಚಕ್ರವರ್ತಿಯೇ ಪರಮಾಧಿಕಾರದ ಪ್ರತೀಕನಾಗಿದ್ದು ಸಂಪೂರ್ಣವಾಗಿ ಏಕಸ್ವಾಮಿತ್ವವನ್ನು ಹೊಂದಿದ್ದನು. ಆದರೆ ಗುಪ್ತರ ಕಾಲದಲ್ಲಿ ಎಲ್ಲಾ ಆಡಳಿತಾತ್ಮಕ ಹಕ್ಕುಗಳ ಸಹಿತ ಗ್ರಾಮಗಳನ್ನೇ ದಾನ ನೀಡಲಾರಂಭಿಸಿದರು. ಇದರಿಂದ ಗ್ರಾಮ ಮಟ್ಟದಲ್ಲಿ ತೆರಿಗೆ, ಕಂದಾಯ ವಸೂಲಿ ಮತ್ತು ಉಪ್ಪು ಹಾಗೂ ಗಣಿಗಾರಿಕೆಯ ಹಕ್ಕುಗಳು ಚಕ್ರವರ್ತಿಯ ಕೈ ತಪ್ಪಿದವು. ಇಂತಹ ಆಡಳಿತ ವಿಕೇಂದ್ರೀಕರಣ ದಿಂದ ಮಧ್ಯವರ್ತಿಗಳು ಪ್ರಬಲ ಶಕ್ತಿಗಳಾಗಿ ಉಗಮವಾದರು. ಇದು ಚಕ್ರವರ್ತಿಯ ನಿಯಂತ್ರಣವನ್ನು ನಿಧಾನವಾಗಿ ದುರ್ಬಲಗೊಳಿಸತೊಡಗಿತು.

ಈ ಪ್ರಕ್ರಿಯೆಯಲ್ಲಿ ದಾನ ನೀಡಲ್ಪಟ್ಟ ಗ್ರಾಮದ ನಿವಾಸಿಗಳು ದಾನ ಸ್ವೀಕರಿಸಿದಾತನಿಗೆ ತೆರಿಗೆ ಪಾವತಿಸುವಂತೆ, ಅವನ ಆದೇಶಗಳನ್ನು ಪಾಲಿಸುವಂತೆ ಚಕ್ರವರ್ತಿಯಿಂದ ಸೂಚಿಸಲ್ಪಟ್ಟರು. ರೈತ ಮತ್ತು ಕರಕುಶಲಕರ್ಮಿಗಳಿಬ್ಬರಿಗೂ ಈ ಸೂಚನೆ ಅನ್ವಯವಾಗುತ್ತಿತ್ತು. ಮಧ್ಯಭಾರತದಲ್ಲಿನ ಈ ಕಾಲದ ಎಲ್ಲಾ ಶಾಸನಗಳು ಹೀಗೆ ಅನುಷ್ಠಾನದಲ್ಲಿರುವ ಪದ್ಧತಿಯನ್ನು ಸಮರ್ಥಿಸುತ್ತವೆ. ಉತ್ತರ ಭಾರತದಲ್ಲಿ ಹೀಗೆ ಭೂದಾನ ಸ್ವೀಕರಿಸಿದ ಭೂಮಾಲೀಕರಿಗೆ, ಅಲ್ಲಿನ ಕಳ್ಳರ ಮತ್ತು ಲೂಟಿಕೋರರನ್ನು ಶಿಕ್ಷಿಸುವ ಹಕ್ಕನ್ನು ರಾಜ್ಯ ಹಸ್ತಾಂತರಿಸಿತ್ತು. ಕೇಂದ್ರ ಮತ್ತು ಪಶ್ಚಿಮ ಭಾರತದಲ್ಲಿ ಕ್ರಿ.ಶ. ೫ನೆ ಶತಮಾನದಿಂದಲೇ ಇವರಿಗೆ ನಾಗರೀಕ ಮೊಕದ್ದಮೆಗಳನ್ನು ವಿಚಾರಿಸುವ ನ್ಯಾಯಾಂಗ ಅಧಿಕಾರವನ್ನು ನೀಡಲಾಗಿತ್ತು. ಗ್ರಾಮವನ್ನು ದಾನವಾಗಿ ಸ್ವೀಕರಿಸಲ್ಪಟ್ಟಾತನು ಆ ಗ್ರಾಮದ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿದ್ದುದರಿಂದ ರೈತರೂ ವಿಷಣ್ಣರಾಗಿದ್ದರು. ಏಕೆಂದರೆ, ದಾನ ಸ್ವೀಕರಿಸಿದವನು ರಾಜ್ಯದೊಂದಿಗೆ ನಿಕಟ ಸಂಪರ್ಕವನ್ನು ಹೊಂದಿರುತ್ತಿದ್ದ. ಅವನು ಮಧ್ಯವರ್ತಿಯೂ ಆಗಿ, ಸ್ವತಃ ಆ ಗ್ರಾಮದ ಫಲವತ್ತಾದ ಭೂಮಿಯಲ್ಲಿ ಅಲ್ಲಿರುವ ರೈತರ, ಕೂಲಿಕಾರರ ಸಹಾಯದಿಂದ ಕೃಷಿ ಉತ್ಪನ್ನಗಳನ್ನು ಉತ್ಪಾದಿಸುವ ಮತ್ತು ಅದನ್ನು ಉಳಿಸಿಕೊಳ್ಳುವ ಹಕ್ಕನ್ನು ಪಡೆದಿದ್ದನು. ಅಲ್ಲದೆ ಈ ಹೊಸ ಭೂಮಾಲೀಕರು ಗ್ರಾಮದ ಸಂಪನ್ಮೂಲಗಳನ್ನು ತಮ್ಮ ವೈಭವದ ಜೀವನಕ್ಕಾಗಿ ಗ್ರಾಮದವರನ್ನು ವಿವಿಧ ರೂಪದಲ್ಲಿ ಶೋಷಿಸತೊಡಗಿದರು. ಹಾಗಾಗಿ, ಚಕ್ರವರ್ತಿಯು ಗ್ರಾಮಗಳನ್ನು ದಾನ ಮಾಡುವಾಗ ನ್ಯಾಯಾಂಗ, ಕಾನೂನು ಕಾಪಾಡುವ ಮತ್ತು ತೆರಿಗೆ ವಸೂಲಿ ಹಕ್ಕುಗಳನ್ನು ಇಂತಹ ಹೊಸ ಭೂಮಾಲೀಕರಿಗೆ ಹಸ್ತಾಂತರಿಸಿದ ಫಲಿತಾಂಶವಾಗಿ ಅಂತಹ ಗ್ರಾಮಗಳ ಮೇಲೆ ಚಕ್ರವರ್ತಿಯ ಸಂಪೂರ್ಣ ನಿಯಂತ್ರಣ ದುರ್ಬಲಗೊಂಡಿತು.

ಹೀಗೆ ರೂಪುಗೊಂಡ ರಾಜಕೀಯ ವ್ಯವಸ್ಥೆಯು ಸಾಮಂತಶಾಹಿ ಲಕ್ಷಣಗಳನ್ನು ಪಡೆದಿತ್ತು. ಇದಕ್ಕೆ ಮುಖ್ಯವಾಗಿ ಚಕ್ರವರ್ತಿಯು ಪುರೋಹಿತರು ಹಾಗೂ ಇತರ ಆಡಳಿತಾಧಿಕಾರಿಗಳಿಗೆ ನೀಡಿದಂತಹ ಆರ್ಥಿಕ ಮತ್ತು ಆಡಳಿತಾತ್ಮಕ ವಿನಾಯಿತಿಗಳು. ಇವರಿಗೆ ಭೂಮಿಯನ್ನು ಮಾನ್ಯವಾಗಿ ನೀಡಿ, ಶಾಶ್ವತವಾಗಿ ಕಂದಾಯದಿಂದ ಮುಕ್ತಗೊಳಿಸಲಾಯಿತು. ಚಕ್ರವರ್ತಿಗೆ ಆ ಭೂಮಿಗಳಿಂದ ರೈತರಿಂದ ಬರಬೇಕಾದ ಎಲ್ಲಾ ಕಂದಾಯ, ತೆರಿಗೆಗಳನ್ನೂ

ಸಂಗ್ರಹಿಸಿಕೊಳ್ಳುವ ಅಧಿಕಾರ ಈ ಭೂಮಾಲೀಕರಿಗೆ ನೀಡಲಾಯಿತು. ಮಾನ್ಯದಾರರಿಗೆ ನೀಡಿದ ಗ್ರಾಮಗಳಿಗೆ ರಾಜನ ಆಯುಕ್ತರಾಗಲಿ, ಆಡಳಿತಾಧಿಕಾರಿಗಳಾಗಲಿ ಪ್ರವೇಶಿಸು ವಂತಿರಲಿಲ್ಲ. ಜೊತೆಗೆ ಮಾನ್ಯದಾರರು ಅಪರಾಧಿಗಳನ್ನು ಶಿಕ್ಷಿಸುವ ಅಧಿಕಾರವನ್ನು ಪಡೆದು ಕೊಂಡರು.

### ವ್ಯಾಪಾರ-ವಾಣಿಜ್ಯ

ಇನ್ನೊಂದೆಡೆ, ವ್ಯಾಪಾರವೂ ಅವನತಿಯತ್ತ ಸಾಗಿ, ಮೊದಲಿನ ಪ್ರಾಶಸ್ತ್ಯವನ್ನು ಕಳೆದುಕೊಂಡಿತು. ಮೌರ್ಯರ ಕಾಲದಲ್ಲಿ ಇಂಡೋ-ರೋಮನ್ ವ್ಯಾಪಾರದ ರಫ್ತು ವಸ್ತುಗಳಲ್ಲಿ, ರೇಷ್ಮೆ ಮತ್ತು ಸಾಂಬಾರ ಪದಾರ್ಥಗಳ ರೂಪದಲ್ಲಿತ್ತು. ಆದರೆ, ೬ನೇ ಶತಮಾನದ ಮಧ್ಯಾವಧಿಯ ವೇಳೆಗೆ ರೇಷ್ಮೆ ಹುಳುಗಳನ್ನು ಭಾರತದಿಂದ ರಹಸ್ಯವಾಗಿ ಬೈಜಾಂಟಿಯಸ್ ಸಾಮ್ರಾಜ್ಯಕ್ಕೆ ರವಾನಿಸಿ ಅಲ್ಲಿ ರೇಶ್ಮೆ ಕೃಷಿಯನ್ನು ಅಭಿವೃದ್ಧಿಪಡಿಸ ಲಾಯಿತು. ಇದು ಪಶ್ಚಿಮದೊಡನೆ ಇದ್ದ ಭಾರತದ ವ್ಯಾಪಾರದ ಮೇಲೆ ನೇರ ಪರಿಣಾಮ ಬೀರಿತು. ನಂತರ ಇಸ್ಲಾಂ ಧರ್ಮ ಪ್ರಾಬಲ್ಯಕ್ಕೇರಿ, ಆ ಧರ್ಮದ ಅನುಯಾಯಿಗಳಾದ ಅರಬ್ಬರು ಯಶಸ್ವಿ ವರ್ತಕರಾಗಿ ಹೊರಹೊಮ್ಮಿದಾಗ ಭಾರತದ ವ್ಯಾಪಾರ ಇನ್ನಷ್ಟು ಕುಂಠಿತ ಗೊಂಡಿತು. ಇದರಿಂದಾಗಿ, ರೇಶ್ಮೆ ಕೃಷಿಯಲ್ಲಿ ತೊಡಗಿದವರು ತಮ್ಮ ಉಳಿವಿಗಾಗಿ ಕಾರ್ಯ ಕ್ಷೇತ್ರಗಳನ್ನು ಬದಲಿಸಿಕೊಂಡು ಬೇರೆ ಉದ್ಯೋಗಕ್ಕೆ ಹುಡುಕಾಟ ನಡೆಸಿದರು.

ವ್ಯಾಪಾರವು ಇಳಿಮುಖವಾದೊಡನೆ, ಗಂಗಾ ಬಯಲು ತೀರದಲ್ಲಿದ್ದ ಎಲ್ಲಾ ನಗರ ಕೇಂದ್ರಗಳು ದುರ್ಬಲಗೊಂಡವು. ಗುಪ್ತ ಸಾಮ್ರಾಜ್ಯಕ್ಕೆ ಗಂಗಾ ನದಿ ಬಯಲು ಮುಖ್ಯವಾಗಿ ಹೃತ್ಕೇಂದ್ರವಾಗಿದ್ದಿತು. ಇಲ್ಲಿ ಕಾಲಕ್ರಮೇಣ ಕೃಷಿ ಉತ್ಪಾದನಾ ಚಟುವಟಿಕೆಗಳು ಹಿನ್ನೆಡೆ ಅನುಭವಿಸುವಂತಾಯಿತು. ಎರಡು ಶತಮಾನಗಳ ನಂತರ ಎಲ್ಲಾ ರಂಗದಲ್ಲೂ ಮುಂದುವರಿದಿದ್ದ ಪಾಟಲೀಪುತ್ರ ನಗರ ಕೂಡ ಒಂದು ಗ್ರಾಮದ ಮಟ್ಟಕ್ಕೆ ಇಳಿಯಿತು. ಮೌರ್ಯರ ಕಾಲದಲ್ಲಿ ಹೆಸರಾದ ಎರಡು ಬೃಹತ್ ಉಗ್ರಾಣಗಳು ಇತ್ತೆನ್ನಲಾದ ಸೋಹಾಗೌರಾ (ಗೋರಕ್‌ಪುರ ಜಿಲ್ಲೆ)ಯಲ್ಲಿ ನಡೆದ ಉತ್ಖನನಗಳು, ಜನವಸತಿ ಇದ್ದ ಬಗ್ಗೆ ಸಹ ಯಾವುದೇ ಮಾಹಿತಿ ನೀಡಿಲ್ಲ. (ಗುಪ್ತರ ಕಾಲಕ್ಕೆ ಸಂಬಂಧಿಸಿ) ಕೃಷಿ ಉತ್ಪನ್ನಗಳ ಉತ್ಪಾದನೆ ಇಳಿಮುಖ ವಾದ ಕಾರಣ ದೇಶದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ವ್ಯಾಪಾರಿಗಳ ಮತ್ತು ಕರ ಕುಶಲಕರ್ಮಿಗಳ ಸಂಚಾರವೂ ನಿಂತುಹೋಯಿತು. ದೆಹಲಿಯ ಮೆಹರೌಲಿಯಲ್ಲಿ ಇಂದಿಗೂ ತುಕ್ಕು ಹಿಡಿಯದೆ ಇರುವ ಕಬ್ಬಿಣದ ಸ್ತಂಭ, (ಗುಪ್ತರ ಕಾಲಕ್ಕೆ ಸೇರಿದ್ದು) ಆಗಿನ ಕಾಲದ ಕರಕುಶಲ ಕರ್ಮಿಗಳ ತಂತ್ರಜ್ಞಾನದ ನೈಪುಣ್ಯತೆಯನ್ನು ಎತ್ತಿ ಹಿಡಿಯುತ್ತಿದೆ. ಹಾಗೆ ಅನೇಕ ಶಾಸನಗಳು ಗುಪ್ತರ ನಗರಸಭಾ ಆಡಳಿತದಲ್ಲಿ ಕರಕುಶಲ ಕರ್ಮಿಗಳ ಮತ್ತು ವರ್ತಕ ಶ್ರೇಣಿಗಳು ಸಕ್ರಿಯವಾಗಿ ಭಾಗವಹಿಸಿರುವ ಚಿತ್ರಣ ನೀಡುತ್ತಾವಾದರೂ, ಆ ಸಮಯಕ್ಕೆ ಇವರುಗಳು ಸಂಪೂರ್ಣವಾಗಿ ಸ್ಥಳೀಕರಣಗೊಂಡಿದ್ದರು ಮತ್ತು ಅವರ ಕಾರ್ಯಕ್ಷೇತ್ರಗಳ ವ್ಯಾಪ್ತಿ ಗ್ರಾಮಮಟ್ಟಕ್ಕೆ ಸೀಮಿತಗೊಂಡಿತ್ತು.

ವಾಣಿಜ್ಯಿಕ ಅವನತಿಗೆ ಆ ಅವಧಿಯಲ್ಲಿ ನಾಣ್ಯಗಳ ಸಂಖ್ಯೆಯು ಇಳಿಮುಖಗೊಂಡಿರುವುದೂ ಸಾಕ್ಷಿ. ಪ್ರಾಚೀನ ಭಾರತದಲ್ಲಿ ಗುಪ್ತ ಚಕ್ರವರ್ತಿಗಳು ಅತಿ ಹೆಚ್ಚು ಚಿನ್ನದ ನಾಣ್ಯಗಳನ್ನು ಚಲಾವಣೆಗೆ ತಂದವರು ಎಂಬ ಅಭಿಪ್ರಾಯವಿದೆ. ಆದರೆ ಇವುಗಳನ್ನು ಕೇವಲ ಬೃಹತ್ ಆರ್ಥಿಕ ವಹಿವಾಟಿಕೆಗೆ ಮಾತ್ರ ಬಳಸಲಾಗುತ್ತಿತ್ತು. ಅದರಲ್ಲೂ ಭೂಮಾರಾಟ ಮತ್ತು ಖರೀದಿಗೆ ಮಾತ್ರ ಸೀಮಿತವಾಗಿದ್ದು, ದೈನಂದಿನ ವಹಿವಾಟಿಕೆಗೆ ಬಳಕೆ ಆಗುತ್ತಿದ್ದುದು ಬಹಳ ವಿರಳ.

ಮೂರನೆ ಮತ್ತು ನಾಲ್ಕನೆ ಶತಮಾನಗಳಲ್ಲಿ ನಗರಗಳಲ್ಲಿನ ವ್ಯಾಪಾರ ವ್ಯವಹಾರಗಳು ದುರ್ಬಲಗೊಂಡಿರುವುದು ಇದಕ್ಕೆ ಜ್ವಲಂತ ಸಾಕ್ಷಿ. ಉತ್ತರ ಭಾರತದಲ್ಲಿರುವ ಕುಶಾಣ ಕಾಲದ ನಗರ ವಸತಿ ಕೇಂದ್ರಗಳಾದ ಕೌಸಾಂಬಿ (ಅಲಹಾಬಾದ್), ಹಸ್ತಿನಾಪುರ, ಪುರಾಣ ಕಿಲಾ (ದೆಹಲಿ), ಅಹಿಚತ್ರ ಮತ್ತು ತಕ್ಷಶಿಲಾ ನಗರಗಳು ಕ್ಷೀಣಿಸುವ ಲಕ್ಷಣಗಳನ್ನು ತೋರ್ಪಡಿಸಿದವು. ಒಂದೊಮ್ಮೆ ಖ್ಯಾತಿ ಪಡೆದ ನಗರಗಳಾದ ಅಯೋಧ್ಯಾ ಮತ್ತು ಮಥುರ ಕೂಡ ಗುಪ್ತರ ಕಾಲದಲ್ಲಿ ಪ್ರಾಮುಖ್ಯತೆಯನ್ನು ಕಳೆದುಕೊಂಡವು. ಮಧ್ಯಪ್ರದೇಶ, ರಾಜಸ್ತಾನ ಮತ್ತು ಗುಜರಾತ್‌ನಲ್ಲಿನ ಪಟ್ಟಣಗಳಾದ ನೋಹ, ಉಜ್ಜಯಿನಿ, ನಗರ್ ಇತ್ಯಾದಿಗಳು ದುರ್ಬಲಗೊಂಡವು. ಈ ಲಕ್ಷಣಗಳು ಶಾತವಾಹನರ ಕಾಲದಲ್ಲಿ ಪರಾಕಾಷ್ಠೆಗೆ ಏರಿದ ಪಟ್ಟಣಗಳಾದ ಕೌಡಿನ್ಯಾಪುರ, ಪೈಥಾನ್ ಮತ್ತು ನಾಸಿಕ್ (ಮಹಾರಾಷ್ಟ್ರ), ಅಮರಾವತಿ ಮತ್ತು ದರ್ನಿಕೋಟಾ (ಆಂಧ್ರಪ್ರದೇಶ), ವಡ್‌ಗಾವನ್-ಮಾಧವಪುರ, ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ (ಕರ್ನಾಟಕ) ಗಳಿಗೂ ಅನ್ವಯವಾಗುತ್ತವೆ. ದಕ್ಷಿಣದಲ್ಲಿ ಅರಿಕಾಮೇಡು ಪ್ರಮುಖ ಪಟ್ಟಣವಾಗಿದ್ದು, ಅದೂ ಕೂಡ ಮೂರನೆ ಶತಮಾನದಿಂದ ತನ್ನ ಪ್ರಾಬಲ್ಯವನ್ನು ಕಳೆದು ಕೊಂಡಿತು. ಗುಪ್ತರ ಹೃದಯಕೇಂದ್ರದಲ್ಲಿರುವ ವೈಶಾಲಿ ಕೂಡ ಇದೇ ಲಕ್ಷಣವನ್ನು ಪಡೆಯಿತು. ಇವೆಲ್ಲವು ಗುಪ್ತರ ಆಳ್ವಿಕೆ ಕಾಲದಲ್ಲಿ ನಡೆದ್ಧ ಘಟನೆಗಳು.

## ಗುಪ್ತರ ಕಾಲದ ಸಮಾಜ

ಗುಪ್ತರ ಕಾಲದಲ್ಲಿ ಮಹಿಳೆಯರ ಸ್ಥಿತಿಗತಿಯೂ ಅಧಃಪತನದತ್ತ ಸಾಗಿತು. 'ಮಾತೃ ದೇವೋಭವ' ಎಂದು ಕೊಂಡಾಡಿದ ನಾಡಿನಲ್ಲಿ, 'ಸುವರ್ಣಯುಗ'ವೆನ್ನಲಾಗುವ ಕಾಲದಲ್ಲಿ ಅವಳು ಪಿತೃಪ್ರಧಾನ ಸಮಾಜದಲ್ಲಿ ಹಕ್ಕು ಅವಕಾಶಗಳಿಂದ ವಂಚಿತಳಾಗಿದ್ದಳು. ಶೂದ್ರರಂತೆ ಈ ಕಾಲದ ಮಹಿಳೆಯರು ವಿದ್ಯೆ ಹಕ್ಕುಗಳನ್ನು ಕಳೆದುಕೊಳ್ಳುವುದರ ಜೊತೆಗೆ ಪುರಾಣಗಳು ಹಾಗೂ ಪವಿತ್ರ ಗ್ರಂಥಗಳ ಓದು ಮತ್ತು ಅವುಗಳಲ್ಲಿ ಬರುವ ಶ್ಲೋಕಗಳನ್ನು ಕೇಳಿಸಿ ಕೊಳ್ಳುವುದರಿಂದಲೂ ವಂಚಿತರಾದರು. ಗುಪ್ತರ ಕಾಲದಲ್ಲಿ ಆರ್ಯೇತರ ಸ್ತ್ರೀ ದೇವತೆಗಳ ಮೂರ್ತಿಗಳು, ಹಿಂದೆಂದಿಗಿಂತಲೂ ಮುಖ್ಯಸ್ಥಾನಗಳನ್ನು ಅಲಂಕರಿಸಿದ್ದವು. ಮಾತೃ ದೇವತೆಯನ್ನು ಸರ್ವಕಾಲದಲ್ಲೂ ಭಾರತದಲ್ಲಿ ಪೂಜಿಸಲಾಗುತ್ತಿತ್ತು. ಆದರೆ, ಅವುಗಳು ಗುಪ್ತರ ಕಾಲದಲ್ಲಿ ಸಂಕೀರ್ಣ ಸ್ವರೂಪ ಪಡೆದು ಇತರ ಬ್ರಾಹ್ಮಣ ದೇವರುಗಳೊಡನೆ ಗುರುತಿಸಲ್ಪಟ್ಟವು. ಶ್ರೀ ಅಥವಾ ಶ್ರೀಲಕ್ಷ್ಮಿ, ವೈಶ್ಯರ ಸಂಪತ್ತಿನ ಅಧಿದೇವತೆಯೆಂದು

ಆರಾಧಿಸುತ್ತಿದ್ದವಳು ಈಗ ವಿಷ್ಣುವಿನ ಸತಿಯಾದಳು. ಪಾರ್ವತಿಯು ಶಿವನ ಸತಿಯಾದಳು. ಈ ಮಿಲನವನ್ನು ದಾಖಲಿಸಿರುವ ಪ್ರಾಚೀನ ಶಾಸನವು ಸ್ಕಂದಗುಪ್ತನ ಕಾಲಕ್ಕೆ ಸೇರಿದ್ದಾಗಿದೆ. ಜೀವನದ ವಿವಿಧ ಆಯಾಮಗಳಲ್ಲಿ ಎದ್ದು ತೋರುತ್ತಿದ್ದ ವರ್ಣ ವಿಭಜನೆಗೆ ಗುಪ್ತರ ಕಾಲದ ಬರಹಗಳು ಸಾಕ್ಷಿಯಾಗಿವೆ. 'ವರಾಹಮಿಹಿರ'ನು ಬ್ರಾಹ್ಮಣ, ಕ್ಷತ್ರಿಯ ಮತ್ತು ಶೂದ್ರರು ತಲಾ ೫, ೪, ೩ ಮತ್ತು ೨ ಕೊಠಡಿಗಳ ಮನೆಯನ್ನು ಹೊಂದಿರಬೇಕೆಂದಿದ್ದಾನೆ. ವರ್ಣ ಶ್ರೇಷ್ಠತೆಯನುಸಾರ ಅವುಗಳ ಉದ್ದಗಲಗಳೂ ವ್ಯತ್ಯಾಸ ಹೊಂದಿರಬೇಕು. ಕಾನೂನು ಕ್ಷೇತ್ರದಲ್ಲೂ ಈ ವರ್ಣ ಶ್ರೇಷ್ಠತೆಯ ತಾರತಮ್ಯ ಅಂದಿನ ವಾಸ್ತವಿಕ ಸತ್ಯವಾಗಿತ್ತು. ಶೂದ್ರರು ಮತ್ತು ಅಸ್ಪೃಶ್ಯರ ನಡುವೆಯೂ ಅಂತರವನ್ನು ಸ್ಥಾಪಿಸಲಾಗಿತ್ತು. ಈ ವರ್ಗದ ಸಂಖ್ಯೆಯು ಗಣನೀಯವಾಗಿ ಏರಿರುವುದಕ್ಕೂ ಕಾರಣವಿತ್ತು. ಹಿಂದುಳಿದ ಅರಣ್ಯ ಬುಡಕಟ್ಟಿನವರನ್ನು ನೆಲೆ ನಿಂತ ವರ್ಣ ಸಮಾಜದೊಳಕ್ಕೆ ಹೀರಿಕೊಳ್ಳಲಾದುದೇ ಮುಖ್ಯ ಕಾರಣ. ಗುಪ್ತರ ಕಾಲದಲ್ಲಿ ದೊಡ್ಡ ಪ್ರಮಾಣದಲ್ಲಿ ಭೂಮಾನ್ಯಗಳನ್ನು ಬ್ರಾಹ್ಮಣರು ಪಡೆದು ಪ್ರಬಲರಾಗಿದ್ದರು. ಗುಪ್ತ ವಂಶದವರು ಮೂಲತಃ ವೈಶ್ಯರಾಗಿದ್ದರೂ ಕೂಡ ನಂತರ ಅವರಿಗೆ ದೈವಗುಣಗಳ ಲೇಪ ಬಳಿದು ಅವರನ್ನು ಬ್ರಾಹ್ಮಣ ಕ್ಷತ್ರೀಯರು ಎಂದು ಸಮಾಜದಲ್ಲಿ ಗುರುತಿಸಲಾಯಿತು. ಇದರಿಂದ ಗುಪ್ತ ಚಕ್ರವರ್ತಿಗಳ ಸ್ಥಾನಮಾನಗಳು ಪವಿತ್ರಗೊಂಡು ಸಾಮಾಜಿಕ ಮಾನ್ಯತೆ ಪಡೆದವು. ಬ್ರಾಹ್ಮಣೀಯ ವ್ಯವಸ್ಥೆಯನ್ನು ನಿರಂತರವಾಗಿ ಪ್ರೋತ್ಸಾಹಿಸುತ್ತಾ ಬಂದ ಗುಪ್ತ ಚಕ್ರವರ್ತಿಗಳ ದುರ್ಬಲತೆಯನ್ನು ಬಳಸಿಕೊಂಡು ವಿಪುಲವಾಗಿ ಭೂಮಾನ್ಯಗಳನ್ನು, ಇನ್ನಿತರ ಹಕ್ಕು ಮತ್ತು ಸೌಕರ್ಯಗಳನ್ನು ಪಡೆದು ಬ್ರಾಹ್ಮಣರು ಬಲಿಷ್ಠವಾಗಿ ಬೆಳೆದರು. ಬ್ರಾಹ್ಮಣರ ಬದಲಾದ ಸ್ಥಾನಮಾನಗಳು ಕ್ರಿ.ಶ. ೫ ನೇ ಶತಮಾನದ ನ್ಯಾಯಶಾಸ್ತ್ರ ಗ್ರಂಥವಾದ *ನಾರದಸ್ಮೃತಿ*ಯಲ್ಲಿ ಕಂಡುಬರುತ್ತವೆ.

ಆದರೆ ಈ ಅವಧಿಯಲ್ಲಿ ಅಸ್ಪೃಶ್ಯರು ಮುಖ್ಯವಾಗಿ ಚಾಂಡಾಲರ ಜನಸಂಖ್ಯೆ ಉಲ್ಬಣಗೊಂಡಿತು. ಚಾಂಡಾಲನೊಬ್ಬನು ನಗರದ, ಅಥವಾ ಮಾರುಕಟ್ಟೆ ಪ್ರದೇಶದ ದ್ವಾರವನ್ನು ಪ್ರವೇಶಿಸುವಾಗ ಮರದ ತುಂಡಿನಿಂದ ಗೇಟಿಗೆ ಬಡಿದು, ತನ್ನ ಇರುವಿಕೆಯನ್ನು ಸೂಚಿಸಬೇಕಿತ್ತೆಂದು ಚೀನಿ ಯಾತ್ರಿಕ ಫಾಹಿಯಾನ್ ವರದಿ ಮಾಡಿದ್ದಾನೆ. ಇದರಿಂದ ಇತರರು ಅವನಿಂದ ದೂರವಿರಲು ನೆರವಾಗುತ್ತದೆ. ಸಮಕಾಲೀನ ಬರಹಗಳಲ್ಲಿ ಸಾಮಾನ್ಯವಾಗಿ ಅಸ್ಪೃಶ್ಯರನ್ನು, ಖಚಿತವಾಗಿ ಚಾಂಡಾಳರನ್ನು ತೀರಾ ತಿರಸ್ಕಾರದ ಪದಗಳಲ್ಲಿ ವರ್ಣಿಸಲಾಗಿದೆ. ಅಶುದ್ಧಿ, ಅಸತ್ಯ, ಕಳ್ಳತನ, ನಿರುಪಯುಕ್ತ ಜಗಳ, ವಂಚನೆ, ಅಸೂಯೆಗಳನ್ನು ಅವರ ಗುಣ-ಲಕ್ಷಣಗಳೆಂದು ವರ್ಣಿಸಲಾಗಿದೆ. ಹಾಗಿದ್ದಲ್ಲಿ ಇದನ್ನು 'ಸುವರ್ಣ ಯುಗ' ಎಂದು ಕರೆಯಲು ಸಾಧ್ಯವೇ?

ಶೂದ್ರರು ಖಂಡಿತವಾಗಿಯೂ ಅಸ್ತಿತ್ವದಲ್ಲಿದ್ದ ಸಾಮಾಜಿಕ ವ್ಯವಸ್ಥೆಗೆ ವಿರುದ್ಧವಾಗಿದ್ದರು. ಮಹಾಭಾರತದ *ಅನುಶಾಸನ ಪರ್ವವು* ಅವರನ್ನು 'ರಾಜರ ನಿರ್ನಾಮಕರು' ಎಂದು ಉಲ್ಲೇಖಿಸಿದ್ದರೂ, ಮೇಲ್ವರ್ಗದ ವಿರುದ್ಧ ಶೂದ್ರರ ನೇರ ಬಂಡಾಯ ಕುರಿತು

ಯಾವುದೇ ದಾಖಲಾತಿ ಇಲ್ಲ. ಶೂದ್ರರು ದ್ವಿಜರ ಸೇವೆ ಮಾಡುವುದರಿಂದ ಮತ್ತು ದೇವರಲ್ಲಿ ಭಕ್ತಿ ತಾಳುವುದರಿಂದಷ್ಟೇ ಮೋಕ್ಷ ಗಳಿಸಲು ಸಾಧ್ಯ ಎಂದು ಮಹಾಭಾರತವು ಸ್ಪಷ್ಟವಾಗಿ ಹೇಳಿದೆ. ಕರ್ಮ ಸಿದ್ಧಾಂತದಲ್ಲಿ ಅವರಿಗೆ ನಂಬಿಕೆ ಹುಟ್ಟಿಸಲಾಗಿದ್ದ ಕಾರಣ, ಅವರು ತಮ್ಮ ದುರಂತಮಯ ಬದುಕಿಗಾಗಿ ಮಾನವ ಏಜೆನ್ಸಿಗಳನ್ನು ಜರೆಯಲೂ ಸಿದ್ಧರಿರಲಿಲ್ಲ. ಮುಂದಿನ ಜನ್ಮದಲ್ಲಾದರೂ ಗುಲಾಮ ಜೀವನದಿಂದ ಮುಕ್ತಿ ಹೊಂದುವ ಇರಾದೆ ಅವರಿಗಿರುವುದನ್ನು ಇದು ಸೂಚಿಸುತ್ತದೆ.

### ಧರ್ಮ

ಬೌದ್ಧ ಧರ್ಮ ಅದುವರೆಗೂ ವರ್ತಕರ ಆಶ್ರಯವನ್ನು ಅವಲಂಬಿಸಿತ್ತು. ಆದರೆ, ಇದೀಗ ವ್ಯಾಪಾರ ವಹಿವಾಟು ಕುಂಠಿತಗೊಂಡಾಗ ಬೌದ್ಧ ಧರ್ಮ ಇಳಿಮುಖವಾಯಿತು. ಅದರ ಅನುಯಾಯಿಗಳು ತಮಗೆ ಲಭಿಸಿದ್ದ ಭೂಮಿ ಮತ್ತು ಗ್ರಾಮಗಳ ದಾನಗಳನ್ನೇ ಆಶ್ರಯಿಸಬೇಕಾಯಿತು. ನಳಂದಕ್ಕೆ ೨೦೦ ಗ್ರಾಮಗಳ ತೆರಿಗೆ ಸಲ್ಲುತ್ತಿತ್ತು. ಇಂತಹ ಸಂಪತ್ತನ್ನೇ ಬೌದ್ಧ ಧರ್ಮ ಕೇಂದ್ರಗಳು ಅವಲಂಬಿಸಬೇಕಾದ ಸಂದಿಗ್ಧ ಪರಿಸ್ಥಿತಿ ಎದುರಾಯಿತು.

### ಕೊಡುಗೆಗಳು

ಗುಪ್ತರ ಕಾಲದಲ್ಲಿ ಕಲೆ, ನಾಟಕ ಮತ್ತು ಸಾಹಿತ್ಯಕ್ಷೇತ್ರಗಳು ಗಮನಾರ್ಹ ಏಳಿಗೆ ಕಂಡಿದೆ ನಿಜ. ಆದರೆ, ಕಲಾ ಪ್ರತಿಭೆಗೂ ಸಾಮ್ರಾಟರಿಗೂ ನಂಟು ಕಲ್ಪಿಸಲಾಗದು. ಕವಿ ಚಕ್ರವರ್ತಿ ಕಾಳಿದಾಸನು ದ್ವಿತೀಯ ಚಂದ್ರಗುಪ್ತನ ಆಸ್ಥಾನದಲ್ಲಿದ್ದನು. ಅವನು ವಿಪುಲ ಸಾಹಿತ್ಯ ರಚಿಸಿದನಾದರೂ, ವಿದ್ವಾಂಸರು ಈವರೆಗೆ *ಶಾಕುಂತಲ, ಮಾಳವಿಕಾಗ್ನಿ ಮಿತ್ರ, ವಿಕ್ರಮೋರ್ವಶೀಯ* ಎಂಬ ಮೂರು ನಾಟಕಗಳನ್ನು, *ಮೇಘದೂತ* ಎಂಬ ಕಾವ್ಯವನ್ನೂ *ಕುಮಾರ ಸಂಭವ, ರಘುವಂಶ*ಎಂಬ ಮಹಾಕಾವ್ಯಗಳನ್ನಷ್ಟೆ ಪತ್ತೆ ಮಾಡಿದ್ದಾರೆ. ಅಂತೆಯೇ ಹಲವಾರು ನಾಟಕಕಾರರೂ ಗುಪ್ತರ ಕಾಲದಲ್ಲಿ ಪ್ರಸಿದ್ಧಿಯಲ್ಲಿದ್ದರು. *ಮೃಚ್ಛಕಟಿಕ*ದ ಶೂದ್ರಕ, *ಮುದ್ರಾರಾಕ್ಷಸ*ದ ವಿಶಾಖದತ್ತ ಮೊದಲಾದವರನ್ನು ಇಲ್ಲಿ ಉಲ್ಲೇಖಿಸಬಹುದು. *ಯಾಜ್ಞವಲ್ಕ್ಯ ಸ್ಮೃತಿ, ನಾರದ ಸ್ಮೃತಿ* ಗಳಂಥ ಕೆಲವು ಧರ್ಮಶಾಸ್ತ್ರಗಳೂ ಇವರ ಕಾಲದಲ್ಲಿ ರಚಿತವಾದವು. ವಿಷ್ಣುಶರ್ಮನ *ಪಂಚತಂತ್ರ* ಕೃತಿಯು ಈ ಕಾಲದ ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಒಂದು ಹೆಗ್ಗುರುತಾಗಿದೆ ಎಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. ದಕ್ಷಿಣ ಭಾರತದಲ್ಲೂ ತಮಿಳಿನಲ್ಲಿ ಮೊದಲ ಸಾಹಿತ್ಯ ಕೃತಿಗಳು ರಚಿತವಾಗಿರುವುದು ಗುಪ್ತರ ಕಾಲದಲ್ಲಿಯೇ. *ತಿರುಕ್ಕುರಳ್* ತಮಿಳಿನ ಆರಂಭಿಕ ಕೃತಿಗಳಲ್ಲೆ ಅತ್ಯಂತ ಪ್ರಸಿದ್ಧವಾದುದು.

ವೈಜ್ಞಾನಿಕ ಕ್ಷೇತ್ರಗಳಲ್ಲೂ ಪ್ರಮುಖ ಸಾಧನೆಗಳು ಕಂಡುಬಂದವು. ಖಗೋಳ ವಿಜ್ಞಾನ, ಗಣಿತಶಾಸ್ತ್ರ, ವೈದ್ಯಶಾಸ್ತ್ರ ಹಾಗೂ ರಸಾಯನಶಾಸ್ತ್ರಗಳಲ್ಲಿ ಈ ಮುನ್ನಡೆ ಗಮನಾರ್ಹವಾದುದು. ವಿವಿಧ ಜ್ಞಾನ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅನೇಕ ವೈಜ್ಞಾನಿಕ ಕೃತಿಗಳು ಕಾಣಿಸಿಕೊಂಡವು. ಧಾರ್ಮಿಕ ಮಂದಿರಗಳ ನಿರ್ಮಾಣ, ಆರಾಧನೆ ಸಂಸ್ಕಾರಗಳು ಮತ್ತು ಆರ್ಥಿಕ ಅಗತ್ಯತೆಗಳಿಗೆ ಗಣಿತಶಾಸ್ತ್ರದ ಅರಿವು ಬಹಳ ಮುಖ್ಯವಾಗಿದ್ದಿತು. *ಆರ್ಯ*

ಘಟಿಯಂನ ಆರ್ಯಭಟನು ೫ನೇ ಶತಮಾನದಲ್ಲಿ ಮೆರೆದ ಪ್ರಸಿದ್ಧ ಗಣಿತಶಾಸ್ತ್ರಜ್ಞನಾಗಿದ್ದನು.

ಖಗೋಳ ವಿಜ್ಞಾನ, ಭೂಗೋಳಶಾಸ್ತ್ರ ಹಾಗೂ ಖನಿಜ ಶಾಸ್ತ್ರಗಳಿಗೆ ಸಂಬಂಧಿಸಿದ ಸ್ವಾರಸ್ಯಕರ ವಿಷಯಗಳನ್ನು ವರಾಹಮಿಹಿರನ *ಬೃಹತ್‌ಸಂಹಿತೆ* ಈ ಕಾಲದಲ್ಲಿ ರಚನೆಯಾಗಿತ್ತು. ಲೋಹೋದ್ಯಮದಲ್ಲಿ ಗಣನೀಯ ಪ್ರಗತಿ ಸಾಧಿಸಿದ್ದು, ಆ ಕಾಲಕ್ಕೆ ರಸಾಯನ ಶಾಸ್ತ್ರದ ನಿಯಮಗಳ ಅರಿವೂ ಮುಖ್ಯವಾಗಿದ್ದಿತು. ಉಕ್ಕು ಕರಗಿಸುವ ಕಲೆಯನ್ನು, ಗಟ್ಟಿ ಬಣ್ಣಗಳನ್ನು ತಯಾರಿಸುವ, ವಸ್ತ್ರಗಳನ್ನು ನೇಯುವ, ಚರ್ಮದ ವಸ್ತುಗಳನ್ನು ಸಂಸ್ಕರಿಸುವ ಹಾಗೂ ನಾನಾ ಔಷಧಿಗಳನ್ನು ತಯಾರಿಸುವ ಕೌಶಲ ಪಡೆದಿದ್ದರು. ರಸಾಯನಶಾಸ್ತ್ರ ಹಾಗೂ ರಸತಂತ್ರ ಕ್ಷೇತ್ರಗಳಲ್ಲಿ ಮೊದಲ ವೈಜ್ಞಾನಿಕ ಗ್ರಂಥಗಳು ಗುಪ್ತರ ಕಾಲದಲ್ಲಿ ರಚಿಸಲ್ಪಟ್ಟವು. ಇವುಗಳಲ್ಲಿ ಕೆಲವು ಖ್ಯಾತ ತತ್ವಜ್ಞಾನಿ ನಾಗಾರ್ಜುನನಿಂದ ರಚಿತವಾದವುಗಳು. ವೈದ್ಯ ವಿಜ್ಞಾನಿಗಳಾದ 'ಚರಕ' ಹಾಗೂ 'ಸುಶ್ರುತ' ರಚಿಸಿದ ವೈದ್ಯ ವಿಜ್ಞಾನ ಗ್ರಂಥಗಳು ಇಂದಿಗೂ ಉಳಿದುಬಂದಿವೆ.

ಕಬ್ಬಿಣ ಹಾಗೂ ಕಂಚು ಲೋಹಗಾರಿಕೆಯಲ್ಲಿ ಗುಪ್ತರ ಕಾಲದ ಕುಶಲ ಕಸುಬುಗಾರರು ಪರಿಣತಿ ಪಡೆದಿರುವುದಕ್ಕೆ ಆ ಕಾಲಕ್ಕೆ ಸೇರಿದ ಹಲವಾರು ಕಂಚಿನ ಬುದ್ಧ ಪ್ರತಿಮೆಗಳು ಸಾಕ್ಷಿ. ಮೆಹ್ರೌಲಿಯ ಕಬ್ಬಿಣದ ಸ್ತಂಭವು ಹದಿನೈದು ಶತಮಾನಗಳು ಉರುಳಿದರೂ ತುಕ್ಕು ಹಿಡಿದಿಲ್ಲ. ಇದು ಗುಪ್ತರ ಕೊಡುಗೆಯಾಗಿದ್ದು, ಆ ಕಾಲದ ಕಸುಬುಗಾರರ ತಾಂತ್ರಿಕ ಕೌಶಲ್ಯತೆಗೆ ಜ್ವಲಂತ ಸಾಕ್ಷಿ. ಕಳೆದ ಒಂದು ಶತಮಾನದ ಹಿಂದಿನವರೆಗೂ ಇಂತಹ ಕಬ್ಬಿಣದ ಸ್ತಂಭವನ್ನು ಪಶ್ಚಿಮ ದೇಶಗಳ ಯಾವ ಕುಲುಮೆಯೂ ತಯಾರಿಸುವ ಸಾಧ್ಯತೆ ಇರಲಿಲ್ಲ. ಅಂತಹ ಅದ್ಭುತ ತಾಂತ್ರಿಕ ತಿಳಿವಳಿಕೆ ಗುಪ್ತರ ಕಾಲದ ಕಸುಬುಗಾರರಿಗೆ ಇತ್ತು ಎಂಬುದು ಹೆಮ್ಮೆಯ ಸಂಗತಿ.

ಇವೆಲ್ಲವನ್ನು ಗಮನಿಸುವಾಗ ಗುಪ್ತರ ಕಾಲದ ಕಲೆ, ಸಾಹಿತ್ಯ, ವಿಜ್ಞಾನ ಮತ್ತು ತಂತ್ರಜ್ಞಾನ ರಂಗಗಳಲ್ಲಿ ನಿಜವಾಗಿಯೂ 'ಸುವರ್ಣಯುಗ'ದ ಕಲ್ಪನೆ ಮತ್ತು ಲಕ್ಷಣಗಳನ್ನು ವಿಪುಲವಾಗಿ ಕಾಣಬಹುದು ಎಂದು ಹೇಳಲಾಗಿದೆ.

**ಹೆಚ್ಚಿನ ವಿಷಯ**

[ಅಲ್ಲದೆ ಗುಪ್ತರ ಕಾಲವನ್ನು ಬಹುತೇಕ ಎಲ್ಲಾ ಪಠ್ಯಪುಸ್ತಕಗಳಲ್ಲಿ 'ಹಿಂದೂ ಪುನರುಜ್ಜೀವನ ಯುಗ'ವೆಂದು ಬಣ್ಣಿಸಲಾಗಿದೆ. ಇದು ವಾಸ್ತವಕ್ಕೆ ತುಂಬಾ ದೂರವಾಗಿದೆ. ಗುಪ್ತರ ಮಹತ್ವವಾದ ವಾಸ್ತುಶಿಲ್ಪ ಕಲೆಗಳಿಗೆ ಪ್ರತೀಕವಾದವುಗಳು ಸಾರಾನಾಥನಲ್ಲಿ ಕಂಡು ಬರುವ ಬುದ್ಧ ಪ್ರತಿಮೆಗಳು, ಅಜಂತದಲ್ಲಿ ಕಾಣುವ ಉತ್ತಮ ಚಿತ್ರಕಲಾ ಕೃತಿಗಳು ಬೌದ್ಧ ಧರ್ಮದ ಕುರಿತು ಚಿತ್ರಣ ನೀಡುತ್ತವೆ. ಖಗೋಳಶಾಸ್ತ್ರ, ಭೂಗೋಳಶಾಸ್ತ್ರ ಮತ್ತು ಗಣಿತಶಾಸ್ತ್ರಗಳ ಕುರಿತು ಆರ್ಯಭಟ ಮತ್ತು ವರಾಹಮಿಹಿರ ಇನ್ನಿತರರು ಬರೆದ ಬರವಣಿಗೆಗಳಲ್ಲಿ ಭಾಗಶಃ [illegible] ಪ್ರಾದೇಶಿಕ ಸಂಪ್ರದಾಯಗಳಿಗೆ ಪ್ರಾತಿನಿಧ್ಯ ನೀಡಲಾಗಿತ್ತು. ಪ್ರಸಿದ್ಧ ಖಗೋಳಶಾಸ್ತ್ರಜ್ಞ

ವರಾಹಮಿಹಿರ ರಚಿಸಿದ ಐದು ಸಿದ್ಧಾಂತಶಾಸ್ತ್ರಗಳಲ್ಲಿ ಒಂದಾದ *ರೋಮಕಸಿದ್ಧಾಂತವು* ರೋಮನ್ ಪದ್ಧತಿಯನ್ನು ಶಿಫಾರಸ್ಸು ಮಾಡುತ್ತದೆ. *ಪೌಲಿಶ ಸಿದ್ಧಾಂತ* ಎಂಬ ಇನ್ನೊಂದು ಸಿದ್ಧಾಂತವು ಅಲೆಕ್ಸಾಂಡ್ರಿಯಾದ ಖಗೋಳಶಾಸ್ತ್ರಜ್ಞನಾದ ಪೌಲ್‌ನ ಸಂಗ್ರಹಣಾ ಬರವಣಿಗೆ ಎಂದು ಹೇಳುತ್ತದೆ. 'ಹಿಂದೂ ಪುನರುಜ್ಜೀವನ'ದ ಮುಖ್ಯವಾದ ಅಂಶ ಪ್ರತಿಬಿಂಬಿಸುವುದು ಕಾಳಿದಾಸನ ಬರವಣಿಗೆಗಳಲ್ಲಿ, ಪುರಾಣಗಳಲ್ಲಿ ಮತ್ತು ಆ ಕಾಲದಲ್ಲಿ ಚಲಾವಣೆಗೆ ತಂದ ನಾಣ್ಯಗಳು ಹಾಗೂ ಬರೆಸಿದ ಶಿಲಾಶಾಸನಗಳಲ್ಲಿ ಮಾತ್ರ. ಇವುಗಳು ಗುಪ್ತ ಚಕ್ರವರ್ತಿಗಳು ಬ್ರಾಹ್ಮಣ ಪಂಥಗಳಾದ ವೈಷ್ಣವ ಮತ್ತು ಶೈವ ಪಂಥಗಳನ್ನು ಪ್ರೋತ್ಸಾಹಿಸಿರುವ ಬಗ್ಗೆ ಸೂಚಿಸುತ್ತವೆ. ಆದರೆ ಕಾಳಿದಾಸನ ಬರವಣಿಗೆಗಳು ಬುದ್ಧಿಗುಣ ಸಂಪನ್ನದ ಮರು ಹುಟ್ಟುವಿಕೆ ಎಂದಾಗಲಿ, ಅಥವಾ ಸಾಹಿತ್ಯ ಚಟುವಟಿಕೆಗಳಲ್ಲಾದ ಪುನರುಜ್ಜೀವನವೆಂದಾಗಲಿ ಹೇಳಲಾಗದು. ಅದರ ಬದಲಾಗಿ ಅವುಗಳು ಆ ಕಾಲದಲ್ಲಿ ಅಭಿವೃದ್ಧಿಗೊಂಡ ಸಾಹಿತ್ಯದ ವಿವಿಧ ಪ್ರಕಾರಗಳು ಮತ್ತು ಶೈಲಿಗಳು ಎಂದಷ್ಟೇ ಹೇಳಬೇಕು. ಇಂತಹ ಶೈಲಿ ಹಿಂದೆಯೂ ಇತ್ತು. ಆದರೆ ಗುಪ್ತರ ಕಾಲದಲ್ಲಿ ಅವುಗಳು ವಿವಿಧ ಆಯಾಮವನ್ನು ಪಡೆದು ಮತ್ತಷ್ಟು ಪ್ರಬುದ್ಧವಾಗಿದ್ದವು. ಪುರಾಣಗಳು ಗುಪ್ತರಿಗಿಂತ ಮೊದಲು ಇದ್ದ ಸಾಹಿತ್ಯಿಕ ಪ್ರಕಾರಗಳು. ಆದರೆ ಗುಪ್ತರ ಕಾಲದಲ್ಲಿ ಅವುಗಳನ್ನು ಸಂಪಾದಿಸಿ ಮಂಡಿಸಲಾಯಿತು ಅಷ್ಟೆ. 'ಹಿಂದು' ಎಂಬ ಶಬ್ದವು ಕೂಡ ಇಲ್ಲಿ ಅಪ್ರಸ್ತುತ. ಏಕೆಂದರೆ ಈ ಪದವನ್ನು ಮೊದಲು ಗುಪ್ತೋತ್ತರ ಕಾಲದ ನಂತರ ಅರಬ್ ವರ್ತಕರು ಬಳಸಿರುವುದು. ಅದೂ ಕೂಡ ಭಾರತದವರನ್ನು ಗುರುತಿಸಲು ಹಿಂದು ಎಂಬ ಶಬ್ದ ಬಳಕೆಯಾಯ್ತು. ಪ್ರಾಚೀನ ಭಾರತೀಯರಿಗೆ ತಾವು ಹಿಂದೂಗಳೆಂಬ ಭಾವನೆಯು ಸಹ ಇರಲಿಲ್ಲ. ಹೀಗಾಗಿ 'ಹಿಂದೂ ಪುನರುಜ್ಜೀವನ' ಎಂಬ ಪದ ವಾಸ್ತವತೆಗೆ ಬಹಳ ದೂರವಾದುದು.

ಇನ್ನೊಂದು ಅಂಶವನ್ನು ಈ ಪುಸ್ತಕಗಳಲ್ಲಿ ಕಾಣಬಹುದು. ಅದೇನೆಂದರೆ ನಿರ್ಲಕ್ಷ್ಯಾರ್ಹ ಚಕ್ರವರ್ತಿಯಾದ ರಾಮಗುಪ್ತನನ್ನು ಹೊರತುಪಡಿಸಿ ಉಳಿದ ಎಲ್ಲಾ ಗುಪ್ತ ಚಕ್ರವರ್ತಿಗಳ ಸಾಧನೆಯನ್ನು ಆದರ್ಶೀಕರಿಸಿ ಚಿತ್ರಿಸಲಾಗಿದೆ. ಇವರುಗಳು ಮಧ್ಯ ಏಷ್ಯಾದಿಂದ ದಂಡೆತ್ತಿ ಬಂದಿದ್ದರು ಎನ್ನಲಾದ ಶಕರು ಮತ್ತು ಹೂಣರ ವಿರುದ್ಧ ಹೋರಾಡಿದ್ದು, ತಮ್ಮ ದೇಶದ ರಕ್ಷಣೆಗೆ ಪ್ರಾಣವನ್ನೇ ತ್ಯಾಗ ಮಾಡಿದ 'ರಾಷ್ಟ್ರವಾದಿ'ಗಳೆಂದು ಬಿಂಬಿಸಲಾಯಿತು. ಜೊತೆಗೆ 'ರಾಷ್ಟ್ರೀಯತೆ' ಮತ್ತು ಸ್ವದೇಶಾಭಿಮಾನವನ್ನು ಪುನರ್ಶ್ಚೇತನಗೊಳಿಸಿದವರೆನ್ನಲಾಗಿದೆ. ಇದು ಕೂಡ ತಪ್ಪು ಕಲ್ಪನೆ. ಏಕೆಂದರೆ ರಾಷ್ಟ್ರವಾದದ ಕಲ್ಪನೆಯೇ ಆಧುನಿಕವಾದುದು. ನಾವು ಗಮನಿಸಬೇಕಾದ ವಿಚಾರವೇನೆಂದರೆ, ಗುಪ್ತ ಸಾಮ್ರಾಜ್ಯ ಕುಸಿದು ಬಿದ್ದ ಮರುಕ್ಷಣದಿಂದಲೇ ಅವರು 'ಮರೆತುಹೋದ ಸಾಮ್ರಾಜ್ಯ'ದ ಸಾಲಿಗೆ ಸೇರಿಹೋದರು. ೧೯ನೇ ಶತಮಾನದಲ್ಲಿ ಅವರ ದಾಖಲೆಗಳನ್ನು ಓದಲ್ಪಡುವವರೆಗೆ ಗುಪ್ತರ ಕುರಿತು ಯಾವ ನೆನಪೂ ಇರಲಿಲ್ಲ. ಈ ದಾಖಲೆಗಳನ್ನು, ಆಕರಗಳನ್ನು ರಾಷ್ಟ್ರೀಯವಾದಿ ಇತಿಹಾಸಕಾರರು ಮತ್ತು ವಿದ್ವಾಂಸರು ಒಂದು ಅನಿವಾರ್ಯ ಸಂದರ್ಭದಲ್ಲಿ ಗುಪ್ತರ ಇತಿಹಾಸವನ್ನು ಮರು ನಿರೂಪಿಸುತ್ತಾರೆ. ಅದೂ ಕೂಡ ಬ್ರಿಟಿಷರು ಮಾಡಿದ ಆರೋಪಗಳಾದ - ಭಾರತಕ್ಕೆ ತನ್ನದೇ ಸ್ವತಂತ್ರ ಇತಿಹಾಸವಿಲ್ಲ, ಏನಿದ್ದರೂ ಇಲ್ಲಿ ನಡೆದಿರುವುದು ನಿರಂತರ ಆಕ್ರಮಣಗಳು ಮತ್ತು ಧಾಳಿಗಳು. ಅದು ಬಿಟ್ಟರೆ ಇಲ್ಲಿಯ

ಜನಕ್ಕೆ ಬೇರೆ ಯಾವುದೇ ಅನುಭವವಿಲ್ಲವೆಂದು ಆರೋಪ ಹೊರಿಸಿದರು. ಇದಕ್ಕೆ ಪರ್ಯಾಯವಾದ ಇತಿಹಾಸ ನಿರೂಪಣೆ ಬ್ರಿಟಿಷ್ ಸಾಮ್ರಾಜ್ಯಶಾಹಿ ನಿಲುವನ್ನು ಖಂಡಿಸಲು ರಾಷ್ಟ್ರೀಯವಾದಿ ವಿದ್ವಾಂಸರು ರಚಿಸತೊಡಗಿದರು. ಇದರಲ್ಲಿ ಆಡಂಬರವಿದೆ, ಉತ್ಪ್ರೇಕ್ಷೆಗಳಿವೆ. ಇಂತಹ ಇತಿಹಾಸ ರಚನೆಗೂ ವಾಸ್ತವಕ್ಕೂ ತುಂಬಾ ವ್ಯತ್ಯಾಸಗಳಿವೆ. ಭಾರತದ ರಾಷ್ಟ್ರೀಯವಾದವನ್ನು ಗುಪ್ತ ಸಾಮ್ರಾಜ್ಯ ಪುನರ್ಶ್ಚೇತನಗೊಳಿಸಿದೆ ಎಂದು ಹೇಳುವುದಕ್ಕಿಂತಲೂ, ರಾಷ್ಟ್ರೀಯವಾದ ಹಾಗೂ ಸ್ವದೇಶಾಭಿಮಾನ ಗುಪ್ತ ಸಾಮ್ರಾಜ್ಯವನ್ನು ಪುನರ್ಶ್ಚೇತನಗೊಳಿಸಿತ್ತು ಎಂಬುದರಲ್ಲಿ ಅರ್ಥವಿದೆ.]

ಕೆಲವು ಇತಿಹಾಸಕಾರರು ಗುಪ್ತರ ಆಳ್ವಿಕೆಯ ಕಾಲವು ಭಾರತದ ಇತಿಹಾಸದ 'ಸುವರ್ಣಯುಗ'ವನ್ನು ಪ್ರತಿನಿಧಿಸುತ್ತದೆ ಎಂದೂ ವರ್ಣಿಸಿದರು. ಆದರೆ ಅದೇ ಗುಪ್ತರ ಕಾಲದಲ್ಲಿ ಅಸ್ಪೃಶ್ಯತೆಯ ವಿವಿಧ ಮುಖಗಳು ಕಂಡುಬಂದವು. ಮಹಿಳೆಗೆ ಪುರುಷ ಪ್ರಧಾನ ಸಮಾಜ ಎಲ್ಲಾ ಹಕ್ಕುಗಳನ್ನು ತ್ಯಜಿಸಲಾಗಿತ್ತು. ಜಾತಿ ಜಟಿಲತೆಯು ಸಂಕೀರ್ಣಗೊಂಡುದು ಗುಪ್ತರ ಕಾಲದಲ್ಲಿ ಎನ್ನಬಹುದಾದರೂ, ವರ್ಣಾಧಾರಿತ ಸಮಾಜವನ್ನು ನಿರ್ವಹಿಸಲು ಧರ್ಮವನ್ನು ಆಯುಧವನ್ನಾಗಿ ಬಳಸಿಕೊಳ್ಳಲಾಯಿತು. ಸಮಾಜದ ಮೇಲ್ವರ್ಗದವರಿಗೆ ಚರಿತ್ರೆಯ ಎಲ್ಲಾ ಅವಧಿಗಳೂ 'ಸುವರ್ಣಯುಗ'ಗಳೇ. ಆದರೆ ಸಾಮಾನ್ಯ ಜನರಿಗಲ್ಲ. ಶ್ರೀಸಾಮಾನ್ಯರ 'ಸುವರ್ಣಯುಗ'ವು ಭೂತಕಾಲದಲ್ಲಿಲ್ಲ, ಭವಿಷ್ಯತ್ ಕಾಲದಲ್ಲಿರಬಹುದೆ?

## ಹೆಚ್ಚಿನ ಓದಿಗಾಗಿ


೧. ಅಲ್‌ಚಿನ್ ಬಿ. ಮತ್ತು ಅಲ್‌ಚಿನ್ ಆರ್. (೧೯೮೨) - ದಿ ರೈಸ್ ಆಫ್ ಸಿವಿಲೈಜೇಶನ್ ಇನ್ ಇಂಡಿಯ ಅಂಡ್ ಪಾಕಿಸ್ತಾನ

೨. ರಾಜೇಶ್ ಕೋಚಾರ್-ವೇದಿಕ್ ಪೀಪಲ್ : ದೈಯರ್ ಹಿಸ್ಟರಿ ಎಂಡ್ ಜಿಯಾಗ್ರಫಿ,

೩. ರೋಮಿಲಾ ಥಾಪರ್ - ಅರ್ಲಿ ಇಂಡಿಯ

೪. ಕೋಸಾಂಬಿ ಡಿ.ಡಿ - ಎನ್ ಇಂಟ್ರಡಕ್ಸನ್ ಟು ದಿ ಸ್ಟಡಿ ಆಫ್ ಇಂಡಿಯನ್ ಹಿಸ್ಟರಿ

೫. ಕೋಸಾಂಬಿ ಡಿ.ಡಿ - ಕಲ್ಚರ್ ಎಂಡ್ ಸಿವಿಲೈಜೇಶನ್ ಇನ್ ಎನ್ಸಿಯಂಟ್ ಇಂಡಿಯ ಇನ್ ಹಿಸ್ಟಾರಿಕಲ್ ಔಟ್‌ಲೈನ್

೬. ನಿಹಾರಂಜನ್ ರೇ ಮತ್ತು ಇತರರು - ಎ ಸೋರ್ಸ್ ಬುಕ್ ಆಫ್ ಇಂಡಿಯನ್ ಸಿವಿಲೈಜೇಶನ್

೭. ರಾಯ್‌ಚೌಧುರಿ ಎಚ್ - ಪೊಲಿಟಿಕಲ್ ಹಿಸ್ಟರಿ ಆಫ್ ಎನ್ಸಿಯಂಟ್ ಇಂಡಿಯ ಫಾರ್ಮೇಷನ್ ಇನ್ ಏನ್ಸಿಯಂಟ್ ಇಂಡಿಯ

೮. ಶರ್ಮ ಆರ್. ಎಸ್ - ಪ್ರಾಚೀನ ಭಾರತ (ಅನು: ಎನ್.ಪಿ. ಶಂಕರನಾರಾಯಣ ರಾವ್)

೯. ಗೋಯಲ್ ಎಸ್.ಆರ್ - ಹಿಸ್ಟರಿ ಆಫ್ ದಿ ಇಂಪಿರಿಯಲ್ ಗುಪ್ತಾಸ್

೧೦. ಶರ್ಮ ಆರ್. ಎಸ್ - ಮೆಟಿರೀಯಲ್ ಕಲ್ಚರ್ ಅಂಡ್ ಸೋಶಿಯಲ್ ಫಾರ್ಮೇಶನ್ ಇನ್ ಎನ್ಸಿಯಂಟ್ ಇಂಡಿಯ

## ಮಾದರಿ ಪ್ರಶ್ನೆಗಳು

**I. ಒಂದು ವಾಕ್ಯದಲ್ಲಿ ಉತ್ತರಿಸಿ**

೧. ಹರಪ್ಪ ಸಂಸ್ಕೃತಿಗೆ ಸೇರಿದ ಬೃಹತ್ ಸ್ನಾನಗೃಹ ಯಾವ ನಗರದಲ್ಲಿದೆ?
೨. ಹರಪ್ಪ ಸಂಸ್ಕೃತಿಯನ್ನು ಯಾವಾಗ ಕಂಡುಹಿಡಿಯಲಾಯಿತು?
೩. ಹರಪ್ಪ ಸಂಸ್ಕೃತಿಯ ವಸತಿಗಳು ಭಾರತದ ಯಾವ ಭಾಗದಲ್ಲಿವೆ?
೪. 'ಋಗ್ವೇದ' ಯಾವ ಕಾಲಕ್ಕೆ ಸೇರಿದೆ?
೫. 'ಆರ್ಯರು' ಎಂದರೆ ಯಾರು?
೬. 'ಗವಿಷ್ಠಿ' ಎಂದರೆ ಏನು?
೭. 'ವೈಜಯಂತಿ' ಎಂಬ ಹೆಸರಿನ ಪಟ್ಟಣ ಯಾವುದು?
೮. 'ಪ್ರಯಾಗ' ಯಾವ ಕಾಲಕ್ಕೆ ಸೇರಿದ್ದು?
೯. ಜೈನ ಧರ್ಮದ ಸ್ಥಾಪಕ ಯಾರು?
೧೦. 'ಭಾರತದ ನೆಪೋಲಿಯನ್' ಎಂದರೆ ಯಾರು?
೧೧. ಗುಪ್ತ ಸಾಮ್ರಾಜ್ಯದ ಸ್ಥಾಪಕ ಯಾರು?
೧೨. ಅಲಹಾಬಾದ್ ಸ್ತಂಭ ಶಾಸನವನ್ನು ಬರೆಸಿದ ಕವಿ ಯಾರು?
೧೩. 'ಅರ್ಥಶಾಸ್ತ್ರ' ಗ್ರಂಥದ ಕರ್ತೃ ಯಾರು?
೧೪. ಕೌಟಿಲ್ಯನ ಇನ್ನೊಂದು ಹೆಸರೇನು?
೧೫. 'ಇಂಡಿಕಾ' ಗ್ರಂಥವನ್ನು ಬರೆದವರು ಯಾರು?

**II. ಎರಡು ವಾಕ್ಯಗಳಲ್ಲಿ ಉತ್ತರಿಸಿ**

೧. ಹರಪ್ಪ ಸಂಸ್ಕೃತಿಯ ಎರಡು ಪಟ್ಟಣಗಳನ್ನು ಹೆಸರಿಸಿ.
೨. ಸಿಂಧೂ ನದಿಯ ಎರಡು ಉಪನದಿಗಳನ್ನು ಸೂಚಿಸಿ.
೩. ವೇದಗಳ ಕಾಲದ ಎರಡು ಸಭೆಗಳು ಯಾವುವು?
೪. ದ್ರಾವಿಡರು ಎಂದರೆ ಯಾರು?
೫. ವೇದಗಳ ಕಾಲದ ಎರಡು ದೇವತೆಗಳನ್ನು ಸೂಚಿಸಿ.
೬. ಬೌದ್ಧ ಧರ್ಮದ ಎರಡು ವಿಭಜನೆಗಳನ್ನು ತಿಳಿಸಿ.
೭. ಕ್ರಿ.ಪೂ. ಆರನೆಯ ಶತಮಾನದಲ್ಲಿ ಹುಟ್ಟಿಕೊಂಡ ಎರಡು ಧರ್ಮಗಳನ್ನು ಸೂಚಿಸಿ.
೮. ಜೈನ ಧರ್ಮದ ಎರಡು ಪಂಥಗಳು ಯಾವುವು?
೯. ಗುಪ್ತರ ಕಾಲದ ಎರಡು ಸಾಹಿತ್ಯಕ ಆಕರಗಳನ್ನು ತಿಳಿಸಿ.
೧೦. 'ಪ್ರಯಾಗ' ಮತ್ತು 'ಸಾಕೇತ'ಗಳ ಈಗಿನ ಹೆಸರುಗಳನ್ನು ಸೂಚಿಸಿ.
೧೧. ಮೌರ್ಯರ ಕಾಲದ ಎರಡು ಗ್ರಂಥಗಳು ಯಾವುವು?
೧೨. ಅಶೋಕನ ಶಾಸನಗಳು ದೊರೆತ ಎರಡು ಸ್ಥಳಗಳನ್ನು ತಿಳಿಸಿ.
೧೩. ಮೌರ್ಯರ ಕಾಲದ ಎರಡು ಪ್ರಸಿದ್ಧ ಹೆದ್ದಾರಿಗಳನ್ನು ತಿಳಿಸಿ.

**III. ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ**

೧. ಹರಪ್ಪ ಕಾಲದ ನಗರ ಯೋಜನೆಗಳ ಬಗ್ಗೆ ವಿವರಿಸಿ.
೨. ಹರಪ್ಪ ಕಾಲದ ಧಾರ್ಮಿಕ ನಂಬಿಕೆಗಳನ್ನು ಚರ್ಚಿಸಿ.
೩. ಹರಪ್ಪ ಸಂಸ್ಕೃತಿಯ ಅವನತಿಗೆ ಕಾರಣಗಳನ್ನು ಸೂಚಿಸಿ.
೪. ಆರ್ಯರ ಮೂಲದ ಬಗ್ಗೆ ಚರ್ಚಿಸಿ.
೫. ಆರ್ಯ-ದ್ರಾವಿಡ ಜನಾಂಗವಾದವನ್ನು ವಿವರಿಸಿ.
೬. ವೇದಕಾಲೀನ ಕಸುಬುಗಳ ಬಗ್ಗೆ ತಿಳಿಸಿ.
೭. ಜೈನ ಮತ್ತು ಬೌದ್ಧ ಧರ್ಮಗಳು ಉದಯವಾಗಲು ಇದ್ದ ಹಿನ್ನೆಲೆಯನ್ನು ಚರ್ಚಿಸಿ.
೮. ಬೌದ್ಧ ಧರ್ಮದ ಬೋಧನೆಯ ಲಕ್ಷಣಗಳನ್ನು ತಿಳಿಸಿ.
೯. ಗುಪ್ತರ ಸಾಮ್ರಾಜ್ಯ ಸ್ಥಾಪನೆಗೆ ಚಂದ್ರಗುಪ್ತನ ಕೊಡುಗೆಗಳೇನು?
೧೦. ಸಮುದ್ರಗುಪ್ತನ ಕಾಲದ ಅಲಹಾಬಾದ್ ಸ್ತಂಭದ ಪ್ರಾಮುಖ್ಯತೆಗಳೇನು?
೧೧. ಚಂದ್ರಗುಪ್ತ ಮೌರ್ಯನ ಕಾಲದ ಆಡಳಿತ ವ್ಯವಸ್ಥೆಯನ್ನು ಚಿತ್ರಿಸಿ.
೧೨. ಅಶೋಕನ ಧರ್ಮ ಶಾಸನಗಳ ಬಗ್ಗೆ ಬರೆಯಿರಿ.

**IV. ೩೦ ರಿಂದ ೪೦ ವಾಕ್ಯಗಳಲ್ಲಿ ಉತ್ತರಿಸಿ**

೧. ಹರಪ್ಪ, ಮಹೆಂಜೊದಾರೊ ನಗರಗಳ ಮಾದರಿಗಳು ಯಾವುವು? ಅವುಗಳ ಮುಖ್ಯ ಲಕ್ಷಣಗಳೇನು?
೨. ಹರಪ್ಪ ಸಂಸ್ಕೃತಿಯ ಜನರ ವೈಜ್ಞಾನಿಕ ರಂಗದ ಸಾಧನೆಗಳನ್ನು ವಿವರಿಸಿ.
೩. ವೇದಕಾಲೀನ ಆಡಳಿತ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಚರ್ಚಿಸಿ.
೪. ಉತ್ತರ ವೇದಕಾಲದ ವರ್ಣವ್ಯವಸ್ಥೆಯನ್ನು ವಿವರಿಸಿ.
೫. ಉತ್ತರ ವೇದಕಾಲದಲ್ಲಿ ಕೃಷಿ ಸಮಾಜದ ಉಗಮಕ್ಕೆ ಕಾರಣವಾದ ಹಿನ್ನೆಲೆಯನ್ನು ತಿಳಿಸಿ.
೬. ಬೌದ್ಧ ಮತ್ತು ಜೈನ ಧರ್ಮಗಳನ್ನು ಸುಧಾರಣ ಚಳವಳಿಗಳೆಂದು ಏಕೆ ಕರೆಯುತ್ತಾರೆ? ವಿವರಿಸಿ.
೭. ಜೈನ ಧರ್ಮದ ಲಕ್ಷಣಗಳನ್ನು ತಿಳಿಸಿ. ಭಾರತದ ಸಮಾಜದ ಮೇಲೆ ಅದರ ಪರಿಣಾಮಗಳೇನು? ವಿವರಿಸಿ.
೮. ಕ್ರಿ.ಪೂ. ಆರನೆಯ ಶತಮಾನದಲ್ಲಿ ಧಾರ್ಮಿಕ ಚಳವಳಿ ಉಗಮವಾಗಲು ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನು ಚರ್ಚಿಸಿ.
೯. ಗುಪ್ತರ ಕಾಲವನ್ನು 'ಸುವರ್ಣ ಯುಗ' ಎಂದು ಕರೆಯಲು ಸಾಧ್ಯವೇ? ಪರಿಶೀಲಿಸಿ.
೧೦. ಸಮುದ್ರ ಗುಪ್ತನ ಕೊಡುಗೆಗಳೇನು? ವಿವರಿಸಿ.
೧೧. ಇತಿಹಾಸದಲ್ಲಿ ಮೌರ್ಯರ ಸ್ಥಾನವನ್ನು ಕುರಿತು ಬರೆಯಿರಿ.
೧೨. ಅಶೋಕನ ಮೇಲೆ ಕಳಿಂಗ ಯುದ್ಧವು ಉಂಟು ಮಾಡಿದ ಪರಿಣಾಮಗಳೇನು? ವಿವರಿಸಿ.

## V. ಹೆಚ್ಚಿನ ಜ್ಞಾನಕ್ಕಾಗಿ ಕಾರ್ಯ-ಯೋಜನೆಗಳು (Assignments/Projects)

೧. ಭಾರತದ ನಕ್ಷೆಯಲ್ಲಿ ಹರಪ್ಪ ಸಂಸ್ಕೃತಿಯನ್ನು ಪ್ರತಿನಿಧಿಸುವ ಸ್ಥಳಗಳನ್ನು ಗುರುತಿಸಿ, ಸಂಕ್ಷಿಪ್ತ ವಿವರಣೆ ನೀಡಿ.

೨. ಸಿಂಧೂ ನದಿ ಬಯಲಿನ ನಾಗರಿಕತೆಯನ್ನು ಪ್ರತಿಬಿಂಬಿಸುವ ಚಿತ್ರಗಳನ್ನು ಪತ್ರಿಕೆ ಹಾಗೂ ನಿಯತಕಾಲಿಕಗಳ ಮುಖೇನ ಸಂಗ್ರಹಿಸಿ.

೩. ಋಗ್ವೇದ ಕಾಲಕ್ಕೂ, ಅನಂತರದ ವೇದಗಳ ಕಾಲಕ್ಕೂ ಇದ್ದಂಥ ಪ್ರಮುಖ ವ್ಯತ್ಯಾಸಗಳನ್ನು ಗುರುತಿಸಿ.

೪. ಹರಪ್ಪ ಹಾಗೂ ವೇದಗಳ ಕಾಲದ ಸಾಂಸ್ಕೃತಿಕ ವ್ಯತ್ಯಾಸಗಳನ್ನು ಪಟ್ಟಿ ಮಾಡಿ.

೫. ಬೌದ್ಧ ಹಾಗೂ ಜೈನ ಧರ್ಮಕ್ಕೆ ಸಂಬಂಧಿಸಿದ ಸ್ಮಾರಕಗಳ ಚಿತ್ರಗಳನ್ನು ಒಂದೆಡೆ ಸಂಗ್ರಹಿಸಿ.

೬. ಈ ಹೊತ್ತಿನ ಸಂದರ್ಭಕ್ಕೆ ಬೌದ್ಧ ಹಾಗೂ ಜೈನ ಧರ್ಮದ ತತ್ವಗಳು ಎಷ್ಟು ಪ್ರಸ್ತುತ ಆಗುತ್ತವೆ ಎಂಬುದನ್ನು ಪರಿಶೀಲಿಸಿ.

೭. ಸಾಂಚಿಯ ಸ್ತೂಪ ಹಾಗೂ ಸಾರನಾಥದ ಸ್ತಂಭಗಳ ಚಿತ್ರಗಳನ್ನು ಸಂಗ್ರಹಿಸಿ ವಿವರಗಳನ್ನು ನೀಡಿ.

೮. ಭಾರತದ ನಕಾಶೆಯಲ್ಲಿ ಅಶೋಕನ ಸಾಮ್ರಾಜ್ಯದ ವಿಸ್ತರಣೆ ಹಾಗೂ ಅವನ ಶಿಲಾಶಾಸನಗಳು ದೊರೆತ ಸ್ಥಳಗಳನ್ನು ಗುರುತಿಸುವುದರ ಮೂಲಕ ಸಂಕ್ಷಿಪ್ತ ವಿವರಣೆ ನೀಡಿ.

೯. ಗುಪ್ತರ 'ಸುವರ್ಣ ಯುಗ'ದ ಕಾಲವನ್ನು ಕಾರ್ಯ-ಯೋಜನೆಯ ಮುಖೇನ ನಿರೂಪಿಸಿ.

೧೦. ಕಾಳಿದಾಸನ ನಾಟಕಗಳಲ್ಲಿ ಚಿತ್ರಿತವಾಗಿರುವ ಅಂದಿನ ಚಿತ್ರಣವನ್ನು ನಿರೂಪಿಸಿ.

೧೧. ಗುಪ್ತರ ಕಾಲದ ಸ್ಮಾರಕ, ಅವಶೇಷಗಳ ಚಿತ್ರಗಳನ್ನು ಸಂಗ್ರಹಿಸಿ.

ಅಧ್ಯಾಯ ೩

# ಮಧ್ಯಕಾಲೀನ ಭಾರತ

## ೩.೧ ಅಲ್ಲಾವುದ್ದೀನ್ ಖಿಲ್ಜಿಯ ಆಕ್ರಮಣಗಳು ಮತ್ತು ಸಾಧನೆಗಳು

ಗುಲಾಮಿ ಸಂತತಿಯನ್ನು ಕೊನೆಗೊಳಿಸಿ ದೆಹಲಿಯ ಅಧಿಕಾರವನ್ನು ತಮ್ಮ ವಶಕ್ಕೆ ಪಡೆದುಕೊಂಡು ಅಧಿಕಾರಕ್ಕೆ ಬಂದ ಎರಡನೆಯ ವಂಶಾವಳಿ ಖಿಲ್ಜಿ ವಂಶಾವಳಿ. ಖಿಲ್ಜಿ ವಂಶಾವಳಿಯ ಸ್ಥಾಪಕ ಜಲಾಲುದ್ದೀನ್ ಖಿಲ್ಜಿ. ಇವನು 'ಖಿಲ್ಜಿ ಕ್ರಾಂತಿ'ಯನ್ನು ಪ್ರಾರಂಭಿಸಿ ಗುಲಾಮಿ ಸಂತತಿಯ ಅಸ್ಥಿಭಾರವನ್ನು ಅಳಿಸಿಹಾಕಿದನು. ಈ ಅಧಿಕಾರದ ಹಸ್ತಾಂತರವನ್ನು ತರುವುದರಲ್ಲಿ ರಾಜಕೀಯವಾಗಿ, ಆಡಳಿತಾತ್ಮಕವಾಗಿ, ಜನಾಂಗೀಯವಾಗಿ ಹಾಗೂ ಸಾಂಸ್ಕೃತಿಕವಾದ ಒಂದು ಅಲೆಯನ್ನೇ ಎಬ್ಬಿಸಿದ್ದುದರಿಂದ ಇದನ್ನು 'ಖಿಲ್ಜಿ ಕ್ರಾಂತಿ' ಎಂದು ಕರೆಯಲಾಗಿದೆ. ಸಮಕಾಲೀನ ಇತಿಹಾಸಕಾರನಾದ ಜಿಯವುದ್ದೀನ್ ಬರನಿಯು "ಖಿಲ್ಜಿ ಸಂತತಿಯ ಸ್ಥಾಪಕನಾದ ಜಲಾಲುದ್ದೀನನು ತುರ್ಕಿ ಬುಡಕಟ್ಟಿಗೆ ಭಿನ್ನವಾದ ಸಂತತಿಯಿಂದ ಬಂದವನು" ಎಂದು ತಿಳಿಸುತ್ತಾನೆ.

ಜಲಾಲುದ್ದೀನ್ ಖಿಲ್ಜಿ ೧೨೯೦ ರಿಂದ ೧೨೯೬ ರವರೆಗೆ ಅಧಿಕಾರವನ್ನು ನಡೆಸಿದನು. ಇವನು ಗುಲಾಮಿ ಸಂತತಿಯ ಕೊನೆಯ ಸುಲ್ತಾನನಾದ ಕೈಖಾಬಾದ್‌ನನ್ನು ಕೊಲೆಮಾಡಿಸಿ ಖಿಲೂ ಗ್ರಾಥಿ ಎಂಬ ಕೋಟೆಯಲ್ಲಿ ಪಟ್ಟಾಭಿಷಕ್ತನಾದನು. ತನ್ನ ವೈರಿಯಾದ ದೆಹಲಿಯ ಕೊತ್ವಾಲ ಮಾಲಿಕ್ ಫಕ್ರುದ್ದೀನನು ನಿರ್ಬಂಧನಕ್ಕೆ ಗುರಿಯಾಗಿ ಇವನನ್ನು ದೆಹಲಿಯ ಸುಲ್ತಾನನಾಗುವಂತೆ ಆಹ್ವಾನಿಸಬೇಕಾಯಿತು. ಅಧಿಕಾರಕ್ಕೆ ಬಂದ ಜಲಾಲುದ್ದೀನನು ಆ ಸಮಯಕ್ಕಾಗಲೇ ಮುದುಕನಾಗಿದ್ದು ಪ್ರಾಪಂಚಿಕ ಆಸೆಗಳನ್ನು ಬಿಟ್ಟು, ಪರ ಪ್ರಪಂಚದ ಚಿಂತನೆಗಳನ್ನು ಬೆಳೆಸಿಕೊಂಡವನಾಗಿದ್ದನು. ಹೀಗಾಗಿ ತನ್ನ ಆಡಳಿತ ವ್ಯವಸ್ಥೆಯಲ್ಲಿ ಮತ್ತು ಆಕ್ರಮಣ ನೀತಿಯಲ್ಲಿ ಉದಾರವಾದವನ್ನು ಅನುಸರಿಸಿದ್ದಷ್ಟೇ ಅಲ್ಲದೆ, ಕಾನೂನು ರಕ್ಷಣೆ ಯಲ್ಲಿ ವಿಫಲನಾದನು. ಇವನ ಈ ಉದಾರನೀತಿ ಅವನ ಅಳಿಯನಾದ ಅಲ್ಲಾವುದ್ದೀನ ನಿಗೆ ಭಾಗಶಃ ತನ್ನ ಸ್ವಂತ ಅಧಿಕಾರವನ್ನು ಸ್ಥಾಪಿಸುವ ಚಿಂತನೆಯೆಡೆಗೆ ಪ್ರೇರೇಪಿಸಿತು. ದಕ್ಷಿಣದ ದೇಶವಾದ ದೇವಗಿರಿಯನ್ನು ಆಕ್ರಮಿಸಿ ಅಪಾರ ಹಣವನ್ನು ದೋಚಿ ದೆಹಲಿಗೆ ಮರಳಿಬಂದನು. ಆದರೆ ತನ್ನ ಸಂಪತ್ತನ್ನು ಸುಲ್ತಾನನಿಗೆ ನೀಡಲು ಮನಸ್ಸಿಲ್ಲದೆ ಹಾಗೂ ಸುಲ್ತಾನನು ಅನುಸರಿಸುತ್ತಿದ್ದ ಉದಾರತೆಯನ್ನು ತನ್ನ ಅನುಕೂಲಕ್ಕೆ ಪರಿವರ್ತಿಸಿಕೊಳ್ಳಲು

ಪ್ರಯತ್ನಿಸಿದನು. ತನ್ನ ಸಾಧನೆಗಳನ್ನು ಪ್ರಶಂಸಿಸಲು ಹಾಗೂ ತನ್ನನ್ನು ಗೌರವದಿಂದ ಬರಮಾಡಿಕೊಳ್ಳಲು ದೆಹಲಿಯಿಂದ ಆಚೆ ಬಂದ ಸುಲ್ತಾನ್ ಜಲಾಲುದ್ದೀನ್ ಖಿಲ್ಜಿಯ ಮೇಲೆ ಪಿತೂರಿಯನ್ನು ನಡೆಸಿ ಅವನನ್ನು ಕೊಂದು ತಾನೇ ಅಧಿಕಾರವನ್ನು ಪಡೆದುಕೊಳ್ಳಲು ಪ್ರಯತ್ನಿಸಿದನು. ಈ ಸಂಗತಿಯನ್ನು ಕುರಿತಂತೆ ಆ ಕಾಲದ ಕೆಲವು ಇತಿಹಾಸಕಾರರು ಭಿನ್ನಾಭಿಪ್ರಾಯಗಳನ್ನು ನೀಡಿದ್ದಾರೆ. ಏನೇ ಆದರೂ ಜಲಾಲುದ್ದೀನನು ೧೨೯೬ ಜುಲೈ ೩೦ ರಂದು ಕೊಲೆಯಾದನು ಮತ್ತು ಅಲ್ಲಾವುದ್ದೀನನು ತನ್ನನ್ನು ತಾನೇ ದೆಹಲಿಯ ಸುಲ್ತಾನನೆಂದು ಘೋಷಿಸಿಕೊಂಡನು.

## ಅಲ್ಲಾವುದ್ದೀನ್ ಖಿಲ್ಜಿ (ಕ್ರಿ.ಶ. ೧೨೯೬-೧೩೧೬)

ಅಲ್ಲಾವುದ್ದೀನ್ ಖಿಲ್ಜಿಯ ಮೂಲ ಹೆಸರು ಅಲಿಗುರ್ಷಪ್. ಈತನು ಸುಲ್ತಾನ್ ಜಲಾಲುದ್ದೀನ್‌ನ ಸಹೋದರ ಶಹಾಬುದ್ದೀನ್ ಮಸೂದ್‌ನ ಮಗ ಮತ್ತು ಜಲಾಲುದ್ದೀನ್‌ನ ಅಳಿಯ. ಅಲ್ಲಾವುದ್ದೀನನು ಕ್ರಿ.ಶ. ೧೨೯೬ ಅಕ್ಟೋಬರ್ ೨೨ ರಂದು "ಅಬುಲ್ ಮುಜಾಫರ್ ಸುಲ್ತಾನ್ ಅಲ್ಲಾವುದ್ದೀನಿಯಾ-ವಾ-ದಿನ್ ಮಹಮದ್ ಷಾ ಖಿಲ್ಜಿ" ಎಂಬ ಬಿರುದಿನೊಂದಿಗೆ ಸಿಂಹಾಸನವನ್ನೇರಿದನು. ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಅಲ್ಲಾವುದ್ದೀನನು ಶ್ರೇಷ್ಠ ದಿಗ್ವಿಜಯಿ ಮತ್ತು ಆಡಳಿತಗಾರ ಎಂಬುದಾಗಿ ಪ್ರಸಿದ್ಧಿಯನ್ನು ಪಡೆದಿದ್ದಾನೆ.

ಅಲ್ಲಾವುದ್ದೀನನು ಉತ್ತಮ ಶಿಕ್ಷಣವನ್ನು ಪಡೆಯದಿದ್ದರೂ ಸಹ ಯುದ್ಧ ಕಲೆಯ ಮೂಲಕ ಹೆಸರು ಗಳಿಸಿದನು. ಇವನು ಜಲಾಲುದ್ದೀನನಿಗೆ ದೆಹಲಿಯ ಸಿಂಹಾಸನವನ್ನು ಗಳಿಸುವುದರಲ್ಲಿ ಸಹಾಯಕನಾಗಿದ್ದನು. ಜಲಾಲುದ್ದೀನನು ಸುಲ್ತಾನನಾದ ನಂತರ ಅಲ್ಲಾವುದ್ದೀನನಿಗೆ ಅಮೀರ್-ಐ-ತುಜುಕ್ ಎಂಬ ಬಿರುದು ನೀಡಿದನು. ಅಲ್ಲಾವುದ್ದೀನನು ಬಲ್ಬನ್ನನ ಸೋದರಳಿಯ ಮಲಿಕ್ ಚಜ್ಜುವಿನ ದಂಗೆಯನ್ನು ದಮನಗೊಳಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದ. ಅದಕ್ಕೆ ಪ್ರತಿಫಲವಾಗಿ ಕಾರಾ ಮತ್ತು ಮಣಿಕ್‌ಪುರಗಳ ಗವರ್ನರ್ ಅಧಿಕಾರವನ್ನು ಪಡೆದುಕೊಂಡನು.

ಅಲ್ಲಾವುದ್ದೀನನು ತನ್ನ ಯಶಸ್ವಿ ದೇವಗಿರಿ ದಂಡಯಾತ್ರೆಯನ್ನು ಮುಗಿಸಿ ಹಿಂದಿರುಗಿದ ನಂತರ ಸುಲ್ತಾನ ಜಲಾಲುದ್ದೀನನನ್ನು ಕೊಲೆಗೈದು ಸುಲ್ತಾನನಾದನು. ಸಹಜವಾಗಿ ಅಲ್ಲಾವುದ್ದೀನನು ಅನೇಕ ತೊಡಕುಗಳನ್ನು ಎದುರಿಸಬೇಕಾಯಿತು. ಇಂತಹ ಸಂಕಷ್ಟ ಪರಿಸ್ಥಿತಿಯನ್ನು ನಿಭಾಯಿಸಿಕೊಳ್ಳಲು ಮತ್ತು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ತನ್ನ ಬಳಿ ಇದ್ದ ದಖ್ಖನೀ ಚಿನ್ನವನ್ನು ವಿಪುಲವಾಗಿ ಹಂಚಿದನು. ಹಾಗಾಗಿ ಪ್ರಜೆಗಳು ಅಲ್ಲಾವುದ್ದೀನನು ಹಿಂದಿನ ಸುಲ್ತಾನನ್ನು ಕೊಂದ ಕ್ರೂರ ಘಟನೆಯನ್ನು ಮರೆತರು. ಇವನು ತನ್ನ ನಿಷ್ಠಾವಂತ ಅನುಯಾಯಿಗಳಿಗೆ ಉನ್ನತ ಅಧಿಕಾರ ಸ್ಥಾನಗಳನ್ನು ನೀಡಿದುದಲ್ಲದೆ, ಅವರಿಗೆ ಗೌರವಯುತ ವಾದ ಬಿರುದುಗಳನ್ನು ಸಹ ನೀಡಿದನು.

ಅಲ್ಲಾವುದ್ದೀನನು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ನಂತರವೂ ಟರ್ಕರು ರಜಪುಟಾಣ, ಮಾಳವ ಮತ್ತು ಗುಜರಾತ್‌ಗಳ ರಾಜರುಗಳ ಪ್ರತಿಭಟನೆ ನಿಂತಿರಲಿಲ್ಲ. ಅಲ್ಲದೆ ತನ್ನ ಸಂಚನ್ನೇ ಅನುಕರಿಸಲು ಯತ್ನಿಸಿದ ಕೆಲವು ಆಸ್ಥಾನಿಕರ ಒಳಸಂಚುಗಳು ಮತ್ತು ಮಂಗೋಲರ ಹಾವಳಿಗಳನ್ನೆಲ್ಲ ಇವನು ಎದುರಿಸಬೇಕಾಗಿದ್ದಿತು. ಇವುಗಳನ್ನೆಲ್ಲ ಯಶಸ್ವಿಯಾಗಿ ಎದುರಿಸಿದ ಅಲ್ಲಾವುದ್ದೀನನು ತನ್ನ ನಿಷ್ಠ ಅನುಯಾಯಿಗಳ ಪಡೆಯೊಂದನ್ನೇ ನಿರ್ಮಿಸಿಕೊಂಡು ದೆಹಲಿ ಸಾಮ್ರಾಜ್ಯದಲ್ಲಿ ಶಾಂತಿ, ಸುವ್ಯವಸ್ಥೆ, ರಾಜ್ಯ ವಿಸ್ತರಣೆಯನ್ನು ಕೈಗೊಂಡು ದೆಹಲಿ ಸುಲ್ತಾನರಲ್ಲೇ ಅತ್ಯಂತ ಯಶಸ್ವಿ ಸುಲ್ತಾನನೆಂಬ ಹೆಸರಿಗೆ ಪಾತ್ರನಾದನು.

ಅಲ್ಲಾವುದ್ದೀನನ ಸಾಧನೆಗಳನ್ನು ಪ್ರಮುಖವಾಗಿ ಸೈನಿಕ ಸಾಧನೆಗಳು ಮತ್ತು ಆಡಳಿತಾತ್ಮಕ ಸಾಧನೆಗಳೆಂದು ವಿಭಾಗಿಸಬಹುದು.

## ಅಲ್ಲಾವುದ್ದೀನನ ಸೈನಿಕ ಸಾಧನೆಗಳು

ಅಲ್ಲಾವುದ್ದೀನನ ಆಕ್ರಮಣ ನೀತಿಯು ಸಾಮ್ರಾಜ್ಯ ವಿಸ್ತರಣಾಕಾಂಕ್ಷೆಯೇ ಆಗಿದ್ದಿತು. ಅವನ ಆಸೆಗಳು ಮಹತ್ತರವಾಗಿದ್ದು ಅಲೆಗ್ಸಾಂಡರ್‌ನಂತೆ ವಿಶ್ವವನ್ನೇ ಗೆಲ್ಲಬೇಕೆಂಬ ಆಕಾಂಕ್ಷೆ ಹೊಂದಿದ್ದನು. ಆದರೆ ದೆಹಲಿಯ ಕೊತ್ವಾಲ ಅಲಾ ಉಲ್ ಮುಲ್ಕ್‌ನು ಸುಲ್ತಾನನ ಯೋಜನೆಗಳು ಹಿತಕರವಾಗಿಲ್ಲವೆಂಬುದನ್ನು ಮನವರಿಕೆ ಮಾಡಿಕೊಟ್ಟನು. ಹೀಗಾಗಿ ಸುಲ್ತಾನನು ವಿಶ್ವವನ್ನೇ ಗೆಲ್ಲಬೇಕೆಂಬ ಯೋಜನೆಯನ್ನು ಕೈಬಿಟ್ಟು ಭಾರತವನ್ನೆಲ್ಲಾ ಜಯಿಸಲು ತೀರ್ಮಾನಿಸಿದನು. ಆದರೂ ಅವನು ಸಿಕಂದರ್ 'ಐ-ಸಾನಿ' ಎಂಬ ಬಿರುದನ್ನು ಹೊಂದಿದ್ದಲ್ಲದೆ ತನ್ನ ನಾಣ್ಯಗಳ ಮೇಲೆ ತಾನು 'ಎರಡನೆ ಅಲೆಗ್ಸಾಂಡರ್' ಎಂದು ವರ್ಣಿಸಿಕೊಂಡಿದ್ದಾನೆ. ಈತನ ಸೈನಿಕ ಸಾಧನೆಗಳನ್ನು ಈ ಕೆಳಕಂಡಂತೆ ತಿಳಿಯಬಹುದು.

### ಉತ್ತರ ಭಾರತದ ದಿಗ್ವಿಜಯಗಳು

೧. **ಗುಜರಾತ್ ಮತ್ತು ಜೈಸಲ್ಮೇರ್** (ಕ್ರಿ.ಶ. ೧೨೯೮-೯೯): ಅನ್ಹಿಲ್ವಾಡವನ್ನು ರಾಜಧಾನಿಯನ್ನಾಗಿ ಹೊಂದಿದ್ದ ಗುಜರಾತ್ ಸಂಪದ್ಭರಿತ ರಾಜ್ಯವಾಗಿತ್ತು. ಆ ರಾಜ್ಯವನ್ನು ರಜಪೂತ ಅರಸನಾದ ಮೂರನೆ ಕರ್ಣದೇವನು (ರಾಯ್ ಕರಣ್) ಆಳುತ್ತಿದ್ದನು. ೧೨೯೮-೯೯ ರಲ್ಲಿ ಅಲ್ಲಾವುದ್ದೀನನು ತನ್ನ ಸಹೋದರ ಉಲುಘ್‌ಖಾನ್ ಮತ್ತು ವಜೀರ ನಸ್ರತ್ ಖಾನ್ ಇವರಿಬ್ಬರ ನಾಯಕತ್ವದಲ್ಲಿ ಗುಜರಾತನ್ನು ಆಕ್ರಮಿಸಲು ಸೈನ್ಯವೊಂದನ್ನು ಕಳುಹಿಸಿದನು. ಗುಜರಾತ್ ಆಕ್ರಮಣದ ಮಾರ್ಗ ಮಧ್ಯದಲ್ಲಿ ಎದುರಾದ ಜೈಸಲ್ಮೇರನ್ನು ಉಲುಘ್‌ಖಾನ್ ಜಯಿಸಿದನು. ನಂತರ ಗುಜರಾತ್ ಸಹ ಧಾಳಿಕಾರರ ವಶವಾಯಿತು. ರಾಜ ಕರ್ಣದೇವನು ತನ್ನ ಮಗಳಾದ ದೇವಲ ದೇವಿಯೊಡನೆ ಪರಾರಿಯಾಗಿ ದೇವಗಿರಿಯ ಅರಸ ರಾಮಚಂದ್ರದೇವನ ಬಳಿ ಆಶ್ರಯ ಪಡೆದನು. ಅವನ ರಾಣಿ ಕಮಲಾದೇವಿ ಮತ್ತು ರಾಜ್ಯದ ಬೊಕ್ಕಸವು ಧಾಳಿಕಾರರ ವಶವಾಯಿತು. ಈ ಸಂದರ್ಭದಲ್ಲಿ ಕ್ಯಾಂಬೆಯಲ್ಲಿ ನಸ್ರತ್ ಖಾನ್‌ನು ಕಾಪೂರ್ ಹಜರ್ದಿನಾರಿ ಎಂಬ ಹಿಂದೂ ಗುಲಾಮನನ್ನು ಕೊಂಡುಕೊಂಡು ಇಸ್ಲಾಂ

ಧರ್ಮಕ್ಕೆ ಮತಾಂತರಿಸಿದನು. ಹೀಗೆ ಮತಾಂತರಗೊಂಡು ಮುಂದೆ ಅಲ್ಲಾವುದ್ದೀನನ ಮಹಾಸೇನಾ ದಂಡನಾಯಕನಾಗಿ ಯಶಸ್ವಿ ದಿಗ್ವಿಜಯಗಳಿಗೆ ಕಾರಣನಾದವನೇ ಮಲಿಕ್ ಕಾಫೂರ್. ದೆಹಲಿಯನ್ನು ಸೇರಿದ ಕಮಲಾದೇವಿ ಅಲ್ಲಾವುದ್ದೀನನ ನೆಚ್ಚಿನ ಮಡದಿಯಾದಳು.

೨. ರಣಥಂಬೋರ್ (ಕ್ರಿ.ಶ. ೧೩೦೦-೧೩೦೧) : ರಣಥಂಬೋರ್ ಚೌಹಾನ ರಜಪೂತರ ಶಕ್ತಿಯ ಕೇಂದ್ರವಾಗಿತ್ತು. ರಜಪೂತ ಅರಸ ರಾಣಾ ಹಮ್ಮೀರದೇವನು ಧಾಳಿಕೋರ ಮಂಗೋಲರಿಗೆ ಅಥವಾ ನವ ಮುಸಲ್ಮಾನರಿಗೆ ಆಶ್ರಯವನ್ನು ಕೊಟ್ಟುದುದು ಅಲ್ಲಾವುದ್ದೀನನು ರಣಥಂಬೋರ್ ಮುತ್ತಲು ಕಾರಣವಾಯಿತು. ಅಲ್ಲದೆ ಆಯಕಟ್ಟಿನ ಜಾಗದಲ್ಲಿದ್ದ ರಣಥಂಬೋರನ್ನು ಜಯಿಸದೆ ಪೂರ್ಣ ರಾಜಸ್ಥಾನವನ್ನು ಜಯಿಸಲಾಗುತ್ತಿರಲಿಲ್ಲ. ಆದ್ದರಿಂದ ಕ್ರಿ.ಶ. ೧೩೦೦ ರಲ್ಲಿ ತನ್ನ ಸೋದರ ಉಲುಘ್‌ಖಾನ್ ಮತ್ತು ನಸ್ರತ್‌ಖಾನ್‌ರ ನೇತೃತ್ವದಲ್ಲಿ ಬಲವಾದ ಸೈನ್ಯವೊಂದನ್ನು ಕಳುಹಿಸಿದನು. ಅವರು ಜಾಯೀನ್ ಎಂಬ ಸ್ಥಳವನ್ನು ವಶಪಡಿಸಿಕೊಂಡು ರಣಥಂಬೋರ್ ಕೋಟೆಯ ಬಳಿ ಬೀಡು ಬಿಟ್ಟರು. ಆದರೆ ರಜಪೂತರು ಅವರನ್ನು ಹಿಮ್ಮೆಟ್ಟಿಸಿದರು. ನಸ್ರತ್‌ಖಾನನು ಯುದ್ಧ ಸಂಬಂಧದಲ್ಲಿ ಒಂದು ದಿಬ್ಬವನ್ನು ಮತ್ತು ಹೊರ ಕೋಟೆಯನ್ನು ಕಟ್ಟುವ ಕೆಲಸದ ಮೇಲ್ವಿಚಾರಣೆಯಲ್ಲಿದ್ದಾಗ ಕೋಟೆಯಿಂದ ಬೀಸಿದ ಕವಣೆಯ ಕಲ್ಲಿಗೆ ತುತ್ತಾಗಿ ಮರಣ ಹೊಂದಿದನು. ನಂತರ ಸ್ವತಃ ಅಲ್ಲಾವುದ್ದೀನನೇ ರಣಥಂಬೋರ್ ಕೋಟೆಯ ದಾಳಿಗೆ ಧಾವಿಸಿದನು. ಈ ಸಂದರ್ಭದಲ್ಲಿ ನವ ಮುಸಲ್ಮಾನರೊಂದಿಗೆ ಸೇರಿ ಅಲ್ಲಾವುದ್ದೀನನ ವಿರುದ್ಧ ಸಂಚು ನಡೆಸಿದ ಅಖತ್‌ಖಾನ್‌ನನ್ನು ಕೊಲ್ಲಲಾಯಿತು. ಕ್ರಿ.ಶ. ೧೩೦೧ ರ ಜುಲೈನಲ್ಲಿ ಬಲಿಷ್ಠವಾದ ರಣಥಂಬೋರ್ ಕೋಟೆಯನ್ನು ಒಂದು ವರ್ಷದ ಮುತ್ತಿಗೆಯ ಬಳಿಕ ಸುಲ್ತಾನನು ವಶಪಡಿಸಿಕೊಂಡನು. ಹಮ್ಮೀರ ಮಹಾಕಾವ್ಯದ ಕರ್ತೃವಿನ ಪ್ರಕಾರ ಹಮ್ಮೀರ ದೇವನ ಸೋಲಿಗೆ ಪಕ್ಷಾಂತರ ಹೊಂದಿದ ರತಿಪಾಲ ಮತ್ತು ಕೃಷ್ಣಪಾಲರೆಂಬ ಅವನ ಇಬ್ಬರು ಸೇನಾಧಿಪತಿಗಳೇ ಕಾರಣ. ತೀವ್ರವಾಗಿ ಗಾಯಗೊಂಡಿದ್ದ ಹಮ್ಮೀರದೇವನು ತನ್ನ ಅಂತ್ಯ ಸಮೀಪಿಸಿತೆಂದು ಮನಗಂಡು ಸೆರೆ ಸಿಕ್ಕುವುದಕ್ಕಿಂತ ಸಾವೇ ಮೇಲೆಂದು ತನ್ನ ಖಡ್ಗದಿಂದ ತನ್ನ ರುಂಡವನ್ನು ಕತ್ತರಿಸಿಕೊಂಡು ಮೃತನಾದನು. ರಣಥಂಬೋರ್ ಕೋಟೆಯ ಆಡಳಿತ ವನ್ನು ಅಲ್ಲಾವುದ್ದೀನನು ಉಲುಘ್‌ಖಾನನಿಗೆ ವಹಿಸಿ ದೆಹಲಿಗೆ ಹಿಂತಿರುಗಿದನು. ಸುಲ್ತಾನನು ಹಿಂತಿರುಗಿದ ಐದು ತಿಂಗಳಲ್ಲೇ ಉಲುಘ್‌ಖಾನ್ ಕಾಲವಾದನು.

೩. ಚಿತ್ತೂರ್ (ಕ್ರಿ.ಶ. ೧೩೦೩) : ವೀರ ಪರಂಪರೆಗೆ ಸೇರಿದ ಗುಹಿಲ ರಜಪೂತರ ನೆಲೆವೀಡಾದ ಮೇವಾಡದ ಚಿತ್ತೂರಿನ ಮೇಲೆ ಧಾಳಿ ನಡೆಸಲು ಅಲ್ಲಾವುದ್ದೀನನು ಸಿದ್ಧತೆಗಳನ್ನು ಮಾಡಿಕೊಂಡನು. ಕ್ರಿ.ಶ. ೧೩೦೩ ರ ಜನವರಿಯಲ್ಲಿ ಮುತ್ತಿಗೆ ಹಾಕಿದನು. ಅಲ್ಲಾವುದ್ದೀನನ ಚಿತ್ತೂರಿನ ಧಾಳಿಗೆ ಇತಿಹಾಸಕಾರರು ವಿವಿಧ ಕಾರಣಗಳನ್ನು ನೀಡುತ್ತಾರೆ. ಅವುಗಳಲ್ಲಿ ಸುಲ್ತಾನನ ಸಾಮ್ರಾಜ್ಯ ವಿಸ್ತರಣೆಯ ಕಾರಣವು ಸಹ ಒಂದು. ಪರಂಪರೆಯಿಂದ ಬಂದ ವೃತ್ತಾಂತಗಳ ಪ್ರಕಾರ ರಾಣಾ ರತನ್‌ಸಿಂಗ್‌ನ ಮಡದಿ ಪದ್ಮಿನಿಯ ಸೌಂದರ್ಯಕ್ಕೆ

ಸುಲ್ತಾನನು ಪಾರುಹೋದುದೇ ಈ ಧಾಳಿಗೆ ಕಾರಣವಾಗಿತ್ತು. ಆದರೆ ಸಮಕಾಲೀನ ಶಾಸನಗಳು ಮತ್ತು ವೃತ್ತಾಂತಗಳು ಈ ವಿಷಯವಾಗಿ ಏನನ್ನು ಉಲ್ಲೇಖಿಸಿಲ್ಲ. ರಾಣಾರತನ್ ಸಿಂಗನು ಏಳು ತಿಂಗಳ ಕಾಲ ಕೋಟೆಯನ್ನು ರಕ್ಷಿಸಿದನು. ಆದರೆ ಅಂತಿಮವಾಗಿ ಕ್ರಿ.ಶ. ೧೩೦೩ ರ ಆಗಸ್ಟ್ ೨೬ ರಂದು ಕೋಟೆಯು ಅಲ್ಲಾವುದ್ದೀನನ ವಶವಾಯಿತು. ರಾಣಾ ರತನ್‌ಸಿಂಗ್ ಮರಣ ಹೊಂದಿದನು. ರಜಪೂತ ಮಹಿಳೆಯರು 'ಜೌಹರ್ ಪದ್ಧತಿ'ಯನ್ನು ಆಚರಿಸಿದರು. ಶತ್ರುಗಳಿಂದ ಸ್ತ್ರೀಯರ ಶೀಲಭಂಗವಾಗದಂತೆ ಅಥವಾ ಅವರು ಶತ್ರುಗಳ ಬಂಧಿಗಳಾಗದಂತೆ ಪ್ರಾಣತ್ಯಾಗ ಮಾಡುವ ಪದ್ಧತಿಯೇ ಜೋಹರ್ (ಜವಾಹರ್). ಚಿತ್ತೂರಿಗೆ ಖೈಸ್ರಾ ಬಾದ್ ಎಂದು ನಾಮಕರಣ ಮಾಡಿ ಅದರ ಆಡಳಿತದ ಜವಾಬ್ದಾರಿಯನ್ನು ಅಲ್ಲಾವುದ್ದೀನನು ತನ್ನ ಮಗ ಖೈಸರ್‌ಖಾನನಿಗೆ ವಹಿಸಿ ದೆಹಲಿಗೆ ಹಿಂತಿರುಗಿದನು.

೪. ಮಾಳವ (ಕ್ರಿ.ಶ. ೧೩೦೫) : ಅಲ್ಲಾವುದ್ದೀನನು ಚಿತ್ತೂರನ್ನು ಗೆದ್ದುಕೊಂಡು ನಂತರ ಮಾಳವದ ಮೇಲೆ ಸೈನ್ಯವೊಂದನ್ನು ಐನ್-ಉಲ್-ಮುಲ್ಕ್‌ನ ನೇತೃತ್ವದಲ್ಲಿ ಕಳುಹಿಸಿದನು. ಆಗ ಮಾಳವವನ್ನು ಮಹಲಕ್‌ದೇವನು ಮತ್ತು ಪ್ರಧಾನಿ, ಮುಖ್ಯ ದಂಡನಾಯಕ ಹರನಂದ (ಕೋಕಾಪ್ರಧಾನ್) ಎಂಬುವವರು ಆಳುತ್ತಿದ್ದರು. ಇವರಿಬ್ಬರೂ ಶೂರ ಯೋಧರಾಗಿದ್ದು ಮಹಾ ಸೈನ್ಯವೊಂದನ್ನು ಸಂಘಟಿಸಿ ಕ್ರಿ.ಶ. ೧೩೦೫ ರಲ್ಲಿ ಧಾಳಿ ಮಾಡಿದ ದೆಹಲಿ ಸುಲ್ತಾನನ ಸೈನ್ಯವನ್ನು ಎದುರಿಸಿದರು. ಐನ್-ಉಲ್-ಮುಲ್ಕ್‌ನು ಕೋಕಾಪ್ರಧಾನನ್ನು ಯುದ್ಧದಲ್ಲಿ ಸೋಲಿಸಿ ಕೊಂದನು. ನಂತರ ಮಾಂಡೂ ಕೋಟೆಯಲ್ಲಿ ರಕ್ಷಣೆ ಪಡೆದಿದ್ದ ಮಹಲಕ್ ದೇವನ ಮೇಲೆ ಧಾಳಿ ಕೈಗೊಂಡು ರಜಪೂತ ರಾಜದ್ರೋಹಿಯೊಬ್ಬನಿಂದ ಕೋಟೆಯ ಒಳಗೆ ಹೋಗುವ ಗುಪ್ತ ಮಾರ್ಗವನ್ನು ತಿಳಿದು ಐನ್-ಉಲ್-ಮುಲ್ಕ್‌ನು ರಾತ್ರಿವೇಳೆ ಅನಿರೀಕ್ಷಿತ ಧಾಳಿಮಾಡಿ ಅವನನ್ನು ಕೊಂದು ಕೋಟೆಯನ್ನು ವಶಪಡಿಸಿಕೊಂಡನು. ಅನಂತರ ಐನ್-ಉಲ್-ಮುಲ್ಕ್‌ನೆ ಪ್ರಾಂತಾಧಿಕಾರಿಯಾಗಿ ನೇಮಿತನಾದನು.

೫. ಸಿವಾನ (ಕ್ರಿ.ಶ. ೧೩೦೮) : ರಾಜಸ್ತಾನದ ಶಕ್ತಿಶಾಲಿ ರಾಜ್ಯವಾದ ಸಿವಾನವು ಪರಮಾರ ರಜಪೂತ ದೊರೆ ಶೀತಲ್ ದೇವನಿಂದ ಆಳಲ್ಪಡುತ್ತಿತ್ತು. ಅವನು ರಾಜಸ್ತಾನದ ಶಕ್ತಿಶಾಲಿ ರಾಜನೆಂದು ಹೆಸರು ಗಳಿಸಿದ್ದನು. ಅಲ್ಲಾವುದ್ದೀನನು ಕ್ರಿ.ಶ. ೧೩೦೮ ರಲ್ಲಿ ಸಿವಾನದ ಮೇಲೆ ಆಕ್ರಮಣ ನಡೆಸಿದನು. ರಜಪೂತರು ಕೆಲವು ತಿಂಗಳುಗಳ ಕಾಲ ಉಗ್ರ ಹೋರಾಟ ನಡೆಸಿದರು. ಆದರೆ ಸಿವಾನ ಕೋಟೆಯೊಳಗೆ ನೀರನ್ನು ಒದಗಿಸುತ್ತಿದ್ದ ಹತ್ತಿರದ ಸರೋವರದ ನೀರಿನ ಸಂಪರ್ಕವನ್ನು ಕಡಿತಗೊಳಿಸಿದ್ದರಿಂದಾಗಿ ಕೋಟೆಯೊಳಗೆ ಆಹಾಕಾರವೆದ್ದಿತು. ಅದೇ ವೇಳೆಗೆ ದೀರ್ಘಕಾಲದ ಮುತ್ತಿಗೆಯಿಂದ ಕೋಪಗೊಂಡ ಅಲ್ಲಾವುದ್ದೀನನು ದಾಳಿಯನ್ನು ಉಗ್ರ ಗೊಳಿಸಿ ಕೋಟೆಯನ್ನು ಪ್ರವೇಶಿಸಿ ಶೀತಲ್ ದೇವನನ್ನು ಕೊಂದು ಕೋಟೆಯನ್ನು ವಶ ಪಡಿಸಿಕೊಂಡನು. ಅಲ್ಲಾವುದ್ದೀನನು ಸಿವಾನನ್ನು ಕಮಲುದ್ದೀನ್ ಗರ್ಗ್‌ನಿಗೆ ವಹಿಸಿ ಹಿಂತಿರುಗಿದನು.

೬. ಜಲಾರ್ (ಜವಳಿಪುರ) (ಕ್ರಿ.ಶ. ೧೩೧೧) : ಜಲಾರ್‌ನ್ನು ಕನೇರದೇವ ಎಂಬುವವನು ಆಳುತ್ತಿದ್ದನು. ಅಲ್ಲಾವುದ್ದೀನನು ತನ್ನ ೧೨೯೮ ರ ಗುಜರಾತ್ ದಂಡಯಾತ್ರೆಯಲ್ಲಿ ಜಲಾರ ರಾಜ್ಯದ ಮೂಲಕ ಹೋಗಲು ಕೇಳಿಕೊಂಡಿದ್ದನು. ಆದರೆ ರಾಜ ಕನೇರದೇವನು ತಿರಸ್ಕರಿಸಿದ್ದ ನಲ್ಲದೆ ಸುಲ್ತಾನನ ಸೈನ್ಯದ ಮೇಲೆ ಧಾಳಿ ನಡೆಸಿದ್ದನು. ಪರಿಣಾಮವಾಗಿ ಅಲ್ಲಾವುದ್ದೀನನು ಜಲಾರ್‌ದ ಮೇಲೆ ಧಾಳಿ ಮಾಡಿ ಕನೇರದೇವನನ್ನು ಕೊಂದನು.

ಜಲಾರ್‌ನ ವಶದ ನಂತರ ಬೂಂದಿ, ಮಾಂದರ್, ತೋಂಕ್ ಮತ್ತು ಜೋಧ್‌ಪುರಗಳು ಅಲ್ಲಾವುದ್ದೀನನ ವಶವಾದವು. ಮೇಲಿನ ಎಲ್ಲಾ ವಿಜಯಗಳಿಂದಾಗಿ ಪೂರ್ಣ ಉತ್ತರ ಭಾರತವು ಇವನ ವಶವಾಯಿತು. ಇದರಿಂದ ಈತನ ಸಾಮ್ರಾಜ್ಯವು ಕಾಶ್ಮೀರ, ನೇಪಾಳ, ಅಸ್ಸಾಂ ಮತ್ತು ಪಂಜಾಬ್‌ನ ಕೆಲವು ಭಾಗಗಳನ್ನು ಬಿಟ್ಟು ಉಳಿದ ಎಲ್ಲಾ ಭಾಗಗಳು ಅವನ ಸಾಮ್ರಾಜ್ಯದ ವ್ಯಾಪ್ತಿಗೆ ಬಂದವು.

**ದಕ್ಷಿಣ ಭಾರತದ ದಿಗ್ವಿಜಯಗಳು**

ಅಲ್ಲಾವುದ್ದೀನನು ಉತ್ತರದ ದಿಗ್ವಿಜಯದಲ್ಲಿ ಯಶಸ್ವಿಯಾದ ಮೇಲೆ ಮತ್ತು ಮಂಗೋಲರ ಧಾಳಿಯ ಭೀತಿಯು ನಿಂತ ಮೇಲೆ ತನ್ನ ಸಾಮ್ರಾಜ್ಯವನ್ನು ಕ್ರೂಢೀಕರಿಸಿದುದೇ ಅಲ್ಲದೆ ಬೃಹತ್ ಮತ್ತು ವ್ಯವಸ್ಥಿತವಾದ ಸೈನ್ಯವನ್ನು ನಿರ್ಮಿಸಿಕೊಂಡು ದಕ್ಷಿಣ ರಾಜ್ಯಗಳ ಮೇಲೆ ದಿಗ್ವಿಜಯವನ್ನು ಕೈಗೊಂಡನು. ಈತನ ದಕ್ಷಿಣ ದಂಡಯಾತ್ರೆ ರಾಜಕೀಯ ಹಾಗೂ ಆರ್ಥಿಕ ಉದ್ದೇಶಗಳಿಂದ ಕೂಡಿದ್ದಿತು. ಉತ್ತರದ ಮೇಲೆ ಜಯ ಸಾಧಿಸಿದ ಇವನಂತಹ ಉತ್ಕಟ ಆಕಾಂಕ್ಷಿ ಸುಲ್ತಾನನಿಗೆ ದಕ್ಷಿಣದಲ್ಲಿ ಅಧಿಕಾರವನ್ನು ಸ್ಥಾಪಿಸುವುದು ಸ್ವಾಭಾವಿಕ ವಾಗಿತ್ತು. ದಕ್ಷಿಣದ ಸಿರಿಸಂಪತ್ತು ಸಹ ಅವನಂತಹ ಸಾಹಸಿ ಯೋಧನಿಗೆ ಪ್ರೇರಕವಾಗಿದ್ದಿತು. ದಕ್ಷಿಣದ ರಾಜ್ಯಗಳಾದ ದೇವಗಿರಿ, ದ್ವಾರಸಮುದ್ರ, ಮಧುರೈ, ವಾರಂಗಲ್‌ಗಳ ನಡುವಣದ ಅಂತಃಕಲಹಗಳು ಉತ್ತರದಿಂದ ಧಾಳಿಕಾರನನ್ನು ಆಹ್ವಾನಿಸಿದವು.

೧. **ದೇವಗಿರಿಯ ಮೇಲೆ ದಂಡೆಯಾತ್ರೆ** (ಕ್ರಿ.ಶ. ೧೩೦೭) : ದೇವಗಿರಿಯ ಯಾದವರ ಅರಸ ರಾಮಚಂದ್ರದೇವನು ೧೨೯೪ ರಲ್ಲಿ ಎಲಿಚಪುರ ಪ್ರಾಂತ್ಯದ ಕಂದಾಯವನ್ನು ಕಪ್ಪವಾಗಿ ಕೊಡಲು ಅಲ್ಲಾವುದ್ದೀನನೊಂದಿಗೆ ಒಪ್ಪಂದ ಮಾಡಿಕೊಂಡಿದ್ದನು. ಆದರೆ ೧೩೦೫ ಮತ್ತು ೧೩೦೬ ರಲ್ಲಿ ಎರಡು ವರ್ಷ ಸತತವಾಗಿ ಕಪ್ಪವನ್ನು ದೆಹಲಿಗೆ ಸಲ್ಲಿಸದೆ ಇದ್ದನು. ಹಾಗೆಯೇ ದೇಶಭ್ರಷ್ಟನಾಗಿದ್ದ ಗುಜರಾತಿನ ಅರಸರ ಎರಡನೇ ಕರ್ಣದೇವ ಮತ್ತು ಅವನ ಮಗಳು ದೇವಲದೇವಿ ಆಶ್ರಯ ನೀಡಿದ್ದುದು ಅಲ್ಲಾವುದ್ದೀನನಿಗೆ ದೇವಗಿರಿಯ ಮೇಲೆ ಧಾಳಿ ಮಾಡಲು ಕಾರಣವಾಯಿತು. ಆದ್ದರಿಂದ ೧೩೦೭ರ ಮಾರ್ಚ್ ತಿಂಗಳಿನಲ್ಲಿ ಅಲ್ಲಾವುದ್ದೀನನು ತನ್ನ ಮಹಾದಂಡನಾಯಕ ಮಲಿಕ್ ಕಾಫೂರ್‌ನ ನೇತೃತ್ವದಲ್ಲಿ ರಾಮಚಂದ್ರದೇವನ ರಾಜ್ಯವನ್ನು ಆಕ್ರಮಿಸಲು ಸೈನ್ಯವೊಂದನ್ನು ಕಳುಹಿಸಿದನು. ಮಲಿಕ್ ಕಾಫೂರನು ದೇವಗಿರಿಯ ಮೇಲೆ ಧಾಳಿ ಮಾಡಿ ಯುದ್ಧದಲ್ಲಿ ರಾಮಚಂದ್ರದೇವನನ್ನು ಸೋಲಿಸಿದನು. ರಾಮಚಂದ್ರ

ದೇವನ ಮಗ ಶಂಕರದೇವನು ಓಡಿಹೋದನು. ಹೀಗಾಗಿ ರಾಮಚಂದ್ರದೇವನು ಸಂಧಾನ ಮಾಡಿಕೊಳ್ಳಬೇಕಾಯಿತು. ಕಾಫೂರನು ಅಗಾಧವಾಗಿ ಲೂಟಿ ಮಾಡಿದ ಸಂಪತ್ತು ಮತ್ತು ಆನೆಗಳೊಂದಿಗೆ ರಾಮಚಂದ್ರದೇವ ಮತ್ತು ಅವನ ಕುಟುಂಬದವರನ್ನು ದೆಹಲಿಗೆ ಕರೆದೊಯ್ದನು. ಅಲ್ಲಾವುದ್ದೀನನು ಅವನನ್ನು ಗೌರವಿಸಿ ರಾಯ್-ಐ-ರಯಾನ್ ಎಂಬ ಬಿರುವನ್ನು ನೀಡಿ ಆರು ತಿಂಗಳ ನಂತರ ಕಳುಹಿಸಿಕೊಟ್ಟನು. ರಾಮಚಂದ್ರದೇವನಿಗೆ ನವ್ಸಾರಿ ಪ್ರಾಂತವನ್ನು ಬಳುವಳಿಯಾಗಿ ಕೊಡಲಾಯಿತು. ಆ ಬಳಿಕ ರಾಮಚಂದ್ರದೇವನು ದೆಹಲಿಯ ಸಾಮ್ರಾಜ್ಯದ ಸಾಮಂತನಾಗಿ ಕಪ್ಪ-ಕಾಣಿಕೆಗಳನ್ನು ಒಪ್ಪಿಸುತ್ತಾ ಮಲಿಕ್ ಕಾಫೂರನ ದಕ್ಷಿಣ ದಂಡಯಾತ್ರೆಗಳಿಗೆ ಸೈನಿಕ ಸಹಾಯ ಮಾಡುತ್ತಾ ನಿಷ್ಠನಾಗುಳಿದನು.

**೨. ವಾರಂಗಲ್ಲಿನ ಮೇಲೆ ದಂಡಯಾತ್ರೆ** (ಕ್ರಿ.ಶ. ೧೩೦೯) : ದೇವಗಿರಿಯ ಯಾದವರ ಶರಣಾಗತಿಯಿಂದ ಉತ್ತೇಜಿತನಾದ ಸುಲ್ತಾನನು ಕಾಕತೀಯ ದೊರೆಯನ್ನು ಸೋಲಿಸಿ ಅವನನ್ನು ಅಧೀನ ಮಾಡಿಕೊಳ್ಳಲು ಮತ್ತು ಅವನ ವಿಪುಲ ಐಶ್ವರ್ಯವನ್ನು ಕಸಿಯಲು ೧೩೦೯ ರ ನವೆಂಬರ್‌ನಲ್ಲಿ ಮಲಿಕ್ ಕಾಫೂರ್‌ನ ನೇತೃತ್ವದಲ್ಲಿ ಸೈನ್ಯವೊಂದನ್ನು ಕಳುಹಿಸಿದ. ರಾಮಚಂದ್ರದೇವನ ನೆರವಿನೊಂದಿಗೆ ಮಲಿಕ್ ಕಾಫೂರನು ವಾರಂಗಲ್ಲನ್ನು ತಲುಪಿದನು. ವಾರಂಗಲ್ಲಿನ ಕೋಟೆಯನ್ನು ರಾಜ ಪ್ರತಾಪರುದ್ರನು ರಕ್ಷಿಸಲು ಪ್ರಯತ್ನಿಸಿದನು. ಆದರೆ ಅಂತಿಮವಾಗಿ ಕ್ರಿ.ಶ. ೧೩೧೦ ರಲ್ಲಿ ಪ್ರತಾಪರುದ್ರನು ಶಾಂತಿಸಂಧಾನವನ್ನು ನಡೆಸ ಬೇಕಾಯಿತು. ಅದರಂತೆ ಇವನು ದೆಹಲಿಯ ಸುಲ್ತಾನನ ಸಾರ್ವಭೌಮತ್ವವನ್ನು ಒಪ್ಪಿ ಕೊಂಡಿದುದಲ್ಲದೆ ಕಾಫೂರನಿಗೆ ೧೦೦ ಆನೆಗಳು, ೭೦೦೦ ಕುದುರೆಗಳು ಮತ್ತು ಅಪಾರ ಪ್ರಮಾಣದ ಆಭರಣ ಮತ್ತು ನಾಣ್ಯಗಳನ್ನು ಒಪ್ಪಿಸಿದುದಲ್ಲದೆ ದೆಹಲಿಗೆ ವಾರ್ಷಿಕ ಕಪ್ಪ-ಕಾಣಿಕೆಗಳನ್ನು ಕಳುಹಿಸುವುದಾಗಿ ಒಪ್ಪಿಕೊಂಡ. ಅಮೀರ್‌ಖುಸ್ರು ತಿಳಿಸುವಂತೆ ಸೂರೆಗೊಂಡ ಅಪಾರ ಸಿರಿಯ ಭಾರದಿಂದ ಕುಗ್ಗಿದ ಸಾವಿರ ಒಂಟೆಗಳ ಸಮೇತ ಕಾಫೂರನು ದೆಹಲಿಗೆ ಹಿಂತಿರುಗಿದನು. ಕಾಫಿಖಾನ್ ತಿಳಿಸುವಂತೆ ಪ್ರತಾಪರುದ್ರನು ಕಾಫೂರನಿಗೆ ವಿಶ್ವವಿಖ್ಯಾತ 'ಕೊಹಿನೂರ್' ವಜ್ರವನ್ನು ಇದೇ ಸಂದರ್ಭದಲ್ಲಿ ನೀಡಿದನು.

**೩. ದ್ವಾರಸಮುದ್ರದ ಮೇಲೆ ದಂಡಯಾತ್ರೆ** (ಕ್ರಿ.ಶ. ೧೩೧೦-೧೩೧೧): ಅಲ್ಲಾವುದ್ದೀನನು ದಕ್ಷಿಣದ ಮತ್ತೊಂದು ರಾಜ್ಯವನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳಲು ತೀರ್ಮಾನಿಸಿ ೧೩೧೦ ರಲ್ಲಿ ಮಲಿಕ್ ಕಾಫೂರ್ ಮತ್ತು ಖ್ವಾಜಾ ಹಾಜಿ ಎಂಬ ಇಬ್ಬರು ಸೇನಾಧಿಕಾರಿಗಳ ಮುಖಂಡತ್ವದಲ್ಲಿ ಭಾರಿ ಸೈನ್ಯವೊಂದನ್ನು ಕಳುಹಿಸಿದನು. ೧೩೧೧ ರಲ್ಲಿ ಈ ಸೈನ್ಯವು ಪ್ರತಾಪ ರುದ್ರನ ನೆರವಿನೊಂದಿಗೆ ದ್ವಾರಸಮುದ್ರದ ಮೇಲೆ ಧಾಳಿ ಮಾಡಿತು. ಆಗ ಹೊಯ್ಸಳ ರಾಜ್ಯವನ್ನು ಮೂರನೆ ವೀರಬಲ್ಲಾಳನು ಆಳುತ್ತಿದ್ದು ಅವನು ಪಾಂಡ್ಯ ರಾಜ್ಯದ ರಾಜ ಕುಮಾರರ ಅಂತಃಕಲಹದಲ್ಲಿ ಭಾಗಿಯಾಗಿದ್ದನು. ಮಲಿಕ್ ಕಾಫೂರ್‌ನ ಸೈನ್ಯವು ದ್ವಾರ ಸಮುದ್ರವನ್ನು ಸಮೀಪಿಸಿದಂತೆ ವೀರಬಲ್ಲಾಳನು ರಾಜಧಾನಿಗೆ ಹಿಂತಿರುಗಿ ಯುದ್ಧಕ್ಕೆ

ಸಿದ್ಧನಾಗಿರಲಿಲ್ಲವಾದ್ದರಿಂದ ದೆಹಲಿಯ ಬೃಹತ್ ಸೈನ್ಯಕ್ಕೆ ಶರಣಾಗತನಾಗಿ ತನ್ನ ಬೊಕ್ಕಸದಲ್ಲಿದ್ದ ಸಂಪತ್ತನ್ನೆಲ್ಲಾ ಶತ್ರುವಿಗೆ ಒಪ್ಪಿಸಿದ. ಆಕ್ರಮಣಕಾರರು ೩೬ ಆನೆಗಳನ್ನು ವಶಪಡಿಸಿಕೊಂಡರಲ್ಲದೆ ದೇವಾಲಯಗಳಿಂದ ಭಾರಿ ಪ್ರಮಾಣದ ಚಿನ್ನ, ಬೆಳ್ಳಿ ಆಭರಣಗಳು ಮತ್ತು ಮುತ್ತುರತ್ನಗಳನ್ನು ಕೊಳ್ಳೆಹೊಡೆದರು. ಸೂರೆಗೊಂಡ ವಸ್ತುಗಳನ್ನು ಹಾಗೂ ಹೊಯ್ಸಳ ರಾಜ್ಯದ ರಾಜಕುಮಾರನೊಬ್ಬನನ್ನು ಮಲಿಕ್ ಕಫೂರನು ದೆಹಲಿಗೆ ಕಳುಹಿಸಿ ಕೊಟ್ಟನು. ಹೊಯ್ಸಳರು ದೆಹಲಿಯ ಸುಲ್ತಾನರ ಸಾಮಂತರಾದರು. ವೀರಬಲ್ಲಾಳನು ಮಲಿಕ್ ಕಾಫೂರ್‌ನನ್ನು ಭೇಟಿ ಮಾಡಿ ಪಾಂಡ್ಯರಾಜ್ಯದ ಆಕ್ರಮಣಕ್ಕೆ ಸಹಾಯ ಮಾಡುವುದಾಗಿ ಭರವಸೆಯಿತ್ತನು.

೪. **ಪಾಂಡ್ಯ ರಾಜ್ಯದ ಮೇಲೆ ದಾಳಿ (ಕ್ರಿ.ಶ. ೧೩೧೧)** : ಪಾಂಡ್ಯ ರಾಜ ಕುಲಶೇಖರನ ಮರಣಾನಂತರ ಅವನ ಮಕ್ಕಳಾದ ಸುಂದರಪಾಂಡ್ಯ ಮತ್ತು ವೀರಪಾಂಡ್ಯರ ನಡುವೆ ಸಿಂಹಾಸನಕ್ಕಾಗಿ ಕಲಹವೇರ್ಪಟ್ಟಿತು. ಸುಂದರಪಾಂಡ್ಯನು ವೀರಪಾಡ್ಯನಿಂದ ಸೋತು ಮುಸ್ಲಿಮರ ನೆರವನ್ನು ಕೋರಿದ್ದನು. ಇದೇ ಅವಕಾಶಕ್ಕಾಗಿ ಕಾಯುತ್ತಿದ್ದ ಮಲಿಕ್ ಕಾಫೂರನು ಭಾರಿ ಸೈನ್ಯದೊಂದಿಗೆ ೧೩೧೧ ರ ಮಾರ್ಚ್‌ನಲ್ಲಿ ಪಾಂಡ್ಯ ರಾಜ್ಯವನ್ನು ಪ್ರವೇಶಿಸಿದನು. ವೀರಪಾಂಡ್ಯನು ವೀರಯೋಧನಾಗಿದ್ದು ಮಲಿಕ್ ಕಾಫೂರನ ವಿರುದ್ಧ ಗೆರಿಲ್ಲಾ ಮಾದರಿಯ ಯುದ್ಧ ಮಾಡುತ್ತ ಸೆರೆ ಸಿಕ್ಕಲಿಲ್ಲ. ಕಾಫೂರನು ಬರ್ಮತ್‌ಪುರಿ (ಇಂದಿನ ಚಿದಂಬರಂ)ಯ ಮೇಲೆ ಧಾಳಿ ಮಾಡಿ ನಗರವನ್ನು ಲೂಟಿ ಮಾಡಿ ಪವಿತ್ರಲಿಂಗ ಮಹಾದೇವ ದೇವಾಲಯವನ್ನು ನೆಲಸಮ ಮಾಡಿದನು. ನಂತರ ರಾಜಧಾನಿ ಮಧುರೆಯನ್ನು ಸೂರೆ ಮಾಡಿ ಅಮೀರ್ ಖುಸ್ರು ತಿಳಿಸುವಂತೆ "೫೧೨ ಆನೆಗಳು, ೫೦೦೦ ಕುದುರೆಗಳು ಮತ್ತು ಮುತ್ತುರತ್ನಗಳು ಸೇರಿದಂತೆ ೫೦೦ ಮಣ ಆಭರಣಗಳನ್ನು ವಶಪಡಿಸಿಕೊಂಡನು". ಮಲಿಕ್ ಕಾಫೂರನು ತನ್ನ ಯಶಸ್ವಿ ದಕ್ಷಿಣದ ದಂಡಯಾತ್ರೆಯನ್ನು ಮುಗಿಸಿ ಕ್ರಿ.ಶ. ೧೩೧೧ ರ ಅಕ್ಟೋಬರ್ ೧೮ ರಂದು ೬೧೨ ಆನೆಗಳು, ೨೦,೦೦೦ ಕುದುರೆಗಳು, ೯೬,೦೦೦ ಮಣ ಚಿನ್ನ ಮತ್ತು ವಜ್ರ ವೈಢೂರ್ಯಗಳ ಹಲವು ಪೆಟ್ಟಿಗೆಗಳೊಡನೆ ದೆಹಲಿಯನ್ನು ತಲುಪಿದನು.

೫. **ದೇವಗಿರಿಯ ಮೇಲೆ ಮತ್ತೆ ದಂಡಯಾತ್ರೆ** (ಕ್ರಿ.ಶ. ೧೩೧೩) : ದೇವಗಿರಿಯ ಹೊಸ ರಾಜನಾದ ಶಂಕರದೇವನು ದೆಹಲಿ ಸುಲ್ತಾನರಿಗೆ ಕಪ್ಪ ಕೊಡುವುದನ್ನು ನಿಲ್ಲಿಸಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡ. ಆದಕಾರಣ ಕ್ರಿ.ಶ. ೧೩೧೩ ರಲ್ಲಿ ಮಲಿಕ್ ಕಾಫೂರನ ನೇತೃತ್ವದಲ್ಲಿ ಸೈನ್ಯವು ದೇವಗಿರಿಯ ಮೇಲೆ ಧಾಳಿ ಮಾಡಿತು. ಯುದ್ಧದಲ್ಲಿ ಶಂಕರದೇವನನ್ನು ಸೋಲಿಸಿ ಕೊಲ್ಲಲಾಯಿತು. ಇದರೊಂದಿಗೆ ದೇವಗಿರಿಯನ್ನು ದೆಹಲಿ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲಾಯಿತು. ೧೩೧೫ ರಲ್ಲಿ ಮಲಿಕ್ ಕಾಫೂರನನ್ನು ದೆಹಲಿಗೆ ವಾಪಾಸು ಕರೆಸಲಾಯಿತು.

ಅಲ್ಲಾವುದ್ದೀನನ ದಕ್ಷಿಣದ ವಿಜಯಗಳು ಶಾಶ್ವತವೂ ಹಾಗೂ ಪೂರ್ಣವೂ ಆಗಿರಲಿಲ್ಲ. ಇವನು ಉತ್ತರದ ರಾಜ್ಯಗಳನ್ನು ಸಾಮ್ರಾಜ್ಯದಲ್ಲಿ ಸೇರಿಸಿಕೊಂಡಂತೆ ದಕ್ಷಿಣದ ರಾಜ್ಯಗಳನ್ನು

ಸಾಮ್ರಾಜ್ಯಕ್ಕೆ ವಿಲೀನಗೊಳಿಸಿಕೊಳ್ಳದೆ ಕೇವಲ ಅವರಿಂದ ಶರಣಾಗತಿ ಮತ್ತು ಕಪ್ಪವನ್ನು ಪಡೆಯುವಲ್ಲಿ ಆಸಕ್ತಿ ವಹಿಸಿದ್ದನು. ಅಲ್ಲಾವುದ್ದೀನನ ದಕ್ಷಿಣದ ಯಶಸ್ಸಿಗೆ ಇಲ್ಲಿನ ರಾಜರು ಪರಸ್ಪರ ವಿರುದ್ಧ ಸಹಾಯ ಮಾಡಿದುದೇ ಕಾರಣ ಆಗಿತ್ತು.

## ಅಲ್ಲಾವುದ್ದೀನನ ವಾಯುವ್ಯ ಗಡಿನೀತಿ ಮತ್ತು ಮಂಗೋಲರ ದಾಳಿಗಳು (ಕ್ರಿ.ಶ. ೧೨೯೬-೧೩೦೮)

ಭಾರತದ ವಾಯುವ್ಯ ಗಡಿಯಿಂದ ಧಾಳಿ ಮಾಡಿದ ಮಂಗೋಲರಿಂದ ಬಹಳ ಕಾಲದ ವರೆಗೆ ದೆಹಲಿ ಸರ್ಕಾರವು ಕಳವಳಕ್ಕೆ ಹಾಗೂ ಭೀತಿಗೆ ಒಳಗಾಗಿದ್ದಿತು. ಅಲ್ಲಾವುದ್ದೀನನು ಸಿಂಹಾಸನವೇರಿದ ಕೆಲವೇ ತಿಂಗಳುಗಳಲ್ಲಿ ಅಂದರೆ ೧೨೯೭-೯೮ ರಲ್ಲಿ ಮಂಗೋಲರ ಒಂದು ಲಕ್ಷ ಸೈನಿಕರನ್ನೊಳಗೊಂಡ ಬೃಹತ್ ಸೈನ್ಯವು ವಾಯುವ್ಯ ಗಡಿ ಪ್ರದೇಶಗಳಾದ ಪಂಜಾಬ್, ಲಾಹೋರ್‌ಗಳ ಸುತ್ತಮುತ್ತ ಸೂರೆಗೈಯಲಾರಂಭಿಸಿತು. ಅಲ್ಲಾವುದ್ದೀನನು ಕಳುಹಿಸಿದ ಜಫರ್‌ಖಾನನ ನೇತೃತ್ವದ ಸೈನ್ಯವು ಮಂಗೋಲರನ್ನು ತೀವ್ರವಾಗಿ ಸೋಲಿಸಿ ಹಿಮ್ಮೆಟ್ಟಿಸಿತು. ಇದೇ ರೀತಿ ೧೩೦೮ ರವರೆಗೆ ಐದು ಬಾರಿ ಮಂಗೋಲರು ಧಾಳಿ ನಡೆಸಿದರು. ಆದರೆ ತಮ್ಮ ದಂಡಯಾತ್ರೆಗಳಲ್ಲೆಲ್ಲಾ ಪದೇ ಪದೇ ಸೋತ ಮಂಗೋಲರು ಎದೆಗುಂದಿದರು. ಅಲ್ಲದೆ ಸೆರೆಯಾದವರನ್ನು ಆನೆಯ ಕಾಲನಿಂದ ತುಳಿಸುವಂತಹ ದೆಹಲಿಯ ಸುಲ್ತಾನರ ಉಗ್ರ ಶಿಕ್ಷೆಗಳಿಂದ ಭಯಭೀತರಾದ ಮಂಗೋಲರು ಅಲ್ಲಾವುದ್ದೀನನ ಕಾಲದಲ್ಲಿ ಪುನಃ ಧಾಳಿ ಮಾಡಲಿಲ್ಲ. ೧೩೦೫ ರಿಂದ ಪಂಜಾಬಿನ ಪ್ರಾಂತಾಧಿಕಾರಿಯಾಗಿದ್ದ ಘಾಜಿ ಮಲಿಕ್ (ಮುಂದೆ ಸುಲ್ತಾನ್ ಘಿಯಾಸುದ್ದೀನ್ ತುಘಲಕ್ ಎಂಬ ಹೆಸರನ್ನು ತಾಳಿದನು) ವಾಯುವ್ಯ ಭಾರತದ ಗಡಿಗಳ ರಕ್ಷಣೆಯ ಅಧಿಕಾರಿಯಾಗಿ ನೇಮಕವಾಗಿ ಸುಮಾರು ಕಾಲು ಶತಮಾನದ ವರೆಗೆ ಮಂಗೋಲರ ಆಕ್ರಮಣಗಳನ್ನು ತಡೆಗಟ್ಟಿದ.

ಮಂಗೋಲಿಯನ್ ನೀತಿಯ ಮೇರೆಗೆ ಅಲ್ಲಾವುದ್ದೀನ್‌ನು ಬಹಳ ಶೂರ ವೀರ ದಂಡ ನಾಯಕರುಗಳನ್ನು ಗೌವರ್ನರ್‌ಗಳನ್ನಾಗಿ ನೇಮಿಸಿದುದ್ದಷ್ಟೇ ಅಲ್ಲದೆ, ಅನೇಕ ಕೋಟೆಕೊತ್ತಲು ಗಳನ್ನು ನಿರ್ಮಿಸಿದ. ಹಳೆಯದಾದ ಮತ್ತು ಶಿಥಿಲವಾದ ಕೋಟೆಗಳನ್ನು ದುರಸ್ತಿಗೊಳಿಸಿದ ಮತ್ತು ಗಡಿನಾಡಿನ ಜನಗಳ ರಕ್ಷಣೆಗಾಗಿ ಬಿಗಿ ಬಂದೋಬಸ್ತ್‌ಗಳನ್ನು ಮಾಡಿಸಿದ. ಹಾಗೆಯೇ ವಾಯುವ್ಯಗಡಿ ಪ್ರಾಂತ್ಯಗಳಲ್ಲಿ ವ್ಯವಸಾಯಿಕ ಸುಂಕದ ಮೇಲೆ ರಿಯಾಯಿತಿಗಳನ್ನು ನೀಡಿದ.

ಹೀಗೆ ಅಲ್ಲಾವುದ್ದೀನನು ತನ್ನ ಯಶಸ್ವಿ ಯೋಜನೆಗಳು ಮತ್ತು ಸಮರ್ಥ ಸೇನಾ ದಂಡನಾಯಕರುಗಳ ನೆರವಿನಿಂದ ಅಪಾರ ಪ್ರಮಾಣದ ದಿಗ್ವಿಜಯಗಳನ್ನು ಸಾಧಿಸಿದನು.

## ಅಲ್ಲಾವುದ್ದೀನ್ ಖಿಲ್ಜಿಯ ಆಂತರಿಕ ನೀತಿ ಮತ್ತು ಆಡಳಿತ ಸುಧಾರಣೆಗಳು (ಅಲ್ಲಾವುದ್ದೀನ್ ಖಿಲ್ಜಿಯ ಸಾಧನೆಗಳು)

**೧. ರಾಜತ್ವದ ಬಗ್ಗೆ ಹೊಸ ಸಿದ್ಧಾಂತ :** ಅಲ್ಲಾವುದ್ದೀನನಿಗೆ ರಾಜತ್ವದ ಬಗ್ಗೆ ತನ್ನ ಪೂರ್ವಿಕರಿಗಿಂತ ವಿಭಿನ್ನವಾದ ಕಲ್ಪನೆಯಿದ್ದಿತು. ಸರ್ಕಾರದ ರಾಜಕೀಯ ಹಿತದೃಷ್ಟಿಯಿಂದ

ಇಸ್ಲಾಂ ಧರ್ಮದ ತತ್ವಗಳು ಆಡಳಿತದಲ್ಲಿ ಪಾತ್ರವಹಿಸಬಾರದೆಂದು ಅಭಿಪ್ರಾಯಪಟ್ಟ ಮೊದಲ ದೆಹಲಿ ಸುಲ್ತಾನನೆಂದರೆ ಅಲ್ಲಾವುದ್ದೀನ್. ಇವನು ರಾಜ್ಯದ ವಿಷಯಗಳಲ್ಲಿ ಸಾಂಪ್ರದಾಯಿಕ ಧರ್ಮದ ಪ್ರಾಮುಖ್ಯವನ್ನು ವಿರೋಧಿಸಿದನು. ಉಲೇಮರ ಧರ್ಮ ದರ್ಶನವಿಲ್ಲದೆ ತಾನು ಕಾರ್ಯನಿರತನಾಗುವುದಾಗಿ ಇವನು ಘೋಷಿಸಿದನು. ಆಡಳಿತದಲ್ಲಿ ಉಲೇಮಾಗಳ ಹಸ್ತಕ್ಷೇಪವನ್ನು ತಡೆಗಟ್ಟಲು ಅನುವಾದನು. ಇವನ ಅಭಿಪ್ರಾಯದಲ್ಲಿ ಸುಲ್ತಾನರು ದೈವಾಂಶ ಸಂಭೂತರು ಸಾಮಾನ್ಯ ಜನರಿಗಿಂತ ಜ್ಞಾನಿಗಳು ಮತ್ತು ಅನುಭವ ಶಾಲಿಗಳು. ಹಾಗಾಗಿ ಸುಲ್ತಾನರು ಹಾಕಿಕೊಟ್ಟ ಮಾರ್ಗದಲ್ಲಿಯೇ ಜನರು ವಿಧೇಯತೆಯಿಂದ ನಡೆಯಬೇಕೆಂಬುದಾಗಿತ್ತು. ಇವನು ಹೊಸಧರ್ಮ ಮತ್ತು ಪಂಥವೊಂದನ್ನು ಸ್ಥಾಪಿಸಬೇಕೆಂದು ಆಪೇಕ್ಷಿಸಿದನು. ಆದರೆ ಅವನ ಹಿತಕಾಂಕ್ಷಿಯಾದ ದೆಹಲಿಯ ಕೊತ್ವಾಲ ಖ್ವಾಜಿ ಅಲಾವುಲ್ ಮುಲ್ಕನು "ಕೇವಲ ಪ್ರವಾದಿಗಳು ಮಾತ್ರ ಅರಸರಾಗಿ ಕೆಲಸ ಮಾಡಿದ್ದಾರೆಯೇ ಹೊರತು ಅರಸರಾಗಿದ್ದವರು ಯಾರೂ ಪ್ರವಾದಿ ಕೆಲಸವನ್ನು ಮಾಡಲಿಲ್ಲ". ಎಂದು ಸಲಹೆ ನೀಡಿದ್ದ ರಿಂದಾಗಿ ಹೊಸಧರ್ಮ ಮತ್ತು ಪಂಥದ ಯೋಜನೆಯನ್ನು ಕೈಬಿಟ್ಟನು. ರಾಜ್ಯ ಮತ್ತು ಧರ್ಮವನ್ನು ಪ್ರತ್ಯೇಕಿಸಿ ಆಡಳಿತವನ್ನು ಸಂಘಟಿಸಿದನು.

**೨. ದಂಗೆಗಳು ಅವುಗಳಿಗೆ ಕಾರಣಗಳು ಮತ್ತು ಪರಿಹಾರೋಪಾಯದ ಆಜ್ಞೆಗಳು:** ಅಲ್ಲಾವುದ್ದೀನನ ಆಡಳಿತಾವಧಿಯಲ್ಲಿ ಕೆಲವು ದಂಗೆಗಳು ಸಂಭವಿಸಿದವು. ಮೊದಲ ದಂಗೆಯು ೧೨೯೭ ರಲ್ಲಿ ನವ ಮುಸ್ಲಿಮರಿಂದ ಸಂಭವಿಸಿತು. ಹಾಗೆಯೇ ನಸ್ರತ್‌ಖಾನ್, ಅಮೀರ್ ಉಮರ್, ಹಾಜಿಮೌಲ ಮೊದಲಾದವರಿಂದ ದಂಗೆಗಳು ಸಂಭವಿಸಿದವು. ಇವುಗಳೆಲ್ಲ ಬಹಳ ಕಡಿಮೆ ಅವಧಿಯಲ್ಲಿ ಸಂಭವಿಸಿ ವಿಫಲಗೊಂಡವು. ಆದರೆ ಸುಲ್ತಾನನು ಈ ದಂಗೆಗಳಿಗೆ ಆಡಳಿತ ವ್ಯವಸ್ಥೆಯಲ್ಲಿನ ಕೊರತೆಗಳೇ ಕಾರಣವಿರಬಹುದೆಂಬ ತೀರ್ಮಾನಕ್ಕೆ ಬಂದನು. ಆದ್ದರಿಂದ ತನ್ನ ಆಪ್ತರೊಡನೆ ಸಮಾಲೋಚಿಸಿ ದಂಗೆಗಳಿಗೆ ಕೆಳಕಂಡ ನಾಲ್ಕು ಕಾರಣಗಳನ್ನು ಗುರುತಿಸಿದನು. ಅವುಗಳೆಂದರೆ-

ಅ. ರಾಜ್ಯದ ಪರಿಸ್ಥಿತಿಯ ಬಗ್ಗೆ ಸುಲ್ತಾನನಿಗೆ ಸಮರ್ಪಕ ಮಾಹಿತಿ ನೀಡಲು ಅಸಮರ್ಥವಾದ ಗೂಢಾಚಾರ ವ್ಯವಸ್ಥೆ.

ಆ. ನೋಬೆಲ್ಲರ ನಡುವಣ ನಡೆಯುವ ಮಧ್ಯಪಾನ ಕೂಟಗಳು.

ಇ. ನೋಬೆಲ್ಲರ ನಡುವಣ ನಡೆಯುವ ಸಾಮಾಜಿಕ ಕೂಟಗಳು ಮತ್ತು ವೈವಾಹಿಕ ಸಂಬಂಧಗಳು.

ಈ. ಅಧಿಕಾರ ಮತ್ತು ವಿರಾಮ ಒದಗಿಸಿ, ಕೆಡಕು ಮತ್ತು ಘರ್ಷಣೆಗಳ ಬಗ್ಗೆ ಯೋಚಿಸುವಂತೆ ಮಾಡಿ ಅಹಂಕಾರ ಮತ್ತು ಅವಿಧೇಯತೆಯನ್ನು ಉತ್ತೇಜಿಸುವ ಸಮೃದ್ಧ ಹಣ.

ದಂಗೆಗಳಿಗೆ ಕಾರಣವಾದ ದೋಷಗಳನ್ನು ನಿವಾರಿಸಲು ಮತ್ತು ಬಂಡಾಯಗಳನ್ನು ನಿಲ್ಲಿಸಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಸುಲ್ತಾನನು ಪ್ರತಿಬಂಧಕ ನಿಯಮಗಳನ್ನು ಜಾರಿಗೆ ತಂದನು. ಪ್ರಥಮ ಕ್ರಮವಾಗಿ ಅವನು ಖಾಸಗಿ ಸ್ವತ್ತಿನ ಪದ್ಧತಿಯನ್ನು ರದ್ದುಮಾಡಿದ.

ನಿವೃತ್ತಿ ವೇತನಗಳು ಮತ್ತು ದತ್ತಿಗಳು ರಾಜ್ಯಕ್ಕೆ ಮುಟ್ಟುಗೋಲಾದವು. ಇನಾಂಗಳು ಗ್ರಾಮಗಳ ಒಡೆತನದ ಹಕ್ಕುಗಳು ಸರ್ಕಾರದ ವಶವಾದವು. ಎಲ್ಲ ಸಾಧ್ಯವಾದ ಮಾರ್ಗಗಳಿಂದಲೂ ಹಣವನ್ನು ಜನರಿಂದ ವಸೂಲಿ ಮಾಡುವಂತೆ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಯಿತು. ದಕ್ಷತೆಯುಳ್ಳ ವ್ಯವಸ್ಥಿತ ಗೂಢಾಚಾರ ದಳವೊಂದನ್ನು ಸ್ಥಾಪಿಸಿದನು. ಬರೀದರು ಮತ್ತು ಮುನ್ಹಿಗಳನ್ನು ಎಲ್ಲೆಡೆಯೂ ನೇಮಿಸಲಾಯಿತು. ಮಧ್ಯ ಹಾಗೂ ಮಾದಕ ಪದಾರ್ಥಗಳ ಸೇವನೆ ಮತ್ತು ಮಾರಾಟವನ್ನು ಹಾಗೂ ಜೂಜಾಡುವುದನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಯಿತು. ಶ್ರೀಮಂತರ ಔತಣಕೂಟಗಳು, ಸಾಮಾಜಿಕ ಕೂಟಗಳನ್ನು ನಡೆಸುವುದನ್ನು ನಿಷೇಧಿಸಲಾಯಿತು. ಕುಲೀನ ವರ್ಗದ ಸರದಾರರು ಸುಲ್ತಾನನ ಅನುಮತಿಯಿಲ್ಲದೆ ಪರಸ್ಪರರಲ್ಲಿ ವೈವಾಹಿಕ ಸಂಬಂಧವನ್ನು ನೆರವೇರಿಸುವಂತಿರಲಿಲ್ಲ. ಅಲ್ಲಾವುದ್ದೀನನ ಈ ಕ್ರಮಗಳಿಂದಾಗಿ, ಅವನು ದೈಹಿಕವಾಗಿ ಮತ್ತು ಮಾನಸಿಕವಾಗಿ ಅಬಲನಾದಾಗಲೂ ಅವನ ವಿರುದ್ಧ ದಂಗೆಯೇಳುವ ಮನಸ್ಸನ್ನು ಮುಂದೆ ಯಾರು ಮಾಡಲಿಲ್ಲ.

೩. **ಹಿಂದೂಗಳ ಬಗೆಗಿನ ನೀತಿ :** ಅಲ್ಲಾವುದ್ದೀನನ ಹಿಂದೂಗಳ ಬಗೆಗಿನ ನೀತಿಯ ಬಗ್ಗೆ ಇತಿಹಾಸಕಾರರಲ್ಲಿ ವಿಭಿನ್ನ ಅಭಿಪ್ರಾಯಗಳಿವೆ. ಅವನ ಕಾಲದಲ್ಲಿ ಹಿಂದೂಗಳ ಮೇಲೆ ಹೇರಿದ ಅಧಿಕ ಭೂಕಂದಾಯದ ಹೊರೆಯ ಆಧಾರದ ಮೇಲೆ ಅವನನ್ನು ಹಿಂದೂ ವಿರೋಧಿ ಎಂಬುದಾಗಿ ಚಿತ್ರಿಸಲಾಗಿದೆ. ಬರ್ನಿ ತಿಳಿಸುವಂತೆ ಗ್ರಾಮದ ಕಂದಾಯ ಅಧಿಕಾರಿಗಳಾದ ಹಿಂದೂಕುತ್‌ಗಳ ಮತ್ತು ಮುಖದ್ದಮ್‌ಗಳವರನ್ನು ವಜಾಮಾಡಿದ್ದರು. ಇದರಿಂದಾಗಿ ಬಡತನಕ್ಕೀಡಾದ ಕುತ್‌ಗಳ ಮತ್ತು ಮುಖದ್ದಮ್‌ಗಳವರ ಪತ್ನಿಯರು ಮುಸಲ್ಮಾನರ ಮನೆಗಳಲ್ಲಿ ಸೇವಕಿಯರಾಗಿ ಜೀವನ ನಿರ್ವಹಣೆಗೆ ಕೆಲಸ ಮಾಡಹತ್ತಿದರು. ಈ ರೀತಿಯ ನೀತಿ ಅನುಸರಿಸಲು ಧಾರ್ಮಿಕ, ರಾಜಕೀಯ, ಆರ್ಥಿಕ ಕಾರಣಗಳು ಇದ್ದವು.

೪. **ಕಂದಾಯ ಮತ್ತು ತೆರಿಗೆ ವ್ಯವಸ್ಥೆಯಲ್ಲಿ ಸುಧಾರಣೆ :** ಅಲ್ಲಾವುದ್ದೀನನ ಕಂದಾಯ ಮತ್ತು ತೆರಿಗೆ ವ್ಯವಸ್ಥೆಯ ತೀವ್ರ ಕ್ರಮಗಳು ಸಹ ಪ್ರಬಲ ಹಾಗೂ ನಿರಂಕುಶ ರಾಜ್ಯ ವ್ಯವಸ್ಥೆಯನ್ನು ಸ್ಥಾಪಿಸುವ ಉದ್ದೇಶದಿಂದಲೇ ಕೂಡಿದ್ದವು. ದಂಗೆಗಳು ಮತ್ತು ಧಾಳಿಗಳನ್ನು ತಡೆಗಟ್ಟುವುದು ಹಾಗೂ ಬಲಿಷ್ಠವಾದ ಸೈನ್ಯದ ಅವಶ್ಯಕತೆಗಳನ್ನು ಪೂರೈಸಲು ಅಗಾಧ ಸಂಪತ್ತು ಬೇಕಾಗಿದ್ದುದರಿಂದ ಕಂದಾಯ ಮತ್ತು ತೆರಿಗೆಗಳನ್ನು ಅಧಿಕಗೊಳಿಸಿದನು. ರಾಜ್ಯಕ್ಕೆ ಸಹಾಯಕರಾದವರು ಮತ್ತು ಯೋಗ್ಯರಿಗೆ ಭೂಮಿಯನ್ನು ಹಂಚಿ ರಾಜ್ಯದ ಕಂದಾಯವನ್ನು ಅಧಿಕಗೊಳಿಸಿದನು.

ವಂಶ ಪಾರಂಪರ್ಯವಾಗಿ ಕಂದಾಯ ಅಧಿಕಾರಿಗಳಾಗಿದ್ದ ಹಿಂದೂ ಕುತ್ಸ್, ಚೌದರಿಗಳು ಮತ್ತು ಮುಖದ್ದಮ್‌ರ ಅಧಿಕಾರವನ್ನು ಕಸಿದುಕೊಂಡನು. ಏಕೆಂದರೆ ಈ ವರ್ಗವು ಮಧ್ಯವರ್ತಿಗಳಾಗಿ ರೈತರಿಂದ ಅಧಿಕ ಕಂದಾಯವನ್ನು ವಸೂಲಿ ಮಾಡಿ ಶ್ರೀಮಂತರಾಗಿದ್ದರು. ಅಲ್ಲದೆ ಇವರು 'ಖಿರಾಜ್', 'ಜೆಜಿಯ', 'ಘಾರಿ' ಮತ್ತು 'ಚರೈ' ಎಂಬ ತೆರಿಗೆಗಳಿಂದ ಮುಕ್ತರಾಗಿದ್ದರು.

ಅಲ್ಲಾವುದ್ದೀನನು ಹಿಂದಿನ ಭೂಮಾಪನ ಕ್ರಮವಾಗಿ ಕಂದಾಯ ವಿಧಿಸುವುದನ್ನು ಬಿಟ್ಟು ಭೂಮಿಯ ಒಟ್ಟು ಉತ್ಪಾದನೆಯಲ್ಲಿ ಅರ್ಧಭಾಗವನ್ನು ಕಂದಾಯವಾಗಿ ವಸೂಲಿ ಮಾಡುತ್ತಿದ್ದನು. ಸುಲ್ತಾನನು ಹಣದ ರೂಪಕ್ಕೆ ಬದಲಾಗಿ ಧಾನ್ಯದ ರೂಪದಲ್ಲಿ ಕಂದಾಯ ವನ್ನು ವಸೂಲಿ ಮಾಡಲು ಆದ್ಯತೆ ನೀಡಿದನು. ಹುಲ್ಲುಗಾವಲಿನ ತೆರಿಗೆ ಮತ್ತು ಮನೆ ತೆರಿಗೆಗಳನ್ನು ಹೊಸದಾಗಿ ವಿಧಿಸಿದನು. ಕಾರಿ ಎಂಬ ಮತ್ತೊಂದು ತೆರಿಗೆಯಿತ್ತು. ಮೇಲಿನ ಕ್ರಮಗಳು ಅಲ್ಲಾವುದ್ದೀನನ ಕಾಲದಲ್ಲಿ ರೈತರ ಮೇಲೆ ಅಧಿಕ ಹೊರೆ ಬಿದ್ದಿತ್ತು ಎಂಬುದನ್ನು ತಿಳಿಸುತ್ತವೆ. ಕಂದಾಯ ವ್ಯವಸ್ಥೆಯು ರಾಜ್ಯಾದ್ಯಂತ ಎಲ್ಲರಿಗೂ ಮತ್ತು ಎಲ್ಲ ಪ್ರದೇಶ ಗಳಲ್ಲೂ ಏಕ ರೀತಿಯದಾಗಿರಲಿಲ್ಲ. ಉದಾಹರಣೆಗೆ ಮುಸ್ಲಿಂ ವರ್ತಕರು ತಾವು ಮಾಡಿದ ವ್ಯಾಪಾರದಲ್ಲಿ ಶೇಕಡಾ ೫ ಭಾಗವನ್ನೂ, ಹಿಂದೂಗಳು ಶೇಕಡ ೧೦ ಭಾಗವನ್ನೂ ಸಲ್ಲಿಸ ಬೇಕಿದ್ದುದು ಅಲ್ಲದೆ ರಾಜ್ಯದ ಅಧಿಕಾರಿಗಳಿಂದ ಕಂದಾಯ ವಸೂಲಿ ಮಾಡುತ್ತಿದ್ದುದು. ಇದು ಕೇವಲ ದೆಹಲಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಮಾತ್ರ ವಿಧಿಸಲಾಗುತ್ತಿತ್ತು.

ಅಲ್ಲಾವುದ್ದೀನನು ಕಂದಾಯ ಆಡಳಿತವನ್ನು ನೋಡಿಕೊಳ್ಳಲು ದಿವಾನ್-ಐ-ಮುಸ್ತಖ್ ರಾಜ್ ಎಂಬ ಹೊಸ ಇಲಾಖೆಯೊಂದನ್ನು ಸ್ಥಾಪಿಸಿದನು. ಷರಫ್ ಖೈನಿ ಎಂಬುವವನು ಕಂದಾಯ ಮಂತ್ರಿಯಾಗಿದ್ದನು. ಮುಹಸ್ಸಿಲ್ಸ್, ಅಮೀಲ್ಸ್, ಗುಮಾಸ್ತರು, ಮುತಸರ್ರಿಫ್ಸ್ ಮುಂತಾದ ಹಿರಿಯ ಕಿರಿಯ ಅಧಿಕಾರಿಗಳನ್ನು ನೇಮಿಸಿದನು. ಕಂದಾಯ ಅಧಿಕಾರಿಗಳು ಲಂಚರುಷುವತ್ತಿಗೆ ಕೈಹಾಕದಿರಲು ಅವರ ವೇತನವನ್ನು ಹೆಚ್ಚಿಸಿದನು. ಪಡಿತರ ಪದ್ಧತಿಯನ್ನು ಜಾರಿಗೆ ತಂದನು.

೫. ಸೈನಿಕ ಆಡಳಿತ : ಅಲ್ಲಾವುದ್ದೀನನು ಪ್ರಾಂತೀಯ ಗವರ್ನರುಗಳ ಮೇಲಿನ ಅವಲಂಬನೆಯನ್ನು ತ್ಯಜಿಸಿ ಕೇಂದ್ರ ಸರ್ಕಾರದ ವತಿಯಿಂದ ಸದಾ ಸಿದ್ಧವಿರುವ ಸುಲ್ತಾನನ ಸೈನ್ಯವೊಂದನ್ನು ಸ್ಥಾಪಿಸಿದನು. ಆ ಸೈನ್ಯಕ್ಕೆ ನೇಮಕಾತಿ, ಶಸ್ತ್ರಾಸ್ತ್ರ ಪೂರೈಕೆ, ತರಬೇತಿ ಮತ್ತು ವೇತನ ನೀಡುವುದನ್ನು ಕೇಂದ್ರ ಸರ್ಕಾರವೇ ಮಾಡುತ್ತಿತ್ತು. ಸೈನಿಕ ಮಂತ್ರಿ (ಅರಿಜ್-ಏ-ಮುಮಾಲಿಕ್)ಯು ನೇರವಾಗಿ ಸೈನಿಕರನ್ನು ನೇಮಕಾತಿ ಮಾಡಿಕೊಳ್ಳುತ್ತಿದ್ದನು. ಒಂದು ಕುದುರೆ ಹೊಂದಿದ ಒಬ್ಬ ಸೈನಿಕನಿಗೆ (ಏಕ್ ಅಸ್ಪ) ವರ್ಷಕ್ಕೆ ೨೩೪ ಟಂಕಗಳನ್ನು ಮತ್ತು ಎರಡು ಅಶ್ವಗಳನ್ನು ಹೊಂದಿದ ಸೈನಿಕರಿಗೆ (ದೊ ಅಸ್ಪ) ೭೮ ಟಂಕಗಳಷ್ಟು ಹೆಚ್ಚುವರಿ ವೇತನವನ್ನು ನೀಡಲಾಗುತ್ತಿತ್ತು. ಫೆರಿಸ್ತನ ಪ್ರಕಾರ ಸುಲ್ತಾನನ ಸೈನ್ಯದಲ್ಲಿ ೪,೭೫,೦೦೦ ಅಶ್ವ ಸೈನಿಕರಿದ್ದರು. ಅಶ್ವದಳ, ಪದಾತಿದಳ, ಗಜದಳಗಳಿದ್ದವು. ಯುದ್ಧದಲ್ಲಿ ಬೃಹತ್ ಕಲ್ಲುಗಳನ್ನು ಎಸೆಯುವ ಯಂತ್ರಗಳನ್ನೂ ಬಳಸಲಾಗುತ್ತಿತ್ತು.

ಅಲ್ಲಾವುದ್ದೀನನ ಸೈನ್ಯವು ಟರ್ಕಿ ಮಾದರಿಯಾದಾಗಿದ್ದು ತುಕಡಿಗಳನ್ನು ದಶಮಾನ ಪದ್ಧತಿಯ ಮೇಲೆ ವಿಭಾಗಿಸಲಾಗಿತ್ತು. ಸೈನ್ಯದಲ್ಲಿನ ಭ್ರಷ್ಟಾಚಾರ ಮತ್ತು ಉತ್ತಮ ಕುದುರೆ ಗಳನ್ನು ಸೈನ್ಯದಲ್ಲಿ ಹೊಂದುವುದಕ್ಕೋಸ್ಕರ ಪ್ರತಿಯೊಬ್ಬ ಸೈನಿಕನ ಚಹರೆಗಳ ಬಗ್ಗೆ ವಿವರಣೆಯನ್ನು ಬರೆದಿಡುವ 'ಹುಲಿಯ' ಪದ್ಧತಿಯನ್ನು ಮತ್ತು ಕುದುರೆಗಳಿಗೆ ಮುದ್ರೆಹಾಕುವ

'ದಾಗ್' ಕ್ರಮವನ್ನು ಜಾರಿಗೆ ತಂದನು. ಭಾರತದಲ್ಲಿ ಈ ಸೈನಿಕ ಸುಧಾರಣೆಯನ್ನು ಪ್ರಥಮ ವಾಗಿ ಜಾರಿಗೆ ತಂದವನು ಅಲ್ಲಾವುದ್ದೀನ್. ಸೈನಿಕ ಮಂತ್ರಿಯು (ದಿವಾನ್-ಐ-ಆರಿಜ್) ಎಲ್ಲಾ ದಾಖಲೆಗಳನ್ನು ತನ್ನಲ್ಲಿಟ್ಟುಕೊಳ್ಳುತ್ತಿದ್ದನು. ಅಲ್ಲದೆ ಒಮ್ಮೊಮ್ಮೆ ಪೂರ್ಣ ಸೈನ್ಯದ ಕುದುರೆಗಳು ಮತ್ತು ಸೈನಿಕರನ್ನು ಪರೀಕ್ಷಿಸಲಾಗುತ್ತಿತ್ತು. ಕೋಟೆಗಳನ್ನು ದುರಸ್ತಿಗೊಳಿಸಿ ಮತ್ತು ಹೊಸ ಕೋಟೆಗಳನ್ನು ನಿರ್ಮಿಸಿ ಅವುಗಳು ತುರ್ತು ಪರಿಸ್ಥಿತಿಗೆ ಸದಾ ಸಿದ್ಧವಾಗಿರುವಂತೆ ಮಾಡಲಾಗಿತ್ತು.

## ಮಾರುಕಟ್ಟೆ ವ್ಯವಸ್ಥೆ ಅಥವಾ ಆರ್ಥಿಕ ಸುಧಾರಣೆಗಳು

ಅಲ್ಲಾವುದ್ದೀನನು ಜಾರಿಗೆ ತಂದ ಆರ್ಥಿಕ ಸುಧಾರಣೆಗಳಲ್ಲಿ ಬೆಲೆ ಮತ್ತು ಮಾರುಕಟ್ಟೆ ನಿಯಂತ್ರಣ ಅತ್ಯಂತ ಪ್ರಮುಖವಾದುದು ಮತ್ತು ಅದನ್ನು ಅತ್ಯಂತ ಯಶಸ್ವಿಯಾಗಿ ಜಾರಿಗೆ ತಂದನು. ಅವನ ದಿಗ್ವಿಜಯಗಳಿಗಿಂತ ಅವನ ಆರ್ಥಿಕ ಸುಧಾರಣೆಗಳು ಅದರಲ್ಲೂ ಮಾರುಕಟ್ಟೆ ನಿಯಂತ್ರಣವು ಪ್ರಸಿದ್ಧಿ ಪಡೆದು ಅಲ್ಲಾವುದ್ದೀನನ ಹೆಸರು ಇತಿಹಾಸದಲ್ಲಿ ಅಚ್ಚಳಿಯದೇ ಉಳಿಯುವಂತೆ ಮಾಡಿದೆ.

ಅಲ್ಲಾವುದ್ದೀನನು ತನ್ನ ಬೃಹತ್ ಸಾಮ್ರಾಜ್ಯವನ್ನು ನಿಭಾಯಿಸಲು ಬೃಹತ್ ಗಾತ್ರದ ಶಾಶ್ವತ ಸೇನೆಯನ್ನು ಹೊಂದಿದ್ದನು. ಅಂತಹ ಸೈನ್ಯವನ್ನು ದಕ್ಷತೆಯಿಂದ ನಿರ್ವಹಿಸಲು ಅಪಾರ ಹಣದ ಅವಶ್ಯಕತೆ ಇತ್ತು. ಸುಲ್ತಾನನು ದಖನ್ನಿನ ದಂಡಯಾತ್ರೆಗಳಿಂದ ತಂದ ಅಪಾರ ಐಶ್ವರ್ಯವು ರಾಜ್ಯದಲ್ಲಿ ಹಣದ ಮೌಲ್ಯವನ್ನು ಕುಗ್ಗಿಸಿ ವಸ್ತುಗಳ ಬೆಲೆಯನ್ನು ಏರಿಸಿದ್ದಿತು. ವಸ್ತುಗಳ ಬೆಲೆ ಏರಿಕೆಯಿಂದಾಗಿ ನಿಗದಿಯುತವಾದ ವೇತನದಲ್ಲಿ ಸೈನಿಕರು ಜೀವನ ನಡೆಸುವುದು ಬಹಳ ಕಷ್ಟವಾಗಿತ್ತು. ಆದರೆ ಸುಲ್ತಾನನು ಸೈನಿಕರ ಸಂಬಳವನ್ನು ಹೆಚ್ಚಿಸಲು ಇಚ್ಚಿಸಲಿಲ್ಲ. ಏಕೆಂದರೆ ಅದರಿಂದ ರಾಜ್ಯದ ಸಂಪನ್ಮೂಲಗಳಿಗೆ ಹೆಚ್ಚು ಹೊರೆ ಯಾಗುವುದಲ್ಲದೆ, ಈಗಾಗಲೇ ಪರಮಾವಧಿ ಸೆರಿಗೆಗೆ ಒಳಗಾಗಿದ್ದ ಜನರ ಮೇಲೂ ಅದು ಹೊರೆಯಾಗುತ್ತದೆಂದು ಸುಲ್ತಾನನು ತಿಳಿದಿದ್ದ. ಆದ್ದರಿಂದ ಸುಲ್ತಾನನು ಸೈನಿಕರು ಸಾಧಾರಣ ಸಂಬಳದಲ್ಲಿ ಜೀವಿಸಲು ಸಹಾಯವಾಗುವಂತೆ ಜೀವನಕ್ಕೆ ಅಗತ್ಯವಾದ ವಸ್ತುಗಳಿಂದ ಹಿಡಿದು ಗುಲಾಮರು, ಕುದುರೆಗಳು, ಆಯುಧಗಳು, ರೇಷ್ಮೆ ಮತ್ತು ಪೀಠೋಪಕರಣಗಳು, ಭೋಗ ವಸ್ತುಗಳ ಬೆಲೆ ನಿಯಂತ್ರಣ ಹಾಗೂ ಈ ವಸ್ತುಗಳಿಗೆ ಸಂಬಂಧಿಸಿದ ಬೇಡಿಕೆ ಮತ್ತು ಪೂರೈಕೆಯ ನಿಯಮಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ನಿಯಂತ್ರಿಸುವ ಶಾಸನವನ್ನು ಜಾರಿಗೆ ತಂದನು. ಅಮೀರ್‌ಖುಸ್ರು "ಸಾಮಾನ್ಯ ಜನರ ಕಲ್ಯಾಣಕ್ಕಾಗಿ ಈ ನೀತಿಯನ್ನು ಪರಿಚಯಿಸಿದ" ಎಂದು ತಿಳಿಸುತ್ತಾನೆ. ಮಾರುಕಟ್ಟೆ ಅಥವಾ ಆರ್ಥಿಕ ನಿಯಂತ್ರಣವನ್ನು ಅಲ್ಲಾವುದ್ದೀನನು ಕೆಳಕಂಡಂತೆ ಜಾರಿಗೊಳಿಸಿದ್ದನು.

ಬೇರೆ ಬೇರೆ ವಸ್ತುಗಳು ಅಂದರೆ ಆಹಾರ, ದಿನಸಿ, ಕುದುರೆಗಳು, ಜಾನುವಾರುಗಳು, ಗುಲಾಮರು, ಬಟ್ಟೆ, ಮೀನು, ಮಾಂಸ, ಎಲೆ, ಒಣಹಣ್ಣುಗಳು, ಸೂಜಿ ಮುಂತಾದ ವಸ್ತುಗಳ

ಬೆಲೆಗಳನ್ನು ರಾಜ್ಯವು ನಿಗಧಿಗೊಳಿಸಿತು. ರಾಜ್ಯದ ಅನುಮತಿಯಿಲ್ಲದೆ ಅವುಗಳ ಬೆಲೆಯನ್ನು ಬದಲಾಯಿಸುವಂತಿರಲಿಲ್ಲ. ಸರಕುಗಳನ್ನು ನಾಲ್ಕು ಭಾಗಗಳನ್ನಾಗಿ ವಿಭಾಗಿಸಿ, ನಾಲ್ಕು ವಿಭಿನ್ನ ಮಾರುಕಟ್ಟೆಗಳನ್ನು ಸ್ಥಾಪಿಸಿದನು. ಅವುಗಳೆಂದರೆ ಪ್ರತ್ಯೇಕ-

**೧. ಕೇಂದ್ರೀಯ ದವಸಧಾನ್ಯಗಳ ಮಾರುಕಟ್ಟೆ ಅಥವಾ ಮಂಡಿ: ದೆಹಲಿ**

ಗೋಧಿ ಒಂದು ಮಣಕ್ಕೆ ೭ ೧/೨ ಜಿತ್ತಲ್‌ಗಳು
ಬಾರ್ಲಿ ಒಂದು ಮಣಕ್ಕೆ ೪ ಜಿತ್ತಲ್‌ಗಳು
ಭತ್ತ ಒಂದು ಮಣಕ್ಕೆ ೫ ಜಿತ್ತಲ್‌ಗಳು
ಉದ್ದು ಒಂದು ಮಣಕ್ಕೆ ೫ ಜಿತ್ತಲ್‌ಗಳು
ಬೇಳೆ-ದ್ವಿದಳ ಧಾನ್ಯ ಒಂದು ಮಣಕ್ಕೆ ೫ ಜಿತ್ತಲ್‌ಗಳು
ಅವರೆಕಾಳು ಒಂದು ಮಣಕ್ಕೆ ೩ ಜಿತ್ತಲ್‌ಗಳು

**೨. ಸೆರಾ-ಇ-ಅದಲ್ / ಉಡುಪು ಮತ್ತು ಕೈಗಾರಿಕ ಉತ್ಪನ್ನಗಳ ಮಾರುಕಟ್ಟೆ: ಬದೌನಿ ಗೇಟ್ ಬಳಿ ಸ್ಥಾಪಿಸಲಾಗಿತ್ತು.**

ರೇಷ್ಮೆ ಉತ್ತಮ ೧೬ ಟಂಕಗಳು
ರೇಷ್ಮೆ ಮಧ್ಯಮ ೬ ಟಂಕಗಳು
ರೇಷ್ಮೆ ಅಧಮ ೨ ಟಂಕಗಳು
ದೆಹಲಿ ಮಸ್ಲಿನ್ ಬಟ್ಟೆ ೧೭ ಟಂಕಗಳು
ಕಂಬಳಿ ಉತ್ತಮ ೩೬ ಜಿತ್ತಲ್‌ಗಳು
ಕಂಬಳಿ ಒರಟು ೬. ಜಿತ್ತಲ್‌ಗಳು
ಹತ್ತಿ ಉತ್ತಮ ೩೬ ಜಿತ್ತಲ್‌ಗಳು
ಹತ್ತಿ ಕೆಳಮಟ್ಟ ೧೦ ಜಿತ್ತಲ್‌ಗಳು
ಉಪ್ಪು ೨ ೧/೨ ಮಣಕ್ಕೆ ೫ ಜಿತ್ತಲ್‌ಗಳು
ಸಕ್ಕರೆ ಬಿಳಿಯದು ಪ್ರತಿ ಸೇರಿಗೆ ೧ ೧/೨ ಜಿತ್ತಲ್
ಕಂದು ಸಕ್ಕರೆ ಪ್ರತಿ ಸೇರಿಗೆ ೧/೪ ಜಿತ್ತಲ್
ಬೆಣ್ಣೆ ೨ ೧/೨ ಸೇರಿಗೆ ೧ ಜಿತ್ತಲ್
ಎಳ್ಳೆಣ್ಣೆ ೩ ಸೇರಿಗೆ ೧ ಜಿತ್ತಲ್

**೩. ಜಾನುವಾರು / ಕುದುರೆಗಳು ಹಾಗೂ ಗುಲಾಮರ ಮಾರುಕಟ್ಟೆ**

ಜಾನುವಾರುಗಳು:

ಮಾಂಸದ ಹಸುವಿನ ಬೆಲೆ ೧ ೧/೨ ಟಂಕಗಳು
ಹಾಲಿನ ಹಸು ೩ ಟಂಕಗಳು
ಹೋರಿಗಳು ೩ ಟಂಕಗಳು
ಕೊಬ್ಬಿದ ಮೇಕೆ / ಕುರಿ ೧೨ ರಿಂದ ೧೪ ಜಿತ್ತಲ್‌ಗಳು

ಕುದುರೆಗಳು:

೧ನೇ ವರ್ಗದ ಕುದುರೆ ೧೦೦ ರಿಂದ ೧೨೦ ಟಂಕಗಳು

೨ನೇ ವರ್ಗದ ಕುದುರೆ ೮೦ ರಿಂದ ೯೦ ಟಂಕಗಳು

೩ನೇ ವರ್ಗದ ಕುದುರೆ ೬೦ ರಿಂದ ೭೦ ಟಂಕಗಳು

ಗುಲಾಮರು:

ಮನೆಗೆಲಸದಲ್ಲಿ ನುರಿತ ಗುಲಾಮ ಹೆಣ್ಣು ೫ ರಿಂದ ೧೨ ಟಂಕಗಳು

ಮನೆಗೆಲಸದಲ್ಲಿ ನುರಿತ ಗುಲಾಮ ಗಂಡು ೧೦ ರಿಂದ ೧೫ ಟಂಕಗಳು

ಸುಂದರಿ ಗುಲಾಮಳು ೨೦ ರಿಂದ ೩೦ ಟಂಕಗಳು

ಸುಂದರ ಗುಲಾಮ ೩೦ ರಿಂದ ೪೦ ಟಂಕಗಳು

ಅನನುಭವಿ ಗುಲಾಮರು ೩ ರಿಂದ ೫ ಟಂಕಗಳು

**೪. ಎಲ್ಲಾ ವಸ್ತುಗಳನ್ನು ಒಳಗೊಂಡಂತೆ ಸಾಮಾನ್ಯ ಮಾರುಕಟ್ಟೆ:**

ಇವುಗಳನ್ನು ಪಟ್ಟಣದ ವಿವಿಧ ಭಾಗಗಳಲ್ಲಿ ಸ್ಥಾಪಿಸಲಾಗಿತ್ತು. ಇಲ್ಲಿ ಎಲ್ಲಾ ವಸ್ತುಗಳನ್ನು ಮಾರಾಟ ಮಾಡಲಾಗುತ್ತಿತ್ತು. ದುಪ್ಪಟಗಳು, ಕಾಲುಚೀಲ, ಬಾಚಣಿಗೆ, ಸೂಜಿ, ತರಕಾರಿ, ಹಲ್ವ, ಮೀನು, ಬಣ್ಣ, ಅಡಿಕೆ ಮುಂತಾದ ವಸ್ತುಗಳನ್ನೂ ಮಾರಲಾಗುತ್ತಿತ್ತು.

ಅಲ್ಲಾವುದ್ದೀನನು ಧಾನ್ಯಗಳ ಬೆಲೆಯನ್ನು ಹತೋಟಿಯಲ್ಲಿಡಲು ರಾಜಧಾನಿಯ ಸುತ್ತಮುತ್ತಲಿನ ಖಾಲ್ಸ ಗ್ರಾಮಗಳಿಂದ ಹಾಗೂ ಭೂಮಿಯಿಂದ ಕಂದಾಯವನ್ನು ಧಾನ್ಯ ರೂಪದಲ್ಲಿ ವಸೂಲಿ ಮಾಡಿ ಮಳಿಗೆಗಳಲ್ಲಿ ಸಂಗ್ರಹಿಸಿದ್ದನು. ಈ ರೀತಿ ಸಂಗ್ರಹಿಸಿದ ಧಾನ್ಯಗಳನ್ನು ಅಭಾವ ಪರಿಸ್ಥಿತಿ ತಲೆದೋರಿದಾಗ ಮಾರುಕಟ್ಟೆಗೆ ಬಿಡುಗಡೆ ಮಾಡಿ ಬೆಲೆಯನ್ನು ಒಂದೇ ಪ್ರಮಾಣದಲ್ಲಿ ಕಾಯ್ದುಕೊಳ್ಳಲಾಗುತ್ತಿತ್ತು. ಅಭಾವ ಸ್ಥಿತಿಯಲ್ಲಿ ಜನರು ತಮ್ಮ ಅವಶ್ಯಕತೆಗೆ ತಕ್ಕಂತೆ ಕೊಳ್ಳುವಂತಹ ಪಡಿತರ ನಿಯಮಗಳನ್ನು ಪಾಲಿಸಲಾಗುತ್ತಿತ್ತು. ಈ ಕ್ರಮಗಳಿಂದಾಗಿ ಜನರಿಗೆ ಯಾವ ಕಾಲದಲ್ಲೂ ಯಾವ ವಸ್ತುವಿನ ಅಭಾವವೂ ಉಂಟಾಗು ತ್ತಿರಲಿಲ್ಲ. ಖಾಸಗಿ ಜನರು ಧಾನ್ಯಗಳನ್ನು ಸಂಗ್ರಹಿಸಿಡಲು ಅವಕಾಶವಿರಲಿಲ್ಲ. ರಾಜ್ಯದ ದಫ್ತರದಲ್ಲಿ ನಮೂದಿಸಿದ ಧಾನ್ಯ ವ್ಯಾಪಾರಿಗಳು ಮಾತ್ರ ರೈತರಿಂದ ಧಾನ್ಯಗಳನ್ನು ಕೊಳ್ಳ ಬಹುದಿತ್ತು. ಎಲ್ಲ ವರ್ತಕರು ಷಹನಾ-ಐ-ಮಂಡಿ ಎಂಬ ಕಛೇರಿಯಲ್ಲಿ ತಮ್ಮ ಹೆಸರು ಗಳನ್ನು ನೊಂದಾಯಿಸಿಕೊಳ್ಳಬೇಕಾಗಿದ್ದಿತು. ಅಲ್ಲದೆ ಬದೌನಿ ದ್ವಾರದ ವಿಶಾಲ ಒಳಾಂಗಣ ವಾದ ಸರಾಯ್ ಅದಲ್ ಎಂಬ ಸ್ಥಳಕ್ಕೆ ಎಲ್ಲ ವಸ್ತುಗಳನ್ನು ತರಬೇಕಾಗಿತ್ತು. ಎಲ್ಲ ವ್ಯಾಪಾರಿಗಳು ತಮ್ಮ ನಡವಳಿಕೆಯ ಬಗ್ಗೆ ಸಾಕಷ್ಟು ಜಾಮೀನು ಕೊಡಬೇಕಾಗಿತ್ತು. ವ್ಯಾಪಾರಿ ಗಳಿಗೆ ಮುಂಗಡ ಸಾಲ ಹಣ ನೀಡಲಾಗುತ್ತಿತ್ತು. ಎಲ್ಲಾ ವರ್ತಕರು ನಿಗಧಿತವಾದ ಮೊತ್ತದ ವಿವಿಧ ವಸ್ತುಗಳನ್ನು ದೆಹಲಿಗೆ ತರಬೇಕೆಂದು ಬಲವಂತಪಡಿಸಲಾಗುತ್ತಿತ್ತು. ಇದರಿಂದಾಗಿ ಯಾವುದೇ ವಸ್ತುವಿನ ಅಭಾವ ಉಂಟಾಗುತ್ತಿರಲಿಲ್ಲ. ಆಮದು ಮಾಡಿಕೊಂಡ ವಸ್ತುಗಳ ಬೆಲೆಯಲ್ಲಿ ಏರುಪೇರಾದರೆ ಅದರ ನಷ್ಟವನ್ನು ಸರ್ಕಾರವೇ ಭರಿಸುತ್ತಿತ್ತು.

ಮಾರುಕಟ್ಟೆಗಳನ್ನು 'ದಿವಾನ್-ಐ-ರಿಯಾಸತ್' ಮತ್ತು 'ಷಹನ-ಎ-ಮಂಡಿ' ಎಂಬ ಇಬ್ಬರು ಅಧಿಕಾರಿಗಳು ನಿಯಂತ್ರಿಸುತ್ತಿದ್ದರು. ವ್ಯಾಪಾರಿಗಳಲ್ಲಿ 'ಸಂಚಾರಿ ವ್ಯಾಪಾರಿ'ಗಳು ಮತ್ತು 'ಸ್ಥಿರ ವ್ಯಾಪಾರಿ'ಗಳೆಂಬ ವರ್ಗಗಳಿದ್ದವು. ಯಾಕುಬ್ ನಾಸಿರ್‌ನನ್ನು ವಾಣಿಜ್ಯ ಸಚಿವನನ್ನಾಗಿ ನೇಮಿಸಲಾಗಿತ್ತು. ಮುಖ್ಯಾಧಿಕಾರಿಗಳಿಗೆ ಸಹಾಯಕರಾಗಿ ನ್ಯಾಯಾಧೀಶ (ಸರಾಯ್ ಆಲ್), ಗೂಢಾಚಾರರು (ಮುನ್ನಿ), ಪರಿವೀಕ್ಷಣಾ ಅಧಿಕಾರಿ (ಬರೀದ್) ಮುಂತಾದ ಸಹಾಯಕ ಅಧಿಕಾರಿಗಳು ಈ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಕ್ರಮ ಕೈಗೊಳ್ಳುತ್ತಿದ್ದರು. ಯಾರಾದರೂ ಹೆಚ್ಚು ಬೆಲೆಯ ವಸ್ತುವನ್ನು ಕೊಳ್ಳಬೇಕಾದರೆ ದಿವಾನ್-ಎ-ರಿಯಾಸತ್ ಅಥವಾ ದಿವಾನ್-ಎ-ಮಂಡಿಯ ಅನುಮತಿಯನ್ನು ಪಡೆಯಬೇಕಿತ್ತು. ವರ್ತಕರು ವಸ್ತುವನ್ನು ಕಡಿಮೆ ತೂಗುವಷ್ಟು ಮಾಂಸವನ್ನು ಅವರ ದೇಹದಿಂದ ಕತ್ತರಿಸಲಾಗುವುದೆಂಬ ಆಜ್ಞೆಯಿದ್ದುದರಿಂದ ಯಾರೂ ಸಹ ತೂಕದಲ್ಲಿ ಮೋಸ ಮಾಡುತ್ತಿರಲಿಲ್ಲ.

ಅಲ್ಲಾವುದ್ದೀನನು ಜಾರಿಗೆ ತಂದ ಈ ಮಾರುಕಟ್ಟೆ ವ್ಯವಸ್ಥೆಯು ಯಶಸ್ವಿಯಾಯಿತು. ಅಷ್ಟೇ ಅಲ್ಲದೆ ಅವನು ಜೀವಿಸಿರುವ ತನಕ ಈ ನಿಯಮಗಳು ಆಚರಣೆಯಲ್ಲಿದ್ದು ಬೃಹತ್ ಸೈನ್ಯವನ್ನು ಸ್ವಲ್ಪ ವೆಚ್ಚದಲ್ಲಿ ನಿರ್ವಹಿಸಲು ಸಹಾಯವಾಯಿತು. ಫೆರಿಸ್ತಾನು, "ಅಲ್ಲಾವುದ್ದೀನನು ಬದುಕಿರುವವರೆಗೂ ಬೆಲೆ ಒಂದೇ ರೀತಿಯಿದ್ದವು. ಮಳೆ ಇರಲಿ, ಕ್ಷಾಮವಿರಲಿ ಬೆಲೆಯಲ್ಲಿ ಯಾವುದೇ ಏರಿಳಿತ ಉಂಟಾಗಲಿಲ್ಲ. ಇದೊಂದು ವಿಶಿಷ್ಟವಾದ ಸಾಧನೆಯಾಗಿದ್ದು ಇಂತಹದನ್ನು ಯಾರೂ ಮಾಡಿರಲಿಲ್ಲ ಮತ್ತು ಮಾಡಲು ಸಾಧ್ಯವಿಲ್ಲ" ಎಂದಿದ್ದಾನೆ.

ಅಲ್ಲಾವುದ್ದೀನನು ಕ್ರಿ.ಶ.೧೩೧೬ ರಲ್ಲಿ ಮರಣ ಹೊಂದಿದನು. ಈತನು ಮಧ್ಯಯುಗೀನ ಸುಲ್ತಾನರಲ್ಲೇ ಪ್ರಮುಖ ಸ್ಥಾನವನ್ನು ಹೊಂದಿದ್ದಾನೆ. ತನ್ನ ಜೀವಿತಾವಧಿಯಲ್ಲಿ ಸಾಮ್ರಾಜ್ಯ ವಿಸ್ತರಣೆ ಮತ್ತು ಆಡಳಿತದಲ್ಲಿ ಅದ್ಭುತ ಸಾಧನೆಗಳನ್ನು ಮಾಡಿದ್ದನು. ಇವನು ಕ್ರೂರ ಸ್ವಭಾವಿಯಾಗಿದ್ದರೂ ಕೆಚ್ಚೆದೆಯ ವೀರಯೋಧ ಮತ್ತು ಜಾಣಾಕ್ಷನಾದ ದಂಡನಾಯಕನಾಗಿದ್ದನು. ಅಲ್ಲದೆ ದಕ್ಷ ಆಡಳಿತಗಾರನಾಗಿದ್ದು ಆಡಳಿತ ವ್ಯವಸ್ಥೆಯಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಈತನು ಜಾರಿಗೆ ತಂದ ಮಾರುಕಟ್ಟೆ ನಿಯಮಗಳು ಇಂದಿಗೂ ಸಹ ಮಾದರಿಯಾಗಬಹುದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅಲ್ಲಾವುದ್ದೀನನ ನಂತರ ಬಂದ ಖಿಲ್ಜಿ ಸಂತತಿಯ ಸುಲ್ತಾನರು ಅಸಮರ್ಥರಾಗಿದ್ದರಿಂದ ಖಿಲ್ಜಿ ಸಂತತಿ ಕೊನೆಗೊಂಡು 'ತುಘಲಕ್' ಸಂತತಿಯು ಸ್ಥಾಪಿತವಾಯಿತು.

## ೩.೨ ಮಹಮದ್ ಬಿನ್ ತುಘಲಕ್ : ವ್ಯಕ್ತಿತ್ವ

ಘಾಜಿ ಮಲಿಕ್‌ನು ಖಿಲ್ಜಿ ಸಂತತಿಯ ಕೊನೆಯ ದೊರೆಯನ್ನು ಕೊಂದು ಸುಲ್ತಾನ್ ಘಿಯಾಸುದ್ದೀನ್ ತುಘಲಕ್ ಎಂಬ ಹೆಸರಿನೊಂದಿಗೆ ಕ್ರಿ.ಶ. ೧೩೨೦ ರಲ್ಲಿ ದೆಹಲಿಯ ಸಿಂಹಾಸನ ವೇರಿದನು. ಈತನು ಸ್ಥಾಪಿಸಿದ ಸಂತತಿಯನ್ನು 'ತುಘಲಕ್ ಸಂತತಿ' ಎಂದು ಕರೆಯಲಾಗಿದೆ. ಈತನು ಹೆಸರಾಂತ ಯೋಧ, ರಾಜಕಾರಣಿ ಮತ್ತು ದಕ್ಷ ಆಡಳಿತಗಾರ ನಾಗಿದ್ದನು. ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ತಂದು ಆಡಳಿತ ವ್ಯವಸ್ಥೆಯನ್ನು ಸಮರ್ಥ ಗೊಳಿಸಿದನು. ಈತನ ನಂತರ ಇವನ ಮಗ ಜೌನಾಖಾನನು ಅಧಿಕಾರಕ್ಕೆ ಬಂದನು.

### ಮಹಮದ್ ಬಿನ್ ತುಘಲಕ್ (ಕ್ರಿ.ಶ. ೧೩೨೫-೧೩೫೧)

ಜೌನಾಖಾನನು ತನ್ನ ತಂದೆ ಘಿಯಾಸುದ್ದೀನನು ನಿಧನವಾದ, ಮೂರು ದಿನಗಳ ನಂತರ ಕ್ರಿ.ಶ. ೧೩೨೫ ರಲ್ಲಿ 'ಮಹಮದ್ ಬಿನ್ ತುಘಲಕ್' ಎಂಬ ಹೆಸರಿನಿಂದ ತಾನೇ ಸುಲ್ತಾನನೆಂದು ಘೋಷಿಸಿಕೊಂಡನು. ಇವನು ಸಹ ಅಲ್ಲಾವುದ್ದೀನನಂತೆ ಸಾಮಾನ್ಯ ಜನರಿಗೆ ಮತ್ತು ನೋಬಲ್ (ಕುಲೀನ) ವರ್ಗದವರಿಗೆ ಉದಾರವಾಗಿ ಚಿನ್ನ ಹಾಗೂ ಬೆಳ್ಳಿ ನಾಣ್ಯಗಳನ್ನು ಹಾಗೂ ಬಿರುದು ಬಾವಲಿಗಳನ್ನು ನೀಡಿ ಅವರ ಬೆಂಬಲವನ್ನು ಗಳಿಸಿದನು.

ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಮತ್ತು ದೆಹಲಿ ಸುಲ್ತಾನರಲ್ಲೇ ಮಹಮದ್ ಬಿನ್ ತುಘಲಕ್‌ನದು ಒಂದು ಆಕರ್ಷಕ ಮತ್ತು ಗಮನಾರ್ಹವಾದ ವ್ಯಕ್ತಿತ್ವ ಇವನು ಶ್ರೇಷ್ಠ ಪರ್ಷಿಯನ್ ಮತ್ತು ಅರಾಬಿಕ್ ವಿದ್ವಾಂಸನಾಗಿದ್ದನಲ್ಲದೆ ಖಗೋಳಶಾಸ್ತ್ರ, ತತ್ವಶಾಸ್ತ್ರ, ಗಣಿತಶಾಸ್ತ್ರ, ವೈದ್ಯಕೀಯ, ತರ್ಕಶಾಸ್ತ್ರ ಮುಂತಾದ ರಂಗಗಳಲ್ಲಿ ಪ್ರಾವೀಣ್ಯತೆ ಹೊಂದಿದ್ದನು. ಇವನು ಧಾರ್ಮಿಕ ಮತ್ತು ತಾತ್ವಿಕ ವಿಚಾರಗಳಲ್ಲಿ ಉದಾರವಾದಿಯಾಗಿದ್ದನು. ಇವನು ಸಹ ಮುಂದಿನ ಅಕ್ಬರನಂತೆಯೇ ಹಿಂದೂ ಯೋಗಿಗಳ, ಜೈನ ಸಂತರ ಜೊತೆಯಲ್ಲಿ ಚರ್ಚೆ ಮಾಡುತ್ತಿದ್ದನು. ಇವನು ಮುಸ್ಲಿಂ ಉಲೇಮಾರ ಮೌಢ್ಯತೆಗೆ ಮತ್ತು ಅವರ ರಾಜಕೀಯ ಪ್ರಭಾವಗಳಿಗೆ ಕಡಿವಾಣ ಹಾಕಿ ಉದ್ಭವಿಸುವ ತೊಂದರೆಗಳನ್ನು ಉದಾರ ನೀತಿ ಗಳಿಂದಲೇ ತೀರ್ಮಾನಿಸುತ್ತಿದ್ದನು. ಈತನು ಭಾರತವನ್ನು ರಾಜಕೀಯವಾಗಿ ಐಕ್ಯ ಗೊಳಿಸಲು ಬಯಸಿದ್ದನು. ಅಧಿಕಾರಿಗಳನ್ನು ನೇಮಿಸುವಾಗ ಅವರ ಬೌದ್ಧಿಕ ಮಟ್ಟಕ್ಕೆ ಹೆಚ್ಚು ಒತ್ತು ಕೊಡುತ್ತಿದ್ದನು. ಆದರೆ ದುರಾದೃಷ್ಟವಶಾತ್ ಅವನಲ್ಲಿ ಸಂಯಮಶೀಲತೆ ಇರಲಿಲ್ಲ ಮತ್ತು ದುಡುಕಿನ ಸ್ವಭಾವದವನಾಗಿದ್ದರಿಂದ ಅವನ ಅನೇಕ ಪ್ರಯೋಗಗಳು, ಉತ್ತಮ ಯೋಜನೆ ಗಳು ವಿಫಲತೆಯಲ್ಲಿ ಕೊನೆಗೊಂಡವು. ಮಹಮದ್‌ನ ಸಮಕಾಲೀನರು ಅವನನ್ನು ಆ ಕಾಲದಲ್ಲಿ ಬದುಕಿದ್ದ ಒಂದು 'ಆಶ್ಚರ್ಯಕರ ವ್ಯಕ್ತಿತ್ವ'ವೆಂದು ವರ್ಣಿಸಿದ್ದಾರೆ. ಈತನ ಯೋಜನೆಗಳ ಸಫಲತೆ ಮತ್ತು ವಿಫಲತೆಗಳೂ ಸಹ ಆಕರ್ಷಣೀಯವಾದವು ಹಾಗೂ ಆಶ್ಚರ್ಯಕಾರಕವಾದವು. ಈತನು ಸಾಮ್ರಾಜ್ಯವನ್ನು ಎಷ್ಟು ಬೇಗ ವಿಸ್ತರಿಸಿದನೋ ಅದು ಅಷ್ಟೇ ಬೇಗ ಒಡೆದುಹೋಗಲಾರಂಭಿಸಿತು. ಅದೇ ರೀತಿ ತನ್ನ ತಂದೆಯಿಂದ ತುಂಬಿ

ತುಳುಕುತ್ತಿದ್ದ ಬೊಕ್ಕಸವನ್ನು ಪಡೆದಿದ್ದನಲ್ಲದೆ, ತಾನೂ ಸಹ ಅದನ್ನು ತುಂಬಿಸಿದನು. ಆದರೆ ಕೊನೆಯಲ್ಲಿ ಆರ್ಥಿಕ ದುಸ್ಥಿತಿಯನ್ನು ಎದುರಿಸಬೇಕಾಯಿತು.

**ಮಹಮದ್ ಬಿನ್ ತುಘಲಕ್‌ನ ಐದು ಯೋಜನೆಗಳು (ಪ್ರಯೋಗಗಳು)**

ಮಹಮದ್ ಬಿನ್ ತುಘಲಕ್‌ನು ದೇಶೀಯ ಮತ್ತು ವಿದೇಶಿ ವ್ಯವಹಾರಗಳಲ್ಲಿ ಹೊಸ ನೀತಿ ಮತ್ತು ಪ್ರಯೋಗಗಳನ್ನು ಕೈಗೊಳ್ಳುವಲ್ಲಿ ಉತ್ಸುಕನಾಗಿದ್ದನು. ಈತನು ಬಹಳ ಮಹಾತ್ವಾಕಾಂಕ್ಷೆಯಿಂದ ಜಾರಿಗೆ ತಂದ ಐದು ಯೋಜನೆಗಳನ್ನಾಧರಿಸಿ ಅವನ ವ್ಯಕ್ತಿತ್ವ, ಕಾರ್ಯ ಯೋಜನೆಯ ಸಫಲತೆ ಮತ್ತು ವಿಫಲತೆಗಳನ್ನು ಅರಿಯಬಹುದು.

**೧. ದೋ ಅಬ್ ಪ್ರಾಂತ್ಯದಲ್ಲಿ ಆರ್ಥಿಕ ಪ್ರಯೋಗ (ತೆರಿಗೆ ಹೆಚ್ಚಳ)** (ಕ್ರಿ.ಶ ೧೩೨೬) : ಸುಲ್ತಾನನು ದಾಖಲೆ ಪುಸ್ತಕದ ಮಾದರಿಯಲ್ಲಿ ಭೂಕಂದಾಯದ ದಾಖಲೆ ಪುಸ್ತಕ ಸಂಕಲನಕ್ಕೆ ಆದೇಶ ನೀಡಿದನು. ಇದರಿಂದಾಗಿ ಕಂದಾಯ ಇಲಾಖೆ ಸುಗಮವಾಗಿ ಕೆಲಸ ಮಾಡ ಲಾರಂಭಿಸಿತು. ಆದರೆ ಗಂಗಾ ಮತ್ತು ಯಮುನಾ ನದಿಗಳ ನಡುವಣ ಫಲವತ್ತಾದ ಮತ್ತು ಸಂಪದ್ಭರಿತ ದೋ ಅಬ್ ಪ್ರಾಂತ್ಯದಲ್ಲಿ ವಿವೇಚನೆಯಿಲ್ಲದೆ ಆರ್ಥಿಕ ಪ್ರಯೋಗವನ್ನು ಪ್ರಾರಂಭಿಸಿದ. ಅದರಂತೆ ತೆರಿಗೆ ದರವನ್ನು ಹೆಚ್ಚಿಸಿದ ಮತ್ತು ಕೆಲವು ಹೊಸ ತೆರಿಗೆಗಳನ್ನು ವಿಧಿಸಿದ. ತೆರಿಗೆಯ ಹೆಚ್ಚಳ ಜಿಯಾವುದ್ದೀನ್ ಬರ್ನಿಯು ೧೦ ಅಥವಾ ೨೦ ರಷ್ಟು ಎಂದು ಬರೆದಿದ್ದಾನೆ. ಎ.ಎಲ್. ಶ್ರೀವಾಸ್ತವರವರ ಪ್ರಕಾರ ಸುಲ್ತಾನನು ಶೇ. ೫ ರಿಂದ ೧೦ ಭಾಗ ಕಂದಾಯವನ್ನು ಹೆಚ್ಚಿಸಿದನು.

ದೋ ಅಬ್ ಪ್ರಾಂತ್ಯದಲ್ಲಿ ತೆರಿಗೆಯನ್ನು ಹೆಚ್ಚಿಸಲು ಸುಲ್ತಾನನಿಗೆ ವಿವಿಧ ಕಾರಣ ಗಳಿದ್ದವು ಎಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಕೆಲವರ ಪ್ರಕಾರ ಈ ಪ್ರಾಂತ್ಯದ ಶ್ರೀಮಂತ ರೈತರಲ್ಲಿದ್ದ ಕ್ರಾಂತಿಕಾರಕ ಮನೋಭಾವವನ್ನು ಅಡಗಿಸಲು ಅವರಲ್ಲಿದ್ದ ಶ್ರೀಮಂತಿಕೆಯನ್ನು ಕಿತ್ತುಕೊಂಡು ಆರ್ಥಿಕವಾಗಿ ಅಧೋಗತಿಗಿಳಿಸುವುದು ಮುಖ್ಯವಾಗಿತ್ತು. ಮತ್ತೊಂದು ಅಭಿಪ್ರಾಯದ ಪ್ರಕಾರ ಸುಲ್ತಾನನು ತನ್ನ ಸೈನ್ಯವನ್ನು ಅಧಿಕಗೊಳಿಸಲು ಅವಶ್ಯಕವಾದ ಹಣಕ್ಕಾಗಿ ಹಾಗೂ ಆಡಳಿತ ವರ್ಗವನ್ನು ದಕ್ಷತೆಯಿಂದ ವ್ಯವಸ್ಥೆಗೊಳಿಸಲು ತೆರಿಗೆಯನ್ನು ಹೆಚ್ಚಿಸಿದ್ದನು. ಒಟ್ಟಾರೆ ಈ ಎರಡೂ ಕಾರಣಗಳು ಇರುವ ಸಂಭವವಿದೆ. ಆದರೆ ಹೆಚ್ಚಿನ ತೆರಿಗೆಯ ಜೊತೆಗೆ ದೇಶದಲ್ಲಿ ಕ್ಷಾಮವಿದ್ದಂತಹ ಕಾಲದಲ್ಲಿ ತೆರಿಗೆಯನ್ನು ಅಧಿಕಗೊಳಿಸಿದ್ದರಿಂದ ಈ ಪ್ರಾಂತ್ಯದ ಜನತೆ ಹೆಚ್ಚು ಕಷ್ಟನಷ್ಟಗಳಿಗೆ ಗುರಿಯಾದರು. ತೆರಿಗೆಯನ್ನು ವಸೂಲಿ ಮಾಡಲು ಸರ್ಕಾರವು ತೀವ್ರ ಕ್ರಮ ಕೈಗೊಂಡಿತು. ಹಾಗಾಗಿ ಹೆಚ್ಚಿದ ಕಂದಾಯವನ್ನು ಕೊಟ್ಟ ರೈತರು ಬಿಕಾರಿಗಳಾದರು, ಕೊಡಲಾಗದವರು ಕಾಡಿಗೆ ಓಡಿ ಹೋಗಿ ಅವಿತುಕೊಂಡರು. ಆದರೆ ಕಾಡಿನಲ್ಲಿದ್ದವರನ್ನು ಬಿಡದೆ ಕಾಡುಮೃಗಗಳಂತೆ ಬೇಟೆಯಾಡ ಲಾಯಿತು. ಸಾವಿರಾರು ಜನರನ್ನು ಕಗ್ಗೊಲೆಗೆಯ್ಯಲಾಯಿತು. ಜಿಯಾವುದ್ದೀನ್ ಬರ್ನಿಯು ಈ ಪ್ರಾಂತ್ಯದ ನಿವಾಸಿಯಾಗಿದ್ದು ಈ ಕಂದಾಯದ ಹೆಚ್ಚಳದಿಂದ ತೊಂದರೆಗೀಡಾಗಿ ಹೀಗೆ

ಬರೆದಿದ್ದಾನೆ. "ರೈತರ ಬೆನ್ನು ಮೂಳೆಗಳನ್ನು ಮುರಿಯಲಾಯಿತು. ಶ್ರೀಮಂತರಾಗಿದ್ದವರು ದಂಗೆಕೋರರಾದರು, ಭೂಮಿಯು ಪಾಳು ಬಿದ್ದಿತು, ಸಾಗುವಳಿ ನಿಂತಿತು. ಸಾವಿರಾರು ಜನರು ನಷ್ಟಗೊಂಡರು". ಅತೀವ ಸಂಕಷ್ಟಕ್ಕೊಳಗಾದ ರೈತರು ತಮ್ಮ ಆಸ್ತಿಪಾಸ್ತಿ ತೊರೆದು ಬೇರೆಡೆಗೆ ಹೊರಟುಹೋದರು. ಆದರೂ ಅವರನ್ನು ಕರೆತರಲು ಉಗ್ರ ಕ್ರಮ ಕೈಗೊಳ್ಳಲಾಯಿತು. ಈ ಪರಿಸ್ಥಿತಿ ಸುಧಾರಿಸಲು ಸರ್ಕಾರ ತಕ್ಷಣ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ.

ಕ್ಷಾಮದ ಪರಿಸ್ಥಿತಿಯ ಅರಿವು ತಡವಾಗಿ ಬಂದನಂತರ ಸುಲ್ತಾನರು ರೈತರಿಗೆ ಮತ್ತು ಕೃಷಿಗೆ ಸೌಲಭ್ಯ ಒದಗಿಸಲು ದಿವಾನ್-ಐ-ಕೋಹಿ ಎಂಬ ಪ್ರತ್ಯೇಕ ಇಲಾಖೆಯನ್ನು ತೆರೆದರು. ಅಲ್ಲದೆ ಅದರ ಮೂಲಕ ಕ್ಷಾಮ ಪರಿಸ್ಥಿತಿ ಎದುರಿಸಲು ನೀರಾವರಿ ಸೌಲಭ್ಯಕ್ಕೆ ಆದ್ಯತೆ ನೀಡಿದರು. ರೈತರಿಗೆ ತಕ್ಕಾವಿ ಸಾಲ ನೀಡಲಾಗುತ್ತಿತ್ತು. ಕೃಷಿ ಅಭಿವೃದ್ಧಿಗೆ ೭೦ ಲಕ್ಷ ಟಂಕಗಳನ್ನು ೩ ವರ್ಷಗಳಲ್ಲಿ ಈ ಇಲಾಖೆ ವ್ಯಯ ಮಾಡಿತು. ಆದರೂ ಈ ಯೋಜನೆಯು ವಿಫಲವಾಯಿತು. ಇದಕ್ಕೆ ಕಾರಣ ಭ್ರಷ್ಟ ಅಧಿಕಾರಿಗಳು ಹಾಗೂ ಆಯ್ಕೆಗೊಂಡ ಸಾಗುವಳಿದಾರರು. ಅಲ್ಲದೆ ಸರ್ಕಾರದ ಪರಿಹಾರವು ಪ್ರಜೆಗಳಿಗೆ ತಲುಪದೆ ಆಡಳಿತಗಾರರಲ್ಲಿಯೇ ಉಳಿಯಿತು. ಹೀಗಾಗಿ ಸುಲ್ತಾನನ ಮೊದಲ ಯೋಜನೆಯು ಸೂಕ್ತ ಸಮಯದಲ್ಲಿ ಕೈಗೊಳ್ಳದೆ ಇದ್ದುದರಿಂದ ವಿಫಲವಾಗಿತ್ತು. ಅಲ್ಲದೆ ದೋ ಅಬ್ ಪ್ರಾಂತ್ಯದಲ್ಲಿ ಪ್ರತಿವರ್ಷ ವಸೂಲಾಗುತ್ತಿದ್ದಷ್ಟು ಕಂದಾಯವೂ ವಸೂಲಿಯಾಗಲಿಲ್ಲ. ಹೀಗಾಗಿ ಸುಲ್ತಾನನು ಪ್ರಜೆಗಳಲ್ಲಿ ಅಪ್ರಿಯನಾದನು.

**೨. ರಾಜಧಾನಿಯ ಬದಲಾವಣೆ** (ಕ್ರಿ.ಶ.೧೩೨೬-೨೭): ಸುಲ್ತಾನನು ದಖನ್ನಿನ ದೇವಗಿರಿಗೆ 'ದೌಲತಾಬಾದ್' ಎಂದು ಪುನರ್ ನಾಮಕರಣ ಮಾಡಿ ೧೩೨೬ ರಲ್ಲಿ ತನ್ನ ರಾಜಧಾನಿಯನ್ನು ದೆಹಲಿಯಿಂದ ಅಲ್ಲಿಗೆ ಬದಲಾಯಿಸುವ ಕ್ರಮವನ್ನು ತೆಗೆದುಕೊಂಡನು. ಈ ಬದಲಾವಣೆಗೆ ಸಮಕಾಲೀನ ಮತ್ತು ಆಧುನಿಕ ಇತಿಹಾಸಕಾರರು ವಿವಿಧ ಕಾರಣಗಳನ್ನು ತಿಳಿಸುತ್ತಾರೆ. ಇಬನ್ ಬತೂತನ ಪ್ರಕಾರ ದೆಹಲಿಯ ಜನರು ಸುಲ್ತಾನನಿಗೆ ಅವಾಚ್ಯ ಶಬ್ದಗಳಿಂದ ಕೂಡಿದ ಅನಾಮಧೇಯ ಪತ್ರಗಳನ್ನು ಬರೆಯುತ್ತಿದ್ದರು ಎನ್ನಲಾಗಿದ್ದು, ಇದರಿಂದ ಸಿಟ್ಟುಗೊಂಡ ಸುಲ್ತಾನ ದೆಹಲಿಯ ಜನರನ್ನು ಶಿಕ್ಷಿಸಲು ರಾಜಧಾನಿ ಬದಲಾವಣೆಯ ಕ್ರಮವನ್ನು ಕೈಗೊಂಡನು ಎಂದಿದ್ದಾನೆ. ಇತರರು ಅಭಿಪ್ರಾಯಪಡುವಂತೆ ದಕ್ಷಿಣದಲ್ಲೂ ಮುಸ್ಲಿಂ ಸಂಸ್ಕೃತಿಯನ್ನು ಸ್ಥಾಪಿಸುವ ಮತ್ತು ದಕ್ಷಿಣದ ಸಂಪತ್ತು ಹಾಗೂ ಆಡಳಿತದ ಅನುಕೂಲತೆಯ ಅಂಶಗಳು ಕಾರಣವಾಗಿದ್ದವು. ಮಂಗೋಲರ ಧಾಳಿಯಿಂದ ರಾಜಧಾನಿಯನ್ನು ರಕ್ಷಿಸುವ ಉದ್ದೇಶವೂ ಸಹ ಸುಲ್ತಾನನಿಗಿದ್ದು, ದೇವಗಿರಿಯು ಸಾಮ್ರಾಜ್ಯದ ಮಧ್ಯಭಾಗದಲ್ಲಿದ್ದು ಆಡಳಿತದ ನಿರ್ವಹಣೆಗೂ ಅನುಕೂಲಕರವಾಗಿತ್ತು ಎನ್ನಲಾಗಿದೆ.

ಮಹಮದ್ ಬಿನ್ ತುಘಲಕ್‌ನ ರಾಜಧಾನಿಯ ಬದಲಾವಣೆಯ ಕ್ರಮವು ಉತ್ತಮ ಆಲೋಚನೆಯಿಂದ ಕೂಡಿದ್ದು ಆಧುನಿಕ ಕಾಲಕ್ಕೂ ಯೋಗ್ಯ ವಿಷಯವೆನಿಸಿದೆ. ಆದರೆ ರಾಜಧಾನಿಯ ಬದಲಾವಣೆಯನ್ನು ಕಾರ್ಯಗತಗೊಳಿಸಿದ ರೀತಿಯು ಸರಿಯಾಗಿರಲಿಲ್ಲ.

ಸಮಕಾಲೀನ ಇತಿಹಾಸಕಾರರ ಪ್ರಕಾರ ಸುಲ್ತಾನನು ಸಮಸ್ತ ದೆಹಲಿಯ ಜನತೆಯನ್ನೇ ದೌಲತಾಬಾದ್‌ಗೆ ತೆರಳಬೇಕೆಂದು ಆಜ್ಞೆ ಮಾಡಿದ್ದನು. ಇದನ್ನು ವಿರೋಧಿಸಿದ ಜನರನ್ನು ಉಗ್ರವಾಗಿ ಶಿಕ್ಷಿಸಿ ಬಲವಂತವಾಗಿ ಕರೆದೊಯ್ಯಲಾಯಿತು. ಇಬನ್ ಬತೂತನ ಪ್ರಕಾರ "ತೆರವಾದ ದೆಹಲಿಯಲ್ಲಿ ಹುಡುಕಲಾಗಿ ಒಬ್ಬ ಕುರುಡ ಮತ್ತು ಹೆಳವರಿಬ್ಬರು ಸಿಕ್ಕರು. ಕುರುಡನನ್ನು ದೆಹಲಿಯಿಂದ ದೌಲತಾಬಾದ್‌ಗೆ ಎಳೆದುಕೊಂಡು ಹೋಗಲಾಯಿತು ಮತ್ತು ನರಳುತಿದ್ದ ಹೆಳವನನ್ನು ದಂಡು ಕವಣೆಯಿಂದ ಸಾಗಿಸಲಾಯಿತು". ಬರ್ನಿಯ ಪ್ರಕಾರ "ದೆಹಲಿಯಲ್ಲಾಗಲಿ ಅದರ ಅರಮನೆಗಳಲ್ಲಾಗಲಿ ಅಥವಾ ಅದರ ಉಪನಗರಗಳಲ್ಲಾಗಲಿ ಒಂದು ಬೆಕ್ಕು ಅಥವಾ ಒಂದು ನಾಯಿಯನ್ನೂ ಬಿಡಲಿಲ್ಲ". ಪ್ರಯಾಣಕ್ಕೆ ಕೆಲವು ಸೌಲಭ್ಯ ಗಳನ್ನು ಸುಲ್ತಾನನು ಒದಗಿಸಿದ್ದನಾದರೂ ಸುಮಾರು ೭೦೦ ಮೈಲಿಗಳ ೪೦ ದಿನಗಳ ದೀರ್ಘ ಪ್ರಯಾಣದಲ್ಲಿ ದೆಹಲಿಯ ಜನರು ಅಪಾರ ಕಷ್ಟನಷ್ಟಗಳನ್ನು ಅನುಭವಿಸಿದರು. ಸಾವಿರಾರು ಜನ ಸಾವಿಗೀಡಾದರು. ದೌಲತಾಬಾದ್ ತಲುಪಿದ ಜನರು ಅಪರಿಚಿತ ಸ್ಥಳದಲ್ಲಿ ದೇಶಭ್ರಷ್ಟ ರಂತೆ ಅತಿಯಾದ ನಿರಾಸೆ ಹಾಗೂ ದುಃಖದಿಂದ ಪಡಬಾರದ ಕಷ್ಟಗಳನ್ನು ಪಟ್ಟರು.

ಕೊನೆಗೆ ಸುಲ್ತಾನನು ತನ್ನ ಯೋಜನೆಯು ಪೂರ್ಣ ವಿಫಲಗೊಂಡುದುದನ್ನು ತಿಳಿದು ತನ್ನ ರಾಜಧಾನಿಯನ್ನು ಮತ್ತೆ ದೆಹಲಿಗೆ ವರ್ಗಾಯಿಸಲು ತೀರ್ಮಾನ ತೆಗೆದುಕೊಂಡು, ಅದರಂತೆ ಜನರು ಮತ್ತೆ ದೆಹಲಿಗೆ ಪಯಣಿಸಬೇಕೆಂದು ಆಜ್ಞೆ ಹೊರಡಿಸಿದ. ಆದರೆ ದೆಹಲಿಗೆ ಹೊರಡಲು ಕೆಲವೇ ಜನರಿದ್ದರು. ಅವರಲ್ಲಿ ಅನೇಕರು ಹಿಂತಿರುಗುವಾಗ ಸತ್ತರು. ದೆಹಲಿ ಸೇರಿದ ನಂತರ ಜನರಿಗೆ ಅವರ ನಷ್ಟವನ್ನು ತುಂಬಿಕೊಡಲು ಸುಲ್ತಾನನು ಪ್ರಯತ್ನಿಸಿದನು. ವಿದ್ವಾಂಸರು, ವ್ಯಾಪಾರಿಗಳು, ಶ್ರೀಮಂತರನ್ನು ಕರೆತಂದು ನೆಲೆಸುವಂತೆ ಮಾಡಿದರೂ ದೆಹಲಿ ತನ್ನ ಹಿಂದಿನ ಭವ್ಯತೆಯನ್ನು ಪಡೆಯಲೇ ಇಲ್ಲ. ಇಸಾಮಿಯು ತಿಳಿಸುವಂತೆ ದೆಹಲಿಯು ಜನಭರಿತವಾಗಲು ಮತ್ತೆ ೧೪ ವರ್ಷಗಳೇ ಬೇಕಾದವು.

ಸುಲ್ತಾನನ ರಾಜಧಾನಿಯ ಬದಲಾವಣೆಯ ಪ್ರಯೋಗ ಸಂಪೂರ್ಣವಾಗಿ ವಿಫಲ ಗೊಂಡಿತು. ಸುಲ್ತಾನನ ಈ ಯೋಜನೆ ಅಸಂಬದ್ಧವಾಗಿರಲಿಲ್ಲ. ದೌಲತಾಬಾದ್‌ಗೆ ಸರ್ಕಾರಿ ಕಛೇರಿಗಳು, ಅಧಿಕಾರಿಗಳನ್ನು ಮಾತ್ರ ಬದಲಾಯಿಸಿದ್ದರೆ ಸಾಕಾಗಿತ್ತು. ಆದರೆ ದೆಹಲಿಯ ಜನರೆಲ್ಲಾ ದೌಲತಾಬಾದ್‌ಗೆ ತೆರಳಬೇಕೆಂದು ಆಜ್ಞೆ ಮಾಡಿದ್ದು, ಆ ಯೋಜನೆ ವಿಫಲಗೊಂಡ ತಕ್ಷಣ ಜನರೆಲ್ಲಾ ಪುನಃ ದೆಹಲಿಗೆ ವಾಪಸ್ಸಾಗಬೇಕೆಂದು ಆಜ್ಞಾಪಿಸಿದ್ದು ತಪ್ಪಾದ ಎಣಿಕೆ ಗಳಾಗಿದ್ದವು. ರಾಜಧಾನಿಯ ಬದಲಾವಣೆಯಿಂದಾಗಿ ಈ ಪ್ರದೇಶಗಳಲ್ಲಿ ಶಾಂತಿ ಸುವ್ಯವಸ್ಥೆ ಕುಸಿದು ಅನೇಕ ದಂಗೆಗಳಾದವು ಮತ್ತು ಮಂಗೋಲರು ಇನ್ನೂ ಹೆಚ್ಚಾಗಿ ಧಾಳಿ ಮಾಡ ಲಾರಂಭಿಸಿದರು.

೩. **ಹೊಸ ನಾಣ್ಯ ಚಲಾವಣೆ** (ಕ್ರಿ.ಶ. ೧೩೨೯-೧೩೩೨): ಮಹಮ್ಮದ್ ಬಿನ್ ತುಘಲಕ್‌ನು ನಾಣ್ಯ ವ್ಯವಸ್ಥೆಯಲ್ಲೂ ಅನೇಕ ಪ್ರಯೋಗಗಳನ್ನು ಮಾಡಲು ಪ್ರಯತ್ನಿಸಿದನು. ಇವನು ತನ್ನ ಆಳ್ವಿಕೆಯ ಪ್ರಾರಂಭ ಕಾಲದಲ್ಲೇ ಅನೇಕ ಹೊಸ ನಾಣ್ಯಗಳನ್ನು ಚಲಾವಣೆಗೆ

ತಂದು ಆ ನಾಣ್ಯಗಳನ್ನು ಪುನರ್ ಮಾದರಿಗೊಳಿಸಿದ. ಅಮೂಲ್ಯ ಲೋಹಗಳ ಮೌಲ್ಯಕ್ಕನು ಗುಣವಾಗಿ ಅವುಗಳ ಭಾಗಗಳನ್ನು ಸರಿಹೊಂದಿಸಿದನು. ಇವನು ೨೦೦ ಗ್ರೈನ್‌ಗಳ ತೂಕದ ಹೊಸ ಚಿನ್ನದ ನಾಣ್ಯವೊಂದನ್ನು ಚಲಾವಣೆಗೆ ತಂದನು. ಇದನ್ನು ಇಬನ್ ಬತೂತ 'ದಿನಾರ್' ಎಂದು ಕರೆದಿರುವನು. ದಖನ್ ದಂಡಯಾತ್ರೆಗಳಿಂದ ರಾಜ ಬೊಕ್ಕಸಕ್ಕೆ ಅಪಾರ ಚಿನ್ನ ಬಂದಿದ್ದರಿಂದ ಚಿನ್ನ ಹಾಗೂ ಬೆಳ್ಳಿಗಳ ನಡುವಣ ಸಾಪೇಕ್ಷ ಮೌಲ್ಯ ಕುಸಿದಿತ್ತು. ಆದ್ದರಿಂದ ೧೭೫ ಗ್ರೈನ್‌ಗಳ ತೂಕದ ಹಳೆಯ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳಿಗೆ ಬದಲಾಗಿ ೧೪೦ ಗ್ರೈನ್‌ಗಳ ತೂಕದ 'ಅದಲಿ' ಎಂಬ ನಾಣ್ಯವನ್ನು ಮತ್ತೆ ಚಲಾವಣೆಗೆ ತಂದನು. ಇವನು ಚಲಾವಣೆಗೆ ತಂದ ನಾಣ್ಯಗಳ ಆಕಾರ, ಅವುಗಳ ಮೇಲಿನ ಕೆತ್ತನೆ ಮುಂತಾದವುಗಳನ್ನು ಅಭಿವೃದ್ಧಿಗೊಳಿಸಿದ್ದನು. ಆದ್ದರಿಂದ ನಾಣ್ಯಶಾಸ್ತ್ರಜ್ಞ ಎಡ್ವರ್ಡ್ ಥಾಮಸ್‌ನು ಮಹಮದ್ ಬಿನ್ ತುಘಲಕ್‌ನನ್ನು 'ಹಣಗಾರರ ರಾಜ'ನೆಂದು ಕರೆದಿದ್ದಾನೆ.

ಸುಲ್ತಾನನು ನಡೆಸಿದ ಪ್ರಯೋಗಗಳಲ್ಲೆಲ್ಲಾ ಅತ್ಯಂತ ಸಾಹಸದ್ದೆಂದರೆ ೧೩೨೯ ಮತ್ತು ೧೩೩೦ ರ ನಡುವೆ ತಾಮ್ರದ ನಾಣ್ಯವನ್ನು ಚಲಾವಣೆಗೆ ತಂದುದು. ಸುಲ್ತಾನನು ತನ್ನ ಬರಿದಾದ ಬೊಕ್ಕಸವನ್ನು ಮತ್ತೆ ತುಂಬಲು ಹೊಸ ತಾಮ್ರದ ನಾಣ್ಯಗಳ ಚಲಾವಣೆಯನ್ನು ಆಜ್ಞೆಯ ಮೂಲಕ ಜಾರಿಗೆ ತಂದನು. ಈ ಆಜ್ಞೆಯು ಹಿಂದಿನ ಬೆಳ್ಳಿ, ಬಂಗಾರದ ನಾಣ್ಯಗಳಿಗೆ ತಾಮ್ರದ ನಾಣ್ಯಗಳು ಮೌಲ್ಯದಲ್ಲಿ ಸಮವೆಂದೂ, ತಾಮ್ರದ ನಾಣ್ಯಗಳನ್ನು ಬಂಗಾರ ಮತ್ತು ಬೆಳ್ಳಿ ನಾಣ್ಯಗಳಿಗೆ ಸಮನಾಗಿ ಎಲ್ಲಾ ವ್ಯವಹಾರಗಳಲ್ಲೂ ಬಳಸಬೇಕೆಂದು ತಿಳಿಸಿತ್ತು. ಆದರೆ ಸುಲ್ತಾನನು ತನ್ನ ಪ್ರಜೆಗಳು ಈ ಯೋಜನೆಯನ್ನು ದುರುಪಯೋಗಪಡಿಸಿಕೊಂಡು ಮೋಸ ಮಾಡುವರೆಂದು ಯೋಚಿಸಿರಲಿಲ್ಲ.

ಆದರೆ ಸುಲ್ತಾನನ ಹಿಂದಿನ ಯೋಜನೆಗಳಂತೆ ಈ ಪ್ರಯೋಗವೂ ಸದುದ್ದೇಶ ಹೊಂದಿದ್ದರೂ ವಿಫಲಗೊಂಡಿತು. ಅದಕ್ಕೆ ಕಾರಣ ಜನರು ಈ ಯೋಜನೆಯ ಪ್ರಾಮುಖ್ಯತೆ ಯನ್ನು ಅರಿಯಲಿಲ್ಲ. ಹಾಗೂ ನಾಣ್ಯಗಳ ಟಂಕಿಸುವ ನಾಣ್ಯಗಳ ನೀಡುವಿಕೆಯನ್ನೂ ರಾಜ್ಯದ ಏಕಸ್ವಾಮಕ್ಕೆ ಒಳಪಡಿಸಿರಲಿಲ್ಲ. ಖೋಟಾ ನಾಣ್ಯಗಳ ಸೃಷ್ಟಿಯ ವಿರುದ್ಧ ಸೂಕ್ತ ಕ್ರಮಗಳನ್ನು ಕೈಗೊಳ್ಳಲಿಲ್ಲ. ಬರ್ನಿಯು ತಿಳಿಸುವಂತೆ "ಎಲ್ಲ ಹಿಂದೂಗಳ ಮನೆಗಳು ಟಂಕಸಾಲೆಗಳಾದವು ಮತ್ತು ವಿವಿಧ ಪ್ರಾಂತಗಳಲ್ಲಿದ್ದ ಹಿಂದೂಗಳು ಕೋಟಿ ಕೋಟಿ ನಾಣ್ಯಗಳನ್ನು ತಯಾರಿಸಿ ದರು". ಪ್ರಜೆಗಳು ತೆರಿಗೆಗಳನ್ನು ಹೊಸ ಖೋಟಾ ತಾಮ್ರದ ನಾಣ್ಯಗಳಲ್ಲೇ ಸಲ್ಲಿಸಲಾರಂಭಿಸಿ ದರು. ಅಲ್ಲದೆ ರಾಜ್ಯಪಾಲರು ಮತ್ತು ಪ್ರಾಂತ್ಯಾಧಿಕಾರಿಗಳು ತಮ್ಮ ವಾರ್ಷಿಕ ಪೊಗದಿಯನ್ನು ಹಾಗೂ ರೈತರು ತಮ್ಮ ಭೂಕಂದಾಯವನ್ನು ಇದೇ ನಾಣ್ಯಗಳಲ್ಲಿಯೇ ಸಲ್ಲಿಸುತ್ತಿದ್ದರು. ಈ ನಾಣ್ಯಗಳ ಪ್ರಭಾವದಿಂದಾಗಿ ರಾಯರು, ಗ್ರಾಮದ ಮುಖ್ಯಸ್ಥರು, ಭೂಮಾಲೀಕರೂ, ಶ್ರೀಮಂತರೂ ಬಲಿಷ್ಠರಾದರು. ಆದರೆ ರಾಜ್ಯದ ಶಕ್ತಿಯಡಗಿತು. ಪ್ರತಿಯೊಬ್ಬ ಅಕ್ಕಸಾಲಿಗನೂ ತನ್ನ ಕಾರ್ಯಗಾರದಲ್ಲಿ ತಾಮ್ರದ ನಾಣ್ಯಗಳನ್ನು ತಯಾರಿಸು ತ್ತಿದ್ದನು. ಈ ತಾಮ್ರದ ನಾಣ್ಯಗಳಿಂದ ರಾಜ್ಯಬೊಕ್ಕಸವು ತುಂಬಿತು. ಬರ್ನಿಯು ತಿಳಿಸುವಂತೆ

"ಕಲ್ಲುಹರಳು ಅಥವಾ ಮಡಕೆಯ ಚೂರಿನಷ್ಟು ಅವುಗಳ ಮೌಲ್ಯ ಕೀಳಾಯಿತು. ಅಭಾವ ದಿಂದಾಗಿ ಹಳೆಯ ನಾಣ್ಯಗಳ ಮೌಲ್ಯ ನಾಲ್ಕರಿಂದ ಐದು ಪಟ್ಟು ಅಧಿಕಗೊಂಡಿತು". ಇದರಿಂದ ವ್ಯಾಪಾರ ಮತ್ತು ಕೈಗಾರಿಕೆಗಳು ತೊಂದರೆಗೀಡಾದವು. ವಿದೇಶಿ ವ್ಯಾಪಾರಸ್ಥರು ಹೊಸ ತಾಮ್ರದ ನಾಣ್ಯಗಳನ್ನು ತಮ್ಮ ವಸ್ತುಗಳ ವ್ಯಾಪಾರಕ್ಕೆ ಒಪ್ಪಿಕೊಳ್ಳಲಿಲ್ಲ. ಹೀಗಾಗಿ ವಿದೇಶಿ ವ್ಯಾಪಾರಕ್ಕೆ ತೀವ್ರ ಪೆಟ್ಟು ಬಿದ್ದಿತು.

ಜನರು ಚಿನ್ನ ಮತ್ತು ಬೆಳ್ಳಿ ನಾಣ್ಯಗಳನ್ನು ಭದ್ರಪಡಿಸಿದರು. ಇದರಿಂದ ಚಿನ್ನ ಮತ್ತು ಬೆಳ್ಳಿ ನಾಣ್ಯಗಳ ಅಭಾವ ತಲೆದೋರಿ, ಸಾಮ್ರಾಜ್ಯದಾದ್ಯಂತ ಹಣಕಾಸಿನ ಗೊಂದಲವೇ ಉಂಟಾಯಿತು. ಕೊನೆಗೆ ಸುಲ್ತಾನನು ತನ್ನ ತಪ್ಪನ್ನು ಅರಿತು ಪಶ್ಚಾತ್ತಾಪದಿಂದ ನಾಣ್ಯಗಳನ್ನು ಜಾರಿಗೆ ತಂದ ನಾಲ್ಕು ವರ್ಷಗಳ ತರುವಾಯ ಆ ಆಜ್ಞೆಯನ್ನು ವಾಪಸ್ಸು ತೆಗೆದುಕೊಂಡನು. ಹೊಸ ನಾಣ್ಯದಿಂದಾದ ತೊಂದರೆಗಳ ಪರಿಣಾಮವಾಗಿ ಸುಲ್ತಾನನು ತತ್‌ಕ್ಷಣವೇ ತಾಮ್ರದ ನಾಣ್ಯಗಳನ್ನು ಹಿಂತಿರುಗಿಸಿ ಅದಕ್ಕೆ ಬದಲಾಗಿ ಅವುಗಳ ಮುಖ ಬೆಲೆಯಷ್ಟು ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳನ್ನು ಪಡೆಯುವಂತೆ ಆಜ್ಞೆ ಮಾಡಿದನು. ಈ ಅವಕಾಶದಲ್ಲಿ ಜನರು ತಮ್ಮಲ್ಲಿದ್ದ ಖೋಟಾ ನಾಣ್ಯಗಳನ್ನು ಸಲ್ಲಿಸಿ ಅಪ್ಪಟ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳನ್ನು ಪಡೆದರು. ಹೀಗೆ ಸುಲ್ತಾನನು ತನ್ನ ಯೋಜನೆಯಲ್ಲಿ ಪ್ರಜೆಗಳಿಂದಲೇ ಮೋಸ ಹೋಗಿ ಬೊಕ್ಕಸ ಬರಿದು ಮಾಡಿಕೊಂಡನು. ಇದರಿಂದ ಅಪಾರ ಪ್ರಮಾಣದ ಸಾರ್ವಜನಿಕ ನಿಧಿ ವೆಚ್ಚವಾಯಿತು. ಹೊಸದಾಗಿ ಬಂದ ತಾಮ್ರದ ನಾಣ್ಯಗಳ ರಾಶಿಯು ತುಘಲಕಾಬಾದಿನಲ್ಲಿ ರಾಶಿರಾಶಿಯಾಗಿ ಬಿದ್ದಿತು. ಒಂದು ಶತಮಾನದ ನಂತರ ಎರಡನೇ ಮುಬಾರಕ್ ಷಾನ ಕಾಲದಲ್ಲಿಯೂ ಈ ರಾಶಿಯು ಸುಲ್ತಾನನ ಯೋಜನೆಯ ವಿಫಲತೆಯನ್ನು ಸಾರುತ್ತಾ ಬಿದ್ದಿತ್ತು.

೪. **ಮಂಗೋಲರನ್ನು ಹಣದ ಮೂಲಕ ಸಮಾಧಾನ ಪಡಿಸುವ ನೀತಿ** (ಕ್ರಿ.ಶ. ೧೩೨೮): ಭಾರತದ ಜನತೆಗೆ ಸಹಿಸಲು ಆಗದ ಕಾಟಗಳು ಮಂಗೋಲರಿಂದ ಉಂಟಾಗುತ್ತಿದ್ದವು. ಇದು ಮಹಮದ್ ಬಿನ್ ತುಘಲಕ್‌ನ ಕಾಲದಲ್ಲಿಯೂ ಮುಂದುವರೆಯಿತು. ರಾಜಧಾನಿಯ ಬದಲಾವಣೆಯ ವಿಷಯ ತಿಳಿದ ಮಂಗೋಲರ ನಾಯಕ ತರ್ಮಾಷಿರಿನ್‌ಖಾನ್ ೧೩೨೮ ರಲ್ಲಿ ಭಾರತದ ಮೇಲೆ ದಂಡೆತ್ತಿ ಬಂದನು. ಮುಲ್ತಾನ್ ಮತ್ತು ಲಾಹೋರ್‌ನ ಭಾಗಗಳನ್ನು ಸೂರೆಗೊಂಡು ದೆಹಲಿಯ ಹೊರ ವಲಯಕ್ಕೆ ತಲುಪಿದನು. ಫೆರಿಸ್ತಾನು, ಸುಲ್ತಾನನು ಮಂಗೋಲರಿಗೆ ಅಪಾರ ಹಣ, ಚಿನ್ನ ಮತ್ತು ವಜ್ರ ವೈಢೂರ್ಯಗಳನ್ನು ಕೊಟ್ಟು ವಾಪಸ್ಸು ಕಳುಹಿಸಿದನೆಂದು ತಿಳಿಸಿದ್ದಾನೆ. ಸುಲ್ತಾನನ ಈ ತೃಪ್ತಿಪಡಿಸುವ ನೀತಿಯು ಮುಂದೆ ಮಂಗೋಲರ ಹೆಚ್ಚಿನ ಧಾಳಿಗಳಿಗೆ ಕಾರಣವಾಯಿತು. ಅಲ್ಲದೆ ಸುಲ್ತಾನನ ಅಸಮರ್ಥತೆಯನ್ನು ಎತ್ತಿ ಹಿಡಿಯಿತು. ಸುಲ್ತಾನನು ಹಣ ಕೊಡುವುದರ ಬದಲು ಅವರ ಧಾಳಿಗಳನ್ನು ಪಡೆಯಲು ಆ ಹಣವನ್ನು ವಿನಿಯೋಗಿಸಿದ್ದರೆ ಮುಂದಿನ ಮಂಗೋಲರ ಧಾಳಿಗಳಿಂದ ಭಾರತವನ್ನು ರಕ್ಷಿಸಬಹುದಿತ್ತು.

೫. **ಪ್ರಪಂಚವನ್ನೇ ಗೆಲ್ಲುವ ಯೋಜನೆ:** ಮಹಮದ್ ಬಿನ್ ತುಘಲಕ್‌ನು ಖಿರಾಸಾನ್ ಮತ್ತು ಇರಾಕ್‌ಗಳನ್ನು ವಶಪಡಿಸಿಕೊಳ್ಳುವ ಮಹತ್ವಾಕಾಂಕ್ಷೆಯಿಂದ ೩,೭೦,೦೦೦ ಸೈನಿಕರಿಂದ ಕೂಡಿದ ಬೃಹತ್ ಸೈನ್ಯ ಒಂದನ್ನು ಸಿದ್ಧಗೊಳಿಸಿದನು. ಈ ಬೃಹತ್ ಸೈನ್ಯಕ್ಕೆ ರಾಜ ಬೊಕ್ಕಸದಿಂದ ಒಂದು ವರ್ಷದ ವೇತನವನ್ನು ಮುಂಗಡವಾಗಿ ನೀಡಲಾಯಿತು. ಆದರೆ ಪ್ರಮುಖ ಭೌಗೋಳಿಕ ಹಾಗೂ ಸಾರಿಗೆ ತೊಂದರೆಗಳಿಂದ ಕೂಡಿದ ಹಿಂದೂಕುಷ್ ಕಣಿವೆಗಳು ಅಥವಾ ಹಿಮಾಲಯಗಳ ಮೂಲಕ ಬೃಹತ್ ಸೈನ್ಯವನ್ನು ಚಲಿಸುವಂತೆ ಮಾಡಬೇಕಿತ್ತು. ಮಧ್ಯ ಏಷ್ಯಾದ ಬಲಿಷ್ಠ ಪ್ರಾಂತ್ಯಗಳನ್ನು ಗೆಲ್ಲುವುದು ಕಷ್ಟವೆಂಬ ಅನುಮಾನದಿಂದ ಹಾಗೂ ಹಣದ ಅಭಾವದ ಕಾರಣಗಳಿಂದಾಗಿ ಒಂದು ವರ್ಷದ ನಂತರ ತನ್ನ ವಿಶ್ವವಿಜಯದ ಯೋಜನೆಯನ್ನು ತ್ಯಜಿಸಿ ಬೃಹತ್ ಸೈನ್ಯವನ್ನು ರದ್ದುಗೊಳಿಸಿದನು. ಇದರಿಂದ ನಿರುದ್ಯೋಗಿಗಳಾಗಿ ಬೇಸರಗೊಂಡ ಸೈನಿಕರು ತಮ್ಮ ಸಾಮ್ರಾಜ್ಯದಲ್ಲೇ ಸೂರೆಗಿಳಿದಿದ್ದರಿಂದ ಕೆಲವು ಕಾಲ ಸಾಮ್ರಾಜ್ಯದಲ್ಲಿ ಅರಾಜಕ ಸ್ಥಿತಿ ಉಂಟಾಯಿತು.

ಮಹಮದ್ ಬಿನ್ ತುಘಲಕ್‌ನ ಹೊಸ ಪ್ರಯೋಗಗಳ ಪರಿಣಾಮಗಳು ವಿಪತ್ಕಾರಿಯಾಗಿ ಪರಿಣಮಿಸಿ ರಾಜ್ಯದ ಜನರ ಕಷ್ಟನಷ್ಟಗಳನ್ನು ಹೆಚ್ಚಿಸಿದವು. ಇದೇ ಕಾಲಕ್ಕೆ ಕ್ಷಾಮದ ಹಾವಳಿಯೂ ಹೆಚ್ಚಿತು. ಹೀಗೆ ಅತೃಪ್ತಿಗೊಂಡ ಜನರು ಸುಲ್ತಾನನ ಅಧಿಕಾರದ ವಿರುದ್ಧ ದಂಗೆಯೇಳುವ ಮೂಲಕ ವ್ಯಕ್ತಪಡಿಸಲಾರಂಭಿಸಿದರು. ಮತ್ತೆ ಮತ್ತೆ ಕಾಣಿಸಿಕೊಂಡ ದಂಗೆಗಳು ಆಳ್ವಿಕೆಯ ಗಮನವನ್ನು ತಮ್ಮತ್ತ ಸೆಳೆದುಕೊಂಡವು. ಈ ದಂಗೆಗಳು ರಾಜ್ಯದ ಮತ್ತು ಸುಲ್ತಾನನ ಅಧಿಕಾರ, ಗೌರವ ಮತ್ತು ಶಕ್ತಿಯನ್ನು ಒಳಗೊಳಗೆ ಕುಂಠಿತಗೊಳಿಸಿ ಸಾಮ್ರಾಜ್ಯದ ವಿಛಿದ್ರತೆಗೆ ಕಾರಣವಾದವು. ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಸಂಭವಿಸಿದ ದಂಗೆಗಳನ್ನು ಅಡಗಿಸುವಲ್ಲಿ ಸುಲ್ತಾನನ ದೇಹವು ಜರ್ಝರಿತಗೊಂಡಿತು. ಸುಲ್ತಾನನು ಒಂದು ಕಡೆ ದಂಗೆಯನ್ನಡಗಿಸಲು ಹೋಗಿದ್ದರೆ ಮತ್ತೊಂದೆಡೆ ದಂಗೆಯೇಳುತ್ತಿತ್ತು. ಈ ರೀತಿಯ ಸಿಂಧ್‌ನ ದಂಗೆಯನ್ನಡಗಿಸಲು ನಿರತನಾಗಿದ್ದಾಗ ತಟ್ಟಾದ ಬಳಿ ಜ್ವರ ಪೀಡಿತನಾದ ಸುಲ್ತಾನನು ಕ್ರಿ.ಶ. ೧೩೫೧ ರಲ್ಲಿ ಮರಣ ಹೊಂದಿದನು. "ಹೀಗೆ ಸುಲ್ತಾನನು ಜನರಿಂದ ಮುಕ್ತನಾದ ಹಾಗೂ ಜನರು ಸುಲ್ತಾನನಿಂದ ಮುಕ್ತರಾದರು" ಎಂದು ಬದೌನಿ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ.

## ಮಹಮದ್ ಬಿನ್ ತುಘಲಕ್‌ನ ವ್ಯಕ್ತಿತ್ವ

ದೆಹಲಿ ಸಿಂಹಾಸನವೇರಿದ ಯಾವುದೇ ಸುಲ್ತಾನರಿಗಿಂತ ಮಹಮದ್ ಬಿನ್ ತುಘಲಕ್‌ನು ವಿಶಿಷ್ಟವಾದ ಹಾಗೂ ಗಮನಾರ್ಹವಾದ ವ್ಯಕ್ತಿತ್ವ ಪಡೆದಿದ್ದಾನೆ. ಇವನ ವ್ಯಕ್ತಿತ್ವ ಮತ್ತು ಸಾಧನೆಗಳ ಬಗ್ಗೆ ಒಂದು ತೀರ್ಮಾನಕ್ಕೆ ಬರುವುದು ಕಷ್ಟ. ಹಾಗೆಯೇ ಇತಿಹಾಸದಲ್ಲಿ ಈತನ ಸ್ಥಾನವೇನೆಂಬುದನ್ನು ನಿರ್ಧರಿಸುವುದು ಕ್ಲಿಷ್ಟ ಸಮಸ್ಯೆಯಾಗಿದೆ. ಇವನು ಬುದ್ಧಿವಂತನೆ? ಅವಿವೇಕಿಯೇ? ಆದರ್ಶವಾದಿಯೇ? ಅಥವಾ ಕಲ್ಪನಾ ಜೀವಿಯೇ? ಎಂಬ ಬಗ್ಗೆ ಇತಿಹಾಸಜ್ಞರಲ್ಲಿ ಭಿನ್ನಾಭಿಪ್ರಾಯಗಳಿವೆ.

ಮಹಮದ್ ಬಿನ್ ತುಘಲಕ್‌ನು ಹೆಚ್ಚು ಪಾಂಡಿತ್ಯ ಪಡೆದವನು ಹಾಗೂ ಸುಸಂಸ್ಕೃತನೂ ಆಗಿದ್ದನೆಂಬುದರ ಬಗ್ಗೆ ಸಂದೇಹವಿಲ್ಲ. ಇದರ ಬಗ್ಗೆ ಬರನಿಯು 'ಸುಲ್ತಾನನ ತಲೆ ಮತ್ತು ಹೃದಯದ ಅಗಾಧ ಶಕ್ತಿಗಳನ್ನು ಅಳೆಯುವುದು ಕಷ್ಟ' ಎಂದು ಪ್ರಶಂಸಿಸಿದ್ದಾನೆ. ಇವನಿಗಿದ್ದ ತೀಕ್ಷ್ಣವಾದ ಪ್ರಜ್ಞೆ, ಅದ್ಭುತ ಸ್ಮರಣಶಕ್ತಿ ಮತ್ತು ಜ್ಞಾನ ಸಂಗ್ರಹಣೆಯಲ್ಲಿ ಹೊಂದಿದ್ದ ಅಪಾರ ಸಾಮರ್ಥ್ಯಗಳಿಂದಾಗಿ ತರ್ಕಶಾಸ್ತ್ರ, ತತ್ವಶಾಸ್ತ್ರ, ಗಣಿತಶಾಸ್ತ್ರ, ಖಗೋಳಶಾಸ್ತ್ರ, ಭೌತಿಕ ವಿಜ್ಞಾನಗಳು ಮುಂತಾದ ವಿವಿಧ ಶಾಸ್ತ್ರಗಳಲ್ಲಿ ಅವನು ಅಪಾರ ಜ್ಞಾನ ಹೊಂದಿದ್ದನು. ಇವನು ಅರಾಬಿಕ್ ಮತ್ತು ಪರ್ಷಿಯನ್ ಭಾಷೆಗಳಲ್ಲಿ ವಿದ್ವಾಂಸನಾಗಿದ್ದ. ಆ ಭಾಷೆಗಳಲ್ಲಿ ಕೃತಿ ರಚನೆ ಮತ್ತು ಶೈಲಿಯಲ್ಲಿ ಪ್ರಾವೀಣ್ಯ ಪಡೆದಿದ್ದು ಸುಂದರ ಲಿಪಿಕಾರನೂ ಆಗಿದ್ದನು. ಪರ್ಷಿಯನ್ ಕಾವ್ಯಗಳ ಬಗ್ಗೆ ಆಳವಾದ ಜ್ಞಾನವನ್ನೂ ಹೊಂದಿದ್ದನು.

ಮಹಮದ್ ಬಿನ್ ತುಘಲಕ್‌ನು ಕರುಣೆಯುಳ್ಳ ಮತ್ತು ಉದಾರವಾದಿ ಆಡಳಿತಗಾರ. ಈತ ವಿದೇಶಿಯರನ್ನು ಗೌರವಿಸುತ್ತಿದ್ದ. ಮದ್ಯ, ಹೆಣ್ಣು, ಜೂಜು ಮೊದಲಾದ ದುರ್ಗುಣಗಳಿಂದ ಮುಕ್ತನಾಗಿದ್ದನು. ಪ್ರಜೆಗಳಿಗೆ ಆಸ್ಪತ್ರೆ, ಆಹಾರ ಮೊದಲಾದ ಸೌಲಭ್ಯಗಳನ್ನು ಒದಗಿಸಿದ್ದನು. ಇಬನ್ ಬಟೂಟನು ತಿಳಿಸುವಂತೆ, ಸುಲ್ತಾನನ ನಡೆನುಡಿಗಳು ಸರಳವಾಗಿದ್ದವು. ಈತನು ಧಾರ್ಮಿಕ ವ್ಯಕ್ತಿಯಾಗಿದ್ದ ಆದರೆ ಧರ್ಮಾಂಧನಾಗಿರಲಿಲ್ಲ. ಇವನು ಅತಿ ದೊಡ್ಡ ಹುದ್ದೆಗಳನ್ನು ಹಿಂದೂಗಳಿಗೆ ನೀಡಿದ್ದ ಮತ್ತು ಹಿಂದೂ ಸಮಾಜದಲ್ಲಿದ್ದ ಸತಿ ಪದ್ಧತಿಯನ್ನು ನಿಲ್ಲಿಸಲು ಪ್ರಯತ್ನಿಸಿದ್ದ. ಸುಲ್ತಾನನು ದೊಡ್ಡ ನ್ಯಾಯವಾದಿಯಾಗಿದ್ದನು. ಅವನ ಅಭಿಪ್ರಾಯದಲ್ಲಿ ನ್ಯಾಯದ ಮುಂದೆ ಎಲ್ಲರೂ ಸರಿಸಮಾನರಾಗಿದ್ದರು.

ಸುಲ್ತಾನನ ಈ ಮೇಲಿನ ಉತ್ತಮ ಗುಣಗಳ ಆಗರವಾಗಿದ್ದನು. ಆದರೆ ಅವನು ಆತುರಗಾರನೂ, ಮುಂಗೋಪಿಯೂ ಆಗಿದ್ದು ತನ್ನ ಮಾರ್ಗವನ್ನು ವಿರೋಧಿಸುವವರನ್ನು ಸಹಿಸುತ್ತಿರಲಿಲ್ಲ. ಸುಲ್ತಾನನಿಗೆ ಯುಕ್ತಾಯುಕ್ತ ಪ್ರಾಯೋಗಿಕ ಪರಿಜ್ಞಾನ ಹಾಗೂ ವ್ಯವಹಾರ ಜ್ಞಾನಗಳು ಅಷ್ಟಾಗಿ ಇರಲಿಲ್ಲ. ಸುಲ್ತಾನನು ರಕ್ತಪಿಶಾಚಿಯಾಗಿದ್ದನೆಂದು ಕೆಲವು ಸಮಕಾಲೀನ ಇತಿಹಾಸಕಾರರು ತಿಳಿಸುತ್ತಾರೆ. ಬರ್ನಿಯು "ಸುಲ್ತಾನನು ಪ್ರತಿನಿತ್ಯ ದೇವರನ್ನು ಭಕ್ತಿಯಿಂದ ಪೂಜಿಸುತ್ತಾನೆ. ಆದರೆ ಅದೇ ವೇಳೆಯಲ್ಲಿ ಮುಸ್ಲಿಮರನ್ನು ಮತ್ತು ಮುಸ್ಲಿಂ ಸಂತರನ್ನು ಕೊಲ್ಲಲು ಸಂತೋಷಿಸುತ್ತಾನೆ" ಎಂದು ತಿಳಿಸಿದ್ದಾನೆ. ಸುಲ್ತಾನನು ಧ್ಯೇಯಸಾಧನೆಯಲ್ಲಿ ವಿಫಲಗೊಂಡುದರಿಂದ ಶೀಘ್ರವಾಗಿ ತನ್ನ ಚಿತ್ತ ಸಮಸ್ಥಿತಿಯನ್ನು ಕಳೆದುಕೊಳ್ಳುತ್ತಿದ್ದ.

ಸುಲ್ತಾನನ ಉತ್ತಮ ಗುಣಗಳೊಡನೆ ಅವನ ಉಗ್ರ ಮತ್ತು ಹಿಂಸಾತ್ಮಕ ಕ್ರಮಗಳನ್ನು ಹೋಲಿಸಿರುವ ಕೆಲವು ಇತಿಹಾಸಕಾರರು ಅವನನ್ನು 'ವೈಪರಿತ್ಯಗಳ ಸಂಮಿಶ್ರಣ' ಎಂದು ಕರೆದಿರುವರು. ಎಲ್ಫಿನ್‌ಸ್ಟನ್, ಮಹಮದ್ ಬಿನ್ ತುಘಲಕ್ ಸ್ವಲ್ಪ ಹುಚ್ಚು ಸ್ವಭಾವದವನಾಗಿದ್ದನು ಎಂದಿದ್ದಾರೆ. ಆದರೆ ಆಧುನಿಕ ಇತಿಹಾಸಕಾರರು ಈ ವಾದವನ್ನು ತಿರಸ್ಕರಿಸುತ್ತಾರೆ. 'ಸುಲ್ತಾನನು ತನ್ನ ವಿರೋಧಿಗಳನ್ನು ಹಾಗೂ ದಂಗೆಕೋರರನ್ನು ಕೆಲವು ವೇಳೆ

ಕ್ರೂರವಾಗಿ ಕೊಂದಿರುವುದು ನಿಜ. ಆದರೆ ರಕ್ತಪಾತ ಮತ್ತು ಅವನ ಹಿಂಸಾತ್ಮಕ ಕ್ರಮಗಳ ಆಧಾರದ ಮೇಲೆಯೇ ಅವನನ್ನು ಹುಚ್ಚು ಸ್ವಭಾವದ ಸುಲ್ತಾನನೆಂದು ಕರೆಯಲಾಗುವುದಿಲ್ಲ. ಸುಲ್ತಾನನು ವ್ಯಕ್ತಪಡಿಸಿದ ವಿಚಾರಗಳು ಅವನ ಶತಮಾನದ ಜನರ ಕಲ್ಪನೆಗೂ ನಿಲುಕದ ವಿಚಾರಗಳಾಗಿದ್ದವು. ಸುಲ್ತಾನನ ಐದು ಯೋಜನೆಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವ ಮೂಲಕ ಆ ಯೋಜನೆಗಳಲ್ಲಿದ್ದ ಅಂತರ್ ದೃಷ್ಟಿಯನ್ನು ತಿಳಿದುಕೊಳ್ಳಬಹುದು.

ಮಹಮದ್ ಬಿನ್ ತುಘಲಕ್‌ನು ಆಡಳಿತಗಾರನಾಗಿ ವಿಫಲನಾದರೂ ಸಹ ದೆಹಲಿ ಸುಲ್ತಾನರಲ್ಲೆಲ್ಲಾ ಪ್ರಮುಖ ಸ್ಥಾನ ಪಡೆದಿದ್ದಾನೆ. ಈಶ್ವರಿ ಪ್ರಸಾದ್‌ರವರು "ಮಹ ಮದ್ ಬಿನ್ ತುಘಲಕ್‌ನು ಮಧ್ಯಕಾಲದಲ್ಲಿ ಅಧಿಕಾರಕ್ಕೆ ಬಂದ ಎಲ್ಲ ರಾಜರಲ್ಲೂ ಪ್ರಶ್ನಾತೀತವಾಗಿ ದಕ್ಷನು ಮತ್ತು ವಿದ್ವತ್‌ಪೂರ್ಣ ವ್ಯಕ್ತಿ" ಎಂದಿದ್ದಾರೆ. ಇವನ ವ್ಯಕ್ತಿತ್ವ ಮತ್ತು ಗುಣ ನಡತೆಗಳು, ವಿಚಾರ ಲಹರಿಗಳು ಇಂದಿನ ಇತಿಹಾಸಜ್ಞನನ್ನು ಆಕರ್ಷಿಸಿವೆಯೆಂದರೆ ಅವನ ವಿಶಿಷ್ಟ ವ್ಯಕ್ತಿತ್ವದಿಂದಾಗಿಯೇ ಎಂದು ಹೇಳಬಹುದು.

## ೩.೩ ಭಕ್ತಿ ಚಳುವಳಿ

ಭಕ್ತಿ ಪಂಥದ ಉದಯ ಹಾಗೂ ಬೆಳವಣಿಗೆ ಮಧ್ಯಕಾಲೀನ ಭಾರತದ ಚರಿತ್ರೆಯಲ್ಲಿಯೆ ಮಹತ್ವದ ಸ್ಥಾನ ಪಡೆದಿದೆ. ಈ ಚಳುವಳಿಯು ಹಲವಾರು ಶತಮಾನಗಳ ಕಾಲ ತನ್ನ ಪ್ರಭಾವವನ್ನು ಬೀರಿತು. 'ಭಕ್ತಿ' ಎಂದರೆ ದೇವರಿಗೆ ಸಮರ್ಪಿಸಿಕೊಳ್ಳುವುದು ಅಥವಾ ಭಗವಂತನಲ್ಲಿ ಅಚಲವಾದ ನಂಬಿಕೆ ಮತ್ತು ಪರಿಶುದ್ಧ ಪ್ರೇಮದಿಂದ ಧ್ಯಾನಾಸಕ್ತರಾಗುವುದು ಎಂದು ಅರ್ಥ ಬರುತ್ತದೆ. ಭಕ್ತಿ ಪಂಥದ ತತ್ವಗಳು ಹೊಸದೇನು ಆಗಿರದೆ ಈ ತತ್ವಗಳು ಪ್ರಾಚೀನ ಭಾರತದ ತತ್ವಜ್ಞಾನ ಗ್ರಂಥಗಳಲ್ಲಿ ಕಂಡುಬರುತ್ತವೆ. 'ಭಕ್ತಿ' ಎಂಬುದು ಪರಿಷ್ಕೃತ ವಾದ 'ಭಜ್' ಎಂಬ ಪದದಿಂದ ಉತ್ಪನ್ನವಾಗಿದೆ. ಪ್ರಾಚೀನ ಭಾರತದಲ್ಲಿ ಬೌದ್ಧ ಮತ್ತು ಜೈನ ಧರ್ಮಗಳು ಹುಟ್ಟಿಕೊಂಡ ಸಮಯದಲ್ಲಿಯೇ ಹಿಂದೂ ಧರ್ಮ ಸುಧಾರಣೆಗಾಗಿ ಅಥವಾ ಶುದ್ಧೀಕರಣಕ್ಕಾಗಿ ಈ ಅಲೆ ಎದ್ದಿತು. ಆದರೆ ಮಧ್ಯಕಾಲೀನ ಭಾರತದ ಚರಿತ್ರೆಯ ಸ್ವರೂಪವೇ ಬೇರೆಯಾಗಿದ್ದು ಈ ಯುಗದಲ್ಲಿ ಮುಸ್ಲಿಂ ಸಂಪರ್ಕದಿಂದಾಗಿ ಭಾರತೀಯ ಸಮಾಜದಲ್ಲಿದ್ದ ಜಾತಿ ಪದ್ಧತಿ, ವರ್ಣ ವ್ಯವಸ್ಥೆ, ವಿಗ್ರಹಾರಾಧನೆ, ಅನವಶ್ಯಕವಾದ ಪೂಜೆ, ಯಜ್ಞ ಯಾಗಾದಿ, ಮೂಢನಂಬಿಕೆಗಳು ಕಾಣಲಾರಂಬಿಸಿದವು. ಈ ರೀತಿ ನಿಂತ ನೀರಿನಂತೆ, ಜಡವಾಗಿದ್ದ ಹಿಂದೂ ಸಂಸ್ಕೃತಿಗೆ ಚಾಲನೆ ಬರಲು ಇಸ್ಲಾಂ ಧರ್ಮವೂ ಕಾರಣವೆಂದು ಹೇಳಬಹುದು. ಮುಸ್ಲಿಮರು ಹಲವಾರು ದೇವಾಲಯಗಳನ್ನು ನಾಶಪಡಿಸಿ, ಬಹುಸಂಖ್ಯಾತ ಹಿಂದೂಗಳನ್ನು ಇಸ್ಲಾಂ ಮತಕ್ಕೆ ಪರಿವರ್ತಿಸಲಾರಂಭಿಸಿದರು. ಜೊತೆಗೆ ಇಸ್ಲಾಂ ಧರ್ಮದ ಏಕೀಶ್ವರವಾದ ಮತ್ತು ವಿಶ್ವಭ್ರಾತೃತ್ವಕ್ಕೆ ಹೆಚ್ಚಿನ ಜನರು ಆಕರ್ಷಿತರಾದರು. ಇದರಿಂದ ಹೆಚ್ಚು ಜನರು ಇಸ್ಲಾಂ ಧರ್ಮವನ್ನು ಅನುಸರಿಸಿದರು. ಈ ವೇಳೆಯಲ್ಲಿ ಹಿಂದೂ ಸಮಾಜ ದಲ್ಲಿದ್ದ ಕೆಲವು ಚಿಂತಕರು, ಸಮಾಜ ಸುಧಾರಕರು ಹಿಂದೂ ಧರ್ಮ ಸುಧಾರಣಾ ಚಳುವಳಿ ಯನ್ನು ಆರಂಭಿಸಿದರು. ಯಾವುದೇ ಒಂದು ಧರ್ಮಕ್ಕೆ ಚಾಲನೆ ಬರುವುದು ಯಾವಾಗ ಎಂದರೆ ಅದಕ್ಕೆ ಮತ್ತೊಂದು ಪ್ರತಿಸ್ಪರ್ಧಿ ಧರ್ಮ ಹುಟ್ಟಿಕೊಂಡಾಗ ಮಾತ್ರ, ಆಗ ಆ ಧರ್ಮ ಕ್ರಿಯಾಶೀಲವಾಗುತ್ತದೆ. ಭಾರತದ ಚರಿತ್ರೆಯ ಪುಟಗಳನ್ನು ತಿರುವಿ ನೋಡಿದರೆ ಇದೇ ಅಂಶ ಮನದಟ್ಟಾಗುತ್ತದೆ. ಭಕ್ತಿಪಂಥದ ಪ್ರಚಾರಕರು ಯಾವುದೇ ಒಂದು ನಿರ್ದಿಷ್ಟ ಪಂಥಕ್ಕೆ ಸೇರದೆ ಹಲವಾರು ಪಂಥಗಳಿಗೆ ಸೇರಿದವರಾಗಿದ್ದರು. ಅಲ್ಲದೆ ಜಾತಿ ಪದ್ಧತಿ, ಮೂಢನಂಬಿಕೆ, ವಿಗ್ರಹಾರಾಧನೆ ಮುಂತಾದವುಗಳನ್ನು ವಿರೋಧಿಸಿ ವಿಶ್ವ ಭ್ರಾತೃತ್ವಕ್ಕೆ ಹೆಚ್ಚು ಒತ್ತು ಕೊಟ್ಟರು. ೧೧ ಮತ್ತು ೧೨ ನೇ ಶತಮಾನಗಳಲ್ಲಿ ಭಕ್ತಿಪಂಥದ ಪ್ರಚಾರಕರು ಹಿಂದೂ ಧರ್ಮದಲ್ಲಿದ್ದ ಕೆಟ್ಟ ಮತ್ತು ಅನಿಷ್ಟ ಪದ್ಧತಿಗಳನ್ನು ತೊಡೆದುಹಾಕಲು ಶ್ರಮಿಸಿ ಏಕ ದೇವತಾರಾಧನೆ, ಮಾನವ ಸಹೋದರತೆಯನ್ನು ಪ್ರಚುರಪಡಿಸಿ ಹಿಂದೂ ಧರ್ಮವನ್ನು ಇಸ್ಲಾಂನ ಪ್ರಭಾವದಿಂದ ರಕ್ಷಿಸಿದರು. ಈ ಚಳುವಳಿಯನ್ನು ಹಿಂದೂಧರ್ಮದ 'ಶುದ್ಧೀಕರಣ ಚಳುವಳಿ' ಎಂದು ಕರೆಯುತ್ತಾರೆ.

ಹಿಂದೂ ಮುಸ್ಲಿಂರಲ್ಲಿ ಪರಸ್ಪರ ಅರಿವುಂಟಾಗಿ ತಮ್ಮ ದ್ವೇಷ ಅಸೂಯೆಗಳನ್ನು ಬಿಟ್ಟು ನೆರೆಹೊರೆಯವರಂತೆ ಜೀವನ ನಡೆಸತೊಡಗಿದರು. ಇದರಿಂದ ಹಿಂದೂ ಧರ್ಮದಲ್ಲಿ ಜಾತಿ ಪದ್ಧತಿ, ವಿಗ್ರಹಾರಾಧನೆ, ಬಹು ದೇವತಾರಾಧನೆ, ಅನವಶ್ಯಕ ಯಜ್ಞ-ಯಾಗದಿಗಳು, ನಿರರ್ಥಕತೆ, ನಿಷ್ಪ್ರಯೋಜನಗಳನ್ನು ಮನಗಂಡರು. ಹಿಂದೂಗಳ ಹಾಗೆಯೇ ಹಿಂದೂ ಧರ್ಮದ ಪ್ರಭಾವದಿಂದಾಗಿ ಮುಸ್ಲಿಮರು ಹಿಂದೂಗಳೊಂದಿಗೆ, ಶಾಂತಿಯುತ ಸಹ ಜೀವನಕ್ಕೆ ಮುಂದಾದರು. ಇದರ ಫಲವೇ ಮುಸ್ಲಿಂ ಸಮಾಜದಲ್ಲಿ 'ಸೂಫಿ', ಹಿಂದೂ ಸಮಾಜದಲ್ಲಿ 'ಭಕ್ತಿಪಂಥ' ಅಥವಾ 'ಭಕ್ತಿ ಚಳುವಳಿ' ಉದಯಿಸಲು ಸ್ವಲ್ಪಮಟ್ಟಿಗೆ ಕಾರಣವಾಯಿತು.

**ಭಕ್ತಿಚಳುವಳಿಯ ಪ್ರಮುಖ ತತ್ವಗಳು**

೧. ದೇವರು ಒಬ್ಬನೆ

೨. ಭಕ್ತಿಯ ಮೂಲಕವೇ ಮುಕ್ತಿಯನ್ನು ಎಲ್ಲರೂ ಪಡೆಯಬಹುದು.

೩. ಈ ಯುಗದಲ್ಲಿ ರಾಮನ ಪಂಥಕ್ಕೆ ಮತ್ತು ಕೃಷ್ಣನ ಪಂಥಕ್ಕೆ ಹೆಚ್ಚು ಪ್ರಚಾರ ಬಂದಿತು. ರಾಮ ಮತ್ತು ಕೃಷ್ಣ ಇಬ್ಬರನ್ನು ದೇವರ ಅವತಾರಗಳೆಂದೇ ನಂಬಲಾಯಿತು.

೪. ಭಕ್ತಿಮಾರ್ಗದ ಮೂಲಕ ಮುಕ್ತಿಯನ್ನು ಪಡೆಯಲು ಗುರುವಿನ ಮಾರ್ಗದರ್ಶನ ಸಾಕು.

೫. ವಿಶ್ವ ಭ್ರಾತೃತ್ವ

೬. ವಿಗ್ರಹಾರಾಧನೆ, ಜಾತೀಯತೆ ಮುಂತಾದ ದುಷ್ಟ ಪಿಡುಗುಗಳನ್ನು ಭಕ್ತಿ ಪಂಥದ ಆಚಾರ್ಯರು ತೀವ್ರವಾಗಿ ಖಂಡಿಸಿದರು.

೭. ಅನವಶ್ಯಕ ಯಜ್ಞ-ಯಾಗಗಳನ್ನು ಮತ್ತು ಗೊಡ್ಡು ಸಂಪ್ರದಾಯಗಳನ್ನು ತೀವ್ರವಾಗಿ ವಿರೋಧಿಸಿದರು.

೮. ಸರ್ವಧರ್ಮಗಳ ಸಮಾನತೆ ಮತ್ತು ದೈವತ್ವದ ಏಕತೆ.

೯. ಮಾನವನ ಬಗ್ಗೆ ಗೌರವ ಬರುವುದು ಅವನ ಹುಟ್ಟಿನಿಂದಲ್ಲ. ಆದರೆ ಅವನ ಕಾರ್ಯತಂತ್ರದಿಂದ ಮಾತ್ರ.

೧೦. ಮತಾಚರಣೆಯ ಬಗ್ಗೆ ಅತಿ ನಿಷ್ಠೆ, ಎಲ್ಲರ ಮೋಕ್ಷದ ಸರಳತೆ ಮತ್ತು ನಂಬಿಕೆ.

**ಭಕ್ತಿ ಚಳುವಳಿಯ ಪ್ರಮುಖ ಸುಧಾರಕರ ಜೀವನ ಮತ್ತು ಬೋಧನೆಗಳು**

**ಕಬೀರ್** (ಕ್ರಿ.ಶ. ೧೪೪೦-೧೫೧೦)

ಸಿಕಂದರ್ ಲೂದಿಯ ಸಮಕಾಲೀನ ರಮಾನಂದರ ನೆಚ್ಚಿನ ಶಿಷ್ಯರೆ ಕಬೀರ್. ಇವರು ತನ್ನ ಗುರು ರಮಾನಂದರ ತತ್ವಗಳಿಗೆ ನಿರ್ದಿಷ್ಟವಾದ ಸ್ವರೂಪವನ್ನು ಕೊಟ್ಟವರು. ಇವರು ವಾರಣಾಸಿ (ಬನಾರಸ್)ಯಲ್ಲಿ ಜನಿಸಿದ ಬ್ರಾಹ್ಮಣ ವಿಧವೆಯ ಪುತ್ರ. ನೀರೂ ಮತ್ತು ನಿಮಾ ಎಂಬ ಮುಸಲ್ಮಾನ ನೇಕಾರ ದಂಪತಿಗಳು ಇವರನ್ನು ಸಾಕಿದರು. ಇವರು ವೇದಾಂತ ತತ್ವಜ್ಞಾನವನ್ನು ಅಭ್ಯಾಸಿಸಿದ್ದರು. ಕಬೀರರು ಮುಸ್ಲಿಂ ಸಂತ ಪೀರ್ ರಾಕಿಯ ತತ್ವಗಳಿಂದ ಸಾಕಷ್ಟು ಪ್ರಭಾವಿತರಾಗಿದ್ದವರು. ಕಬೀರ್ ನಮ್ಮ ಮುಂದೆ ಒಬ್ಬ ತತ್ವಜ್ಞಾನಿ ಅಥವಾ

ಮತಧರ್ಮ ಶಾಸ್ತ್ರಜ್ಞನಾಗಿ ಕಂಡುಬರದೇ ಒಬ್ಬ ಬೋಧಕನಾಗಿ ಕಂಡುಬರುತ್ತಾರೆ. ಕಬೀರರ ತತ್ವಗಳನ್ನು ದೋಹಾಗಳಲ್ಲಿ (ಎರಡು ಸಾಲಿನ ಪದ್ಯ) ಕಾಣಬಹುದು. ಇಂದೂ ಸಹ ದೋಹಾಗಳನ್ನು ಉತ್ತರ ಭಾರತದಲ್ಲಿ ಹಾಡುತ್ತಾರೆ. ಕಬೀರ್ ಜಾತಿ ವಿಂಗಡಣೆಗಳನ್ನು ವಿರೋಧಿಸಿ ಬ್ರಾಹ್ಮಣ ವರ್ಗ ಪ್ರತಿಪಾದಿಸುತ್ತಿದ್ದ ಪ್ರಾಚೀನ ಭಾರತದ ಷಡ್ದರ್ಶನ ಮತ್ತು ಜೀವನದ ನಾಲ್ಕು ಹಂತಗಳನ್ನು ಒಪ್ಪಲಿಲ್ಲ. ಸನ್ಯಾಸಿ ಜೀವನ, ಉಪವಾಸ, ವ್ರತಗಳ ಅವಶ್ಯಕತೆ ಇಲ್ಲ. ದೇವರ ಮುಂದೆ ಎಲ್ಲರೂ ಸಮಾನರು ಎಂಬ ತತ್ವದಡಿಯಲ್ಲಿ ಧಾರ್ಮಿಕ ಅಸಮಾನತೆಯನ್ನು ತೊಡೆದುಹಾಕಿ ಎಲ್ಲರಲ್ಲೂ ಸಾಮರಸ್ಯವನ್ನು ಮೂಡಿಸಲು ಪ್ರಯತ್ನಿಸಿದ ಸಂತರಲ್ಲಿ ಮೊದಲಿಗರು ಕಬೀರ್.

ಅಂದಿನ ಜನಗಳಲ್ಲಿದ್ದ ಸಾಮಾಜಿಕ ಪಿಡುಗುಗಳಾದ, ಸತಿಪದ್ಧತಿ, ಪರ್ದಾ ಪದ್ಧತಿಯನ್ನು ವಿರೋಧಿಸಿದರು. ಜೊತೆಗೆ ಬ್ರಾಹ್ಮಣರನ್ನು ಶ್ರೇಷ್ಠರೆಂದು ಒಪ್ಪಲು ನಿರಾಕರಿಸಿದರು. ಕಬೀರ್ ಸಮಾಜದ ಬಡಜನರ ಮತ್ತು ಶೋಷಿತ ವರ್ಗದ ವಕ್ತಾರನಾಗಿದ್ದ. ವಿಗ್ರಹಾರಾಧನೆ, ಆಡಂಬರದ ಪೂಜೆ, ಯಜ್ಞ-ಯಾಗಗಳನ್ನು ವಿರೋಧಿಸಿ ಆತ್ಮಶುದ್ಧಿಯಿಲ್ಲದ ಪೂಜೆ, ಆತ್ಮ ಶುದ್ಧಿಯಿಲ್ಲದ ತೀರ್ಥಯಾತ್ರೆಯಿಂದ ಏನು ಪ್ರಯೋಜನವಿಲ್ಲ ಎಂದು ಸಾರಿದರು. ಹಿಂದೂ ಮುಸ್ಲಿಮರಿಬ್ಬರ ವೈರತ್ವವನ್ನು ಕೊನೆಗಾಣಿಸಲು ಪ್ರಯತ್ನಿಸಿದ. "ಹಿಂದೂ ಮುಸ್ಲಿಮರಿಬ್ಬರು ಒಂದೇ ಮಣ್ಣಿನಿಂದ ಮಾಡಿದ ಮಡಿಕೆಗಳು" ಎಂಬುದಾಗಿ ಅಭಿಪ್ರಾಯಪಟ್ಟಿದ್ದಾನೆ. ಕಬೀರ್ ಏಕೀಶ್ವರ ವಾದವನ್ನು ಪ್ರತಿಪಾದಿಸಿದರು. ಹಿಂದೂಗಳ ಪೂಜೆ, ಮುಸ್ಲಿಮರ ನಮಾಜ್ (ಪ್ರಾರ್ಥನೆ), ಅಲ್ಲಾ ಮತ್ತು ಹರಿ ಇಬ್ಬರು ಒಬ್ಬನೇ; ಆದರೆ ಬೇರೆ ಬೇರೆ ಹೆಸರಿನಿಂದ ಬೇರೆ ಬೇರೆ ವಿಧಾನದಲ್ಲಿ ದೇವರನ್ನು ಕಾಣುವ ಪ್ರಯತ್ನವಷ್ಟೇ ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಕಬೀರ್‌ರ ಮರಣಾನಂತರ ಅವರ ಶಿಷ್ಯರು ಎರಡು ಗುಂಪುಗಳಾಗಿ ವಿಭಾಗವಾದರು. ಕಬೀರ್ ಸರಳಜೀವಿಯಾಗಿದ್ದು ಬಟ್ಟೆ ನೇಯ್ಗೆ ಕೆಲಸವನ್ನು ಮಾಡುತ್ತಿದ್ದರು. ಕಬೀರರು ಎಲ್ಲ ಜಾತಿಮತಗಳಲ್ಲಿಯೂ ಏಕತೆಯನ್ನು ಹೆಚ್ಚಿಸಲು, ಹಿಂದೂ ಮತ್ತು ಮುಸ್ಲಿಮರ ರಾಮ-ಅಲ್ಲಾ ಇವು ಒಂದೇ ದೇವರ ಹಲವು ಹೆಸರುಗಳು ಎಂಬುದನ್ನು ತಿಳಿಸಿದರು. (ರಾಮು-ರಹಿಮ್ ಏಕ್ ಹೈ) ಇಂತಹ ಕೆಳಕಂಡ ಪದ್ಯಗಳ ಮೂಲಕ ತಿಳಿಸಲು ಪ್ರಯತ್ನಿಸಿದ್ದಾರೆ.

ಉಪವಾಸ ಜಪತಪ ಮೇಣ್ ತನ್ನ ಮತದಿಂದ ಸ್ವರ್ಗದಾವಾಸ ಪಡೆಯುವುದಿಲ್ಲ.
ಸತ್ಯವನರಿತೊಡೆ, ಮೆಕ್ಕಾ ದೇವಾಲಯದ ಗರ್ಭಗೃಹ
ಮಾನವ ಹೃದಯದಲೇ ಇಹುದು
ನಿನ್ನ ಮನವಂ ನಿನ್ನ ಕಾಬಾವಾಗಿಸಿ, ದೇಹಂ ಅದನಾವರಿಸುವ
ದೇವಾಲಯವಾಗಿಸಿ ಸದ್ವಿವೇವಚನೆಯ ಅವರ ಗುರುವಾಗಿ ಮಾರ್ಪಡಿಸು
ಕೋಪ, ಶಂಕೆ ಮತ್ಸರವ ತ್ಯಜಿಸು
ತಾಳ್ಮೆಯನೇ ಪಂಚ ಪ್ರಾರ್ಥನೆಗಳಾಗಿಸು
ಹಿಂದೂ ಮುಸ್ಲಿಂರೆಲ್ಲರಿಗೂ ಇರುವ ದೇವನೊಬ್ಬನೇ.

**ತತ್ವಗಳು**

ಕಬೀರರು ಸಂಪ್ರದಾಯಸ್ಥರು ಧರ್ಮಗಳಲ್ಲಿ ಅನುಸರಿಸುತ್ತಿದ್ದ ಕಂದಾಚಾರ, ಮೂಢ ನಂಬಿಕೆಗಳನ್ನು ಪ್ರಶ್ನಿಸುತ್ತಿದ್ದರು ಮತ್ತು ಆ ಮೂಲಕ ಜನರಲ್ಲಿ ವಿವೇಚನಾಶಕ್ತಿಯನ್ನು ಬೆಳೆಸಲು ಪ್ರಯತ್ನಿಸುತ್ತಿದ್ದರು. ಅಂತಹ ಕೆಲವು ಉದಾಹರಣೆಗಳು ಈ ಕೆಳಕಂಡಂತಿದ್ದವು.

೧. ಸಂಸ್ಕೃತವು ಬಾವಿಯಲ್ಲಿರುವ ನೀರು, ಜನಸಾಮಾನ್ಯರ ಭಾಷೆ ಹರಿಯುತ್ತಿರುವ ನೀರು.
೨. ಕಲ್ಲನ್ನು ಪೂಜಿಸುವ ಮೂಲಕ ದೇವರನ್ನು ಕಾಣುವುದಾದರೆ ನಾನು ಪರ್ವತವನ್ನೇ ಪೂಜಿಸುತ್ತೇನೆ.
೩. ಸ್ನಾನ ಮಾಡುವ ಮೂಲಕ ಮೋಕ್ಷ ಪಡೆಯುವುದಾದರೆ ಕಪ್ಪೆಗಳು ಮೊದಲು ಪಡೆಯುತ್ತವೆ.
೪. ಪೂರ್ಣ ಬೆತ್ತಲೆಯಾಗಿರುವ ಮೂಲಕ ಹರಿಯನ್ನು ಕಾಣುವುದಾದರೆ ಬಹಳ ದೀನ ದರಿದ್ರನು ಮೊದಲು ಕಾಣುವನು.
೫. ಮನುಷ್ಯನು ನೂರಾರು ಗ್ರಂಥಗಳನ್ನು ಓದಿದರೂ ಪಂಡಿತನಾಗಲಾರ. ಯಾವ ಪಂಡಿತನು ಎರಡೂವರೆ ಅಕ್ಷರಗಳಾದ 'ಪ್ರೇಮ್' ಎಂಬುದನ್ನು ಅರ್ಥ ಮಾಡಿ ಕೊಳ್ಳುವುದಿಲ್ಲವೋ ಅವನು ಪಂಡಿತನಾಗಲಾರ.
೬. ಚಿನ್ನವು ಒಂದೇ, ಆದರೆ ಆಭರಣಗಳನ್ನು ಮಾಡಿದಾಗ ಅದು ವಿವಿಧ ಆಕಾರಗಳನ್ನು ಪಡೆಯುತ್ತದೆ. ಹಾಗೆಯೇ ಧರ್ಮ ಮತ್ತು ದೇವರುಗಳ ಹೆಸರುಗಳು ಅಸಂಖ್ಯವಾದರೂ ದೇವರು ಒಬ್ಬನೇ.
೭. ನಾನು, ನನ್ನದು ಎಂಬ ಅಹಂಕಾರವನ್ನು ಬಿಡಬೇಕು.
೮. ಭಕ್ತಿ ಮಾರ್ಗವನ್ನು ಅವಲಂಬಿಸಿದರೂ ಶಂಕರಾಚಾರ್ಯರ ಜ್ಞಾನಮಾರ್ಗವನ್ನು ಬಿಡಲಿಲ್ಲ. ಜ್ಞಾನವು ಭಕ್ತಿಯ ಪೋಷಕ ತತ್ವ ಎಂಬುದೇ ಅವರ ನಂಬಿಕೆ.
೯. ಪ್ರಾಪಂಚಿಕ ಸಂಬಂಧ ತೊರೆಯಬೇಕು.
೧೦. ನಿಜವಾದ ಪೂಜೆ ಎಂದರೆ ಪ್ರೀತಿ.
೧೧. ಮೂರ್ತಿಪೂಜೆ ಖಂಡನೆ, ದೇವರು ನಿರಾಕಾರ. ವೇದಗಳು ಮತ್ತು ಖುರಾನನ್ನು ಖಂಡಿಸಿದರು.
೧೨. ದೇವರ ಮೇಲಿನ ಪ್ರೀತಿಯಿಂದ ಮುಕ್ತಿ ಸಾಧ್ಯ. ಮೋಕ್ಷಕ್ಕೆ ನಿಜವಾದ ಸಾಧನ ಶುದ್ಧ ಭಜನೆ. ಅಂದರೆ ಅದು ಮೋಸ, ಅವಿಧೇಯತೆ, ಕಪಟಾಚರಣೆ ಹಾಗೂ ಕ್ರೂರತೆಯಿಂದ ಮುಕ್ತವಾದ ಭಜನೆಯಾಗಿರಬೇಕು.

ಸಂತನನ್ನು ನೀನಾವ ಜಾತಿಯೆಂದು ಪ್ರಶ್ನಿಸುವ ಅಗತ್ಯವಿಲ್ಲವೆಂದರು. ಮನುಷ್ಯನ ಸ್ವಭಾವ ವಿಚಿತ್ರವಾದೆಂಬುದನ್ನು ಒಂದು ಕಡೆ ಈ ರೀತಿ ವರ್ಣಿಸಿದ್ದಾರೆ. "ಹಾಲಿನಂತಹ ಉತ್ತಮ ಪಾನೀಯವನ್ನು ಮಾರಬೇಕಾದವನು ಮನೆ ಮನೆಗೆ ಹೋಗಿ ಮಾರಬೇಕು. ಆದರೆ ಹೆಂಡ ಮಾರುವ ಅಂಗಡಿಗೇ ಜನ ಬಂದು ಕುಡಿದು ಹೋಗುತ್ತಾರೆ". ಇಂತಹ ಸ್ಪಷ್ಟ ಮಾತುಗಳಿಂದ

ಜನಮನವನ್ನು ತಿದ್ದಲು ಪ್ರಯತ್ನಿಸಿದರು. ಇವರ ಉಪದೇಶಗಳು *ಬೀಜಕ* ಎಂಬ ಗ್ರಂಥದಲ್ಲಿ ಸಂಗ್ರಹವಾಗಿರುವವು.

**ಚೈತನ್ಯ (ಕ್ರಿ.ಶ. ೧೪೮೬-೧೫೩೩)**

ಚೈತನ್ಯರ ಮೂಲ ಹೆಸರು 'ವಿಶ್ವಂಬರ' ಎಂದು. ಇವರು ಪಶ್ಚಿಮ ಬಂಗಾಳದ 'ನಾಡಿಯಾ' ಎಂಬ ಸ್ಥಳದಲ್ಲಿ ಜನಿಸಿದರು. ೨೫ನೇ ವರ್ಷದಲ್ಲಿ ಸನ್ಯಾಸ ದೀಕ್ಷೆಯನ್ನು ಪಡೆದು, ಅಲೆಮಾರಿ ಸನ್ಯಾಸಿಯ ರೀತಿಯಲ್ಲಿ ದೇಶ ಸಂಚಾರವನ್ನು ಕೈಗೊಂಡು ಹಲವಾರು ಸ್ಥಳಗಳನ್ನು ಸಂದರ್ಶಿಸಿದರು. ಚೈತನ್ಯರು ಶ್ರೀಕೃಷ್ಣನ ಪರಮ ಭಕ್ತರಾಗಿದ್ದರು. ಇವರು ಕೃಷ್ಣನನ್ನು ಕುರಿತು ಕೀರ್ತನೆಗಳನ್ನು ಭಕ್ತಿಯಿಂದ ಹಾಡುತ್ತಿದ್ದರು. ಇದರಿಂದ ಸ್ಫೂರ್ತಿ ಪಡೆದ ಕವಿ ಚಂಡಿದಾಸ ಮತ್ತು ಜಯದೇವ ಕೃಷ್ಣನನ್ನು ಕುರಿತು ಹಲವಾರು ಕವಿತೆಯನ್ನು ಹಾಡಿದರು. ಜಾತಿ-ಮತಗಳ ಬೇಧವಿಲ್ಲದೇ ಜನಸಾಮಾನ್ಯರಿಗೆ ತತ್ವಗಳನ್ನು ಬೋಧಿಸಿದರು. ಮಾನವ ಪ್ರೇಮದ ಬಗ್ಗೆ ಒತ್ತಿ ಹೇಳಿದರು. ಇವರ ಕೀರ್ತನೆ, ಸಭೆಗಳು ಅಪಾರ ಜನಮನ್ನಣೆಯನ್ನು ಪಡೆದಿದ್ದವು. ಚೈತನ್ಯರ ಪ್ರಸಿದ್ಧ ಜೀವನ ಚರಿತ್ರೆ *ಚೈತನ್ಯ ಚರಿತಾಮೃತ* ದ ಕರ್ತೃ ಕೃಷ್ಣದಾಸ ಕವಿರಾಜ. ಚೈತನ್ಯ ಧರ್ಮದ ಸಾರವನ್ನು ಈ ರೀತಿ ವಿವರಿಸಿದ್ದಾರೆ- "ಒಂದು ಜೀವಿ ಕೃಷ್ಣನನ್ನು ಆರಾಧಿಸಿ ತನ್ನ ಗುರುವಿಗೆ ಸೇವೆ ಸಲ್ಲಿಸಿದರೆ ಅದು ಮಾಯೆಯ ಬಂಧನದಿಂದ ಮುಕ್ತವಾಗಿ ಕೃಷ್ಣನ ಪಾದಾರವಿಂದಗಳನ್ನು ಸೇರುವುದು. ಪ್ರಲೋಭನೆಗಳು ಹಾಗೂ ಜಾತಿಯಾಧಾರಿತ ಧಾರ್ಮಿಕ ವ್ಯವಸ್ಥೆಗಳನ್ನು ಬಿಟ್ಟು (ನಿಜವಾದ ವೈಷ್ಣವ) ನಿರಾತಂಕವಾಗಿ ಕೃಷ್ಣನಲ್ಲಿ ಮೊರೆ ಹೋಗುತ್ತಾನೆ".

ಚೈತನ್ಯರು ಪೌರೋಹಿತ್ಯದ ಸಂಸ್ಕಾರಗಳ ವಿರೋಧಿಯಾಗಿದ್ದರು. ಹರಿಯಲ್ಲಿ ನಂಬಿಕೆಯನ್ನು ಮನಗಾಣುವುದರಿಂದ ಒಂದು ರೀತಿಯ ಆನಂದ ಪರವಶತೆಯನ್ನು ಪಡೆಯ ಬಹುದು ಎಂಬುದು ಇವರ ನಂಬಿಕೆಯಾಗಿತ್ತು. ಜಾತಿ-ಮತ ಭೇದವಿಲ್ಲದೆ ಸಕಲರಿಗೂ ಇವರ ಉಪದೇಶಗಳು ಅನ್ವಯವಾಗುತ್ತಿದ್ದವು. ಇವರು ತಮ್ಮ ಶಿಷ್ಯರನ್ನು ಹಿಂದೂ ಸಮಾಜದ ಕೆಳವರ್ಗಗಳಿಂದ ಮತ್ತು ಮುಸ್ಲಿಂ ವರ್ಗದಿಂದ ಆರಿಸಿಕೊಂಡಿದ್ದರು. ಚೈತನ್ಯರು ನಾಮ ಸಂಕೀರ್ತನೆಯಿಂದ ದೇವರನ್ನು ಒಲಿಸಿಕೊಳ್ಳುವುದು ಸಾಧ್ಯವೆಂದು ತಿಳಿಸಿದರು. ಮಾನವ ಪ್ರೇಮ ಮತ್ತು ಭಗವತ್ ಭಕ್ತಿಯ ಸಂದೇಶ ಹರಡಿದರು. ಅಂತರಂಗದ ಭಕ್ತಿ, ಭಜನೆ ಮತ್ತು ಗುರು ಮಾರ್ಗದರ್ಶನದಲ್ಲಿ ಮುಕ್ತಿ ದೊರೆಯುತ್ತದೆಂದರು. ಜಾತಿಪದ್ಧತಿಯನ್ನು ಖಂಡಿಸಿದರು. ವಿಶ್ವಭ್ರಾತೃತ್ವ ಮತ್ತು ಭಕ್ತಿಮಾರ್ಗ ಬೋಧಿಸಿದರು. ಹೀಗಾಗಿ ಚೈತನ್ಯರು ಮಧ್ಯಕಾಲೀನ ಭಾರತದ ಒಬ್ಬ ಶ್ರೇಷ್ಠ ಸಂತ ಎಂಬುದಾಗಿ ಹೆಸರುವಾಸಿಯಾಗಿದ್ದಾರೆ.

**ಗುರುನಾನಕ್ (ಕ್ರಿ.ಶ. ೧೪೬೯-೧೫೩೮)**

ಗುರುನಾನಕ್ ಮಧ್ಯಕಾಲೀನ ಭಾರತದ ಸಮಾಜ ಹಾಗೂ ಧರ್ಮ ಸುಧಾರಕ. ಇವರ ಹೆಸರು ಭಾರತದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿದೆ. ಇವರು ಪಂಜಾಬಿನ 'ತಾಳವಂಡಿ'

ಯಲ್ಲಿ ಕ್ರಿ.ಶ. ೧೪೬೯ ರಲ್ಲಿ ಜನಿಸಿದರು. ಇವರ ತಂದೆ ಮೆಹತ್ ಕೌಲ ಮತ್ತು ತಾಯಿ ತ್ರಿಪ್ತಾ. ಹಿಂದಿ, ಸಂಸ್ಕೃತ, ಪರ್ಷಿಯನ್ ಹಾಗೂ ಪ್ರಾಕೃತ ಭಾಷೆಗಳಲ್ಲಿ ಪಂಡಿತರಾಗಿದ್ದರು. ಈತ 'ಸಿಖ್ ಪಂಥ'ದ ಆರಂಭಕ್ಕೆ ಬುನಾದಿ ಹಾಕಿದ. ಬಾಲ್ಯದಿಂದಲೇ ಗುರುನಾನಕ್‌ಗೆ ಪ್ರಾಪಂಚಿಕ ವ್ಯವಹಾರದ ಬಗ್ಗೆ ತಾತ್ಸಾರ. ಇವರು ಬುದ್ಧನಂತೆ ಆಧ್ಯಾತ್ಮಿಕತೆಯ ಕಡೆಗೆ ಹೆಚ್ಚು ಒಲುವನ್ನು ಹೊಂದಿದ್ದವರು. ಬಾಲ್ಯದಲ್ಲಿ ಗುರುನಾನಕ್ ಸಾಧು ಸಂತರ ಸಹವಾಸ ದಲ್ಲಿ ಕಳೆದರು. ಒಮ್ಮೆ ವ್ಯಾಪಾರಕ್ಕೆಂದು ನಾನಕ್‌ನ ತಂದೆ ಹಣ ಕೊಟ್ಟಾಗ ಆ ಹಣವನ್ನು ಹಸಿವೆಯಿಂದ ಬಳಲುತ್ತಿದ್ದ ಫಕೀರನಿಗೆ ನೀಡಿದರು. ಇದರಿಂದ ಚಿಂತೆಗೀಡಾದ ನಾನಕರ ತಂದೆ ಮದುವೆ ಮಾಡಲು ನಿರ್ಧರಿಸಿದರು. ನಾನಕ್ ಸಂಸಾರಿಯಾಗಿಯೂ ಕಾಲ ಕಳೆದು ಲೂದಿ ಸುಲ್ತಾನರ ಬಳಿ ಕೆಲಸಕ್ಕೆ ಸೇರಿದ. ಕೆಲಸವನ್ನು ಕಷ್ಟಪಟ್ಟು, ಪ್ರಾಮಾಣಿಕತೆಯಿಂದ ನಿರ್ವಹಿಸಿ ಒಳ್ಳೆಯ ಹೆಸರನ್ನು ಪಡೆದಿದ್ದರು. ಇವರು ಸಿಕಂದರ್ ಲೂದಿಯ ಸಮಕಾಲೀನ ರಾಗಿದ್ದರು. ಗುರುನಾನಕ್ ಜ್ಞಾನೋದಯವನ್ನು ಪಡೆದ ನಂತರ ತನ್ನ ಸನ್ಯಾಸಿ ಜೀವನವನ್ನು ಆರಂಭಿಸಿದರು. ನಾನಕ್ ೩೦ ವರ್ಷ ಕಾಲ ದೇಶ-ವಿದೇಶಗಳನ್ನು ಸಂದರ್ಶಿಸಿದರು. ಸಂದರ್ಶಿಸಿದ ದೇಶಗಳೆಂದರೆ ಸಿಲೋನ್, ಮೆಕ್ಕಾ, ಮದೀನ. ತಾನು ಹೋದ ಕಡೆಗಳಲ್ಲಿ ಹಿಂದೂ ಮುಸ್ಲಿಂರ ಸಂಕುಚಿತ ಮನೋಭಾವನೆಗಳನ್ನು ವಿರೋಧಿಸಿದರು. ನಾನಕ್ ದೇಶ ಪರ್ಯಟನೆಗಳಿಂದ ಅಪಾರವಾದ ಅನುಯಾಯಿಗಳನ್ನು ಹೊಂದಿದ್ದು ಇವರೇ ಮುಂದೆ 'ಸಿಖ್' (ಶಿಷ್ಯರು)ರೆಂದು ಪ್ರಸಿದ್ಧಿಗೆ ಬಂದರು. ಅಂಗದನನ್ನು ತನ್ನ ಮುಂದಿನ ಉತ್ತರಾಧಿಕಾರಿ ಎಂದು ಆಯ್ಕೆ ಮಾಡಿ ೧೫೩೮ ರಲ್ಲಿ ೭೦ನೇ ವಯಸ್ಸಿನಲ್ಲಿ ಗುರುನಾನಕ್ ಮರಣ ಹೊಂದಿದರು.

### ಗುರುನಾನಕ್‌ರ ಬೋಧನೆಗಳು

ಗುರುನಾನಕ್ ಸರಳವಾದ ತತ್ವಗಳನ್ನು ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಬೋಧಿಸಿದರು. ಇವರ ತತ್ವಗಳನ್ನು ತಿಳಿಯಲು ಯಾವುದೇ ಗುರುವಿನ ಸಹಾಯದ ಅಗತ್ಯವಿರಲಿಲ್ಲ. ಗುರುನಾನಕ್ ಜನಸಾಮಾನ್ಯರ ಮಧ್ಯದಲ್ಲಿಯೇ ಇದ್ದು ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಬೋಧನೆಯನ್ನು ಆರಂಭಿಸಿದರು. ನಾನಕ್‌ರ ಬೋಧನೆಗಳು ಈ ರೀತಿ ಇವೆ. ಗುರುನಾನಕ್‌ರ ಬೋಧನೆಗಳಲ್ಲಿ ಏಕದೇವತಾರಾಧನೆ, ಮಾನವರೆಲ್ಲರ ಸಮಾನತೆ ಮುಂತಾದವುಗಳನ್ನು ಪುನರ್ ದೃಢೀಕರಿಸಲಾಯಿತು. ಮಾನವನಿಗೆ ಸಾಮಾಜಿಕ ಅಂತಸ್ತಿನ ಮೇಲೆ ಗೌರವ, ಸ್ಥಾನಮಾನಗಳನ್ನು ಕೊಡುವುದಕ್ಕೆ ಬದಲಾಗಿ ಅವನ ಭಕ್ತಿಗೆ ಗೌರವ ಕೊಡಬೇಕು ಎಂದು ಪ್ರಚಾರ ಮಾಡಿದರು. ಗುರುನಾನಕ್ ಜಾತಿ ಪದ್ಧತಿಯನ್ನು ತೀವ್ರವಾಗಿ ವಿರೋಧಿಸಿ ಹಿಂದೂ ಧರ್ಮದಲ್ಲಿದ್ದ ಸಂಕುಚಿತ ಮನೋಭಾವನೆಯನ್ನು ಹೋಗಲಾಡಿಸಲು ಹೋರಾಟವನ್ನೇ ಮಾಡಿದರು. ವಿಗ್ರಹರಾಧನೆಯನ್ನು ಕಟುವಾಗಿ ಟೀಕಿಸಿ ದೇವರು ನಿರಾಕಾರ ಅವನಿಗೆ ಯಾವುದೇ ಆಕಾರವಿಲ್ಲ. ಅವನನ್ನು ಮಾನವ ಆಕಾರದಲ್ಲಿ ಅವತಾರಗಳನ್ನು ಕೊಟ್ಟು ಪೂಜಿಸಬಾರದು ಎಂದು ಜನತೆಗೆ ಕರೆ ಕೊಟ್ಟರು. ಗುರುನಾನಕ್‌ರು

ತಮ್ಮ ಬೋಧನೆಗಳಲ್ಲಿ ಉಪನಿಷತ್ತುಗಳ ಏಕ ದೇವವಾದವನ್ನು ಪುನರುತ್ಥಾನಗೊಳಿಸಿದರು. ಗುರುನಾನಕ್‌ರು ಹಿಂದೂ ಹಾಗೂ ಇಸ್ಲಾಂ ಧರ್ಮಗಳ ಅತಿ ನಿಯಮ ಬದ್ಧತೆಯನ್ನು ಈ ಕೆಳಕಂಡಂತೆ ತೀವ್ರವಾಗಿ ಖಂಡಿಸಿದರು.

ಧರ್ಮವೆಂಬುದು ಕೇವಲ ಶಬ್ದಗಳಿಂದಾದುದಲ್ಲ
ಸರ್ವರೂ ಸಮಾನರೆಂಬ ದೃಷ್ಟಿಯ ತಳೆದಿರುವವನೇ ಧರ್ಮಿಷ್ಠ
ಸ್ಮಶಾನ ಗೋರಿಗಳಿಗೆ ಅಲೆಯುವುದು ಮೇಣ್
ತೀರ್ಥಯಾತ್ರೆ ಮಾಡುವುದು ಮೇಣ್ ಪುಣ್ಯ ಕ್ಷೇತ್ರದಿಂ ಮೀಯುವುದರಲ್ಲಿ
ಧರ್ಮವಡಗಿಲ್ಲ
ಜಗದ ಮಲಿನತೆಯ ಮಧ್ಯದಲ್ಲಿ ಪರಿಶುದ್ಧತೆಯ
ಮಾರ್ಗವನನುಸರಿಸು ಅದರಿಂದ ಧರ್ಮ ಮಾರ್ಗವ ಪಡೆವೆ.

ದೇವರಲ್ಲಿ ತಮ್ಮನ್ನು ಅರ್ಪಿಸಬೇಕು, ನಿಸ್ವಾರ್ಥ ಸೇವೆ, ಮಾನವೀಯತೆ, ಸರಳತೆ, ಶುದ್ಧತೆ, ಸತ್ಯತೆ ರೂಢಿಸಿಕೊಳ್ಳಬೇಕೆಂದರು. ಕರ್ಮದಲ್ಲಿ ನಂಬಿಕೆ, ಆತ್ಮವು ಪರಕೀಯ ಪ್ರವೇಶ ಮಾಡುವುದನ್ನು ಒಪ್ಪಿದರು. ನಾನಕ್‌ರ ಪ್ರಮುಖ ಘೋಷಣೆ ಎಂದರೆ "ಸಂಯಮವೇ ನಿನ್ನ ಕುಲಮೆಯಾಗಲಿ, ಆತ್ಮಾರ್ಪಣವೇ ನಿನ್ನ ಅಕ್ಕಸಾಲಿಗನಾಗಲಿ, ಜ್ಞಾನವೇ ನಿನ್ನ ಬಡಿಗಲ್ಲಾಗಿಸು, ದೈವ ಜ್ಞಾನವೇ ನಿನ್ನ ಸಲಕರಣೆಯಾಗಲಿ ದೈವ ಪ್ರೇಮವೇ ಮೂಸೆಯಾಗಲಿ, ದೇವನ ನಾಮವ ಅದರಲಿ ಕರಗಿಸು, ಈ ರೀತಿಯ ನಿಜ ಟಂಕಸಾಲೆಯಲ್ಲಿ ವಚನ ರೂಪುಗೊಳಲಿ, ದೇವರು ಯಾರ ಮೇಲೆ ತನ್ನ ಕೃಪೆದೋರಿರುವನೋ ಅವನ ಮಾರ್ಗವೇ ಕ್ರಮವೇ ಇದು". ಇವರು ಹಾಡುತ್ತಿದ್ದ ಸ್ತೋತ್ರಗಳ ಸಂಗ್ರಹವೇ *ಆದಿಗ್ರಂಥ* (ಗ್ರಂಥ ಸಾಹೆಬ್). ಇದು ಸಿಖ್ಖರ ಧರ್ಮ ಗ್ರಂಥವಾಗಿದೆ.

**ಮೀರಾಬಾಯಿ (ಕ್ರಿ.ಶ. ೧೪೯೮-೧೫೪೬)**

ಮೀರಾಬಾಯಿ ೧೬ನೇ ಶತಮಾನದ ಶ್ರೇಷ್ಠ ಸಂತಳು. ಈಕೆ ಜೋಧಪುರದಲ್ಲಿ ಜನಿಸಿದರು. ರಾಥೋಡದ ರಾಜ ರತ್ನಸಿಂಗ್ ದಾಮೋದರ ಒಬ್ಬಳೇ ಮಗಳು. ೧೫೧೬ರಲ್ಲಿ ಮೇವಾರದ ರಾಣಾಸಿಂಗನ ಮಗನ ಜೊತೆ ವಿವಾಹವಾಗಿದ್ದಳು. ಮೀರಾ ಬಾಲ್ಯದಿಂದಲೂ ಶ್ರೀಕೃಷ್ಣನ ಅನನ್ಯ ಭಕ್ತೆ. ಭಕ್ತಿಯಿಂದ ಶ್ರೀಕೃಷ್ಣನನ್ನು ಪೂಜಿಸಿ ಅವನನ್ನು ಕುರಿತು ಭೋಜ್‌ಪುರಿ ಭಾಷೆಯಲ್ಲಿ ಭಜನೆಗಳನ್ನು ಹಾಡಲಾರಂಭಿಸಿದಳು. ಇಂದಿಗೂ ಸಹ ಇವು ಜನಪ್ರಿಯವಾಗಿವೆ. *ಗೀತ ಗೋವಿಂದ, ರಾಗ ಗೋವಿಂದ* ಮೊದಲಾದ ಕಾವ್ಯಗಳನ್ನು ರಚಿಸಿದ್ದಾರೆ. ಈಕೆಯ ಭಕ್ತಿಗೀತೆಗಳಲ್ಲಿಯ ಭಗವದ್ಭಕ್ತಿ, ತನ್ಮಯತೆ ಹಾಗೂ ಆತ್ಮ ಸಮರ್ಪಣಾ ಆದರ್ಶಪ್ರಾಯವಾದವು. ಮೀರಾಬಾಯಿಯ ಶ್ರೀ ಕೃಷ್ಣನ ಭಜನೆಗಳನ್ನು ಕೇಳಲು ಬೇರೆ, ಬೇರೆ ಸ್ಥಳಗಳಿಂದ ಜನರು ಬರಲಾರಂಭಿಸಿದರು. ಒಮ್ಮೆ ಅಕ್ಬರ್ ಮತ್ತು ತಾನ್‌ಸೇನ್ ಸಹ ಮೀರಾಬಾಯಿಯ ಭಜನೆಯನ್ನು ಕೇಳಿ ಪ್ರಭಾವಿತರಾದರು ಎಂಬುದಾಗಿ ತಿಳಿದು

ಬರುತ್ತದೆ. ಕೃಷ್ಣನ ಪೂಜೆಯ ಮಹತ್ವವನ್ನು ಒತ್ತಿ ಹೇಳಿ ಹುಟ್ಟು, ಸಾವುಗಳಿಂದ ಸಾಮಾನ್ಯ ಮನುಷ್ಯರು ಮುಕ್ತಿಯನ್ನು ಪಡೆಯಬಹುದೆಂದು ಬೋಧಿಸಿದಳು. ಮೀರಾಬಾಯಿಯು ತನ್ನ ಸುಮಧುರ ಸುಶ್ರಾವ್ಯ ಹಾಡಿನ ಮೂಲಕ ಭಕ್ತಿ ಪಂಥದ ತತ್ವಗಳನ್ನು ಪ್ರಚಾರ ಮಾಡಿದರು.

ಭಕ್ತಿಪಂಥದ ಇತರ ಸಂತರುಗಳೆಂದರೆ ತುಲಸೀದಾಸ, ಸೂರ್‌ದಾಸ, ರಾಮದಾಸ, ಜ್ಞಾನದೇವ, ನಾಮದೇವ, ಏಕನಾಥ, ತುಕಾರಾಮ, ಗುರುಗೋವಿಂದ, ಬಾಹಿನಾ ಬಾಯಿ, ದರಿಯಾ ಸಾಹೇಬ್, ಜಗಜೀವನ್, ಶಂಕರದೇವ ಮುಂತಾದವರು.

### ಭಕ್ತಿ ಚಳುವಳಿಯ ಪರಿಣಾಮಗಳು

ಭಕ್ತಿ ಚಳುವಳಿಯು ಹಲವಾರು ಪರಿಣಾಮಗಳನ್ನು ಭಾರತೀಯ ಸಮಾಜದಲ್ಲಿ ಮೂಡಿಸಿತು. ಅವುಗಳೆಂದರೆ:

೧. ಹಿಂದೂ-ಮುಸ್ಲಿಮರ ನಡುವೆ ಸಾಮರಸ್ಯವನ್ನು ಉಂಟು ಮಾಡಿತು.
೨. ಮತಾಂತರದ ಕಾರ್ಯವನ್ನು ನಿಧಾನಗೊಳಿಸಿತು.
೩. ಬ್ರಾಹ್ಮಣರ ಪ್ರತಿಷ್ಠೆಗೆ ಪೆಟ್ಟುಬಿದ್ದಿತು.
೪. ಪ್ರಾದೇಶಿಕ ಭಾಷೆಗಳಲ್ಲಿ ಸಾಹಿತ್ಯ ಬೆಳವಣಿಗೆ.
೫. ರಾಷ್ಟ್ರೀಯ ರಾಜ್ಯ ನಿರ್ಮಾಣದ ಬಗ್ಗೆ ರಾಜರುಗಳು ಯೋಚಿಸುವಂತಾಯಿತು.
೬. ಜನಸಾಮಾನ್ಯರ ಜನಜೀವನ ಸುಧಾರಣೆಗೊಂಡಿತು.
೭. ಯಜ್ಞ-ಯಾಗಾದಿ ಮೋಕ್ಷಗಳ ಕಲ್ಪನೆ ಹೋಗಿ ಭಕ್ತಿಯ ಮೂಲಕ ದೇವರ ಸಾಕ್ಷಾತ್ಕಾರ ಪಡೆಯಬಹುದೆಂದು ಅರಿವಾಯಿತು.
೮. ಪ್ರಾದೇಶಿಕ ಭಾಷೆಗಳಾದ ಹಿಂದಿ, ಮರಾಠಿ, ಕನ್ನಡ, ತೆಲುಗು, ಗುಜರಾತಿಗಳಲ್ಲಿ ಸಾಹಿತ್ಯ ಬೆಳವಣಿಗೆಯಾಯಿತು.
೯. ಹಿಂದೂ ಧರ್ಮ ಮತ್ತು ಹಿಂದೂ ಸಮಾಜದ ಪುನಶ್ಚೇತನವಾಯಿತು. ಅಸ್ಪೃಶ್ಯತೆ, ಡಂಭಚಾರ, ಅಸಮಾನತೆಗಳು ಕಡಿಮೆಯಾದವು.
೧೦. ಜಾತಿ, ಲಿಂಗಗಳನ್ನು ಖಂಡಿಸಿ ಸಮಾನತೆ ತತ್ವ ಪ್ರತಿಪಾದಿಸಿದ್ದರಿಂದ ಕೆಳವರ್ಗದ ಜನರ ಮತ್ತು ಸ್ತ್ರೀಯರ ಸ್ಥಾನಮಾನಗಳು ಕೆಲಮಟ್ಟಿಗೆ ಉತ್ತಮಗೊಂಡವು.

## ೩.೪ ಅಕ್ಬರ್ ಮತ್ತು ಮೊಗಲ ಸಾಮ್ರಾಜ್ಯ

೧೬ನೆಯ ಶತಮಾನದ ಆದಿಭಾಗದಲ್ಲಿ ಭಾರತವು ರಾಜಕೀಯವಾಗಿ ಹರಿದು ಹಂಚಿ ಹೋಗಿದ್ದುದರಿಂದ ಅನೈಕ್ಯತೆಯ ಬೀಡಾಯಿತು. ಉತ್ತರದಲ್ಲಿ ದೆಹಲಿ ಸುಲ್ತಾನರ ಸಾಮ್ರಾಜ್ಯವು ಮುರಿದುಬಿದ್ದು ಅದರ ನಿಯಂತ್ರಣದಲ್ಲಿದ್ದ ಹಲವು ರಾಜ್ಯಗಳು ಸಣ್ಣಪುಟ್ಟ ಸ್ವತಂತ್ರ ರಾಜ್ಯಗಳಾಗಿ ಅಸ್ತಿತ್ವಕ್ಕೆ ಬಂದು ಪ್ರತಿಯೊಂದು ತನ್ನ ಶಕ್ತಿಯ ಸ್ಥಾಪನೆಗೆ, ರಾಜ್ಯ ವಿಸ್ತರಣೆಗೆ ನೆರೆಹೊರೆಯ ರಾಜ್ಯಗಳೊಂದಿಗೆ ಸದಾ ಹೋರಾಡುತ್ತಿದ್ದವು. ದಕ್ಷಿಣದಲ್ಲಿ ಮೇಲ್ಮೈಯನ್ನು ಸಾಧಿಸಲು ವಿಜಯನಗರ ಮತ್ತು ಬಹಮನಿ ರಾಜ್ಯಗಳ ನಡುವೆ ಸದಾ ಯುದ್ಧಗಳು ನಡೆಯುತ್ತಿದ್ದವು. ಹಾಗಾಗಿ ಒಂದು ಸಾಮ್ರಾಜ್ಯವನ್ನೇ ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆ ಮತ್ತು ದೃಢ ಮನಸ್ಸನ್ನು ಹೊಂದಿದ್ದ ಬಾಬರನಂತಹ ವೀರಯೋಧನನ್ನು ಸಮರ್ಥವಾಗಿ ಎದುರಿಸುವಂತಹ ಯಾವ ಶಕ್ತಿಯೂ ಅಂದು ಭಾರತದಲ್ಲಿರಲಿಲ್ಲ. ಇಂತಹ ರಾಜಕೀಯ ದುಃಸ್ಥಿತಿಯ ಜೊತೆಗೆ ಇಲ್ಲಿನ ವೈಮನಸ್ಯಗಳಿಂದಾಗಿ ಪಂಜಾಬಿನ ದೌಲತ್‌ಖಾನ್, ಆಲಂಖಾನ್ ಮತ್ತು ರಾಣಾಸಿಂಗರು ದೆಹಲಿ ಸುಲ್ತಾನನ್ನು ಹತ್ತಿಕ್ಕಲು ಬಾಬರನಿಗೆ ಆಹ್ವಾನ ನೀಡಿದ್ದರು. ಅದಕ್ಕಾಗಿಯೆ ಕಾಯುತ್ತಿದ್ದ ಬಾಬರನಿಗೆ ಸುಸಂಧಿಯೊಂದು ಸಿಕ್ಕಿ ಬಾಬರ್ ಭಾರತದ ಮೇಲೆ ದಂಡೆತ್ತಿ ಬಂದು ೧೫೨೬ ರಲ್ಲಿ ಎರಡನೆ ಇಬ್ರಾಹಿಂ ಲೂದಿಯನ್ನು ಮೊದಲನೆಯ ಪಾಣಿಪತ್ ಕದನದಲ್ಲಿ ಸೋಲಿಸಿ ಭಾರತದಲ್ಲಿ ಮೊಗಲರ ಆಳ್ವಿಕೆಗೆ ಅಸ್ಥಿಭಾರ ಹಾಕಿದ.

ಮೊಗಲರ ಇತಿಹಾಸವನ್ನು ತಿಳಿಯಲು ಇರುವ ಸಾಹಿತ್ಯಕ ಬರವಣಿಗೆಗಳೆಂದರೆ *ತುಜಕ್-ಏ-ಬಾಬರಿ, ತಾರಿಖ್-ಏ-ರಷಿದಿ, ಹುಮಾಯೂನ್ ನಾಮ, ತಾರೀಖ್-ಇ-ಷಾಹಿ, ಅಕ್ಬರ್ ನಾಮ, ಐನ್-ಇ-ಅಕ್ಬರಿ, ತಬಾಕತ್-ಇ-ಅಕ್ಬರಿ, ತುಜುಕ್-ಇ-ಜಹಾಂಗಿರಿ, ಪಾದಶಹ ನಾಮ, ಮುಂತಖಾನ್-ಉಲ್-ಲುಬಾಬ್* ಮುಂತಾದವು.

ಬಾಬರನು ೧೫೨೬ ರಿಂದ ೧೫೩೦ ರವರೆಗೆ ಆಳ್ವಿಕೆ ನಡೆಸಿದ. ಅನಂತರ ಆತನ ಮಗ ಹುಮಾಯೂನ್‌ನು ೧೫೩೦ ರಿಂದ ೧೫೫೬ ರವರೆಗೆ (ಇದು ಷೇರ್‌ಷಾಹನ ಆಳ್ವಿಕೆಯ ಕಾಲವನ್ನು ಒಳಗೊಂಡಂತೆ) ಆಳ್ವಿಕೆ ನಡೆಸಿದನು. ನಂತರ ಹುಮಾಯೂನನ ಮಗ ಅಕ್ಬರನು ೧೫೫೬ ರಿಂದ ೧೬೦೫ ರವರೆಗೆ ಆಳ್ವಿಕೆ ನಡೆಸಿದನು. ಅಕ್ಬರನು ಭಾರತೀಯ ಇತಿಹಾಸದಲ್ಲಿಯೇ ಬಹು ಪ್ರಮುಖ ಸ್ಥಾನವನ್ನು ಹೊಂದಿದ್ದಾನೆ.

### ಅಕ್ಬರ್ ಮಹಾಶಯ (ಕ್ರಿ.ಶ.೧೫೫೬-೧೬೦೫)

ಅಕ್ಬರನು ಹುಮಾಯೂನ್ ಮತ್ತು ಹಮಿದಾಬಾನೂ ಬೇಗಂರ ಪುತ್ರನಾಗಿ ಕ್ರಿ.ಶ. ೧೫೪೨ರಲ್ಲಿ ಅಮರಕೋಟೆಯಲ್ಲಿ ಜನಿಸಿದನು. ಇವನು ಜನಿಸಿದಾಗ ಇವನ ತಂದೆ ಹುಮಾಯೂನ್‌ನು ರಾಜ್ಯವನ್ನು ಕಳೆದುಕೊಂಡು ಸ್ಥಳದಿಂದ ಸ್ಥಳಕ್ಕೆ ನಿರಾಶ್ರಿತನಾಗಿ ದೇಶಾಂತರ ಅಲೆಯುತ್ತಿದ್ದ. ಅನಂತರ ಹುಮಾಯೂನನು ಮತ್ತೆ ದೆಹಲಿ ಸಿಂಹಾಸನವನ್ನು ಸಂಪಾದಿಸಿ

ದನು. ಅಕ್ಬರನು ಸಿಂಹಾಸನಕ್ಕೆ ಬಂದಾಗ ೧೪ ವರ್ಷದ ಬಾಲಕನಾಗಿದ್ದರಿಂದ ಅವನ ಪೋಷಕನಾಗಿದ್ದ ಬೈರಾಮ್‌ಖಾನನು ೧೫೫೬ ರಿಂದ ೧೫೬೦ ರವರೆಗೆ ರಾಜಪ್ರತಿನಿಧಿಯಾಗಿ ಆಳ್ವಿಕೆ ನಡೆಸಬೇಕಾಯಿತು.

**ಹೇಮುವಿನೊಂದಿಗೆ ಎರಡನೆ ಪಾಣಿಪತ್ ಕದನ** (ನವೆಂಬರ್ ೫, ೧೫೫೬)

ಅಕ್ಬರನು ಅಧಿಕಾರಕ್ಕೆ ಬರುತ್ತಿದ್ದಂತೆಯೇ ಅದಿಲ್‌ಷಾ ಸೂರ್‌ನ ಸಮರ್ಥ ಸೇನಾನಿ ಹಾಗೂ ಮಂತ್ರಿಯಾದ ಹೇಮು ಮೊಗಲರನ್ನು ವಿರೋಧಿಸಲು ಮುಂದಾದನು. ಹೇಮು ಆಗ್ರಾ, ದೆಹಲಿಗಳನ್ನು ವಶಪಡಿಸಿಕೊಂಡಿದ್ದುದರಿಂದ ಅಕ್ಬರನು ದೆಹಲಿಯನ್ನು ಪುನಃ ವಶಪಡಿಸಿಕೊಳ್ಳಲು ಮುಂದಾದನು. ಹೇಮುವು ೧,೫೦೦ ಯುದ್ಧ ಆನೆಗಳನ್ನೊಳಗೊಂಡ ಬೃಹತ್ ಆಫ್ಘನ್ ಮತ್ತು ರಜಪೂತ ಸೇನೆಯೊಡನೆ ಅಕ್ಬರ್ ಮತ್ತು ಬೈರಾಮ್‌ರನ್ನು ಎದುರಿಸಲು ಇತಿಹಾಸ ಪ್ರಸಿದ್ಧವಾದ 'ಪಾಣಿಪತ್'ಗೆ ಬಂದನು. ಎರಡನೆ ಪಾಣಿಪತ್ ಕದನವು ೧೫೫೬ ರ ನವೆಂಬರ್ ೫ ರಂದು ಆರಂಭವಾಯಿತು. ಈ ಯುದ್ಧದಲ್ಲಿ ಹೇಮು ಮರಣ ಹೊಂದಿ, ಅಕ್ಬರನು ವಿಜಯಿಯಾದ. ಎರಡನೆ ಪಾಣಿಪತ್ ಯುದ್ಧದ ಫಲಿತಾಂಶವು ನಿರ್ಣಾಯಕವಾಯಿತು. ಈ ಯುದ್ಧದ ಫಲಿತಾಂಶ ಮೊಗಲರ ಪರವಾಗಿದ್ದರಿಂದ ಭಾರತದಲ್ಲಿ ಪರಮಾಧಿಕಾರಕ್ಕೆ ಆಫ್ಘನ್ ಹೋರಾಟ ಅಂತ್ಯಗೊಂಡಿತು. ಅಕ್ಬರನು ದೆಹಲಿ ಮತ್ತು ಆಗ್ರಾ ಗಳನ್ನು ವಶಪಡಿಸಿಕೊಂಡು ಮೊಗಲ್ ಅಧಿಪತ್ಯಕ್ಕೆ ಭದ್ರವಾದ ಅಸ್ತಿಭಾರ ಹಾಕಿದನು.

## ಅಕ್ಬರನ ಸೈನಿಕ ಸಾಧನೆಗಳು ಮತ್ತು ಸಾಮ್ರಾಜ್ಯ ವಿಸ್ತರಣೆ

ಅಕ್ಬರನು ಸಹಜ ಪ್ರವೃತ್ತಿಯಿಂದಲೇ ಪ್ರಬಲ ಸಾಮ್ರಾಜ್ಯವಾದಿಯಾಗಿದ್ದನು. ಇವನ ಮಹತ್ವಾಕಾಂಕ್ಷೆ ಮತ್ತು ಹೋರಾಟ ಪ್ರವೃತ್ತಿಗಳು ಅವನನ್ನು ಸದಾ ಯುದ್ಧದಲ್ಲೇ ತೊಡಗಿರು ವಂತೆ ಮಾಡಿದವು. "ರಾಜನು ಯಾವಾಗಲೂ ವಿಜಯ ಪಡೆಯುವ ಉದ್ದೇಶ ಹೊಂದಿರ ಬೇಕು. ಇಲ್ಲದಿದ್ದರೆ ರಾಜ್ಯದ ನೆರೆಹೊರೆಯವರು ಅವನ ವಿರುದ್ಧ ದಾಳಿ ಮಾಡುವರು" ಎಂಬುದು ಅಕ್ಬರನ ಅಭಿಪ್ರಾಯವಾಗಿತ್ತು. ಈ ದಿಸೆಯಲ್ಲಿ ಅವನು ಸುಮಾರು ೪೦ ವರ್ಷಗಳ ಕಾಲ ಸದಾ ಯುದ್ಧ ಚಟುವಟಿಕೆಗಳಲ್ಲೇ ತೊಡಗಿದ್ದು ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಬೈರಾಮ್‌ಖಾನನ ಕಾಲದಲ್ಲೆ ದೆಹಲಿ, ಆಗ್ರಾ, ಗ್ವಾಲಿಯರ್, ಜೌನ್‌ಪುರಗಳನ್ನು ವಶಪಡಿಸಿ ಕೊಂಡಿದ್ದನು. ಬೈರಾಮ್‌ಖಾನನ ರಾಜ ಪ್ರತಿನಿಧಿತ್ವದ ಆಳ್ವಿಕೆ ಮುಗಿದ ನಂತರ ಕೈಗೊಂಡ ಮಾಳವ ದಂಡಯಾತ್ರೆಯೇ ಅವನ ಪ್ರಥಮ ಸೈನಿಕ ಸಾಧನೆಯಾಗಿದೆ.

**೧. ಮಾಳವದ ದಂಡಯಾತ್ರೆ** (ಕ್ರಿ.ಶ. ೧೫೬೧): ಮಾಳವವನ್ನು ಆಗ ಬಾಜ್ ಬಹದ್ದೂರ್ ಎಂಬುವವನು ಆಳುತ್ತಿದ್ದು ನೃತ್ಯ ಮತ್ತು ಸಂಗೀತದ ದಾಸನಾಗಿದ್ದ. ಅಕ್ಬರನು ಮಾಳವದ ಮೇಲೆ ಅದಮ್‌ಖಾನನ ನೇತೃತ್ವದಲ್ಲಿ ಸೈನ್ಯವೊಂದನ್ನು ಕಳುಹಿಸಿದನು. ಬಾಜ್‌ಬಹದ್ದೂರನು ಯುದ್ಧದಲ್ಲಿ ಸೋತು ಪಲಾಯನಗೈದ. ಅದಮ್‌ಖಾನನು ಸಾರಂಗಪುರವನ್ನು ಲೂಟಿ ಮಾಡಿ ಅಪಾರ ಐಶ್ವರ್ಯವನ್ನು ವಶಪಡಿಸಿಕೊಂಡು ಚಕ್ರವರ್ತಿಗೆ ತಲುಪಿಸದೆ ತಾನೆ ಇಟ್ಟುಕೊಂಡಿದ್ದ.

ಇದರಿಂದ ಕುಪಿತಗೊಂಡ ಸುಲ್ತಾನನು ಆದಮ್‌ಖಾನನನ್ನು ಗವರ್ನರ್ ಹುದ್ದೆಯಿಂದ ತೆಗೆದುಹಾಕಿ ಪೀರ್‌ಮುಹಮ್ಮದ್‌ನನ್ನು ನೇಮಿಸಿದನು. ಆದರೆ ಬಾಜ್ ಬಹದ್ದೂರನು ಮತ್ತೊಮ್ಮೆ ಮಾಳವವನ್ನು ವಶಪಡಿಸಿಕೊಳ್ಳದೆ ಬಿಡಲಿಲ್ಲ. ಅಕ್ಬರನು ಮತ್ತೆ ಅಬ್ದುಲ್ಲಾಖಾನ್ ಉಜ್ಬೇಗ್‌ನ ನೇತೃತ್ವದಲ್ಲಿ ಸೈನ್ಯವೊಂದನ್ನು ಕಳುಹಿಸಿ ಮಾಳವವನ್ನು ವಶಪಡಿಸಿಕೊಂಡನು. ಹೀಗಾಗಿ ಬಾಜ್ ಬಹದ್ದೂರನು ಅಕ್ಬರನ ಸೇನೆಯಲ್ಲಿ ಸೇರಿಕೊಳ್ಳಬೇಕಾಯಿತು.

೨. **ಚುನಾರ್ ಕೋಟೆಯ ಆಕ್ರಮಣ** (ಕ್ರಿ.ಶ. ೧೫೬೧): ಜೌನ್‌ಪುರದಲ್ಲಿ ದಂಗೆಯೆದ್ದ ಆಫ್ಘನ್ನರನ್ನು ಅಲ್ಲಿನ ಸ್ಥಳೀಯ ಗವರ್ನರ್ ಖಾನ್‌ಜಮಾನ್‌ನು ದಮನಗೊಳಿಸಿದ್ದನು. ಆದರೆ ನಂತರ ಇವನು ಸ್ವತಂತ್ರ ರಾಜನಂತೆ ವರ್ತಿಸಲಾರಂಭಿಸಿದ್ದ. ಆದ್ದರಿಂದ ಅವನನ್ನು ಹತೋಟಿಗೆ ತರಲು ಸ್ವತಃ ಅಕ್ಬರನೇ ಜೌನ್‌ಪುರಕ್ಕೆ ತೆರಳಬೇಕಾಯಿತು. ಹೀಗಾಗಿ ಖಾನ್ ಜಮಾನನು ಶರಣಾದ. ಆ ಸಂದರ್ಭದಲ್ಲಿ ಅಕ್ಬರನು ಅಸಫ್‌ಖಾನ್ ಎಂಬುವನನ್ನು ಆಫ್ಘನ್ನರ ಹತೋಟಿಯಲ್ಲಿದ್ದ ಚುನಾರ್ ಕೋಟೆಯನ್ನು ವಶಪಡಿಸಿಕೊಳ್ಳಲು ಕಳುಹಿಸಿದನು. ಚುನಾರ್ ಕೋಟೆಯು ೧೫೬೧ ರಲ್ಲಿ ಮೊಗಲರ ವಶವಾಯಿತು.

೩. **ಗೊಂಡವಾನದ ಆಕ್ರಮಣ** (ಕ್ರಿ.ಶ. ೧೫೬೪): ಗೊಂಡವಾನ ರಾಜ್ಯವು ಪೂರ್ವದಲ್ಲಿ ರತನ್‌ಪುರ, ಪಶ್ಚಿಮದಲ್ಲಿ ರಾಯಸಿಸ್ ಮತ್ತು ಉತ್ತರದಲ್ಲಿ ರೇವಾದಿಂದ ದಕ್ಷಿಣದ ಗಡಿಯವರೆಗೂ ವ್ಯಾಪಿಸಿತ್ತು. ಈ ರಾಜ್ಯದಲ್ಲಿ ೫೩ ಕೋಟೆಗಳಿದ್ದವು. ದೊರೆ ದಳಪತ್‌ಷಾ ಮರಣ ಹೊಂದಿದ್ದರಿಂದ ಅವನ ರಾಣಿ ವಿಧವೆ ದುರ್ಗಾವತಿಯು ತನ್ನ ಮಗ ಅಪ್ರಾಪ್ತನಾದ ವೀರನಾರಾಯಣನ ಪರವಾಗಿ ರಾಜ್ಯವಾಳುತ್ತಿದ್ದಳು. ಈಕೆ ರಜಪೂತ ಸ್ತ್ರೀಯಾಗಿದ್ದು ಧೈರ್ಯಸ್ಥಳಾಗಿದ್ದಳು. ಅಕ್ಬರನು ಗೊಂಡವಾನವನ್ನು ಆಕ್ರಮಿಸಲು ಅಸಫ್‌ಖಾನನ ನೇತೃತ್ವದಲ್ಲಿ ಸೈನ್ಯವೊಂದನ್ನು ಕಳುಹಿಸಿದನು. ಯುದ್ಧದಲ್ಲಿ ಗಾಯಗೊಂಡ ದುರ್ಗಾವತಿಯು ತಾನೇ ಇರಿದುಕೊಂಡು ಸತ್ತಳು. ವೀರನಾರಾಯಣನು ಧೈರ್ಯದಿಂದ ಹೋರಾಡಿ ಮರಣ ಹೊಂದಿದನು. ಗೊಂಡವಾನ ಮೊಗಲರ ವಶವಾಯಿತು.

೪. **ಅಂಬರ್ (ಆಧುನಿಕ ಜೈಪುರ)** (ಕ್ರಿ.ಶ. ೧೫೬೨): ಅಂಬರ್‌ನ ರಾಜ ಬಿಹಾರಿಮಲ್‌ನು ಅಕ್ಬರನಿಗೆ ಶರಣಾದ ಪ್ರಥಮ ರಜಪೂತ ದೊರೆ. ಅಕ್ಬರನು ಅಜ್ಮೀರ್‌ನ ಷೇಕ್ ಮೊಯಿನುದ್ದೀನ್ ಚಿಸ್ತಿಯ ಧರ್ಗಾಗೆ ಭೇಟಿ ನೀಡಲು ೧೫೬೨ ರಲ್ಲಿ ಹೋದಾಗ ಸ್ವತಃ ರಾಜ ಬಿಹಾರಿಮಲ್‌ನು ಅಕ್ಬರನಿಗೆ ಶರಣಾದ ಮತ್ತು ವಿವಾಹ ಸಂಬಂಧದ ಮೂಲಕ ತನ್ನ ಮೈತ್ರಿಯನ್ನು ಬಲಪಡಿಸಿಕೊಂಡನು. ಬಿಹಾರಿಮಲ್ ತನ್ನ ಮಗ ಭಗವಾನ್‌ದಾಸ್ ಮತ್ತು ಮೊಮ್ಮಗ ಮಾನ್‌ಸಿಂಗ್‌ರೊಡನೆ ಆಗ್ರಾಕ್ಕೆ ತೆರಳಿದ ಅವನನ್ನು ೫,೦೦೦ ಸೈನಿಕರ ಮನ್ಸ್ ಬ್ದಾರ್‌ನನ್ನಾಗಿ ಮಾಡಲಾಯಿತು ಮತ್ತು ಅವನ ಮಗ ಹಾಗೂ ಮೊಮ್ಮಗನಿಗೆ ಸೇನಾ ಸೇವೆಯಲ್ಲಿ ಉನ್ನತ ಹುದ್ದೆಗಳನ್ನು ನೀಡಲಾಯಿತು. ಅಂಬರ್‌ನ ರಾಜಕುಮಾರಿ ಮುಂದಿನ ಚಕ್ರವರ್ತಿ ಜಹಾಂಗೀರನಿಗೆ ಜನ್ಮ ನೀಡಿದಳು.

೫. ಮೆರ್ತಾ (ಕ್ರಿ.ಶ. ೧೫೬೨): ಮೆರ್ತಾವು ಮೇವಾರದ ರಾಣಾ ಉದಯಸಿಂಗ್‌ನ ಸಾಮಂತ ಜೈಮಲ್‌ನ ಅಧೀನದಲ್ಲಿತ್ತು. ಇದನ್ನು ೧೫೬೨ ರಲ್ಲಿ ಅಜ್ಮೀರ್‌ನ ಬಳಿಯ ಮೊಗಲ್ ಅಧಿಕಾರಿ ಮಿರ್ಜಾ ಫರಾವುದ್ದೀನ್ ಎಂಬುವವನು ಆಕ್ರಮಣ ಮಾಡಿದನು. ಜೈಮಲ್‌ನು ಕೋಟೆಯನ್ನು ಬಿಟ್ಟು ಹೋದರೂ ಸಹ ರಜಪೂತರು ದೇವದಾಸನ ನೇತೃತ್ವದಲ್ಲಿ ಉಗ್ರವಾಗಿ ರಕ್ಷಿಸಿದರು. ಆದರೂ ಕೊನೆಯಲ್ಲಿ ಮೊಗಲರು ಕೋಟೆಯ ಒಳಗೆ ನುಗ್ಗಿ ಸುಮಾರು ೨೦೦ರಷ್ಟಿದ್ದ ರಜಪೂತರನ್ನು ಕಗ್ಗೊಲೆಗೈಯಲಾಯಿತು ಅಥವಾ ಸೆರೆ ಹಿಡಿಯಲಾಯಿತು.

**೬. ಮೇವಾರದ ವಿರುದ್ಧ ಯುದ್ಧ:** ರಜಪೂತ ರಾಜ್ಯಗಳಲ್ಲೆಲ್ಲಾ ಪ್ರಬಲವೂ ಮತ್ತು ಗೌರವಾನ್ವಿತ ಸಿಸೋದಿ ಸಂತತಿಯ ರಾಣಾರ ಅಧೀನದಲ್ಲಿದ್ದ ಮೇವಾರವು ಹಿಂದಿನಿಂದಲೂ ಮೊಗಲರನ್ನು ವಿರೋಧಿಸುತ್ತಲೇ ಬಂದಿತ್ತು. ಉತ್ತಮ ಪ್ರಕೃತಿ ರಕ್ಷಣೆಗಳಿಂದ ಆವೃತವಾಗಿದ್ದ ಮೇವಾರವು ರಾಣಾ ಸಂಗ್ರಾಮನ ಕಾಲದಿಂದಲೂ ಮೊಗಲರ ಸಾಮ್ರಾಜ್ಯಕ್ಕೆ ಮಣಿದಿರಲಿಲ್ಲ. ರಾಣಾ ಸಂಗ್ರಾಮನ ಸಾವಿನೊಂದಿಗೆ ಕಳೆದುಹೋಗಿದ್ದ ಘನತೆ ಗೌರವಗಳನ್ನು ಪಡೆಯಲು ನಂತರ ರಾಣಾ ಉದಯಸಿಂಗನು ಪ್ರಯತ್ನಿಸುತ್ತಿದ್ದನು. ರಾಣಾನು ಅಂಬರ್‌ನ ಬಿಹಾರಿ ಮಲ್‌ನು ಅಕ್ಬರನಿಗೆ ಶರಣಾದುದು ಮತ್ತು ಮಗಳನ್ನು ಕೊಟ್ಟು ವಿವಾಹ ಮಾಡಿದುದನ್ನು ಹೀನವಾಗಿ ನೋಡುತ್ತಿದ್ದನು. ಇವನು ಮೊಗಲ್ ಸಾರ್ವಭೌಮತ್ವ ಒಪ್ಪಿಕೊಳ್ಳಲು ನಿರಾಕರಿಸಿದುದಲ್ಲದೆ ಮಾಳವದ ದೇಶಭ್ರಷ್ಟ ದೊರೆ ಬಾಜ್‌ಬಹದ್ದೂರ್‌ನಿಗೆ ಮತ್ತು ದಂಗೆಯೆದ್ದಿದ್ದ ಮಿರ್ಜಾಗಳಿಗೆ ಆಶ್ರಯ ಕೊಟ್ಟು ಅಕ್ಬರನ ಕೋಪಕ್ಕೆ ಕಾರಣನಾಗಿದ್ದನು.

ಅಕ್ಬರನು ಮೇವಾರದ ಮೇಲೆ ೧೫೬೭ ರಲ್ಲಿ ದಾಳಿ ಮಾಡಿ ಚಿತ್ತೂರಿನ ಕೋಟೆಯನ್ನು ಮುತ್ತಿದನು. ರಾಣಾ ಉದಯಸಿಂಗ್‌ನು ನೋಬಲ್ಲರ ಸಲಹೆಯಂತೆ ರಕ್ಷಣೆಗಾಗಿ ಕಾಡಿಗೆ ಹೋಗಿದ್ದ. ಹೀಗಾಗಿ ಕೋಟೆಯ ರಕ್ಷಣೆಯ ಜವಾಬ್ದಾರಿಯನ್ನು ಜೈಮಲ್‌ನಿಗೆ ವಹಿಸಿದ್ದನು. ಮೊಗಲರು ಸತತವಾಗಿ ಐದು ತಿಂಗಳು ಪ್ರಯತ್ನಿಸಿದರೂ ಕೋಟೆಯು ವಶವಾಗಲಿಲ್ಲ. ಜೈಮಲ್‌ನು ಫಿರಂಗಿದಾಳಿಗೆ ಗುರಿಯಾಗಿ ಮರಣ ಹೊಂದಿದನು. ರಜಪೂತರು ಪುನಃ ಫತೇಸಿಂಗ್‌ನ ನೇತೃತ್ವದಲ್ಲಿ ಮೊಗಲ್ ಸೇನೆಯ ಮೇಲೆ ಧಾಳಿ ಮಾಡಿದರು. ಆದರೆ ಅಕ್ಬರನು ಕೋಟೆಯನ್ನು ವಶಪಡಿಸಿಕೊಂಡನು. ಅಲ್ಲದೆ ಸಾಮೂಹಿಕ ಹತ್ಯೆಗೈಯುವಂತೆ ತನ್ನ ಸೇನೆಗೆ ಆಜ್ಞಾಪಿಸಿದನು. ಅಬುಲ್‌ಫಜಲ್ ತಿಳಿಸುವಂತೆ ಸುಮಾರು ೩೦,೦೦೦ ಜನರು ಸಾಮೂಹಿಕ ಹತ್ಯೆಗೊಳಗಾದರು. ಅಸಫ್‌ಖಾನನನ್ನು ಮೇವಾರ ಕೋಟೆಯ ಗವರ್ನರ್‌ನನ್ನಾಗಿ ನೇಮಿಸಲಾಯಿತು. ಮೊಗಲರು ಮೇವಾರದ ರಾಜಧಾನಿ ಮತ್ತು ಚಿತ್ತೂರಿನ ಕೋಟೆಯನ್ನು ಮತ್ತೆ ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಆದರೆ ಮೇವಾರದ ರಾಜ್ಯದ ಬಹುಭಾಗವು ರಾಣಾ ಉದಯಸಿಂಗ್‌ನ ಅಧೀನದಲ್ಲೇ ಉಳಿದಿತ್ತು. ಉದಯಸಿಂಗ್‌ನು ೧೫೭೨ ರಲ್ಲಿ ಮರಣ ಹೊಂದಿದನು.

೭. **ರಾಣಾ ಪ್ರತಾಪಸಿಂಗ್ ನೇತೃತ್ವದಲ್ಲಿ ಮೇವಾರದ ಹೋರಾಟ:** ರಾಣಾ ಉದಯ ಸಿಂಗ್‌ನ ಮರಣಾನಂತರ ಆತನ ಮಗ ರಾಣಾಪ್ರತಾಪಸಿಂಗನು ಸಿಂಹಾಸನಕ್ಕೇರುವಾಗಲೇ ತಾನು ತನ್ನ ರಾಜಧಾನಿ ಚಿತ್ತೂರು ಕೋಟೆಯನ್ನು ಪುನಃ ವಶಪಡಿಸಿಕೊಳ್ಳುವವರೆಗೂ ಬೆಳ್ಳಿಯ ತಟ್ಟೆಗಳಲ್ಲಿ ಆಹಾರವನ್ನು ಸೇವಿಸುವುದಿಲ್ಲ ಮತ್ತು ಹಾಸಿಗೆಯ ಮೇಲೆ ನಿದ್ರಿಸುವುದಿಲ್ಲವೆಂದು ಶಪಥಗೈದನು. ಇದನ್ನು ತನ್ನ ಜೀವಿತಾವಧಿಯವರೆಗೂ ಪಾಲಿಸಿದನು. ಅಕ್ಬರನು ೧೫೭೬ ರಲ್ಲಿ ಮಾನ್‌ಸಿಂಗ್ ಮತ್ತು ಅಸಫ್‌ಖಾನ್‌ರ ನೇತೃತ್ವದಲ್ಲಿ ಪ್ರಬಲ ಸೈನ್ಯವೊಂದನ್ನು ಮೇವಾರದ ಆಕ್ರಮಣಕ್ಕೆ ಕಳುಹಿಸಿದನು. ರಾಣಾ ಪ್ರತಾಪನು ಹಾಲ್ದಿಘಾಟ್ ಎಂಬಲ್ಲಿ ೧೫೭೬ ರ ಜೂನ್ ೧೮ ರಂದು ಮೊಗಲರ ವಿರುದ್ಧ ಯುದ್ಧ ಕೈಗೊಂಡನು. ಯುದ್ಧದಲ್ಲಿ ರಾಣಾ ಪ್ರತಾಪನ ಜೀವಕ್ಕೆ ಅಪಾಯ ಉಂಟಾಯಿತು. ಅವನು ತನ್ನ ಪ್ರೀತಿಯ ಕುದುರೆ ಚೈತಕ್ ಮೇಲೆ ಕುಳಿತು ರಣರಂಗದಿಂದ ತಪ್ಪಿಸಿಕೊಂಡ. ರಾಣಾಪ್ರತಾಪನು ೧೫೯೭ ರಲ್ಲಿ ಮರಣ ಹೊಂದುವವರೆಗೂ ಮೊಗಲರ ವಿರುದ್ಧ ಹೋರಾಟ ನಡೆಸುತ್ತಲೇ ಇದ್ದ. ಅವನು ಮೊಗಲರ ಸಾರ್ವಭೌಮತ್ವವನ್ನು ಒಪ್ಪಿಕೊಂಡಿರಲಿಲ್ಲ.

೮. **ರಣಥಂಬೋರ್ ವಶ** (ಕ್ರಿ.ಶ. ೧೫೬೯): ಅಂದು ಹಿಂದೂಸ್ಥಾನದ ಕೋಟೆಗಳಲ್ಲೆಲ್ಲಾ ರಣಥಂಬೂರ್ ಕೋಟೆಯು ಅತ್ಯಂತ ದುರ್ಗಮವಾದುದಾಗಿತ್ತು. ಇದನ್ನು ಸುರ್ಜನ್ ರಾಯ್ ಎಂಬುವವನು ಆಳುತ್ತಿದ್ದನು. ಅಕ್ಬರನು ೧೫೬೯ ರಲ್ಲಿ ಇದನ್ನು ಧಾಳಿ ಮಾಡಲು ಸೇನೆ ಯೊಂದನ್ನು ಕಳುಹಿಸಿದನು. ಮೊಗಲ್ ಸೇನೆಯು ಒಂದೂವರೆ ತಿಂಗಳು ಮುತ್ತಿದ್ದಿತು. ನಂತರ ರಾಯ್‌ನು ಶರಣಾದನು.

೯. **ಕಾಲಿಂಜರ್ ಕೋಟೆಯ ವಶ** (ಕ್ರಿ.ಶ. ೧೫೬೯): ಕಾಲಿಂಜರ್ ಕೋಟೆಯು ರೇವಾ ಸಂಸ್ಥಾನದ ರಾಜಾ ರಾಮಚಂದ್ರನ ಹತೋಟಿಯಲ್ಲಿತ್ತು. ಅಕ್ಬರನು ೧೫೬೯ ರಲ್ಲಿ ಮಜ್ನುನ್ ಖಾನ್ ಕಕ್ಷಾಲ್ ಎಂಬುವವನ ನೇತೃತ್ವದಲ್ಲಿ ಕಾಲಿಂಜರ್ ಕೋಟೆಯ ಮೇಲೆ ದಾಳಿಗೆ ಕಳುಹಿಸಿದನು. ರಾಜಾರಾಮನು ಚಿತ್ತೂರು ಮತ್ತು ರಣಥಂಬೂರ್‌ಗಳ ಸ್ಥಿತಿಯನ್ನು ಕಂಡವ ನಾಗಿದ್ದು ಹೋರಾಟದ ಉಪಯೋಗವಿಲ್ಲವೆಂದು ಯುದ್ಧ ಮಾಡದೆ ಕೋಟೆಯನ್ನು ಮೊಗಲರಿಗೆ ಒಪ್ಪಿಸಿದ. ನಂತರ ರಾಜಾರಾಮನಿಗೆ ಅಲಹಾಬಾದ್ ಬಳಿ ಜಹಗೀರೊಂದನ್ನು ನೀಡಲಾಯಿತು.

೧೦. **ಮಾರ್ವಾರ:** ಚಿತ್ತೂರು ಮತ್ತು ರಣಥಂಬೂರ್‌ಗಳ ಸೋಲುವಿಕೆಯಿಂದ ಎದೆ ಗುಂದಿದ ಇನ್ನಿತರ ರಾಜ್ಯಗಳಾದ ಬಿಕನೇರ್, ಜೈಸ್‌ಲ್ಮೇರ್, ಜೋಧಪುರ ಮತ್ತಿತರ ರಜಪೂತ ರಾಜ್ಯಗಳು ಮೊಗಲರ ಸಾರ್ವಭೌಮತ್ವವನ್ನು ಒಪ್ಪಿಕೊಂಡವು.

೧೧. **ಗುಜರಾತಿನ ಮೇಲೆ ಧಾಳಿ :** ಅಕ್ಬರ್ ಗುಜರಾತಿನ ಮೇಲೆ ೧೫೭೨ ರಲ್ಲಿ ಧಾಳಿಮಾಡಿ ಅಹಮದಾಬಾದ್‌ನ್ನು ವಶಪಡಿಸಿಕೊಂಡನು. ಇದಾದ ನಂತರ ಬಿಹಾರ, ಬಂಗಾಳ, ಕಾಬೂಲ್, ಕಾಶ್ಮೀರ, ಸಿಂಧ್, ಒರಿಸ್ಸಾ, ಬಲೂಚಿಸ್ಥಾನ, ಕಾಂದಹಾರ್‌ಗಳನ್ನು ಅಕ್ಬರನು ಯಶಸ್ವಿಯಾಗಿ ವಶಪಡಿಸಿಕೊಂಡನು.

ಅಕ್ಬರನು ಉತ್ತರ ಮತ್ತು ಮಧ್ಯಭಾರತಗಳಲ್ಲಿ ಸಾಮ್ರಾಜ್ಯವನ್ನು ಸಂಘಟಿಸಿ ನಂತರ ದಖನ್ನಿಗೂ ತನ್ನ ಸಾರ್ವಭೌಮತ್ವವನ್ನು ವಿಸ್ತರಿಸಲು ಯೋಜಿಸಿದ್ದನು. ಅಕ್ಬರನು ೧೫೯೧ ರಲ್ಲಿ ಖಾನ್‌ದೇಶ, ಅಹಮದ್‌ನಗರ, ಬಿಜಾಪುರ ಮತ್ತು ಗೋಲ್ಕಂಡಗಳ ಆಸ್ಥಾನಗಳಿಗೆ ಪ್ರತಿನಿಧಿಗಳನ್ನು ಕಳುಹಿಸಿ ತನ್ನ ಸಾರ್ವಭೌಮತ್ವವನ್ನು ಅವರು ಒಪ್ಪಿಕೊಳ್ಳುವಂತೆ ಮಾಡಲು ಯತ್ನಿಸಿದನು. ಆದರೆ ಖಾನ್‌ದೇಶವೊಂದನ್ನು ಬಿಟ್ಟು ಉಳಿದೆಲ್ಲವೂ ಅವನ ಸಂಧಾನವನ್ನು ತಪ್ಪಿಸಿಕೊಳ್ಳುವ ಉತ್ತರಗಳನ್ನು ಕಳುಹಿಸಿದರು. ಖಾನ್‌ದೇಶವು ವಾರ್ಷಿಕ ಕಪ್ಪ ಕೊಡಲು ಒಪ್ಪಿಕೊಂಡಿತು. ಅಹಮದ್‌ನಗರದ ಮೇಲೆ ೧೫೯೫ ರಲ್ಲಿ ಮೊಗಲರು ಮುತ್ತಿಗೆ ಹಾಕಿದರು. ಬಿಜಾಪುರದ ವಿಧವೆ ರಾಣಿ ಚಾಂದ್‌ಬೀಬಿಯು ಧೈರ್ಯದಿಂದ ನಗರವನ್ನು ರಕ್ಷಿಸಿದಳು. ಮೊಗಲ್ ಸೇನಾಧಿಪತಿಗಳಲ್ಲಿ ಸೌಹಾರ್ದತೆಯ ಕೊರತೆ ಮತ್ತು ಪೂರೈಕೆಯ ಅಭಾವದಿಂದಾಗಿ ಮೊಗಲ್ ಸೇನೆಯ ಕಾರ್ಯಾಚರಣೆಗೆ ಅಡಚಣೆಯಾಯಿತು. ಪ್ರತಿಫಲವಾಗಿ ಮೊಗಲರು ಚಾಂದ್‌ಬೀಬಿಯೊಡನೆ ೧೫೯೬ ರಲ್ಲಿ ಒಪ್ಪಂದವೊಂದನ್ನು ಮಾಡಿಕೊಂಡರು. ಅಂತಿಮವಾಗಿ ೧೬೦೦ ರಲ್ಲಿ ಅಹ್ಮದ್‌ನಗರವು ಮೊಗಲರ ವಶವಾಯಿತು.

**ಅಕ್ಬರನ ಸಾಮ್ರಾಜ್ಯ ವಿಸ್ತಾರ**

ಮೊಗಲ್ ಸಾಮ್ರಾಜ್ಯವು ಭೂವ್ಯಾಪ್ತಿಯಲ್ಲಿ ಮತ್ತು ಶಕ್ತಿಯಲ್ಲಿ ಭಾರತದಲ್ಲೇ ಶಕ್ತಿಶಾಲಿ ಸಾಮ್ರಾಜ್ಯವಾಗಿ ರೂಪುಗೊಂಡಿತು. ಅಕ್ಬರನ ಜೀವಿತಾವಧಿಯಲ್ಲಿ ಮೊಗಲ್ ಸಾಮ್ರಾಜ್ಯವು ಪಶ್ಚಿಮದಲ್ಲಿ ಕಾಂದಾಹಾರ್ ಮತ್ತು ಕಾಬೂಲ್‌ನಿಂದ ಪೂರ್ವದಲ್ಲಿ ಬಂಗಾಳ, ಉತ್ತರದಲ್ಲಿ ಕಾಶ್ಮೀರದಿಂದ ದಕ್ಷಿಣದಲ್ಲಿ ಅಹ್ಮದ್‌ನಗರಗಳವರೆಗೆ ವ್ಯಾಪಿಸಿತ್ತು.

ಅಕ್ಬರನ ಕೊನೆಯ ದಿನಗಳು ದುಃಖ ಮತ್ತು ಬೇಗುದಿಯಿಂದ ಕೂಡಿದ್ದವು. ಅವನ ನೆಚ್ಚಿನ ಗೆಳೆಯ ಮತ್ತು ಕವಿ ಫೈಜಿ ೧೫೯೫ ರಲ್ಲಿ ಮರಣ ಹೊಂದಿದನು. ರಾಜಕುಮಾರ ಸಲೀಮನು ತಂದೆಗೆ ವಿರುದ್ಧವಾಗಿ ಉದ್ಧಟತನದಿಂದ ನಡೆದುಕೊಳ್ಳಲಾರಂಭಿಸಿ ದಂಗೆ ಯೆದ್ದನು. ಅಲ್ಲದೆ ಅಬುಲ್‌ಫಜಲ್‌ನನ್ನು ಸಲೀಮನೇ ಕೊಲ್ಲಿಸಿದ್ದು ಅಕ್ಬರನ ದುಃಖವನ್ನು ತೀವ್ರಗೊಳಿಸಿತು. ಅಕ್ಬರನು ೧೬೦೫ ರಲ್ಲಿ ಮರಣ ಹೊಂದಿದನು.

**ಅಕ್ಬರನ ರಜಪೂತ ನೀತಿ**

ಅಕ್ಬರನ ರಜಪೂತರೊಂದಿಗಿನ ಸಂಬಂಧವು ವಿಶಾಲವಾದ ಅರ್ಥದ ತಳಹದಿಯ ಮೇಲೆ ನಿಂತಿದೆ. ಅಕ್ಬರನು ಉದಾರ ಧಾರ್ಮಿಕ ನೀತಿಯನ್ನು ಅನುಸರಿಸಿದವನು. ೧೫೬೨ ರಲ್ಲಿ ಅಕ್ಬರನು ಅಜ್ಮೀರ್‌ನ ಷೇಕ್ ಮೊಯಿನುದ್ದೀನ್ ಚಿಸ್ತಿಯ ದರ್ಗಾಗೆ ಭೇಟಿ ನೀಡಿದಾಗ, ಅಂಬರ್‌ನ ರಾಜ ಬಿಹಾರಮಲ್ ಈ ಸಂದರ್ಭದಲ್ಲಿ ಅಕ್ಬರ್‌ನನ್ನು ಭೇಟಿಯಾಗಿ ತನ್ನ ಮಗಳನ್ನು ಮದುವೆ ಮಾಡಿಕೊಡುವ ಆಕಾಂಕ್ಷೆ ವ್ಯಕ್ತಪಡಿಸಿದ. ಅಕ್ಬರನು ಇದಕ್ಕೆ ಒಪ್ಪಿ ಸಾಂಬಾರ್‌ನಲ್ಲಿ ಮದುವೆಯಾದನು. ಅಕ್ಬರನು ರಜಪೂತರ ವಿಧೇಯತೆ ಮತ್ತು ಪ್ರೀತಿಯನ್ನು ಹಾಗೂ ರಜಪೂತ ಸಂಬಂಧವನ್ನು ಒಪ್ಪಿಕೊಂಡಿದ್ದ. ನಂತರ ಭಗವಾನ್‌ದಾಸನ ಮಗ ಮಾನ್

ಸಿಂಗ್‌ನನ್ನು ಸಾಮ್ರಾಜ್ಯದ ಸೈನ್ಯಕ್ಕೆ ಸೇರಿಸಿಕೊಂಡ. ಈ ರಜಪೂತ ಹೆಂಡತಿಯು ಅಕ್ಬರನ ಸಾಮಾಜಿಕ-ಸಾಂಸ್ಕೃತಿಕ, ಧಾರ್ಮಿಕ ಭಾವನೆಗಳನ್ನು ಬದಲಾಯಿಸಿದಳು ಮತ್ತು ವಾರಸುದಾರ ಸಲೀಂ (ಜಹಂಗೀರ್)ಗೆ ಜನ್ಮ ನೀಡಿದಳು.

ಅಕ್ಬರನ ಈ ವೈವಾಹಿಕ ಸಂಬಂಧವು ರಾಜ್ಯದ ನೀತಿಯನ್ನೇ ಬದಲಾಯಿಸಿತು. ಅಕ್ಬರನು ಅಂಬರ್‌ನ ರಜಪೂತರ ಪ್ರೀತಿಪೂರ್ವಕ ಸಂಬಂಧಕ್ಕೆ ಮಾರುಹೋದ. ಹಾಗೆಯೇ ರಜಪೂತರು ಸಹ ಅಕ್ಬರನ ಜೀವ ರಕ್ಷಣೆಗೆ ಮತ್ತು ಮೊಗಲ್ ಸಾಮ್ರಾಜ್ಯ ರಕ್ಷಣೆಗೆ ತಮ್ಮ ಪ್ರಾಣ ಅರ್ಪಿಸಲು ಮುಂದಾದರು. ಹಿಂದೆ ವೈರಿಗಳಾಗಿದ್ದ ರಜಪೂತರಿಗೆ ಸ್ನೇಹ, ಗೌರವಗಳನ್ನು ನೀಡಿ ಅವರ ಸ್ವಗೌರವಕ್ಕೆ ಧಕ್ಕೆ ಬರದ ರೀತಿಯಲ್ಲಿ ನಡೆದುಕೊಂಡಿದ್ದರಿಂದ ಅವರು ಸಾಮ್ರಾಜ್ಯದ ಆಧಾರಸ್ತಂಭಗಳಂತಾದರು.

ಎ.ಎಲ್. ಶ್ರೀವಾಸ್ತವರವರು ಅಭಿಪ್ರಾಯಪಡುವಂತೆ "ಅಕ್ಬರನು ರಜಪೂತರನ್ನು ನಡೆಸಿಕೊಂಡ ನೀತಿ ವಿವೇಕರಹಿತವಾದ ಮನೋಧರ್ಮದಿಂದ ಹೊರಹೊಮ್ಮಿದುದಲ್ಲ ಅಥವಾ ಅವರ ಧೈರ್ಯ ಶೌರ್ಯಗಳಿಗೆ ಕೊಟ್ಟ ಮನ್ನಣೆಯಾಗಿರಲಿಲ್ಲ. ಇದು ಉದ್ದೇಶ ಪೂರ್ವಕವಾಗಿ ಜಾರಿಗೆ ತಂದ ನೀತಿಯಾಗಿದ್ದಿತು ಮತ್ತು ಇದಕ್ಕೆ ಪ್ರಗತಿಪರ ಸ್ವಹಿತಾಕಾಂಕ್ಷೆ, ಅರ್ಹತೆಗೆ ಪುರಸ್ಕಾರ, ನ್ಯಾಯ ಮತ್ತು ಸಮಾನತೆಗೆ ಕಾರಣವಾಗಿದ್ದವು". ಅಕ್ಬರನು ರಜಪೂತ ನೀತಿಯನ್ನು "ಒಂದು ಕೈಲಿ ಹೂವನ್ನು ಇನ್ನೊಂದು ಕೈಲಿ ಕತ್ತಿಯನ್ನಿಡಿದು" ಸಾಧಿಸಿದನು. ರಜಪೂತರಲ್ಲಿ ತಾವಾಗಿ ಶರಣು ಬಂದವರಿಗೆ ಸಾಮ್ರಾಜ್ಯ ವ್ಯವಸ್ಥೆಗೆ ಸೇರಿಸಿಕೊಂಡ. ಅವನ ವಿರುದ್ಧ ನಿಂತವರನ್ನು ಯುದ್ಧರಂಗದಲ್ಲಿ ಮಣಿಸಿದನು. ಮಣಿಯದವರನ್ನು ತನ್ನ ಸೈನಿಕ ಶಕ್ತಿಯನ್ನು ಕೊನೆಯವರೆಗೂ ಉಪಯೋಗಿಸಿ ಮಣಿಯುವಂತೆ ಮಾಡುತ್ತಿದ್ದನು. ಆರ್.ಸಿ. ಮಜುಂದಾರ್‌ರವರು ಅಭಿಪ್ರಾಯಪಡುವಂತೆ "ಅಕ್ಬರನ ಸಾಮ್ರಾಜ್ಯ ವಾಸ್ತವವಾಗಿ ಮೊಗಲರ ರಾಜಕಾರಣಪಟುತ್ವ ಮತ್ತು ರಜಪೂತರ ಕಲಿತನ ಮತ್ತು ಸಂಘಟನೆಯ ಫಲ".

ಅಕ್ಬರನು ಮೂರು ವಿಧದ ರಜಪೂತ ರಾಜ್ಯಗಳ ಮತ್ತು ಪ್ರಜೆಗಳ ಜೊತೆ ಸಂಬಂಧ ಹೊಂದಿದ್ದನು. ಮೊದಲ ಗುಂಪಿನ ರಜಪೂತರೆಂದರೆ ಅಂಬರ್, ಬಿಕನೇರ್ ಮತ್ತು ಜೈಸಲ್ಮೇರ್. ಇವರು ಸ್ವಂತ ಇಚ್ಛೆಯಿಂದ ತಮ್ಮ ವಿಧೇಯತೆಯನ್ನು ಒಪ್ಪಿ ಸಾಮ್ರಾಜ್ಯ ವ್ಯವಸ್ಥೆಯಲ್ಲಿ ಒಂದಾಗಿದ್ದರು. ಎರಡನೆಯ ವರ್ಗದ ರಜಪೂತ ರಾಜ್ಯಗಳೆಂದರೆ ರಣ ಥಂಬೋರ್ ಮತ್ತು ಮೆರ್ತ ಇವರು ಗೌರವಾನ್ವಿತವಾಗಿ ಹೋರಾಡಿ ಕೊನೆಗೆ ಅಕ್ಬರನೊಡನೆ ಗೌರವಯುತ ಒಪ್ಪಂದಕ್ಕೆ ಬಂದಿದ್ದರು. ಮೂರನೆಯ ವರ್ಗದ ರಜಪೂತ ರಾಜ್ಯಗಳೆಂದರೆ ಮೇವಾರದ ರಾಣಾ ಉದಯ್‌ಸಿಂಗ್ ಮತ್ತು ಅವನ ಅನುಯಾಯಿಗಳು. ಇವರದು ತಮ್ಮ ಪ್ರಾಂತೀಯ ಸ್ವಾತಂತ್ರ್ಯ, ಗೌರವ, ಸ್ವಾಭಿಮಾನವನ್ನು ಯಾವುದೇ ಹಿತಾಸಕ್ತಿಗೂ ಬಲಿಕೊಡಲು ತಯಾರಾಗದೆ ಹೋರಾಡಿದ ವೀರರ ಗುಂಪು.

**ಹೆಚ್ಚಿನ ವಿಷಯ**

[ಅಕ್ಬರನು ಸ್ವತಃ ತಾವೇ ಶರಣಾಗಿ ಅಥವಾ ಶಾಂತಿಗಾಗಿ ಒಪ್ಪಿ ಬಂದ ರಜಪೂತ ರಾಜ

ರೊಂದಿಗೆ ಗೌರವಯುತವಾದ ಷರತ್ತುಗಳನ್ನು ನೀಡಲು ಮುಂದೆ ಬರುತ್ತಿದ್ದನು. ಬೂಂದಿ ರಾಜ್ಯದೊಂದಿಗಿನ ಒಪ್ಪಂದದ ಅಂಶಗಳು ಇದಕ್ಕೆ ಉತ್ತಮ ಉದಾಹರಣೆಯಾಗಿವೆ. ಬೂಂದಿ ಸಂಸ್ಥಾನದೊಂದಿಗಿನ ಒಪ್ಪಂದದ ಅಂಶಗಳೆಂದರೆ:

೧. ಬೂಂದಿ ರಾಜ್ಯದ ರಜಪೂತ ಸಂತತಿಯವರನ್ನು ಮೊಗಲ್ ಸಂತತಿಯವರು ವೈವಾಹಿಕ ಸಂಬಂಧಕ್ಕೆ ಆಹ್ವಾನಿಸುವಂತಿಲ್ಲ.

೨. ಬೂಂದಿಯ ಅರಸರು ಜಜಿಯಾ (ತಲೆಗಂದಾಯ)ವನ್ನು ಮೊಗಲರಿಗೆ ಕೊಡುವಂತಿಲ್ಲ.

೩. ಬೂಂಧ್ಯಿಯ ಅರಸರನ್ನು ವಾಯುವ್ಯಗಡಿಯ ಅಟ್ಟಾಕ್‌ಗಿಂತ ದೂರದವರೆಗಿನ ಪ್ರದೇಶ ಗಳಲ್ಲಿ ಮೊಗಲ್ ಚಕ್ರವರ್ತಿಯ ಸೇವೆಯನ್ನು ಮಾಡುವಂತೆ ಕೇಳುವಂತಿಲ್ಲ.

೪. ಬೂಂದಿ ರಾಜ್ಯದ ರಜಪೂತ ಮುಖಂಡರ ಹೆಂಡತಿಯರನ್ನು ಮಿನಾಬಜಾರ್ (ಚಕ್ರವರ್ತಿಯ ಪರವಾಗಿ ಕೋಟೆಯಲ್ಲಿ ವಿಶೇಷವಾಗಿ ನಡೆಯುತ್ತಿದ್ದ ಮಾರುಕಟ್ಟೆ)ನಲ್ಲಿ ಅಂಗಡಿಗಳನ್ನು ತೆರೆಯುವಂತೆ ಕೇಳುವಂತಿಲ್ಲ.

೫. ಬೂಂದಿಯ ಅರಸರು ದಿವಾನ್-ಎ-ಆಮ್‌ನಲ್ಲಿ ಭಾಗವಹಿಸುವಾಗ ಪೂರ್ಣಶಸ್ತ್ರ ಸಜ್ಜಿತರಾಗಲು ಅವಕಾಶ ನೀಡಬೇಕು.

೬. ಬೂಂದಿ ರಾಜ್ಯದ ಧಾರ್ಮಿಕ ಕೇಂದ್ರಗಳನ್ನು ಗೌರವಿಸಬೇಕು.

೭. ಬೂಂದಿಯ ಅರಸರನ್ನು ಹಿಂದೂ ರಾಜರ ನೇತೃತ್ವದಡಿಯಲ್ಲಿ ನೇಮಿಸಬಾರದು.

೮. ಬೂಂದಿ ರಾಜ್ಯದ ಕುದುರೆಗಳಿಗೆ ಮುದ್ರೆ (ದಾಗ್)ಯನ್ನು ಹಾಕಬಾರದು.

೯. ಬೂಂದಿಯ ಅರಸರು ಕೆಂಪು ಕೋಟೆಯ ಪ್ರವೇಶ ದ್ವಾರದವರೆಗೆ ತಮ್ಮ ಮದ್ದಲೆಗಳನ್ನು ಬಾರಿಸಿಕೊಂಡು ಹೋಗಲು ಅನುಮತಿ ನೀಡಬೇಕು.

೧೦. ಬೂಂದಿಯ ಅರಸರು ಸಿಜ್ದಾ (ಚಕ್ರವರ್ತಿಯ ಮುಂದೆ ಶಿರಸಾಷ್ಟಾಂಗ ನಮಸ್ಕಾರ)ವನ್ನು ಆಚರಿಸುವಂತಿಲ್ಲ.

೧೧. ಬೂಂದಿಯ ಅರಸರನ್ನು, ಅವರ ರಾಜಧಾನಿಯನ್ನು ಬೇರೆ ಪ್ರದೇಶಕ್ಕೆ ವರ್ಗಾಯಿಸು ವಂತೆ ಕೇಳುವಂತಿಲ್ಲ.

ಅಕ್ಬರನ ರಜಪೂತ ನೀತಿಯು ದೂರದರ್ಶಿತ್ವ, ರಾಜಕಾರಣಪಟುತ್ವ ಮತ್ತು ಉದಾರತೆಗೆ ಅತ್ಯುತ್ತಮ ನಿದರ್ಶನ. ಈ ನೀತಿ ವಿಶಾಲವಾದ ಅರ್ಥದ ತಳಹದಿಯ ಮೇಲೆ ನಿಂತಿದೆ. ಈ ನೀತಿಯಿಂದ ಎರಡು ಪ್ರಮುಖ ಪರಿಣಾಮಗಳುಂಟಾದವು. ಮೊದಲನೆಯದಾಗಿ ಅಕ್ಬರನು ರಜಪೂತ ಸ್ವಾತಂತ್ರ್ಯವನ್ನು ಕ್ಷಾತ್ರಗುಣವನ್ನು ತನ್ನ ಕತ್ತಿಯ ನೀತಿಯಿಂದ ತುಂಡರಿಸಿದನು. ಎರಡನೆಯದು ರಜಪೂತರಿಗಾಗಿದ್ದ ಆತ್ಮಗೌರವ ಮತ್ತು ಘನತೆಯ ಗಾಯಗಳು ಅಕ್ಬರನ ಉದಾರಯುತ ಮತ್ತು ಸ್ನೇಹಪೂರ್ವಕ ನಡವಳಿಕೆಯಿಂದ ಮಾಯವಾದವು. ಅಕ್ಬರನು ಹಿಂದೆ ಚಿತ್ತೂರಿನಲ್ಲಿ ಕೈಗೊಂಡಿದ್ದ ನಾಗರಿಕ ಕಗ್ಗೊಲೆಯಂಥ ಕ್ರಮಗಳನ್ನು ಬದಲಾಯಿಸಿಕೊಂಡನು. ರಜಪೂತರ ಭಾಗವಹಿಸುವಿಕೆಯಿಂದ ದೇಶದ ರಾಜಕೀಯ ಏಕೀಕರಣ ಮತ್ತು ಸಾಮ್ರಾಜ್ಯ ವಿಸ್ತರಣಾ ನೀತಿಗೆ ಸಹಾಯಕವಾಯಿತು. ರಜಪೂತರೊಂದಿಗೆ ಇನ್ನಿತರ ಜನ ಸಮುದಾಯವು ಮೊಗಲ್ ಸಾಮ್ರಾಜ್ಯಶಾಹಿಯನ್ನು ಬೆಂಬಲಿಸಿತು. ರಜಪೂತರು ಸೈನ್ಯದಲ್ಲಿ ಸೇರಿದ್ದರಿಂದ ಸಾಮ್ರಾಜ್ಯ ಸೈನ್ಯವು ಬಲಗೊಂಡಿತು. ಅಕ್ಬರನು ರಜಪೂತರಾದ ಭಗವಾನ್‌ದಾಸ್‌ನನ್ನು ೫,೦೦೦

ಮನ್‌ಸಬ್ದಾರನನ್ನಾಗಿಯೂ, ಮಾನ್‌ಸಿಂಗ್‌ನನ್ನು ೭,೦೦೦ ಮನ್ಸಬ್ದಾರನನ್ನಾಗಿಯೂ ನೇಮಿಸಿದ್ದನು. ಅಕ್ಬರನು ತನ್ನ ಈ ನೀತಿಯಿಂದ ರಜಪೂತರ ಒಕ್ಕೂಟವನ್ನು ಮುರಿದನು. ಹೆಚ್ಚೆಚ್ಚು ಹಿಂದೂಗಳು ಆಡಳಿತ ರಂಗದ ಉನ್ನತ ಹುದ್ದೆಗಳಿಗೆ ನೇಮಕಗೊಂಡರು. ಈ ನೀತಿ ಹಿಂದೂ-ಮುಸ್ಲಿಮ ಸಂಸ್ಕೃತಿಗಳ ಸಂಯೋಜನೆಗೆ ಕಾರಣವಾಯಿತು. ಕರ್ನಲ್ ಟಾಡ್ ಅವರ ಪ್ರಕಾರ "ಅಕ್ಬರನು ರಜಪೂತರ ಸ್ವಾತಂತ್ರ್ಯವನ್ನು ಗೆದ್ದ ಮೊದಲ ಯಶಸ್ವಿ ರಾಜ". ಹೀಗೆ ಅಕ್ಬರನು ತನ್ನ ಯಶಸ್ವಿಯುತ ರಜಪೂತ ನೀತಿಯಿಂದಾಗಿ ಮೊಗಲ್ ಸಾಮ್ರಾಜ್ಯವು ಉತ್ತುಂಗ ಶಿಖರಕ್ಕೇರುವಂತೆ ಮಾಡಿದನು.]

## ಅಕ್ಬರನ ಧರ್ಮ ಹಾಗೂ ಅವನ ಧಾರ್ಮಿಕ ನೀತಿ

ಅಕ್ಬರನಲ್ಲಿ ಅನುವಂಶೀಯತೆಯ ಪ್ರಭಾವವು ಮತ್ತು ಪರಿಸರದ ಪ್ರಭಾವವನ್ನು ಸ್ವಾಗತಿಸಲು ಅವಶ್ಯಕವಾದಂತಹ ಸಹೃದಯತೆ ಮತ್ತು ವಿಮರ್ಶಾಗುಣಗಳಿದ್ದವು. ಅಕ್ಬರನ ವಂಶಜರು ಸೂಫಿಗಳೊಂದಿಗೆ ಸಂಪರ್ಕ ಹೊಂದಿದ್ದರಿಂದ ಧಾರ್ಮಿಕ ಸಂಪ್ರದಾಯದ ಸಂಕೋಲೆಯನ್ನು ಕಿತ್ತೊಗೆದಿದ್ದರು. ಅಕ್ಬರನು ತನ್ನ ತಾಯಿ, ಮತ್ತು ತನ್ನ ಶಿಕ್ಷಕ ಅಬ್ದುಲ್ ಲತೀಫ್‌ನಿಂದ ಉದಾರ ಹಾಗೂ ಉದಾತ್ತ ಭಾವನೆಗಳ ಮೌಲ್ಯವನ್ನು ಅರಿತನು. ಅವನ ರಜಪೂತ ಪತ್ನಿಯರು, ಹಿಂದೂ ಧರ್ಮದೊಡನೆ ಅವನ ಸಂಪರ್ಕ ಹಾಗೂ ಅವನ ಕಾಲದ ಸುಧಾರಣಾ ಚಳವಳಿಗಳು ಅಕ್ಬರನ ಭಾವನಾಶಕ್ತಿಯ ಮೇಲೆ ತೀವ್ರ ಪ್ರಭಾವ ಬೀರಿದವು. ಅಕ್ಬರನಿಗೆ ದಿವ್ಯಸತ್ಯವನ್ನು ಕಾಣಬೇಕೆಂಬ ಹಂಬಲವಿದ್ದಿತು. ಅಕ್ಬರನು ತನ್ನ ವಿಶಾಲ ಸಾಮ್ರಾಜ್ಯಕ್ಕೆ ಒಂದು ಹೊಸ ಧರ್ಮವನ್ನು ಸ್ಥಾಪಿಸಲು ಬಯಕೆ ಹೊಂದಿದ್ದ. ಈತನು ಅಖಂಡ ಭಾರತದ ಏಕೈಕ ಸಾರ್ವಭೌಮನಾಗಬೇಕೆಂಬ ಆಶೋತ್ತರವೂ ಸಹ ಇದಕ್ಕೆ ಕಾರಣವಾಯಿತು.

ಧರ್ಮದ ಬಗ್ಗೆ ಸತ್ಯಶೋಧನೆ ನಡೆಸಲು ಅಕ್ಬರನು ಫತೇಪುರಸಿಕ್ರಿಯಲ್ಲಿ ಕ್ರಿ.ಶ. ೧೫೭೫ ರಲ್ಲಿ 'ಇಬಾದತ್‌ಖಾನ' ಅಥವಾ ಆರಾಧನಾ ಮಂದಿರವನ್ನು ಕಟ್ಟಿಸಿ ಅಲ್ಲಿ ತತ್ವಶಾಸ್ತ್ರ, ದೇವಶಾಸ್ತ್ರದ ಸಮಸ್ಯೆಗಳು ಮತ್ತು ಧಾರ್ಮಿಕ ಚರ್ಚೆಗಳನ್ನು ಪ್ರತಿ ಗುರುವಾರ ನಡೆಯುವಂತೆ ಮಾಡಿದನು. ಕ್ರಿ.ಶ.೧೫೭೮ ರಲ್ಲಿ ಇಬಾದತ್‌ಖಾನವನ್ನು ಧಾರ್ಮಿಕ ಸಂಸತ್ತಾಗಿ ಪರಿವರ್ತಿಸಿದನು. ಹಿಂದೂ, ಜೈನ, ಜೊರಾಸ್ಟ್ರಿಯನ್ ಮತ್ತು ಕ್ರೈಸ್ತ ಧರ್ಮೀಯರಿಗೂ ಅದನ್ನು ತೆರೆದು ವಿಶಾಲವಾದ ತಳಹದಿಯ ಮೇಲೆ ಧಾರ್ಮಿಕ ಚರ್ಚೆಗೆ ಅನುವು ಮಾಡಿದನು. ಹೀಗೆ ಉಪನ್ಯಾಸ ಹಾಗೂ ಚರ್ಚೆಗಳ ಮೂಲಕ ಇತರ ಧರ್ಮಗಳನ್ನು ಅರಿತುಕೊಳ್ಳುತ್ತಿದ್ದ ಹಾಗೇ ಅವುಗಳ ಸಾರಸಂಗ್ರಹವಾಗಿ 'ದೀನ್-ಎ-ಇಲಾಹಿ' ರೂಪ ತಳೆಯಿತು. ಕ್ರಿ.ಶ. ೧೫೭೯ ರಲ್ಲಿ ಖಲೀಫರು ಮತ್ತು ತೈಮೂರನು ಮಾಡಿಸಿದಂತೆ ಫತೇಪುರಸಿಕ್ರಿಯ ಮಸೀದಿಯಲ್ಲಿ ತನ್ನ ಹೆಸರಿನಲ್ಲಿ 'ಖುತ್ಬ'ವನ್ನು ಓದಿಸಿದನು. ಇದನ್ನು ಫೈಜಿ ರಚಿಸಿದ್ದು, ಇದು 'ಅಲ್ಲಾಹು ಅಕ್ಬರ್' ಪದದಿಂದ ಅಂತ್ಯಗೊಂಡಿದ್ದಿತು. ತನ್ನನ್ನು ದೇವರ ಕಾರ್ಯಭಾರಿ (ಖಲೀಪುತ್ ಉಲ್ಲ) ಎಂದು ಪರಿಗಣಿಸಿದ್ದನು. ೧೫೭೯ ರಲ್ಲಿ 'ಮಹಜರ್' (ಪ್ರಣಾಳಿಕೆ) ಶಾಸನವನ್ನು ಜಾರಿಗೆ

ತಂದನು. ಇದು ಅವನಿಗೆ ಧಾರ್ಮಿಕ ವಿಚಾರಗಳಲ್ಲಿ ಅಂತಿಮ ನಿರ್ಧಾರ ಮತ್ತು ಹೊಣೆಗಾರಿಕೆಯನ್ನು ನೀಡಿತು. ಉಲೇಮರ ಪ್ರಭಾವವನ್ನು ಹತ್ತಿಕ್ಕಿ ಅವನೇ ಧಾರ್ಮಿಕ ನಾಯಕ ಮತ್ತು ರಾಜನು ಆಗಿ ಮಾರ್ಪಟ್ಟನು. ಕ್ರಿ.ಶ. ೧೫೮೦ ರಲ್ಲಿ ಸಂತರ ಸಮಾಧಿಗಳಿಗೆ ಭೇಟಿ ನೀಡುವುದನ್ನು ನಿಲ್ಲಿಸಿದನು. ಅಕ್ಬರನು ಎಲ್ಲಾ ಧರ್ಮಗಳಿಂದಲೂ ಪ್ರಭಾವಿತ ನಾಗಿದ್ದನು.

**ದೀನ್-ಏ-ಇಲಾಹಿ** (ತೌಹಿದ್-ಏ-ಇಲಾಹಿ)

ಅಕ್ಬರನು ೧೫೮೨ ರಲ್ಲಿ 'ದೀನ್-ಏ-ಇಲಾಹಿ' ಎಂಬ ಪಂಥವನ್ನು (ಧರ್ಮ) ಸ್ಥಾಪಿಸಿದನು. ಇಬಾದತ್‌ಖಾನಾದ ಧಾರ್ಮಿಕ ಚರ್ಚೆಗಳಿಂದ ಯಾವುದೇ ಒಂದು ಧರ್ಮವೂ ಸಂಪೂರ್ಣ ಸತ್ಯದ ಏಕಸ್ವಾಮ್ಯತೆಯನ್ನು ಹೊಂದಿಲ್ಲವೆಂಬುದನ್ನು ಅರಿತ ಅಕ್ಬರ್ ಹೊಸ ಧರ್ಮವೊಂದನ್ನು ರೂಪಿಸಲು ನಡೆಸಿದ ಪ್ರಯತ್ನಗಳ ಮತ್ತು ಜಿಜ್ಞಾಸೆಗಳ ಫಲವಾಗಿ ಇದು ರೂಪಗೊಂಡಿತ್ತು. ದೀನ್-ಏ-ಇಲಾಹಿ ಇದೊಂದು ರಾಷ್ಟ್ರೀಯ ಧರ್ಮ. ಅದರ ಮುಖಾಂತರ ತನ್ನ ಸಾಮ್ರಾಜ್ಯದ ಸಮಸ್ತ ಜನರನ್ನು ಒಂದುಗೂಡಿಸುವುದು ಅವನ ಗುರಿ. ದೀನ್-ಏ-ಇಲಾಹಿ ದೇವರಿಂದ ದೇವದೂತನ ಮುಖಾಂತರ ಹೊಮ್ಮಿದ ಧರ್ಮವಲ್ಲ. ನಿರ್ದಿಷ್ಟ ದರ್ಶನ ಅದಕ್ಕಿರಲಿಲ್ಲ. ಆದರೆ ಪರಮಾತ್ಮನಲ್ಲಿ ನಂಬಿಕೆ ಅದಕ್ಕಿದ್ದಿತು. ಇದು ಎಲ್ಲಾ ಧರ್ಮಗಳ ಸಮ್ಮಿಲನವಾಗಿದ್ದು ಗುಡಿಗೋಪುರ, ಮಸೀದಿ ಅಥವಾ ಪ್ರಾರ್ಥನಾ ಸ್ಥಳಗಳಾಗಲಿ ಅಥವಾ ಧರ್ಮಗ್ರಂಥವಾಗಲಿ ಇದಕ್ಕೆ ಇರಲಿಲ್ಲ. ಅದೊಂದು ಧಾರ್ಮಿಕ ಪಂಥವಾಗಿದ್ದು ಅಕ್ಬರನೇ ಪ್ರವಾದಿ, ಅಬುಲ್ ಫಜಲನು ಅದರ ಮುಖ್ಯ ಅರ್ಚಕ. ಇದು ಏಕೇಶ್ವರವಾದವನ್ನು ಒಳಗೊಂಡಿತ್ತು.

**ಹೆಚ್ಚಿನ ವಿಷಯ**

[ಸರ್ವಧರ್ಮ ಸಹಿಷ್ಣುತೆಯಲ್ಲಿ ತೀವ್ರ ನಿಷ್ಠೆಯಿದ್ದ ಅಕ್ಬರ್ ತನ್ನ ಧರ್ಮಕ್ಕೆ ಮತಾಂತರ ಗೊಳಿಸುವ ಉತ್ಸಾಹದಿಂದಾಗಲಿ, ಧಾರ್ಮಿಕ ದುರಭಿಮಾನದಿಂದಾಗಲಿ ತನ್ನ ಧರ್ಮವನ್ನು ಇತರರ ಮೇಲೆ ಹೇರದೆ ಅವರಿಗೆ ಮನಮುಟ್ಟುವಂತೆ ವಿವರಿಸಿ ತಿಳಿಸುತ್ತಿದ್ದನು. ದೀನ್-ಏ-ಇಲಾಹಿ ಅನೇಕ ಸಂಸ್ಕಾರ ಮತ್ತು ನಡವಳಿಕೆಗಳನ್ನು ಒಳಗೊಂಡಿತ್ತು. ಈ ವ್ಯವಸ್ಥೆಯ ಸದಸ್ಯನಾಗ ಬಯಸುವ ಯಾವೊಬ್ಬ ವ್ಯಕ್ತಿಯಾದರೂ ಯಾವುದೇ ಭಾನುವಾರ ಚಕ್ರವರ್ತಿ ಯನ್ನು ಭೇಟಿ ಮಾಡಿ ತನ್ನ ತಲೆಯ ಮುಂಡಾಸನ್ನು ಚಕ್ರವರ್ತಿಯ ಕಾಲ ಮುಂದೆ ಇಡಬೇಕಿತ್ತು. ನಂತರ ಅಕ್ಬರನು ದೇವರ ಹೆಸರನ್ನು ಮತ್ತು 'ಅಲ್ಲಾಹು ಅಕ್ಬರ್' ಎಂಬ ವಾಕ್ಯಗಳನ್ನೊಳಗೊಂಡ 'ಷಸ್ತ್' ಎಂಬುದನ್ನು ಕೊಡುತ್ತಿದ್ದನು. ಹೀಗೆ ದೀನ್-ಏ-ಇಲಾಹಿ ವ್ಯವಸ್ಥೆಗೆ ಸ್ವತಹ ಚಕ್ರವರ್ತಿಯೇ ಸದಸ್ಯರನ್ನಾಗಿ ಅಂಗೀಕರಿಸುತ್ತಿದ್ದನು. ಇದರಲ್ಲಿ ೪ ಬಗೆಯ ಸದಸ್ಯರಿದ್ದರು. ಮೊದಲ ವರ್ಗದಲ್ಲಿ ೧೮ ಮಂದಿ ಮಾತ್ರ ಸದಸ್ಯರಿದ್ದರು. ಅದರಲ್ಲಿ ಬೀರಬಲ್ ಒಬ್ಬ ಮಾತ್ರ ಹಿಂದೂ. ಎರಡನೇ ವರ್ಗದ ಸದಸ್ಯರ ಸಂಖ್ಯೆ ಹೆಚ್ಚಿತ್ತು. ಈ ವ್ಯವಸ್ಥೆಗೆ ಸೇರಿದವರು ಕೆಳಕಂಡ ನಿಯಮಗಳನ್ನು ಪಾಲಿಸಬೇಕಿತ್ತು.

೧. ಈ ವ್ಯವಸ್ಥೆಗೆ ಸೇರಿದ ಇಬ್ಬರು ಭೇಟಿಯಾದಾಗ 'ಅಲ್ಲಾಹು ಅಕ್ಬರ್' ಮತ್ತು 'ಜಲ್-ಲ ಜಲಾಲ್ ಹು ಹು' ಎಂದು ಸಂಬೋಧಿಸಿ ಗೌರವ ಸಲ್ಲಿಸಬೇಕಿತ್ತು.

೨. ಒಬ್ಬ ಮನುಷ್ಯ ಸತ್ತ ಮೇಲೆ ಅವನ ಹೆಸರಿನಲ್ಲಿ ಭೋಜನಕೂಟವನ್ನು ಏರ್ಪಡಿಸುವ ಬದಲು ಅವನು ಬದುಕಿದ್ದಾಗಲೇ ಅವನ ಹುಟ್ಟಿದ ದಿನದಂದು ಪ್ರತಿವರ್ಷ ಅಂತಹ ಭೋಜನಕೂಟವನ್ನು ಏರ್ಪಡಿಸಬೇಕೆಂದು ಅಕ್ಬರನು ಆಜ್ಞಾಪಿಸಿದನು. ಅಂತಹ ಮನುಷ್ಯ ಸತ್ತ ಮೇಲೆ ತಾನು ಬದುಕಿದ್ದಾಗ ಕೊಟ್ಟ ಭೋಜನಗಳ ಫಲವಾಗಿ ಸದ್ಗತಿಯುಂಟಾಗುತ್ತದೆ ಎಂಬ ನಂಬಿಕೆ ಈ ಭಾವನೆಯ ಹಿಂದೆ ಅಡಗಿತ್ತು.

೩. ದೀನ್-ಏ-ಇಲಾಹಿಗೆ ಸೇರಿದವರು ಮಾಂಸವನ್ನು ಆದಷ್ಟು ಸೇವಿಸಬಾರದೆಂದು ಕಟ್ಟಪ್ಪಣೆ ಮಾಡಿದ. ಆದರೆ ಆ ಧರ್ಮದವರು ಕೈಯಿಂದ ಮುಟ್ಟದೆ ಬೇರೆಯವರಿಗೆ ಮಾಂಸದ ಭೋಜನವನ್ನು ಕೊಡಬಹುದಿತ್ತು.

೪. ಗರ್ಭಿಣಿಯರು, ವಯಸ್ಸಾದವರು ಮತ್ತು ವಯಸ್ಸಿಗೆ ಬಂದಿಲ್ಲದ ಕನ್ಯೆಯೊಡನೆ ಸಂಭೋಗ ಮಾಡುವಂತಿರಲಿಲ್ಲ ಮತ್ತು ವಿವಾಹವಾಗುವಂತಿರಲಿಲ್ಲ.

೫. ಈ ಪಂಥಕ್ಕೆ ಸೇರಿದವರು ಪ್ರಾಪಂಚಿಕ ಸುಖಭೋಗಗಳನ್ನು ಒಟ್ಟು ಉತ್ತಮ ನಡತೆ ಮತ್ತು ಶೀಲ ಜೀವನವನ್ನು ನಡೆಸುತ್ತಾ ಮೋಕ್ಷ ಸಾಧನೆಗಾಗಿ ಪ್ರಯತ್ನಿಸಬೇಕು.

೬. ಈ ವ್ಯವಸ್ಥೆಗೆ ಸೇರಿದವರು ಮಲಗಿಕೊಳ್ಳುವಾಗ ಪೂರ್ವಕ್ಕೆ ತಲೆಹಾಕಿ ಪಶ್ಚಿಮದ ಕಡೆ ಕಾಲು ನೀಡಿ ಮಲಗಬೇಕಿತ್ತು. ದಿನಕ್ಕೆ ಮೂರು ಬಾರಿ ಮುಂಜಾವು, ಮಧ್ಯಾಹ್ನ ಮತ್ತು ಮುಸ್ಸಂಜೆ ಪ್ರಾರ್ಥನೆ ಸಲ್ಲಿಸುವುದು ಕಡ್ಡಾಯ.

೭. ದೀನ್-ಏ-ಇಲಾಹಿಯ ಅನುಯಾಯಿಗಳಲ್ಲಿ ನಾಲ್ಕು ವರ್ಗಗಳಿದ್ದವು. ಯಾರು ಜೀವ, ಸಂಪತ್ತು, ಆತ್ಮಪ್ರತಿಷ್ಠೆ ಮತ್ತು ಧರ್ಮಗಳನ್ನು ಚಕ್ರವರ್ತಿಗೋಸ್ಕರ ಮುಡುಪಾಗಿಡುತ್ತಾರೋ ಅವರೇ ಆ ನಾಲ್ಕು ವರ್ಗಗಳಿಗೆ ಸೇರಿದವರಾಗಿದ್ದರು. ಮೇಲ್ಕಂಡ ಈ ನಾಲ್ಕು ವಿಷಯಗಳನ್ನು ಯಾರು ಸಂಪೂರ್ಣವಾಗಿ ಚಕ್ರವರ್ತಿಗೆ ಅರ್ಪಿಸುತ್ತಾರೋ ಅವರು ಶ್ರೇಷ್ಠರೆಂದೂ ಮತ್ತು ಮೊದಲನೆ ವರ್ಗದ ಸದಸ್ಯರಾಗುತ್ತಿದ್ದರು. ಈ ನಾಲ್ಕು ವಿಷಯಗಳಲ್ಲಿ ಯಾರು ಮೂರು, ಎರಡು ಮತ್ತು ಒಂದು ವಿಷಯವನ್ನು ಅರ್ಪಿಸುತ್ತಾರೋ ಅಂತಹವರು ಎರಡು, ಮೂರು ಮತ್ತು ನಾಲ್ಕನೇ ದರ್ಜೆಯ ಸದಸ್ಯರಾಗುತ್ತಿದ್ದರು.

೮. ಇನ್ನಿತರ ಸದಾಚಾರಗಳೆಂದರೆ ಉದಾರತೆ, ಪರೋಪಕಾರ, ಒಳ್ಳೆಯ ಕಾರ್ಯವೆಸಗುವ ಆಸೆ, ಕ್ಷಮಾಶೀಲತೆ ಮತ್ತು ಸೌಮ್ಯತೆ. ಮೃದು ಮಾತು, ಪರರನ್ನು ಉತ್ತಮವಾಗಿ ನಡೆಸಿಕೊಳ್ಳುವುದು, ಪ್ರಾಪಂಚಿಕ ಕಟ್ಟುಪಾಡುಗಳಿಂದ ದೂರವಿರುವ ಮನೋಭಾವ, ದೇವರ ಪ್ರೀತಿಗೆ ಮತ್ತು ದೇವರೊಂದಿಗೆ ಲೀನವಾಗುವುದಕ್ಕೆ ಆತ್ಮವನ್ನು ಸಮರ್ಪಿಸಿಕೊಳ್ಳುವುದು, ತನ್ನ ಕಾರ್ಯ ಪರಿಣಾಮಗಳ ಮೇಲೆ ಆಲೋಚನಾಪರತೆ ಮುಂತಾದವು.]

ದೀನ್-ಏ-ಇಲಾಹಿ ಪಂಥವು ಅಕ್ಬರನ ಸಾವಿನ ನಂತರ ನಶಿಸಿಹೋಯಿತು. ಇದಕ್ಕೆ ಕಾರಣಗಳೆಂದರೆ ಈ ಪಂಥಕ್ಕೆ ಕೆಲವೇ ಸಾವಿರ ಜನರು ಸದಸ್ಯತ್ವ ಪಡೆದಿದ್ದರು. ಇದು ಆಗಿನ ಕಾಲದ ಪರಿಸ್ಥಿತಿಗಳಿಗೆ ಹೊಂದಿಕೆಯಾಗಲಿಲ್ಲ. ಇದರಲ್ಲಿ ಏಕೇಶ್ವರವಾದವನ್ನು ಬಿಟ್ಟರೆ ಮತ್ತಾವ ಧರ್ಮದ ಲಕ್ಷಣಗಳಿರಲಿಲ್ಲ. ಇದಕ್ಕೆ ಇತರ ಧರ್ಮಗಳಿಗಿದ್ದಂತೆ ಪ್ರವಾದಿಗಳಿರ

ಲಿಲ್ಲ. ಅದರ ತತ್ವ ಸಿದ್ಧಾಂತಗಳು ಜನತೆಯಲ್ಲಿ ಕಲಹಮೇಲೋಗರವಾಗಿದ್ದವು. ಇದು ಧಾರ್ಮಿಕ ಐಕ್ಯತೆ ಮತ್ತು ಹಿಂದೂ-ಮುಸ್ಲಿಮರಲ್ಲಿ ಒಡಂಬಡಿಕೆ ತರುವಲ್ಲಿ ವಿಫಲವಾಯಿತು.

### ಅಕ್ಬರನ ಧಾರ್ಮಿಕ ನೀತಿಯ ಪರಿಣಾಮಗಳು

ಕ್ರಿ.ಶ. ೧೫೬೨ ರಲ್ಲಿ ಅಕ್ಬರನು ಒಂದು ಆಜ್ಞೆ ಹೊರಡಿಸಿ ವೈರಿ ಪಾಳೆಯದ ಸ್ತ್ರೀಯರು ಮತ್ತು ಮಕ್ಕಳನ್ನು ಮೊಗಲ್ ಸೈನ್ಯವು ಹಿಂಸಿಸಬಾರದೆಂಬ ಕಟ್ಟಾಜ್ಞೆ ವಿಧಿಸಿದನು. ಯುದ್ಧಕಾಲದಲ್ಲಿ ಯುದ್ಧ ನಿರತರಲ್ಲದ ಹಿಂದೂಗಳನ್ನು ಬಂಧಿಸಕೂಡದು, ಗುಲಾಮರನ್ನಾಗಿ ಮಾಡಕೂಡದು ಮತ್ತು ಇಸ್ಲಾಮಿಗೆ ಮತಾಂತರಗೊಳಿಸಬಾರದೆಂದು ಆಜ್ಞೆ ಮಾಡಿದನು. ೧೫೬೩ ರಲ್ಲಿ ಯಾತ್ರಾರ್ಥಿ ತೆರಿಗೆಯನ್ನು ರದ್ದು ಮಾಡಿದನು. ಕ್ರಿ.ಶ. ೧೫೬೪ ರಲ್ಲಿ 'ಜೆಸಿಯಾ' ತಲೆಗಂದಾಯವನ್ನು ರದ್ದುಪಡಿಸಿದನು. ಬಹುಸಂಖ್ಯಾತ ಹಿಂದೂ ಅಥವಾ ರಜಪೂತರ ಪ್ರೀತಿ ವಿಶ್ವಾಸ ಗಳಿಸಿದನು. ಏಕ ರಾಷ್ಟ್ರೀಯತೆಯ ಲಕ್ಷಣ ಮೂಡಿಸಿದನು.

### ಇತಿಹಾಸದಲ್ಲಿ ಅಕ್ಬರನ ಸ್ಥಾನ

ಮಧ್ಯಕಾಲೀನ ಇತಿಹಾಸದಲ್ಲಿ ಅವಿಸ್ಮರಣೀಯ ವ್ಯಕ್ತಿತ್ವವನ್ನು ಪಡೆದಿರುವ ವ್ಯಕ್ತಿ ಅಕ್ಬರ್ ಚಕ್ರವರ್ತಿ. ಇವನು ರಾಜ್ಯ ವಿಸ್ತರಣೆ ಮಾಡುವುದರಲ್ಲಿ ಶ್ರಮಿಸಿದ್ದನಾದರೂ ದಮನಕಾರಿ ನೀತಿಯಲ್ಲಿ ಹೆಚ್ಚು ನಂಬಿಕೆ ಇಟ್ಟವನಾಗಿರಲಿಲ್ಲ. ಹೀಗಾಗಿ ಸೋತ ಅರಸರು ಇವನೊಂದಿಗೆ ಯಾವುದೇ ರೀತಿಯ ವೈರತ್ವವನ್ನು ಮುಂದುವರಿಸಲಿಲ್ಲ. ಬಹುಶಃ ರಾಣಾಪ್ರತಾಪಸಿಂಹನನ್ನು ಹೊರತುಪಡಿಸಿದರೆ ಬಹುತೇಕ ಹಿಂದೂ ಮತ್ತು ರಜಪೂತ ಅರಸರು ಇವನ ಸ್ನೇಹಿತರಾಗಿದ್ದರು. ಅಕ್ಬರನ ಆಡಳಿತ ನೀತಿ ಹಾಗೂ ಸುಧಾರಣೆಗಳು ಅವನ ವಿಶಿಷ್ಟ ವ್ಯಕ್ತಿತ್ವದ ಮಾದರಿಗಳಾಗಿವೆ. ಆಡಳಿತ ಸ್ವರೂಪವಾಗಿ ಬೆಳೆದು ಬಂದ ಮನ್ಸಬ್ದಾರಿ ವ್ಯವಸ್ಥೆ ಇಂದಿಗೂ ಒಂದು ವಿಶಿಷ್ಟ ರೀತಿಯಾಗಿದೆ. ರಾಜ ತೋದರಮಲ್ಲ 'ಬಂದೋಬಸ್ತ್' ಅಥವಾ 'ಐನ್-ಐ-ದಾಸ್‌ಸಲೆಹಾ' ಕಂದಾಯ ವ್ಯವಸ್ಥೆಯು ಬಹಳ ಶ್ರೇಷ್ಠವಾದ ಒಂದು ಸುಧಾರಣೆಯಾಗಿದೆ. ಧಾರ್ಮಿಕ ಸಹಿಷ್ಣುತೆ ಮತ್ತು ಐಕ್ಯತೆಗಳ ದಿಸೆಯಲ್ಲಿ ಅಕ್ಬರ್ ಒಂದು ನಿರ್ದಿಷ್ಟ ಹಾದಿಯನ್ನೇ ಹಾಕಿಕೊಟ್ಟ. ಈತನ ಅನ್ಯಧರ್ಮೀಯ ವಿವಾಹಗಳು ಇವನ ವಿಶಾಲ ಹೃದಯತೆಯನ್ನು ಪರಿಚಯಿಸುತ್ತವೆ. 'ದೀನ್-ಎ-ಇಲಾಹಿ' ಧರ್ಮದ ಸ್ಥಾಪನೆ ಅವನ ಆಧ್ಯಾತ್ಮಿಕ ಒಲವಿನ ಸಂಕೇತವಾಗಿದ್ದು ಇದಕ್ಕೂ ಮುಂಚೆ ಅವನು ನಿರ್ಮಿಸಿದ ಇಬಾದತ್‌ಖಾನ ಸರ್ವ ಧರ್ಮೀಯರ ಸಂಗಮ ಕ್ಷೇತ್ರವಾಗಿದ್ದು ಚಿಂತನಾಪೂರಕ್ಕೆ ನಾಂದಿಯಾಯಿತು.

ಅಕ್ಬರ್ ಚಕ್ರವರ್ತಿ ತಾನು ಸ್ವತಃ ಔಪಚಾರಿಕ ಶಿಕ್ಷಣವನ್ನು ಪಡೆಯದಿದ್ದರೂ ಶಿಕ್ಷಣ ತಜ್ಞರ ಹಾಗೂ ವಿದ್ವಾಂಸರ ಮಧ್ಯದಲ್ಲಿ ಕಾಲಕಳೆಯುವ ಹಂಬಲವಿದ್ದವನು. ಇವನು ಕವಿಗಳಿಗೆ, ಬರಹಗಾರರಿಗೆ ಮತ್ತು ವಿಚಾರವಾದಿಗಳಿಗೆ ನೀಡಿದ ಪ್ರೋತ್ಸಾಹ ಉತ್ತಮವಾದ ಪರ್ಷಿಯನ್, ಅರೇಬಿಕ್, ಸಂಸ್ಕೃತ ಹಾಗೂ ಪ್ರಾಂತೀಯ ಭಾಷೆಯ ಸಾಹಿತ್ಯ ಕ್ಷೇತ್ರಗಳ ವಿಕಾಸಕ್ಕೆ ದಾರಿ ಮಾಡಿಕೊಟ್ಟಿತು. ಇವನ ಆಸ್ಥಾನದಲ್ಲಿ ಅಬುಲ್‌ಫಜಲ್‌ನಂತಹ ಮಹಾನ್

ಕವಿ ಮತ್ತು ಬರಹಗಾರ, ತಾನ್‌ಸೇನ್‌ನಂತಹ ಶ್ರೇಷ್ಠ ಸಂಗೀತಗಾರ, ಬೀರಬಲ್‌ನಂತಹ ವಿದ್ವಾಂಸರು ಉಪಸ್ಥಿತರಿದ್ದರು.

ಅಕ್ಬರನು ಮಾನವೀಯ ಮೌಲ್ಯಗಳ ಪ್ರತಿಪಾದಕನಾಗಿದ್ದು, ಅನೇಕ ಗೊಡ್ಡು ಸಂಪ್ರದಾಯಗಳನ್ನು ತನ್ನ ಸುಧಾರಣೆಗಳ ಮುಖೇನವಾಗಿ ದೂರ ಮಾಡಲು ಪ್ರಯತ್ನಿಸಿದನು. ಜನ ವಿರೋಧಿ ಆಡಳಿತ ನೀತಿಯನ್ನು ದೂರವಾಗಿಸಿ ಹಿತಕರವಾದ ಹಾಗೂ ಅಭಿವೃದ್ಧಿಶೀಲವಾದ ಆಡಳಿತ ವ್ಯವಸ್ಥೆಯನ್ನು ಒದಗಿಸಿದನು. ಹಿಂದೂ ಹಬ್ಬ-ಹರಿದಿನಗಳನ್ನು ತನ್ನ ಅರಮನೆಯಲ್ಲಿಯೇ ಆಚರಿಸಲು ಅವಕಾಶ ಮಾಡಿಕೊಟ್ಟನು.

ಕಲೆ, ವಾಸ್ತುಶಿಲ್ಪ ಹಾಗೂ ಸಾಹಿತ್ಯಕ್ಕೆ ಈತನು ಮಾಡಿರುವ ಸೇವೆ ಅಪಾರವಾದುದು. ಫತೆಪುರಸಿಕ್ರಿ ಇವನ ನಿರ್ಮಾಣವಾಗಿದ್ದು ಅಲ್ಲಿ ಕಾಣಬಹುದಾದ ಅನೇಕ ಕಟ್ಟಡಗಳು ಇಂದಿಗೂ ಉನ್ನತಮಟ್ಟದ ಆಕರ್ಷಣೆಯನ್ನು ಪಡೆದಿರುವ ವಾಸ್ತುಶೈಲಿಯ ಕಟ್ಟಡಗಳಾಗಿವೆ. ಅಕ್ಬರನು ನ್ಯಾಯಾಡಳಿತಕ್ಕೆ ಶ್ರೇಷ್ಠಸ್ಥಾನವನ್ನು ನೀಡಿದ್ದ, ತನ್ನ ದರ್ಬಾರಿನಲ್ಲಿಯೇ ಎಲ್ಲಾ ಇತ್ಯರ್ಥಗಳನ್ನು ಮಾಡುವವನಾಗಿದ್ದನು. ಅಲ್ಲದೆ ಪ್ರಜಾಸಂಕಷ್ಟಗಳನ್ನು ಮುಕ್ತವಾಗಿ ಹಾಗೂ ನೇರವಾದ ಹಾದಿಯಲ್ಲಿ ಪರಿಹರಿಸಲು ಜನತಾದರ್ಶನ ಕಾರ್ಯಕ್ರಮವಾದ 'ಜರೋಕಾ-ಏ-ದರ್ಶನ'ವನ್ನು ಜಾರಿಗೆ ತಂದಿದ್ದ.

ತನ್ನ ಈ ಎಲ್ಲಾ ಶ್ರೇಷ್ಠ ಸಾಧನೆಗಳಿಂದ ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಅಕ್ಬರನು ಒಂದು ಅವಿಸ್ಮರಣೀಯ ಸ್ಥಾನವನ್ನು ಕಲ್ಪಿಸಿಕೊಂಡಿದ್ದಷ್ಟೇ ಅಲ್ಲದೆ ಮುಂದಿನ ಪೀಳಿಗೆಗಳಿಗೆ ಮಾದರಿಯಾದ ವ್ಯಕ್ತಿಯಾಗಿ ಬೆಳೆದಿದ್ದಾನೆ. ಈತನನ್ನು ಇತಿಹಾಸದಲ್ಲಿ 'ಅಕ್ಬರ್ ಮಹಾಶಯ' ಎಂಬುದಾಗಿ ಗುರುತಿಸಬಹುದಾಗಿದೆ.

ಅಕ್ಬರನ ನಂತರ ಜಹಾಂಗೀರ್, ಷಹಜಹಾನ್ ಮತ್ತು ಔರಂಗಜೇಬರು ಆಡಳಿತವನ್ನು ೧೭೦೭ ರವರೆಗೆ ನಡೆಸಿದರು. ಇವರುಗಳ ನಂತರ ಅಧಿಕಾರಕ್ಕೆ ಬಂದ ಚಕ್ರವರ್ತಿಗಳು ಅಸಮರ್ಥರಾಗಿದ್ದು ಮೊಗಲ್ ಸಾಮ್ರಾಜ್ಯ ಅವನತಿ ಹೊಂದಲು ಕಾರಣವಾದರು.

## ಮೊಗಲರ ಆಡಳಿತ

### ಕೇಂದ್ರ ಸರ್ಕಾರ

ಮೊಗಲರಲ್ಲಿ ಕೇಂದ್ರೀಕೃತ ಸರ್ಕಾರ ಜಾರಿಯಲ್ಲಿತ್ತು. ಇಲ್ಲಿ ರಾಜ ಅಥವಾ ಚಕ್ರವರ್ತಿಯೇ ಪ್ರಧಾನ. ಉಳಿದಂತೆ ಇತರೆ ಇಲಾಖೆಗಳು ಅವನ ಅಣತಿಯ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದವು. ವಿವರಿಸುವುದಾದರೆ-

### ಚಕ್ರವರ್ತಿ

ಬಾಬರನಿಗೆ ಸರ್ಕಾರವನ್ನು ವ್ಯವಸ್ಥಿತಗೊಳಿಸಲು ಅವಕಾಶವಾಗಲಿ ಸಮಯವಾಗಲಿ ದೊರೆಯಲಿಲ್ಲ ಮತ್ತು ಹುಮಾಯೂನನಿಗೆ ಅದರ ಬಗ್ಗೆ ಮನಸ್ಸಾಗಲಿ ಸಾಮರ್ಥ್ಯವಾಗಲಿ ಇರಲಿಲ್ಲ. ಶ್ರೇಷ್ಠ ಮಟ್ಟದ ರಾಜಕೀಯ ಸಾಮರ್ಥ್ಯ ಪಡೆದಿದ್ದ ಅಕ್ಬರನು ಕೆಲವು ಕ್ಷೇತ್ರಗಳಲ್ಲಿ

ಆಡಳಿತ ವ್ಯವಸ್ಥೆಯಲ್ಲಿ ಸೂರರ ಮಾದರಿಯನ್ನು ಅನುಸರಿಸಿದ್ದನು. ಮೊಗಲ್ ಸರ್ಕಾರ ಭಾರತೀಯ ಮತ್ತು ಹೆಚ್ಚಿನದಾಗಿ ಭಾರತೀಯ ಅಂಶಗಳ ಸಂಯೋಗವಾಗಿತ್ತು. ದೆಹಲಿಯ ಸುಲ್ತಾನರ ತತ್ವಗಳು ಮತ್ತು ಧ್ಯೇಯಗಳಿಗಿಂತ ಭಿನ್ನವಾದ ಮೊಗಲ್ ಆಡಳಿತ ಸ್ಥಾಪಿಸಿದವನು ಅಕ್ಬರ್. ಅಕ್ಬರನ ಕಾಲದಿಂದ ಚಕ್ರವರ್ತಿಯು ಭೂಮಿಯಲ್ಲಿನ ದೇವರ ಪ್ರತಿನಿಧಿಯೆಂದು ಪರಿಗಣಿಸಲ್ಪಟ್ಟನು. ಅಕ್ಬರನು ಜರೋಕಾದರ್ಶನ ಮತ್ತು ತುಲಾಧನ ಆಚರಣೆಗಳನ್ನು ಜಾರಿಗೆ ತಂದನು. ಜಾದುನಾಥ ಸರ್ಕಾರ್‌ರವರ ಪ್ರಕಾರ "ಅಕ್ಬರನ ಆಡಳಿತವು ಭಾರತೀಯ ಮತ್ತು ಭಾರತೀಯವಲ್ಲದ ಅಂಶಗಳ ಸಮ್ಮಿಶ್ರಣವಾಗಿತ್ತು". ಇವನದು ಪರ್ಶೋ-ಅರೆಬಿಕ್ ಆಡಳಿತ ಪದ್ಧತಿಯಾಗಿತ್ತು.

ಮೊಗಲ್ ಸರ್ಕಾರದ ಆಡಳಿತ ವ್ಯವಸ್ಥೆಯು ಕೇಂದ್ರೀಕೃತ ನಿರಂಕುಶ ಪ್ರಭುವಾಗಿದ್ದು ರಾಜ ಹೆಚ್ಚಿನ ಅಧಿಕಾರ ಪಡೆದಿದ್ದನು. ಅವನ ಮಾತೇ ಅಂತಿಮವಾಗಿತ್ತು ಮತ್ತು ಅವನ ನಿರ್ಧಾರವನ್ನು ಯಾರು ಪ್ರಶ್ನಿಸುವಂತಿರಲಿಲ್ಲ. ರಾಜ್ಯದಲ್ಲಿ ಅವನದು ಪರಮಾಧಿಕಾರ ವಾಗಿತ್ತು. ಅವನು ಸರ್ಕಾರದ ಮುಖ್ಯಸ್ಥ, ರಾಜ್ಯದ ಸೇನಾಪಡೆಗಳ ದಂಡನಾಯಕ, ನ್ಯಾಯದ ಮೂಲವಾಗಿದ್ದ ಮತ್ತು ಮುಖ್ಯಶಾಸನ ಕರ್ತೃವಾಗಿದ್ದ. ಮಂತ್ರಿಗಳ ಸಲಹೆ, ಸೂಚನೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರ ರಾಜನಿಗೆ ಸೇರಿದ ವಿಷಯ ವಾಗಿತ್ತು. ಮೊಗಲ್ ಚಕ್ರವರ್ತಿಯನ್ನು ಪಾದ್‌ಷಾ ಅಥವಾ ಬಾದ್‌ಷಾ ಎಂದು ಕರೆಯು ತ್ತಿದ್ದರು.

### ಮಂತ್ರಿಮಂಡಲ

ಚಕ್ರವರ್ತಿಗೆ ಸಹಕರಿಸಲು ಮಂತ್ರಿಮಂಡಲವಿದ್ದು ಅದರಲ್ಲಿ ಹಲವು ಮಂತ್ರಿಗಳಿರು ತ್ತಿದ್ದರು. ಅವರು ಚಕ್ರವರ್ತಿಗೆ ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಸಲಹೆ ನೀಡುತ್ತಿ ದ್ದರು. ಪ್ರತಿಯೊಬ್ಬ ಮಂತ್ರಿಯು ಒಂದೊಂದು ಇಲಾಖೆಯ ಮುಖ್ಯಸ್ಥನಾಗಿದ್ದು ಆ ಇಲಾಖೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಅಕ್ಬರನ ಕಾಲದಲ್ಲಿ ಕೇವಲ ನಾಲ್ಕು ಜನ ಮಂತ್ರಿಗಳಿದ್ದರು. ಅವರುಗಳೆಂದರೆ ವಕೀಲ್, ದಿವಾನ್ ಅಥವಾ ವಜೀರ್, ಮೀರ್‌ಭಕ್ಷಿ ಹಾಗೂ ಸದರ್-ಉಸ್-ಸದರ್. ತರುವಾಯದ ಕಾಲದಲ್ಲಿ ಖಾನ್-ಐ-ಸಮಾಸ್, ಮುಖ್ಯ ಖಾಜಿ ಮತ್ತು ಮುಹ್ತಸೀಬ್ ಹುದ್ದೆಗಳು ಮಂತ್ರಿಗಳ ಸ್ಥಾನಕ್ಕೆ ಏರಿಸಲ್ಪಟ್ಟವು. ವಕೀಲ್ ಮತ್ತು ದಿವಾನ್ ಅಥವಾ ವಜೀರ್ ಪದವಿಗಳನ್ನು ನಂತರ ಒಗ್ಗೂಡಿಸಿ ವಕೀಲ್-ಏ-ಮತ್ಲಖ್ (ವಜೀರ್) ಎಂಬ ಏಕವ್ಯಕ್ತಿಯ ಅಧೀನಕ್ಕೆ ನೀಡಲಾಯಿತು.

೧. **ವಕೀಲ್** (ಪ್ರಧಾನಮಂತ್ರಿ, ದಿವಾನ್, ವಜೀರ್): ಅಕ್ಬರನು ಈ ಹುದ್ದೆಯನ್ನು ಬೈರಾಂ ಖಾನನಿಗೆ ನೀಡಿದ್ದನು. ಈ ಹುದ್ದೆಯ ಸ್ಥಾನದಿಂದ ಅವನು ರಾಜ್ಯವನ್ನು ರಕ್ಷಿಸುವ, ಎಲ್ಲಾ ಮಂತ್ರಿಗಳ ಮುಖ್ಯಸ್ಥನಾಗಿ ಮತ್ತು ಅವರ ನೇಮಕಾತಿ ಹಾಗೂ ವಜಾ ಮಾಡುವ ಅಧಿಕಾರವನ್ನು ಹೊಂದಿದ್ದನು. ಬೈರಾಂಖಾನನ ಪತನದ ನಂತರ ಈ ಪದವಿಯನ್ನು

ಬೇರಾರಿಗೂ ನೀಡಲಿಲ್ಲ. ಪ್ರಧಾನಮಂತ್ರಿಯ ಕೆಲಸಗಳನ್ನು ದಿವಾನನಿಗೆ ನೀಡಲಾಯಿತು. ನಂತರ ದಿವಾನನೇ ವಜೀರ್ ಅಥವಾ ಪ್ರಧಾನಮಂತ್ರಿ ಎಂಬ ಹೆಸರನ್ನು ಪಡೆದನು. ದಿವಾನನು ಪ್ರಮುಖವಾಗಿ ರಾಜ್ಯದ ಆದಾಯ ಮತ್ತು ವೆಚ್ಚಗಳನ್ನು ನೋಡಿಕೊಳ್ಳಬೇಕಾಗಿತ್ತು. ಅಲ್ಲದೆ ಚಕ್ರವರ್ತಿಯು ರಾಜಧಾನಿಯಲ್ಲಿ ಇಲ್ಲದಿದ್ದಾಗ ಆಡಳಿತವನ್ನು ನೋಡಿಕೊಳ್ಳಬೇಕಾಗಿತ್ತು. ವಕೀಲ್ ಅಥವಾ ವಜೀರನು ಆಡಳಿತಾತ್ಮಕ ಕಾರ್ಯಗಳಲ್ಲಿ ಚಕ್ರವರ್ತಿಯ ನಂತರದ ಸ್ಥಾನದಲ್ಲಿದ್ದನು.

೨. **ಮೀರ್‌ಭಕ್ಷಿ:** ಇವನು ಸೈನಿಕ ಇಲಾಖೆಯನ್ನು ನೋಡಿಕೊಳ್ಳುವ ಮಂತ್ರಿಯಾಗಿದ್ದನು. ಇವನು ಸೈನ್ಯದ ನಾಯಕತ್ವವನ್ನು ವಹಿಸಬೇಕಿತ್ತು. ಸೈನಿಕರ ನೇಮಕಾತಿ, ಸೈನಿಕ ಚಹರೆ (ಹುಲಿಯ) ನೋಡಿಕೊಳ್ಳುವುದು, ಕುದುರೆಗಳಿಗೆ ದಾಗ್ (ಮುದ್ರೆ) ಹಾಕಿ ನೋಡಿಕೊಳ್ಳುವುದು ಮತ್ತು ಆನೆಗಳ ಲೆಕ್ಕ ಇಡುವುದು ಈತನ ಕೆಲಸವಾಗಿತ್ತು. ಅಲ್ಲದೆ ಸೇನೆಗೆ ಅಗತ್ಯವಸ್ತುಗಳ ಪೂರೈಕೆ, ಸೇನೆಗೆ ತರಬೇತಿ ನೀಡುವುದು ಇವನ ಕರ್ತವ್ಯವಾಗಿತ್ತು.

೩. **ಸದರ್-ಉಸ್-ಸದರ್** (ಮುಖ್ಯ ಸದರ್): ಇವನು ಚಕ್ರವರ್ತಿಗೆ ಧಾರ್ಮಿಕ ವಿಷಯ ಗಳಲ್ಲಿ ಸಲಹೆ ಸೂಚನೆಗಳನ್ನು ನೀಡುತ್ತಿದ್ದನು. ಇವನು ದಾನಧರ್ಮ, ಧಾರ್ಮಿಕ ಶಿಕ್ಷಣ, ಜಹಗೀರುಗಳನ್ನು ವಿದ್ವಾಂಸರಿಗೆ ಹಂಚುವ, ಮುಸ್ಲಿಮರು ಸಂಪ್ರದಾಯಗಳನ್ನು ಸರಿಯಾಗಿ ಆಚರಿಸುತ್ತಿದ್ದಾರೆಯೇ ಎಂಬುದರ ಬಗ್ಗೆಯೂ ನಿಗಾ ಇಡಬೇಕಾಗಿತ್ತು. ಇವನು ಪ್ರಾಂತೀಯ ಸದರ್‌ಗಳ ನೇಮಕಾತಿಯ ಬಗ್ಗೆ ಚಕ್ರವರ್ತಿಗೆ ಸಲಹೆ ನೀಡುತ್ತಿದ್ದನು ಹಾಗೂ ಅವರ ಕಾರ್ಯಗಳ ಮೇಲೆ ನಿಗಾ ಇಡುತ್ತಿದ್ದನು.

೪. **ಮುಖ್ಯಖಾಜಿ:** ಚಕ್ರವರ್ತಿಯೇ ನ್ಯಾಯಾಂಗದ ಉಚ್ಚ ವ್ಯಕ್ತಿಯಾಗಿದ್ದರೂ ಮುಖ್ಯ ಖಾಜಿಯು ರಾಜಧಾನಿಯ ನ್ಯಾಯಾಡಳಿತದಲ್ಲಿ ಇವನು ಚಕ್ರವರ್ತಿಗೆ ಸಹಕಾರ ನೀಡು ತ್ತಿದ್ದನು.

೫. **ಮುಹ್ತಸೀಬ್:** ಇವನು ಪ್ರಜೆಗಳು ಮೌಲ್ಯಯುತ ಜೀವನ ನಡೆಸುವಂತೆ ನೋಡಿ ಕೊಳ್ಳಬೇಕಾಗಿತ್ತು. ಅದರಲ್ಲೂ ಮುಸ್ಲಿಂ ಪ್ರಜೆಗಳು ಇಸ್ಲಾಂ ಕಾನೂನುಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿರುವರೇ ಎಂಬುದರ ಬಗ್ಗೆ ನಿಗಾ ಇಡಬೇಕಿತ್ತು. ಇವನು ಮಧ್ಯಪಾನ, ಜೂಜಾಡು ವುದು, ಸ್ತ್ರೀಪುರುಷರೊಂದಿಗಿನ ಅನೈತಿಕ ಸಂಬಂಧಗಳ ಬಗ್ಗೆಯೂ ನಿಗಾ ಇಡಬೇಕಿತ್ತು. ತೂಕ ಮತ್ತು ಅಳತೆಗಳ ಮೇಲೂ ನಿಗಾ ಇಡುತ್ತಿದ್ದನು.

### ಸರ್ಕಾರದ ಇಲಾಖೆಗಳು ಮತ್ತು ಪ್ರಧಾನ ಅಧಿಕಾರಿಗಳು

ಮೊಗಲ್ ಸಾಮ್ರಾಟರು ಸರ್ವತಂತ್ರ ಸ್ವತಂತ್ರಾಧಿಕಾರವನ್ನು ಹೊಂದಿದ್ದರೂ, ಸರ್ಕಾರದ ವ್ಯವಹಾರಗಳನ್ನು ನಡೆಸಿಕೊಂಡು ಹೋಗಲು ಅವರು ವಿವಿಧ ಇಲಾಖೆಗಳಲ್ಲಿ ಅನೇಕ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ರಾಜ್ಯದ ಮುಖ್ಯ ಇಲಾಖೆಗಳೆಂದರೆ

ಅ. ಖಾನ್-ಏ-ಸಾಮನ್‌ನ ನೇತೃತ್ವದಲ್ಲಿನ ಸಾಮ್ರಾಜ್ಯದ ಅಂಗರಕ್ಷಕ ಸಿಬ್ಬಂದಿ.

ಆ. ದಿವಾನನ ನಾಯಕತ್ವದಲ್ಲಿ ವರಮಾನ ಇಲಾಖೆ.

ಇ. ಮೀರ್‌ಭಕ್ಷಿಯ ನಾಯಕತ್ವದಲ್ಲಿ ಸೇನೆಯ ವೇತನ ಮತ್ತು ಲೆಕ್ಕಪತ್ರಗಳ ಕಾರ್ಯಾಲಯ.

ಈ. ಮುಖ್ಯಖಾಜಿಯ ನೇತೃತ್ವದಲ್ಲಿ ನ್ಯಾಯಾಂಗ

ಉ. ಮುಖ್ಯಸದರ್‌ನ ನಾಯಕತ್ವದಲ್ಲಿ ಧಾರ್ಮಿಕ ದತ್ತಿ ಮತ್ತು ದಾನಧರ್ಮದ ಇಲಾಖೆ.

ಇತರ ಕೆಳದರ್ಜೆಯ ಅಧಿಕಾರಿಗಳೆಂದರೆ ದರೋಗಾ-ಏ-ತೋಫ್‌ಖಾನ ಈತ ಫಿರಂಗಿ ದಳದ ಮುಖಂಡ, ಡಾಕ್ ಚೌಕಿಯ ದರೋಗ-ಪತ್ರವ್ಯವಹಾರ, ದರೋಗ- ಮೀರ್‌ಮಾಲ್-ಟಂಕಸಾಲೆ, ಮುಸ್ತೌಫಿ-ಮಹಾಲೆಖ್ಖ ಪರೀಕ್ಷಕ, ಮುಹ್ತಸೀಬ್-ರಕ್ಷಣೆ, ಹಜ್‌ಯಾತ್ರೆ, ಖಾಜಿ-ಉಲ್-ಖಾಜತ್-ನ್ಯಾಯಾಂಗಾಡಳಿತ ಮುಂತಾದ ಅಧಿಕಾರಿಗಳಿದ್ದರು.

**ಪ್ರಾಂತೀಯ ಸರ್ಕಾರ**

ಕ್ರಿ.ಶ. ೧೫೭೯-೧೫೮೦ ರಲ್ಲಿ ಅಕ್ಬರನು ತನ್ನ ಸಾಮ್ರಾಜ್ಯವನ್ನು ೧೨ ಪ್ರಾಂತ್ಯಗಳನ್ನಾಗಿ ವಿಭಜಿಸಿದ್ದನು. ಅವನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಈ ಸಂಖ್ಯೆ ೧೫ಕ್ಕೇರಿತು. ಜಹಾಂಗೀರನ ಕಾಲದಲ್ಲಿ ೧೭ಕ್ಕೂ ಮತ್ತು ಔರಂಗಜೇಬನ ಕಾಲದಲ್ಲಿ ೨೧ಕ್ಕೆ ಹೆಚ್ಚಿತು. ಮೊಗಲ್ ಸಾಮ್ರಾಜ್ಯದ ಪ್ರಾಂತ್ಯಗಳಲ್ಲಿ ಆಡಳಿತ ಕಾರ್ಯಭಂಗವು ಕೇಂದ್ರಸರ್ಕಾರದ ಯಥವತ್ತಾದ ಪ್ರತಿರೂಪವಾಗಿತ್ತು. ಸುಬೇದಾರ್, ದಿವಾನ್, ಭಕ್ಷಿ, ಫೌಜುದಾರ್, ಕೊತ್ವಾಲ್, ಖಾಜಿ, ಸದರ್, ಅಮಿಲ್, ಪೋತ್‌ದಾರ್ ಮತ್ತು ವಾಚ್-ಏ-ನಾವಿಸ್ ಮೊದಲಾದ ಅಧಿಕಾರಿಗಳಿಂದ ಕೂಡಿದ ಸಿಬ್ಬಂದಿ ವರ್ಗವೂ ಇದ್ದಿತು.

**ಪ್ರಾಂತೀಯ ಮುಖ್ಯಾಧಿಕಾರಿಗಳು**

ಮೊಗಲರ ಪ್ರಾತೀಯ ಆಡಳಿತವು ವಿಭಿನ್ನ ಆಡಳಿತ ಘಟಕಗಳಿಂದ ಕೂಡಿತ್ತು. ಪ್ರತಿಯೊಂದು ಇಲಾಖೆಗೂ ಇಲಾಖಾ ಮುಖ್ಯಸ್ಥರು ಇರುತ್ತಿದ್ದರು. ಅವರುಗಳೆಂದರೆ-

೧. **ಸುಬೇದಾರ್:** ಇವನು ಪ್ರಾಂತೀಯ ಆಡಳಿತದ ಮುಖ್ಯಸ್ಥನಾಗಿದ್ದನು. ಇವನು ಪ್ರಾಂತ್ಯಗಳಲ್ಲಿ ರಾಜನಂತೆಯೇ ಇದ್ದನು. ಇವನು ರಾಜ್ಯದಲ್ಲಿ ಉನ್ನತ ಮನ್ಸಬ್ದಾರನಾಗಿದ್ದನು. ಇವನಿಗೆ ಪ್ರಾಂತ್ಯದಲ್ಲಿ ಜಹಗೀರನ್ನು ನೀಡಲಾಗುತ್ತಿತ್ತು. ಪ್ರಾಂತ್ಯದಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡುವುದು, ದಂಗೆಗಳ ದಮನ, ಅಪರಾಧಗಳ ತೀರ್ಮಾನ, ಸಾರ್ವಜನಿಕ ಕೆಲಸ ಕಾರ್ಯಗಳು, ಆಶ್ರಿತ ರಾಜರಿಂದ ಕಪ್ಪಕಾಣಿಕೆ ವಸೂಲಿ, ಕಂದಾಯ, ತೆರಿಗೆ ವಸೂಲಿ ಮೊದಲಾದವು ಇವನ ಕರ್ತವ್ಯಗಳಾಗಿದ್ದವು.

೨. ದಿವಾನ್: ಇವನು ಪ್ರಾಂತ್ಯದ ಹಣಕಾಸು ಅಧಿಕಾರಿ. ಇವನು ಸುಬೇದಾರನಿಗೆ ಅಧೀನನಾಗಿರದೆ ನೇರವಾಗಿ ಕೇಂದ್ರದ ವಜೀರನಿಗೆ ಅಧೀನನಾಗಿರುತ್ತಿದ್ದನು. ಕೃಷಿ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದನು.

೩. ಭಕ್ಷಿ: ಇವನು ಪ್ರಾಂತ್ಯದ ಸೈನ್ಯದ ಮೇಲ್ವಿಚಾರಕ. ಪ್ರಾಂತೀಯ ಸೈನಿಕರ ನೇಮಕಾತಿ, ಶಿಸ್ತು, ತರಬೇತಿ, ಸೇನೆಯ ಅವಶ್ಯಕತೆಗಳ ಪೂರೈಕೆ ಮುಂತಾದವು ಈತನ ಕರ್ತವ್ಯಗಳಾಗಿದ್ದವು.

೪. ವಖಾಯನವಿಸ್: ಇವನು ಪ್ರಾಂತ್ಯದ ಗೂಢಚಾರ ಇಲಾಖೆಯ ಮುಖ್ಯಸ್ಥ.

೫. ಕೊತ್ವಾಲ: ಪ್ರತಿಯೊಂದು ಪ್ರಾಂತ್ಯದ ರಾಜಧಾನಿ ಮತ್ತು ಮುಖ್ಯ ನಗರಗಳಲ್ಲಿ ಒಬ್ಬೊಬ್ಬ ಕೊತ್ವಾಲನಿದ್ದು, ನಗರದಲ್ಲಿನ ಸಾಮಾನ್ಯಡಳಿತದ ಮುಖ್ಯಸ್ಥನಾಗಿದ್ದನು.

೬. ಸದರ್ ಮತ್ತು ಖಾಜಿ: ಪ್ರಾಂತ್ಯಗಳಲ್ಲಿ ಈ ಎರಡೂ ಹುದ್ದೆಗಳನ್ನು ಒಬ್ಬನೆ ಅಧಿಕಾರಿಗೆ ವಹಿಸಲಾಗುತ್ತಿತ್ತು. ಮುಸ್ಲಿಮರು ಇಸ್ಲಾಮ್ ಕಾಯಿದೆ ಕಟ್ಟಲೆಗಳನ್ನು ಅನುಸರಿಸು ವಂತೆ ಮಾಡುವುದು ಮತ್ತು ನ್ಯಾಯಾದಾನ ಮಾಡುವುದು ಇವನ ಕರ್ತವ್ಯ.

### ಸರ್ಕಾರ್ (ಜಿಲ್ಲೆ)

ಪ್ರತಿಯೊಂದು ಪ್ರಾಂತ ಅಥವಾ ಸುಭಾವು ಅನೇಕ ಸರ್ಕಾರ್ ಅಥವಾ ಜಿಲ್ಲೆಗಳಾಗಿ ಆಡಳಿತದ ಅನುಕೂಲಕ್ಕಾಗಿ ವಿಂಗಡನೆಯಾಗಿದ್ದವು. ಫೌಜುದಾರ್ ಇದರ ಮುಖ್ಯಸ್ಥ ನಾಗಿದ್ದನು. ಇವನ ಕರ್ತವ್ಯಗಳೆಂದರೆ ಜಿಲ್ಲೆಯಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡುವುದು, ಪ್ರಜೆಗಳಿಗೆ ರಕ್ಷಣೆ ಒದಗಿಸುವುದು ಮತ್ತು ರಾಜ್ಯದ ಕಾನೂನುಗಳನ್ನು ಅನುಷ್ಠಾನಕ್ಕೆ ತರುವುದು. ಇವನ ಅಧೀನ ಅಧಿಕಾರಿಗಳೆಂದರೆ ಅಮಲ್ ಗುಜಾರ್ (ಹಣಕಾಸು), ಬಿಟಿಕ್ಚಿ, ಖಜಾಂದಾರ್ ಮೊದಲಾದವರು.

### ಪರಗಣ (ಮಹಲ್)

ಪ್ರತಿಯೊಂದು ಸರ್ಕಾರವೂ ಪರಗಣಗಳಾಗಿ ವಿಂಗಡಣೆಗೊಂಡಿತ್ತು. ಇವನಿಗೆ ಸಹಾಯಕ ರಾಗಿ ಶಿಕ್ದಾರ್, ಅಮಿರ್, ಪೋತ್‌ದಾರ್, ಕನ್ನುಂಗೊ ಎಂಬ ಖಾರಕೂನರಿದ್ದರು.

ಮೊಗಲರು ಗ್ರಾಮಾಡಳಿತದ ಜವಾಬ್ದಾರಿಯನ್ನು ಹೊಂದಿರಲಿಲ್ಲ. ಹಾಗಾಗಿ ಗ್ರಾಮದ ಆಡಳಿತವು ಸ್ಥಳೀಯ ಗ್ರಾಮದ ಪಂಚಾಯ್ತಿಯ ಅಧೀನದಲ್ಲಿತ್ತು.

### ಸೈನ್ಯಾಡಳಿತ

ರಾಜ್ಯದಲ್ಲಿ ಖಾಯಂ ಸೈನ್ಯದ ನಿರ್ವಹಣೆಯಿರಲಿಲ್ಲ. ಆದರೆ ತಾತ್ವಿಕವಾಗಿ ಸಾಮ್ರಾಜ್ಯ ದಲ್ಲಿನ ದೈಹಿಕವಾಗಿ ಸಮರ್ಥರಾಗಿದ್ದ ವ್ಯಕ್ತಿಗಳೆಲ್ಲರೂ ಸಾಮ್ರಾಟನ ಸೇನೆಯ ಸೈನಿಕರಾಗಿ ದ್ದರು. ಮೊಗಲ್ ಸೇನೆಯ ಇತಿಹಾಸ ಹೆಚ್ಚಿನ ಮಟ್ಟಿಗೆ ಮನ್ಸಬ್ದಾರಿ ವ್ಯವಸ್ಥೆಯ ಇತಿಹಾಸವೇ ಆಗಿದೆ. ಮನ್ಸಬ್ದಾರರ ಜೊತೆಗೆ ರಾಜ್ಯದಿಂದ ವೇತನ ನೀಡಲಾಗುತ್ತಿದ್ದ ಮನ್ಸಬ್‌ದಾರರ ನಾಯಕತ್ವದಲ್ಲಿದ್ದ ದಾಖಲೀಗಳು ಅಥವಾ ಪೂರಕ ಸೈನಿಕರಿರುತ್ತಿದ್ದರು. ಮೊಗಲ್ ಸೇನೆ ಅಶ್ವಪಡೆ, ಕಾಲ್ದಳ, ಫಿರಂಗಿದಳ, ನೌಕಾಪಡೆಗಳಿಂದ ಕೂಡಿತ್ತು.

ಮನ್ಸಬ್ದಾರಿ ಪದ್ಧತಿ: ಮನ್ಸಬ್ದಾರಿ ಪದ್ಧತಿಯೆಂದರೆ ಸೈನಿಕ ಶ್ರೀಮಂತ ಪ್ರಭುತ್ವ ಎನ್ನಬಹುದು ಅಥವಾ ಸೈನಿಕ ದರ್ಜೆ, ಹುದ್ದೆ ಎಂತಲೂ ಕರೆಯಬಹುದು. 'ಮನ್ಸಬ್'

ಎಂದರೆ 'ಶ್ರೇಣಿ' ಅಥವಾ 'ದರ್ಜೆ' ಎಂದರ್ಥ. 'ಮನ್ಸಬ್ದಾರಿ' ಎಂದರೆ ಸೇನೆ, ಶ್ರೀಮಂತ ಪದವಿ, ಸಾರ್ವಜನಿಕ ಆಡಳಿತ ಇವೆಲ್ಲ ಒಂದರಲ್ಲೇ ಸೇರಿದಂತಾಗಿತ್ತು. ಅಕ್ಬರನು ಮೊದಲು ಅಸ್ತಿತ್ವದಲ್ಲಿದ್ದ ಈ ಸೈನಿಕ ಪದ್ಧತಿಯನ್ನು ತನ್ನ ಸೈನ್ಯದಲ್ಲೂ ಅಳವಡಿಸಿ ಕಾಲ್ದಳ, ಗಜದಳ, ಅಶ್ವದಳ ಸೈನಿಕರ ಜವಾಬ್ದಾರಿಯನ್ನು ಈ 'ಮನ್ಸಬ್‌ದಾರ್' ಹುದ್ದೆ ಹೊಂದಿರುವಂತೆ ಮಾಡಿದನು. ಮನ್ಸಬ್ದಾರರನ್ನು ರಾಜನೇ ನೇಮಿಸುತ್ತಿದ್ದ, ಬಡ್ತಿ ನೀಡುತ್ತಿದ್ದ ಹಾಗೂ ಯಾವಾಗ ಬೇಕಾದರೂ ವಜಾಮಾಡಬಹುದಿತ್ತು. ಮನ್ಸಬ್ದಾರರು ದೇಶದ ಅಧಿಕಾರದ ಕುಲೀನ ವರ್ಗದವರಾಗಿದ್ದರು. ಅಕ್ಬರನು ತನ್ನ ಈ ಅಧಿಕಾರ ವರ್ಗದವರನ್ನು ೧೦ ರ ನಾಯಕನಿಂದ ೧೦,೦೦೦ ನಾಯಕನವರೆವಿಗೆ ೩೩ ದರ್ಜೆಗಳನ್ನಾಗಿ ವಿಂಗಡಿಸಿದ್ದ ಇದನ್ನು ಹಜಾರಿ ದರ್ಜೆ ಎಂಬುದಾಗಿಯೂ ಕರೆಯಲಾಗುತ್ತಿತ್ತು. ಈತನ ಆಳ್ವಿಕೆಯ ಮಧ್ಯಭಾಗದ ವರೆಗೂ ಒಬ್ಬ ಸಾಮಾನ್ಯ ಅಧಿಕಾರಿ ಪಡೆದಿರಬಹುದಾದ ಅತ್ಯುನ್ನತ ದರ್ಜೆಯೆಂದರೆ ೫,೦೦೦ ದ (ಪ್ರಾಂಚ್ ಹಜಾರಿ) ನಾಯಕತ್ವವಾಗಿತ್ತು. ಇದಕ್ಕೂ ಹೆಚ್ಚಿನ ಅಂದರೆ ೭,೦೦೦ ದಿಂದ ೧೦,೦೦೦ ದವರೆಗಿನ ಉನ್ನತ ಅಧಿಕಾರಿಗಳು ರಾಜಕುಟುಂಬದ ಸದಸ್ಯರಿಗೆ ಮಾತ್ರ ಮೀಸಲಾಗಿತ್ತು.

ಜಹಾಂಗೀರ್ ಮತ್ತು ಷಹಜಹಾನನ ಕಾಲದಲ್ಲಿ ಅಧಿಕಾರಿಗಳಿಗೆ ೮೦೦೦ ಸಂಖ್ಯೆಯ ಮನ್ಸಬ್‌ದಾರ್ ಹುದ್ದೆಯನ್ನು ಮತ್ತು ರಾಜಕುಮಾರರಿಗೆ ೪೦,೦೦೦ ಮನ್ಸಬ್‌ದಾರ್‌ಗಿರಿಯನ್ನು ಕೊಡಲಾಗುತ್ತಿತ್ತು. ನಂತರದ ಮೊಗಲರ ಕಾಲದಲ್ಲಿ ೫,೦೦೦ ಮನ್ಸಬ್ದಾರ ಹುದ್ದೆಯನ್ನು ಕೊಡಲಾರಂಭಿಸಿದರು.

**ಹೆಚ್ಚಿನ ವಿಷಯ**

[**ಅ. ಮನ್ಸಬ್ದಾರರ ವರ್ಗೀಕರಣ:** ಮನ್ಸಬ್ದಾರರು ಶ್ರೀಮಂತ ವರ್ಗಕ್ಕೆ ಸೇರಿದವ ರಾಗಿದ್ದರು. ಮೊಗಲರ ಈ ಶ್ರೀಮಂತ ಪ್ರಭುತ್ವದಲ್ಲಿ ೪ ವರ್ಗಗಳನ್ನು ಕಾಣಬಹುದು. ಮೊದಲನೆಯ ದರ್ಜೆಯಲ್ಲಿ ರಾಜಕುಮಾರರು, ಎರಡನೆಯ ದರ್ಜೆಯಲ್ಲಿ ನೋಬಲ್ಲರು, ಮೂರನೆಯ ದರ್ಜೆಯಲ್ಲಿ ಸವಾರರು, ನಾಲ್ಕನೇ ದರ್ಜೆಯಲ್ಲಿ ಮನ್ಸಬ್ದಾರರು ಬರುತ್ತಿದ್ದರು. ೫೦೦ ಕ್ಕೂ ಕೆಳಗಿನ ಮನ್ಸಬ್ದಾರರ ಅಧಿಕಾರಿಗಳೆಲ್ಲರನ್ನು ಮನ್ಸಬ್ದಾರರೆಂದು, ೫೦೦ ರಿಂದ ೨,೫೦೦ ಮನ್ಸಬ್ ಅಧಿಕಾರವನ್ನು ಹೊಂದಿದ ಅಧಿಕಾರವನ್ನು ಅಮೀರನೆಂದು, ೨,೫೦೦ಕ್ಕೂ ಹೆಚ್ಚು ಮನ್ಸಬ್ ಅಧಿಕಾರವನ್ನು ಹೊಂದಿದವನನ್ನು ಖಾನ್-ಏ-ಜಹಾನನೆಂದು, ಸೈನ್ಯದ ಅತಿಹೆಚ್ಚು ಸಂಖ್ಯೆಯ ಮನ್ಸಬ್‌ನನ್ನು ಖಾನ್-ಏ-ಖಾನಾ ಎಂದೂ ಕರೆಯಲಾಗುತ್ತಿತ್ತು.

**ಆ. ಮನ್ಸಬ್‌ದಾರರ ವೇತನ ಮತ್ತು ದರ್ಜೆ:** ಮೊದಲನೆಯ ವರ್ಗದ ಮನ್ಸಬ್‌ದಾರರು ಸವಾರ್ ದರ್ಜೆಗೆ ಸಮಾನವಾಗಿದ್ದು ಇವರು ೭೦೦ ರೂ.ಗಳಷ್ಟು ವೇತನ ಪಡೆಯುತ್ತಿದ್ದರು. ೨ನೆ ದರ್ಜೆಯವರು ೫೮೦ರಿಂದ ೬೮೦ ರೂ.ಗಳನ್ನು, ೩ನೆ ದರ್ಜೆಯವರು ೫೦೦ ರಿಂದ ೫೮೦ ರೂ.ಗಳಷ್ಟು ವೇತನವನ್ನು ಪಡೆಯುತ್ತಿದ್ದರು. ಸವಾರ್ ದರ್ಜೆಯು ಜಾಟ್ ದರ್ಜೆಗಿಂತ ಕಡಿಮೆಯಾಗಿತ್ತು. ಇದು ಮನ್ಸಬ್ದಾರರು ನಿಜವಾಗಿಯೂ ಹೊಂದಿರಬೇಕಾದ ಕುದುರೆ ಸವಾರರ

ಪಟ್ಟಿಯನ್ನು ನಿರ್ಧರಿಸುತ್ತಿತ್ತು. ಜಾಟ್ ದರ್ಜೆಯು ಮನ್ಸಬ್ದಾರರು ಇಟ್ಟುಕೊಳ್ಳ ಬೇಕಾದ ಕುದುರೆಗಳು, ಆನೆಗಳು, ಭಾರ ಹೊರುವ ಪ್ರಾಣಿಗಳು ಮತ್ತು ಇವುಗಳ ಸಂಖ್ಯೆಯನ್ನು ಸೂಚಿಸುತ್ತಿತ್ತು. ಸೈನಿಕ ದಳಗಳ ದಾಖಲೆ ಮತ್ತು ಲೆಕ್ಕವಿಡುವ ಕ್ರಮಗಳಿದ್ದಾಗ್ಯೂ ಎಲ್ಲೋ ಕೆಲವು ಮನ್ಸಬ್‌ದಾರರು ಮಾತ್ರ ತಾವು ಸ್ವೀಕರಿಸುತ್ತಿದ್ದ ವೇತನದ ಪ್ರಮಾಣಕ್ಕನುಗುಣವಾಗಿ ಅಶ್ವ ಸೈನಿಕರನ್ನು ಇಟ್ಟುಕೊಳ್ಳುತ್ತಿದ್ದರು. ಈ ರೀತಿಯಾಗಿ ವಿಂಗಡಿಸಲ್ಪಟ್ಟ ಮನ್ಸಬ್ದಾರರು ರಾಜನಿಗೆ ಯುದ್ಧದ ಸಮಯದಲ್ಲಿ ಅಥವಾ ನಿರ್ಧಿಷ್ಟ ವೇಳೆಯಲ್ಲಿ ಆತನ ಆಜ್ಞೆಯ ಮೇರೆಗೆ ತಮ್ಮ ಸೈನಿಕ ಶಕ್ತಿಯನ್ನು ಕಳುಹಿಸಿಕೊಡಬೇಕಾಗಿತ್ತು. ಮನ್ಸಬ್‌ದಾರರಿಗೆ ವೇತನವನ್ನು ನಗದು ರೂಪದಲ್ಲಿ ನೀಡಲಾಗುತ್ತಿತ್ತು. ಆದರೆ ಅವರಿಗೆ ಜಹಗೀರನ್ನು ನೀಡಿದಾಗ ಆ ಜಹಗೀರಿನ ಕಂದಾಯ ವಸೂಲಾತಿಯ ಹಕ್ಕನ್ನು ನೀಡಿ, ಅದನ್ನು ಕೇಂದ್ರದ ಕಂದಾಯ ಅಧಿಕಾರಿಗಳು ಸಂಗ್ರಹಿಸಿ ಆ ಮನ್ಸಬ್‌ದಾರನಿಗೆ ಸಲ್ಲಿಸುತ್ತಿದ್ದರು. ಆದರೆ ಅವನ ವೇತನವನ್ನು ಆ ಹಣ ಕಡಿತಗೊಳಿಸಲಾಗುತ್ತಿತ್ತು. ಮನ್ಸಬ್‌ದಾರರಿಗೆ ವರ್ಷದ ೧೨ ತಿಂಗಳ ವೇತನವನ್ನು ಒಮ್ಮೆಗೆ ನೀಡಲಾಗುತ್ತಿತ್ತು. ಆ ಮನ್ಸಬ್‌ದಾರರಿಗೆ ತನ್ನ ವೇತನದಲ್ಲಿ ತನ್ನ ಅಧೀನ ನೀಡಲಾಗುತ್ತಿತ್ತು. ಮನ್ಸಬ್ದಾರರ ಹುದ್ದೆ ಅನುವಂಶಿಕವಾಗಿರಲಿಲ್ಲವಾದ್ದರಿಂದ ಅವರು ಭೋಗ ಜೀವನವನ್ನು ನಡೆಸುತ್ತಿದ್ದರು. ಮನ್ಸಬ್ದಾರರನ್ನು ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ವರ್ಗಾವಣೆ ಮಾಡುವ ಅವಕಾಶ ಗಳಿದ್ದವು. ಉನ್ನತ ಸಾಧನೆಗಳನ್ನು ಮಾಡಿದ ಮನ್ಸಬ್ದಾರರಿಗೆ ಬಡ್ತಿ ನೀಡುವ ಹಾಗೆ ಸಾಧನೆಗಳಿಲ್ಲದವರಿಗೆ ಹಿಂಬಡ್ತಿಯನ್ನು ನೀಡುತ್ತಿದ್ದರು. ಮನ್ಸಬ್ದಾರನ ಮರಣಾನಂತರ ಅವನ ಆಸ್ತಿ ರಾಜನಿಗೆ ಸೇರುತ್ತಿತ್ತು. ಕ್ರಿ.ಶ. ೧೫೫೫ ರ ವೇಳೆಗೆ ೭೦%ರಷ್ಟು ಮನ್ಸಬ್ದಾರರು ವಿದೇಶಿಯರು, ೧೫% ರಷ್ಟು ಭಾರತೀಯರು ಮನ್ಸಬ್ದಾರರಾಗಿದ್ದರೆಂದು *ಐನ್-ಎ-ಅಕ್ಬರಿಯಿಂದ* ತಿಳಿದುಬರುತ್ತದೆ. ವರ್ಷಕ್ಕೊಮ್ಮೆ ಸೈನಿಕ ಕುದುರೆಗಳ ಗಣತಿ ಮತ್ತು ಪರಿಶೀಲನೆ ನಡೆಯುತ್ತಿತ್ತು.

೪. **ಮನ್ಸಬ್ದಾರಿ ಪದ್ಧತಿಯ ದೋಷಗಳು:** ೧. ಸೈನ್ಯವನ್ನು ಮನ್ಸಬ್ದಾರರಿಗೆ ಅನುಗುಣವಾಗಿ ವಿಭಜಿಸಿದ್ದರಿಂದ ಸೈನಿಕರು ಅವರ ಮನ್ಸಬ್ದಾರರಿಗೆ ವಿಧೇಯರಾಗಿದ್ದರೇ ಹೊರತು ಸಾಮ್ರಾಟನಿಗಲ್ಲ.

೨. ಮನ್ಸಬ್ದಾರರೇ ಸೈನಿಕರ ನೇಮಕ ಮತ್ತು ವೇತನಗಳನ್ನು ನೀಡುವ ಅಧಿಕಾರವನ್ನು ಹೊಂದಿದ್ದರಿಂದ ಭ್ರಷ್ಟಾಚಾರಕ್ಕೆ ಎಡೆಯಾಗಿತ್ತು.

೩. ಏಕತೆ ರೂಢಿಸುವ ಅಂಶವಿರಲಿಲ್ಲ. ಅದರ ವೈವಿಧ್ಯತೆಯೇ ಕಾರಣವಾಗಿ ರಾಷ್ಟ್ರೀಯ ಸೈನ್ಯದ ನಿರ್ಮಾಣ ಅಸಾಧ್ಯವಾಗಿತ್ತು.

೪. ಮನ್ಸಬ್ದಾರರ ಸೈನ್ಯದ ವಿಭಾಗಗಳಲ್ಲಿ ತರಬೇತಿ, ಶಿಸ್ತು, ಶಸ್ತ್ರಾಸ್ತ್ರಗಳು ಮತ್ತು ಸಾಮರ್ಥ್ಯ ಗಳಲ್ಲಿ ಏಕತೆ ಇರಲಿಲ್ಲ.

೫. ಮನ್ಸಬ್ದಾರರ ವೈಭವ, ವಿಲಾಸಗಳು ಮತ್ತು ವೈಯಕ್ತಿಕ ಜೀವನಗಳು ಸೈನ್ಯದ ಸಾಮರ್ಥ್ಯದ ಮೇಲೆ ಹೆಚ್ಚು ಪ್ರಭಾವ ಬೀರಿದ್ದವು.

೬. ಸೈನ್ಯದ ಶಿಬಿರಗಳಲ್ಲಿ ವ್ಯಾಪಾರಿಗಳು, ಗುಲಾಮರು, ನೃತ್ಯಗಾರ್ತಿಯರು, ವಾದ್ಯಮೇಳ ದವರಿದ್ದರಿಂದ ಶಿಸ್ತಿಗೆ ಭಂಗವಾಗಿತ್ತು.

೭. ಅಕ್ಬರನ ಫಿರಂಗಿ ಪಡೆ ಅಶಕ್ತವಾಗಿದ್ದಿತು.

೮.ಸೈನ್ಯ ಹಲವು ರಾಷ್ಟ್ರೀಯರಿಂದ ಕೂಡಿದ್ದು ೨/೮ ಭಾಗ ವಿದೇಶಿಯರಿದ್ದು, ಅವರಲ್ಲಿ ರಾಷ್ಟ್ರಪ್ರೇಮವಿರಲಿಲ್ಲ.

೯.ಬಾದಷಹ ಮತ್ತು ಸೈನಿಕರ ನಡುವೆ ನೇರ ಸಂಪರ್ಕವಿರಲಿಲ್ಲ.

೧೦.ಹುಸಿ ಹಾಜರಿಯು ಹೆಚ್ಚಾಗಿತ್ತು.

೧೧.ಮನ್ಸಬ್ದಾರರು ದುಂದುವೆಚ್ಚ ಮಾಡುತ್ತಿದ್ದ ಭೋಗವಿಲಾಸಿಗಳಾಗಿದ್ದರು.

೧೨.ಕೇಂದ್ರ ಮತ್ತು ಸ್ಥಳೀಯ ಸರ್ಕಾರದ ಐಕ್ಯತೆಯ ಅಭಾವ ಹೆಚ್ಚಾಗಿತ್ತು.

೧೩.ಮನ್ಸಬ್ದಾರರನ್ನು ವಿದ್ಯೆ, ದಕ್ಷತೆ ಮೊದಲಾದ ಅರ್ಹತೆಯ ಆಧಾರದ ಮೇಲೆ ಆರಿಸುತ್ತಿರಲಿಲ್ಲ. ಆದ್ದರಿಂದ ಇದು ಆಡಳಿತ ಕುಸಿತಕ್ಕೆ ಕಾರಣವಾಯಿತು.

೧೪. ಹುದ್ದೆಗೆ ಸೇವಾ ನಿಯಮ ಮತ್ತು ಸೇವಾ ಭದ್ರತೆಗಳಿರಲಿಲ್ಲ.]

**ಕಂದಾಯ ಆಡಳಿತ**

ಮೊಗಲ್ ಸಾಮ್ರಾಜ್ಯದ ಭೂ ಕಂದಾಯ ನೀತಿಯು ಹೆಚ್ಚಾಗಿ ಷೇರ್‌ಷಾನ ಭೂ ಕಂದಾಯದ ತಳಪಾಯದ ಮೇಲೆ ನಿಂತಿದ್ದಿತೆನ್ನಬಹುದು. ಅಕ್ಬರನು ಅಧಿಕಾರ ರೂಢನಾದಾಗ ಷೇರ್‌ಷಾನ ಕಾಲದಲ್ಲಿದ್ದ ಭೂಕಂದಾಯದ ವಿಧಾನವನ್ನು ಅನುಸರಿಸಿ ಭೂಮಿಯನ್ನು ವರ್ಗೀಕರಿಸಿ ಕಂದಾಯವನ್ನು ಸಂಪೂರ್ಣವಾಗಿ ರಾಜ್ಯದ ಆದಾಯದ ಮೂಲವಾಗುವಂತೆ ಮಾಡಿದನು. ರಾಜಾ ತೋದರಮಲ್ಲನನ್ನು ಭೂಕಂದಾಯ ಮಂತ್ರಿಯನ್ನಾಗಿ ನೇಮಿಸಿದ್ದ. ತೋದರಮಲ್ಲನು ಜಮೀನನ್ನು ಸರಿಯಾದ ಸರ್ವೇಕ್ಷಣೆಗೆ ಗುರಿಪಡಿಸಿ ಜಮೀನಿನ ವಿಸ್ತೀರ್ಣ ಹಾಗೂ ಗುಣಮಟ್ಟಕ್ಕೆ ತಕ್ಕಂತೆ ಕಂದಾಯ ವಿಧಿಸಿದನು. ಅಕ್ಬರ್ ಇಡೀ ಸಾಮ್ರಾಜ್ಯವನ್ನು ಹಲವಾರು ಘಟಕಗಳಾಗಿ ವಿಭಾಗಿಸಿ ಪ್ರತಿಯೊಂದು ಘಟಕವನ್ನು 'ಕ್ರೋರಿ' ಎಂಬ ಅಧಿಕಾರಿಯ ಮೇಲ್ವಿಚಾರಣೆಗೆ ವಹಿಸಿದ. ಕಂದಾಯ ವಸೂಲಿ ಮತ್ತು ಕೃಷಿಗೆ ಪ್ರೋತ್ಸಾಹ ನೀಡುವುದೇ ಆತನ ಕೆಲಸವಾಗಿತ್ತು.

ರಾಜಾ ತೋದರಮಲ್ ಭೂಮಿಯನ್ನು ವರ್ಗೀಕರಿಸಿ ಕಂದಾಯ ಸಂಗ್ರಹಣೆಯ ಒಂದು ನೀತಿಯನ್ನು ೧೫೮೩ರಲ್ಲಿ ಜಾರಿಗೆ ತರಲಾಯಿತು. ಈ ಹೊಸ ಪದ್ಧತಿಯಲ್ಲಿ ಮೂರು ಕಂದಾಯ ಪದ್ಧತಿಗಳನ್ನು ಜಾರಿಗೆ ತಂದವು. ಅವುಗಳು ಕೆಳಕಂಡಂತಿವೆ.

**ಅ. ಗಲ್ಲಾಭಕ್ಷ್ ಅಥವಾ ಬಟಾಯ್ ಪದ್ಧತಿ:** ಈ ಕಂದಾಯ ಪದ್ಧತಿ ಸಿಂಧ್, ಗುಜರಾತ್, ಕಾಬೂಲ್, ತಟ್ಟ ಮತ್ತು ಕಾಶ್ಮೀರಗಳಲ್ಲಿ ಜಾರಿಯಲ್ಲಿತ್ತು. ಬಟಾಯ್‌ನ್ನು ೩ ಭಾಗಗಳಾಗಿ ವಿಂಗಡಿಸಲಾಗಿತ್ತು. ಬೆಳೆಗಳ ವಿಭಾಗದ ಮೇಲೆ ಕಂದಾಯ ನಿರ್ಧರಿಸಲಾಗುತ್ತಿತ್ತು. ಆ ಮೂರು ವಿಭಾಗಗಳೆಂದರೆ:

ಅ. ಕೀತ್‌ಬಟಾಯ್ - ಸುಗ್ಗಿ ಆಗುವುದಕ್ಕಿಂತ ಮುಂಚೆ ಸರ್ಕಾರ ಕಂದಾಯ ನಿಗಧಿ ಪಡಿಸುತ್ತಿತ್ತು.

ಬ. ಲಾಂಗ್ ಬಟಾಯ್ - ಬೆಳೆಯ ಹೊಟ್ಟು, ಸಿಪ್ಪೆ ತೆಗೆಯುವುದಕ್ಕಿಂತ ಮೊದಲು ಕಂದಾಯ ನಿಗಧಿಪಡಿಸುವುದು.

ಕ. ರಾಸಿ ಬಟಾಯ್ - ಸುಗ್ಗಿ ಆದ ನಂತರ ಹೊಟ್ಟು, ಸಿಪ್ಪೆ ಬೇರೆಯಾಗಿ ವಿಂಗಡಿಸಿದ ಮೇಲೆ ತೆರಿಗೆ ನಿಗಧಿಪಡಿಸಲಾಗುತ್ತಿತ್ತು.

**ಆ. ನಸ್ಟ್** (ಅಂದಾಜ ಪದ್ಧತಿ): ಬಂಗಾಳದಲ್ಲಿ ಜಾರಿಯಲ್ಲಿತ್ತು. ಭೂಮಿಯನ್ನು ಅನುಭವಿಸುವವರಿಗೂ ಮತ್ತು ಸರ್ಕಾರಕ್ಕೂ ನಡುವೆ ನಿಗಧಿಯಾದ ಕಂದಾಯಕ್ಕೆ ನಸ್ಟ್ ಎಂದು ಹೆಸರು. ಕನ್ನುಂಗೋ ಅಧಿಕಾರಿಗಳು ಸಿದ್ಧಪಡಿಸಿದ್ದ ಲೆಕ್ಕಪತ್ರವನ್ನು ಸಂಗ್ರಹಿಸಿ ಕೆಲವು ಪ್ರದೇಶಗಳಿಗೆ ಭೇಟಿ ನೀಡಿ ನಂತರ ಈ ಪದ್ಧತಿ ಜಾರಿಗೊಳಿಸಲಾಯಿತು. ಇದು ಜಮೀನ್ದಾರಿ ಪದ್ಧತಿಯನ್ನು ಹೋಲುತ್ತಿತ್ತು. ಸುಗ್ಗಿಯ ಕಾಲದಲ್ಲಿ ಅಧಿಕಾರಿಗಳು ಸಂಚರಿಸಿ ಹಳ್ಳಿಗಳಲ್ಲಿ 'ಪಟ್ಟ' ಅಂಕಿಅಂಶವನ್ನು ತಯಾರಿಸುತ್ತಿದ್ದರು. ಬೆಳೆ ಕೊಯ್ಯುವ ಸಮಯದಲ್ಲಿ ಕಂದಾಯದ ಹಣವನ್ನು ಸಂಗ್ರಹಿಸಲಾಗುತ್ತಿತ್ತು.

**ಇ. ಐನ್-ಎ-ದಾಸ್‌ಸಲಹಾ** (ಜಬ್ತಿ ಪದ್ಧತಿ): (ಭೂಮಾಪನದ ಪದ್ಧತಿ ಅಥವಾ ಭೂವರ್ಗೀಕರಣ ಪದ್ಧತಿ ಅಥವಾ ವ್ಯವಸಾಯ ಪದ್ಧತಿ)

ಇದು ಅತ್ಯಂತ ಪ್ರಮುಖ ಕಂದಾಯ ಪದ್ಧತಿಯಾಗಿದ್ದು ಇದನ್ನು 'ತೋದರಮಲ್ಲನ ಬಂದೋಬಸ್ತ್ ಪದ್ಧತಿ' ಎಂದು ಕರೆಯಲಾಗಿದೆ. ಕ್ರಿ.ಶ. ೧೫೮೩ ರಲ್ಲಿ ಇವನ್ನು ಜಾರಿಗೆ ತರಲಾಯಿತು. ಇದರಲ್ಲಿ ಕೃಷಿಕರಿಗೆ ಸಾಲವ್ಯವಸ್ಥೆ ಮತ್ತು ಕಂತುಗಳಲ್ಲಿ ಮರುಪಾವತಿ ವ್ಯವಸ್ಥೆಯೂ ಸೇರಿದ್ದವು. ವಿವಿಧ ಪ್ರದೇಶಗಳ ಹಿಂದಿನ ೧೦ ವರ್ಷಗಳ ಅವಧಿಯ ಬೆಲೆಗಳ ಸರಾಸರಿ ಆಧಾರದ ಮೇಲೆ ಉತ್ಪಾದಿತ ವಸ್ತುಗಳ ಬೆಲೆಗಳನ್ನು ನಿರ್ಧರಿಸಿ ಅದರ ಆಧಾರದ ಮೇಲೆ ರಾಜ್ಯದ ಭಾಗವನ್ನು ನಗದಾಗಿ ವಸೂಲಿ ಮಾಡುವ ಪದ್ಧತಿಯೇ ಐನ್-ಎ-ದಾಸ್‌ಸಲಹ ಪದ್ಧತಿ.

**ಹೆಚ್ಚಿನ ವಿಷಯ**

**[ಐನ್-ಎ-ದಾಸ್‌ಸಲಹ ಪದ್ಧತಿಯ ಲಕ್ಷಣಗಳು**

೧. ಭೂಮಿಯನ್ನು ಅಳೆಯಲು ಏಕರೂಪದ ಅಳತೆಗೋಲು ನಿರ್ಮಿಸಲಾಯಿತು. ಅದನ್ನು ಬಿದಿರಿನ ಗಳಗಳಿಂದ ಮಾಡಿದ್ದು ಅದಕ್ಕೆ ಜಾರಿಬ್ ಎನ್ನಲಾಗುತ್ತಿತ್ತು. ಗಳಗಳನ್ನು ಕಬ್ಬಿಣದ ಕೊಂಡಿಯಿಂದ ಸೇರಿಸಲಾಗಿತ್ತು. ೪೨ ಬೆರಳುದ್ದದ ಸಿಕಂದರ್ ಗಜ್‌ಗೆ ಬದಲಾಗಿ ೪೧ ಬೆರಳುದ್ದದ 'ಇಲಾಹಿ ಗಜ್' ಅನ್ನು ಭೂಮಿ ಅಳತೆ ಮಾಡಲು ಬಳಕೆಗೆ ತರಲಾಯಿತು.

೨. ಭೂಮಿಯ ಏಕಾಂಶ (ಅಳತೆಯ ಒಂದು ಯೂನಿಟ್‌ಗೆ) ಬಿಘ (Bigha) ಎಂದು ಹೆಸರು. ಅದು ೬೦ ಗಜ ಉದ್ದ ಮತ್ತು ೬೦ ಗಜ ಅಗಲವಾಗಿತ್ತು. ಅಂದರೆ ೩,೬೦೦ ಗಜಗಳ ಚಚ್ಚೌಕ ಅಥವಾ ಚದುರ ಯಾರ್ಡ್ಸ್‌ಗಳಾಗಿತ್ತು.

೩. ಭೂಮಿಯನ್ನು ೪ ವರ್ಗಗಳಾಗಿ ಕೆಳಗಿನಂತೆ ವಿಭಾಗಿಸಲಾಗಿತ್ತು.

ಅ. ಪಲೌಜ್ - ಪ್ರತಿವರ್ಷ ವ್ಯವಸಾಯಕ್ಕೊಳಪಟ್ಟ ಭೂಮಿ.

ಬ. ಪರೌಟಿ - ಯಾವಾಗಲು ಉಳುಮೆ ಮಾಡುತ್ತಿದ್ದು ಮಧ್ಯೆ ಒಂದೆರಡು ವರ್ಷ ಪಾಳು ಬಿಡುವುದು.

ಕ. ಚಾಚರ್ - ೩ ರಿಂದ ೪ ವರ್ಷಗಳ ಕಾಲ ಉಳುಮೆ ಮಾಡದೇ ಬಿಟ್ಟ ಭೂಮಿ.

ಡ. ಬಂಜರ್ - ೫ ವರ್ಷಕ್ಕೂ ಮೇಲ್ಪಟ್ಟು ಉಳುಮೆ ಮಾಡದೇ ಇದ್ದ ಭೂಮಿ.

ಮೊದಲ ಮೂರು ವರ್ಗದ ಭೂಮಿಗಳನ್ನು ಅವುಗಳ ಸರಾಸರಿ ಉತ್ಪಾದನೆಯ ಮೇಲೆ ಉತ್ತಮ, ಮಧ್ಯಮ ಮತ್ತು ಅಧಮ ಎಂದು ವಿಭಾಗಿಸಲಾಗಿತ್ತು.

೪. ಉತ್ಪತ್ತಿಯ ೧/೩ ಭಾಗವನ್ನು ರೈತರು ಸರ್ಕಾರಕ್ಕೆ ನಗದು ಅಥವಾ ದವಸ ಧಾನ್ಯ ರೂಪದಲ್ಲಿಯಾಗಲಿ ಸಲ್ಲಿಸಬೇಕಾಗಿತ್ತು. ನಗದು ದರ ಬೆಲೆಗಳಿಗನುಸಾರವಾಗಿ ವ್ಯತ್ಯಾಸವಾಗುತ್ತಿತ್ತು.

೫. ಸಾಮ್ರಾಜ್ಯವನ್ನು ದಸ್ತೂರ್‌ಗಳಾಗಿ ವಿಭಾಗಿಸಿ ಅವುಗಳಲ್ಲಿ ಬೆಲೆಗಳು ಏಕವಾಗಿರುವಂತೆ ಮಾಡಲಾಗಿತ್ತು ಹಾಗೂ ರಾಜ್ಯದ ಭಾಗದ ಉತ್ಪನ್ನವನ್ನು ನಗದಿಗೆ ಪರಿವರ್ತಿಸಲು ದಸ್ತೂರ್‌ಗಳಲ್ಲಿನ ೧೦ ವರ್ಷಗಳ ಸರಾಸರಿ ಬೆಲೆಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುತ್ತಿತ್ತು.

೬. ದವಸ ಧಾನ್ಯಗಳ ಬೆಲೆ ನಿಗಧಿಪಡಿಸಲಾಯಿತು.

೭. ಕಂದಾಯಕ್ಕೆ ಮತ್ತು ಭೂಮಿಗೆ ಸಂಬಂಧಪಟ್ಟ ಲೆಕ್ಕಪತ್ರವನ್ನು ಸರ್ಕಾರಿ ಅಧಿಕಾರಿಗಳು ಇಡಬೇಕಾಗಿತ್ತು.

೮. ರೈತರಿಗೆ ಅವರ ಜಮೀನಿನ ವಿವರಗಳನ್ನು ಒಳಗೊಂಡ 'ಪಟ್ಟ' ಪುಸ್ತಕವನ್ನು ಕೊಡಲಾಗಿತ್ತು.

೯. ಜಹಗೀರುದಾರಿ ಭೂಮಿ ಹೊಸ ಕಂದಾಯಕ್ಕೆ ಒಳಪಟ್ಟರೂ ಅವರ ಆದಾಯ ಜಹಗೀರುದಾರರಿಗೆ ಸೇರುತ್ತಿತ್ತು.

೧೦. ೫೦೦ ಭಿಘ ಮತ್ತು ಅದಕ್ಕಿಂತ ಹೆಚ್ಚಿನ ಭೂಮಿಯನ್ನು ದಾನವಾಗಿ ಪಡೆದವರು ಸುಲ್ತಾನನಿಗೆ ವರದಿ ಮಾಡಬೇಕಾಗಿತ್ತು.

೧೧. ರೈತವಾರಿ ಪದ್ಧತಿಯನ್ನು ಪ್ರೋತ್ಸಾಹಿಸಿತು. ರೈತರೇ ಜಮೀನಿನ ಒಡೆಯರೆಂದು ಪರಿಗಣಿಸಲಾಯಿತು.

೧೨. ರಾಜ್ಯಕ್ಕೋಸ್ಕರ ಒಂದು 'ಜಮ್ಮೆ ಹಾಲ್ ಹಸಿಲ್' ಎಂಬ ಕಂದಾಯ ಲೆಕ್ಕ ಪುಸ್ತಕವನ್ನು ಸಿದ್ಧಪಡಿಸಿದನು. ರೈತನು ಕಾಬಿಲಿಯಾತ್‌ಗೆ ಸಹಿ ಹಾಕಬೇಕಾಗಿತ್ತು. ರಾಜ್ಯವನ್ನು ಕಂದಾಯ ಸಂಗ್ರಹಣೆಗಾಗಿ ವಿಭಾಗಿಸಲಾಗಿತ್ತು.

*ಐನ್-ಇ-ಅಕ್ಬರಿ* ಕ್ರಿ.ಶ. ೧೫೯೫ ರಲ್ಲಿ ಆಗ್ರಾದ ಕಂದಾಯ ವಲಯದಲ್ಲಿ ಆರ್ಥಿಕ ಬೆಳೆಗಳಿಗೆ ಮತ್ತು ಆಹಾರ ಬೆಳೆಗಳಿಗೆ ವಿಧಿಸಲಾಗುತ್ತಿದ್ದ ಕಂದಾಯ ದರಗಳನ್ನು ಸೂಚಿಸುತ್ತದೆ.

| ಆರ್ಥಿಕ ಬೆಳೆಗೆ ಕಂದಾಯ (ತಲಾ ಬಿಘಾ ಒಂದಕ್ಕೆ ದಾಮ್‌ಗಳಲ್ಲಿ) | ಆಹಾರಬೆಳೆಗೆ ಕಂದಾಯ (ತಲಾ ಬಿಘಾ ಒಂದಕ್ಕೆ ದಾಮ್‌ಗಳಲ್ಲಿ) |
|---|---|
| ವೀಳೆಯದೆಲೆ ೨೭೩.೮೦ | ಗೋಧಿ ೬೨.೦೮ |
| ನೀಲಿ ೧೫೬.೫೨ | ಅಕ್ಕಿ (ಸಾಮಾನ್ಯ) ೬೦.೩೬ |
| ಕಬ್ಬು ೧೪೭.೬೦ | ಜವೇ ಗೋಧಿ ೪೯.೨೦ |
| ಅಫೀಮು ೧೨೭.೪೪ | ಜೋಳ ೪೪.೭೨ |
| ಹತ್ತಿ ೮೭.೨೦ | ಬಾಜ್ರ ೩೧.೩೨] |

ದಾಸ್‌ಸಲಹ ಪದ್ಧತಿಯನ್ನು ಬಿಹಾರ, ಅಲಹಾಬಾದ್, ಮಾಳವ, ಔದ್, ಆಗ್ರಾ, ದೆಹಲಿ, ಲಾಹೋರ್ ಮತ್ತು ಮುಲ್ತಾನ್‌ಗಳಲ್ಲಿ ಜಾರಿಗೆ ತರಲಾಯಿತು. ರಾಮ್‌ಪ್ರಸಾದ್ ತ್ರಿಪಾಠಿ

ಯವರ ಪ್ರಕಾರ ಉತ್ಪತ್ತಿಯ ಸರಾಸರಿಯನ್ನು ಮತ್ತು ಬೆಳೆಗಳ ಸರಾಸರಿಯನ್ನು ಕಂಡುಹಿಡಿದು ಮುಂದಿನ ಹತ್ತು ವರ್ಷಗಳ ಕಾಲದವರೆಗೆ ಕಂದಾಯವನ್ನು ನಿಗದಿ ಮಾಡುತ್ತಿದ್ದರು. ೧೮೨ ಪರಗಣಗಳಿದ್ದು ಕ್ರೋರಿ, ಪತ್ವಾರಿ, ಖನುಂಗೋ, ಕಾರಖೂನರೆಂಬ ಅಧಿಕಾರಿಗಳಿದ್ದರು. ಇವರು ಹಿಂದಿ ಮತ್ತು ಪರ್ಷಿಯನ್ ಭಾಷೆಯಲ್ಲಿ ಲೆಕ್ಕ ಪತ್ರ ಬರೆದಿಡುತ್ತಿದ್ದರು. ವಿ.ಎ. ಸ್ಮಿತ್‌ರವರು "ಸಂಕ್ಷಿಪ್ತವಾಗಿ ಹೇಳುವಲ್ಲಿ ಈ ಪದ್ಧತಿಯು ಮೆಚ್ಚುವಂತಹದು. ಇದರ ತತ್ವಗಳು ಘನವಾದವು ಮತ್ತು ಅಧಿಕಾರಿಗಳಿಗೆ ನೀಡಿದ್ದ ನಿರ್ದೇಶನಗಳು ಅಪೇಕ್ಷಿತ ವಾಗಿದ್ದವು" ಎಂದಿದ್ದಾನೆ.

## ಸಾಹಿತ್ಯ

ಮಧ್ಯಕಾಲೀನ ಭಾರತದ ಸಾಹಿತ್ಯದ ಬಗ್ಗೆ ಇತಿಹಾಸದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯ ಗಳಿವೆ. ಎ.ಎಲ್. ಶ್ರೀವಾತ್ಸವರವರ ಪ್ರಕಾರ "ದೆಹಲಿ ಸುಲ್ತಾನರ ಕಾಲದಲ್ಲಿ ಸಾಹಿತ್ಯ ಅಷ್ಟೇನು ಪ್ರಗತಿ ಹೊಂದಿರಲಿಲ್ಲ. ಕಾರಣ ದೆಹಲಿ ಸುಲ್ತಾನರು ಅನಾಗರೀಕ ಮತ್ತು ಕ್ರೂರತೆಯುಳ್ಳ ಜನಾಂಗವಾಗಿದ್ದರಿಂದ ಅವರಿಗೆ ಉತ್ತಮ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಅಭಿರುಚಿ ಇರಲಿಲ್ಲವೆಂದಿದ್ದಾರೆ". ಆದರೆ ಪ್ರಾರಂಭಿಕ ಟರ್ಕಿಷ್ ದಾಳಿಕೋರರು ಪರ್ಷಿಯನ್ ಭಾಷಾ ಸಾಹಿತ್ಯ ರಚಿಸಿದರು. ಮೊಗಲರ ಕಾಲದಲ್ಲಿ ಪರ್ಷಿಯನ್, ಅರೇಬಿಕ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿಸಲ್ಪಟ್ಟ ಸಾಹಿತ್ಯ ಬಹುಪಾಲು ಧಾರ್ಮಿಕ ಸ್ವರೂಪದ್ದು. ಬಾಬರ್ ಮತ್ತು ಹುಮಾಯೂನ್ ಈ ಕಾಲದ ವಿದ್ವಾಂಸರಾಗಿದ್ದರು. ಅಕ್ಬರನು ಅನಕ್ಷರಸ್ಥನಾದರೂ ಸಾಹಿತ್ಯಾಭಿಮಾನಿ ಮತ್ತು ಉದಾರ ಪೋಷಕ. ಔರಂಗಜೇಬ್ ವಿದ್ವಾಂಸ ಮತ್ತು ಬರಹ ಗಾರನೂ ಆಗಿದ್ದನು. ಆದರೆ ಇವನ ಧಾರ್ಮಿಕ ಭಾವನೆ ಸಾಹಿತ್ಯದ ಪೋಷಣೆಗೆ ಅಡ್ಡ ಬಂದಿತು.

**ಪರ್ಷಿಯನ್ ಸಾಹಿತ್ಯ:** ಮಧ್ಯಕಾಲೀನ ಭಾರತದಲ್ಲಿ ಸಂಸ್ಕೃತ ಭಾಷೆ ಪ್ರಾಮುಖ್ಯತೆ ಕಳೆದುಕೊಂಡು ಪರ್ಷಿಯನ್ ಪ್ರಮುಖ ಭಾಷೆಯಾಯಿತು. ಪ್ರಮುಖ ಪರ್ಷಿಯನ್ ವಿದ್ವಾಂಸರುಗಳೆಂದರೆ ಷೇಕ್ ಜೈನುದ್ದೀನ್, ಮುಲ್ಲಾಸಿಹಾಬ, ಗುಲ್ಬದನ್ ಬೇಗಮ್, ಅಬುಲ್ ಫಜಲ್, ಬದೌನಿ, ಅಬುಲ್ ಫೈಜಿ ಮುಂತಾದವರು. ಬಾಬರನ ಮಗಳಾದ ಗುಲ್ಬದನ್ ಬೇಗಂಳು *ಹುಮಾಯೂನ್ ನಾಮಾ* ಎಂಬ ಕೃತಿ ರಚಿಸಿದಳು. ಹುಮಾಯೂನ್ ಒಬ್ಬ ಪ್ರಸಿದ್ಧ ಗಧ್ಯ ಮತ್ತು ಪದ್ಯದ ಲೇಖಕನಾಗಿದ್ದನು. ಬಾಬರನ *ತುಜಕ್-ಎ-ಬಾಬರಿ* ತುರ್ಕಿ ಭಾಷೆಯಲ್ಲಿದ್ದು, ಪರ್ಷಿಯನ್‌ಗೆ ಮೂರು ಬಾರಿ ತರ್ಜುಮೆಗೊಂಡಿದೆ. ಅವನು ಪರ್ಷಿಯನ್ ಭಾಷೆಯಲ್ಲಿ 'ದಿವಾನ್' (ಕವನ)ಗಳನ್ನು ರಚಿಸಿದನು. ಅಕ್ಬರನ ಕಾಲದಲ್ಲಿ ಪರ್ಷಿಯನ್ ಸಾಹಿತ್ಯ ಅಸಾಧಾರಣ ಪ್ರಗತಿ ಕಂಡಿತು. ಈತನ ಕಾಲದಲ್ಲಿ ರಚಿತವಾದ ಪ್ರಸಿದ್ಧ ಕೃತಿಗಳೆಂದರೆ ಅಬುಲ್ ಫಜಲ್‌ನ *ಐನ್-ಇ-ಅಕ್ಬರಿ, ಅಕ್ಬರನಾಮ,* ಅಬ್ದುಲ್‌ಬಾಬಿಯ *ಮಸಿರ-ಇ-ರಹೀಮಿ,* ಬದೌನಿಯ *ಮುಂತಕಾಬ್ ಉತ್ ತವಾರಿಕ್,* ಜಹಾಂಗೀರನ *ತುಜುಕ್-*

*ಇ-ಜಹಂಗೀರಿ*, ಅಬ್ದುಲ್ ಹಮೀದ್ ಲಾಹೌರಿಯ *ಪಾದಷಹ ನಾಮ*, ದಾರಾಶಿಕೋನ ಪ್ರಸಿದ್ಧ ಕೃತಿ *ಮಜಮ್-ಉಲ್-ಬರಾಲ್ಯೆನ್* (ಸಮುದ್ರಗಳ ಮಿಲನ), ಫತ್ವಾ-ಇ-ಅಲಂಗಿರಿ ಹಾಗೂ ಔರಂಗಜೇಬನ ಪತ್ರಗಳ ಸಂಗ್ರಹದ ಕೃತಿ *ರಖಾತ್-ಇ-ಅಲಂಗಿರಿ* ಕೃತಿಗಳು ಈ ಕಾಲದ ಪ್ರಮುಖ ಪರ್ಷಿಯನ್ ಕೃತಿಗಳು. ಇತರ ಇತಿಹಾಸ ಕೃತಿಗಳೆಂದರೆ *ಮುಂತಾಖಾಬ್-ಉಲ್-ಲುಬಾಬ್*, *ಅಲಂಗಿರನಾಮ*, *ಫತೂಹತ್-ಏ-ಅಲಂಗಿರಿ* ಮೊದಲಾದವು ಪ್ರಮುಖ ಪರ್ಷಿಯನ್ ಸಾಹಿತ್ಯ ಕೃತಿಗಳಾಗಿವೆ. ಈ ಮೇಲಿನ ಕೃತಿಗಳಲ್ಲದೆ ವಿವಿಧ ಭಾಷೆಗಳಿಂದ ಪರ್ಷಿಯನ್ ಭಾಷೆಗೆ ಅನೇಕ ಕೃತಿಗಳು ಭಾಷಾಂತರಗೊಂಡವು. *ಮಹಾಭಾರತ*, *ರಾಮಾಯಣ*, *ಅಥರ್ವಣವೇದ*, *ಲೀಲಾವತಿ*, *ರಾಜತರಂಗಿಣಿ*, *ಕಲಿಯ ದಾಮನ್*, *ಹರಿವಂಶ*, *ಉಪನಿಷತ್ತು*, *ಭಗವದ್ಗೀತೆ*, *ಯೋಗವಾಶಿಷ್ಟ* ಮುಂತಾದ ಕೃತಿಗಳು ಪರ್ಷಿಯನ್‌ಗೆ ಭಾಷಾಂತರಗೊಂಡವು.

**ಅರೇಬಿಕ್ ಸಾಹಿತ್ಯ:** ಮಧ್ಯಕಾಲೀನ ಮುಸ್ಲಿಂ ಸುಲ್ತಾನರ ಆಡಳಿತಾವಧಿಯಲ್ಲಿ ಅತಿ ಕಡಿಮೆ ಅರೇಬಿಕ್ ಸಾಹಿತ್ಯ ರಚನೆಯಾಯಿತು. ರಚನೆಯಾದ ಸಾಹಿತ್ಯವು ಸಹ ಧಾರ್ಮಿಕ ಸಾಹಿತ್ಯವಾಗಿದೆ. ಪ್ರಸಿದ್ಧ ಲೇಖಕ ಅಬು-ಅತಲ-ಅಲಾ-ಅಬ್ದುರ್ ರಹಮಾನ್‌ನು *ಕುರಾನ್* ಮತ್ತು *ಹದಿತ್* ಮೇಲೆ ಭಾಷ್ಯಗಳನ್ನು ರಚಿಸಿದನು. ಅಲ್ ಬರೂನಿಯು ಪ್ರಸಿದ್ಧ ಕೃತಿ *ಕಿತಾಬ್-ಉಲ್-ಹಿಂದ್*‌ನ್ನು ರಚಿಸಿದನು. ಏಕೈಕ ಅರೇಬಿಕ್ ಐತಿಹಾಸಿಕ ಕೃತಿಯೆಂದರೆ ಅಬ್ದುಲ್ಲಾ ಅಲ್-ಮಕ್ಕಿಯ *ಜಫರುಲ್-ವಾಲಿಡ್*, ಅಲ್ಲಾದಿಯಾನು *ಹಿದಾಯತುಲ್-ಫಿಕ್*‌ನ್ನು ರಚಿಸಿದನು. ಇನ್ನಿತರ ಅರೇಬಿಕ್ ಕೃತಿಗಳೆಂದರೆ ಮನ್‌ಹಲನ *ಸಾಫಿ-ಷರಫಲ್-ವಾಫಿ*, *ಹಾದಿಖಿ-ಕುತುಬ-ಷಾಹಿ*, *ಸಜ್-ತುಕರ್-ದಾನಿಷ್*, *ಸಲವತ್-ಉಲ್-ಗಾರಿಬ್* ಮುಂತಾದವು.

**ಸಂಸ್ಕೃತ ಸಾಹಿತ್ಯ:** ಮೊಗಲರಲ್ಲಿ ಅಕ್ಬರನು ಸಂಸ್ಕೃತ ಸಾಹಿತ್ಯಕ್ಕೆ ಅಪಾರ ಬೆಂಬಲ ನೀಡಿದ್ದನು. ಆತನ ಉದ್ದೇಶ ಸಂಸ್ಕೃತ ಸಾಹಿತ್ಯದಲ್ಲಿರುವ ಬಹುಮುಖ್ಯ ವಿಷಯಗಳನ್ನು ಪರ್ಷಿಯನ್ ಭಾಷೆಗೆ ಭಾಷಾಂತರಿಸುವುದಾಗಿತ್ತು. ಅಕ್ಬರನು 'ಭಾನುಚಂದ್ರ' ಮತ್ತು 'ಸಿದ್ಧಚಂದ್ರ' ಎಂಬುವವರನ್ನು ನೇಮಿಸಿ ಬಾಣನ *ಕಾದಂಬರಿ* ಯ ಬಗ್ಗೆ ಭಾಷ್ಯ ರಚಿಸಲು ತಿಳಿಸಿದನು. ಬಿಹಾರಿ ಕೃಷ್ಣದಾಸನು *ಪಾರ್ಸಿಪ್ರಕಾಶ*ವನ್ನು, ರಾಮಚಂದ್ರನು *ರಾಮ ವಿನೋಧ* ವನ್ನು ರಚಿಸಿದರು. ಕವಿ ರುದ್ರನು *ಕೀರ್ತಿ ಸಾಮುಲ್ಲಸ* ಮತ್ತು *ಧನಶ್ಚರಿತ್ರ* ಕೃತಿಗಳನ್ನು ರಚಿಸಿದನು. ಜಹಾಂಗೀರನು ತನ್ನ ಆಸ್ಥಾನದಲ್ಲಿದ್ದ ಪ್ರಸಿದ್ಧ ಸಂಸ್ಕೃತ ಕವಿ ಜಗನ್ನಾಥನಿಗೆ 'ಪಂಡಿತರಾಜ' ಎಂಬ ಬಿರುದನ್ನು ನೀಡಿದ್ದನು. ಈತನು *ಮನರ ಮಕುಬ್‌ಮರ್ಧನ*, *ಚಿತ್ರ ಮೀಮಾಂಸ ಕಾಂವನ*ಕೃತಿಗಳನ್ನು ರಚಿಸಿದನು. ರಘುನಾಥನು *ಮುಹೂರ್ಥ ಮಾಲ* ಮತ್ತು ಚತುರ್ಭುಜನು *ರಾಸಿ ಕಲ್ಪದ್ರುಮ* ಎಂಬ ಕೃತಿಗಳನ್ನು ರಚಿಸಿದರು. ಉಳಿದಂತೆ ವೇದಾಂಗ ಚಾರ್ಯಸಿಂದ ಸೃಷ್ಟಿಯಾದ ಖಗೋಳ ಮತ್ತು ಜ್ಯೋತಿಷ್ಯ ಶಾಸ್ತ್ರಗಳ ಶಬ್ದಾರ್ಥಕೋಶಗಳು ಪ್ರಮುಖವಾಗಿವೆ.

**ಹಿಂದಿ ಸಾಹಿತ್ಯ:** ಬಾಬರ್, ಹುಮಾಯೂನ್ ಮತ್ತು ಷೇರ್‌ಷಾನ ಅವಧಿಯಲ್ಲಿ ಹಿಂದಿ ಭಾಷೆಗೆ ಪ್ರೋತ್ಸಾಹ ಸಿಗಲಿಲ್ಲ. ಆದರೂ *ಪದ್ಮಾವತ್* ಮತ್ತು *ಯುಗಾವತ್* ಎಂಬ ಹಿಂದಿ ಕೃತಿಗಳು ರಚಿತವಾದವು. ಅಕ್ಬರನ ಕಾಲದಲ್ಲಿ ಹಿಂದಿ ಭಾಷೆಗೆ ಪ್ರೋತ್ಸಾಹ ದೊರೆಯಿತು. ಅವನ ಆಸ್ಥಾನದ ಪ್ರಮುಖ ಕವಿಗಳೆಂದರೆ ರಾಜಾ ಬೀರ್‌ಬಲ್, ರಾಜಾ ಮಾನ್‌ಸಿಂಗ್, ರಾಜಾ ಭಗವಾನ್‌ದಾಸ್, ನರಹರಿ ಮತ್ತು ಹರಿನಾಥರು. ಇತರ ಕವಿಗಳೆಂದರೆ ನಂದಹಾಸ, ವಿಠಲ್‌ನಾಥ್, ಪರಮಾನಂದದಾಸ್, ಕುಂಭನದಾಸ್ ಮುಂತಾದವರು. ಪ್ರಖ್ಯಾತ ಹಿಂದಿ ವಿದ್ವಾಂಸರೆಂದರೆ ತುಲಸಿದಾಸ್ ಮತ್ತು ಸೂರದಾಸರು. ತುಲಸಿದಾಸರು ೨೫ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ *ರಾಮಚರಿತಮಾನಸ* ಮತ್ತು *ವಿನಯಪತ್ರಿಕ*, ಸೂರ್‌ದಾಸರ ಕೃತಿಗಳನ್ನು *ಸೂರ್ ಸಾಗರ್* ಎಂಬ ಕೃತಿಯಲ್ಲಿ ಸಂಪಾದಿಸಲಾಗಿದೆ. ಷಹಜಹಾನನ ಪ್ರೋತ್ಸಾಹ ಪಡೆದ ಸುಂದರಕವಿರಾಯ್‌ನು *ಸುಂದರ್ ಶೃಂಗಾರ್*‌ವನ್ನು, ಸೇನಾಪತಿಯು *ಕವಿತಾ ರತ್ನಾಕರ* ಎಂಬ ಕೃತಿಗಳನ್ನು ರಚಿಸಿದನು. ಕೇಶವದಾಸನು *ರಸಿಕ್-ಪ್ರಿಯ*, *ಕವಿ-ಪ್ರಿಯ* ಮತ್ತು *ಅಲಂಕಾರ ಮಂಜರಿ* ಎಂಬ ಕೃತಿಗಳನ್ನು ರಚಿಸಿದರು.

**ಉರ್ದು ಸಾಹಿತ್ಯ:** ಉರ್ದು ಭಾಷೆಯು ದೆಹಲಿ ಸುಲ್ತಾನರ ಕಾಲದಲ್ಲಿ ಸಾಹಿತ್ಯ ಭಾಷೆಯಾಗಿ ಬೆಳವಣಿಗೆಗೊಂಡಿತು. ಹಿಂದೆ ಅದನ್ನು 'ಜಬಾನ್-ಎ-ಹಿಂದವಿ' ಎಂದು ಕರೆಯುತ್ತಿದ್ದು ನಂತರ ಅದು 'ಉರ್ದು' ಎಂದು ಕರೆಯಲ್ಪಟ್ಟಿತು. ಅಮೀರ್ ಖುಸ್ರುವು ಉರ್ದುಭಾಷೆಯ ಮೊದಲ ಉದ್ದಾಮ ಪಂಡಿತ. ಸೂಫಿಸಂತರು ಮತ್ತು ಭಕ್ತಿಪಂಥದ ಸಂತರಿಂದ ಇದು ಜನಸಾಮಾನ್ಯರ ಭಾಷೆಯಾಗಿ ಬೆಳೆಯಿತು. ಮೊಗಲ್ ಚಕ್ರವರ್ತಿಗಳು ಈ ಭಾಷೆಗೆ ಪ್ರೋತ್ಸಾಹ ನೀಡಿದರು. ಮಹಮದ್‌ಷಾ (೧೭೧೯-೪೮) ನು ಉರ್ದು ಭಾಷೆಯ ಕಲಿಕೆಗೆ ಪ್ರೋತ್ಸಾಹ ನೀಡಿದ ಮೊದಲ ಮೊಗಲ್ ದೊರೆ. ಉರ್ದು ಕಾವ್ಯವನ್ನು 'ರೇಖ್ತಾ' ಎನ್ನುತ್ತಿದ್ದರು. ಅಬ್ರು, ಹಾಕಿಂ, ನಾಜಿ, ಮಾಜ್ಮುನ್ ಮತ್ತು ಮಜ್ಹಿರ್ ಮುಂತಾದವರು ಉರ್ದು ಭಾಷೆಯ ಪ್ರಮುಖ ಕವಿಗಳು. ೧೯ನೇ ಶತಮಾನದಲ್ಲಿ 'ಈಸ್ಟ್ ಇಂಡಿಯಾ ಕಂಪನಿ'ಯು ಉರ್ದುವನ್ನು ಆಸ್ಥಾನದ ಭಾಷೆಯೆಂದು ಪರಿಗಣಿಸಿದುದರಿಂದ ಉರ್ದು ಭಾಷೆಗೆ ಮತ್ತಷ್ಟು ಪ್ರೋತ್ಸಾಹ ದೊರೆಯಿತು.

ಮೇಲ್ಕಂಡ ರೀತಿಯಲ್ಲಿ ಮೊಗಲರ ಕಾಲದಲ್ಲಿ ಎಲ್ಲಾ ಭಾಷೆಗಳ ಸಾಹಿತ್ಯಕ್ಕೂ ಅಪಾರ ಪ್ರಮಾಣದಲ್ಲಿ ಪ್ರೋತ್ಸಾಹ ದೊರೆಯಿತು.

## ಮೊಗಲರ ಕಲೆ ಮತ್ತು ವಾಸ್ತುಶಿಲ್ಪ

**ವಾಸ್ತುಶಿಲ್ಪ:** ಮೊಗಲರ ಯುಗವು ಕಲೆ ಮತ್ತು ವಾಸ್ತುಶಿಲ್ಪದಲ್ಲಿಯೂ ಸಂಪೂರ್ಣವಾಗಿ ಪುನಃಶ್ಚೇತನ ಹಾಗೂ ನಾವೀನ್ಯತೆಯನ್ನು ತಂದ ಯುಗವಾಗಿರದೆ ಟರ್ಕೋ-ಆಫ್ಘನ್ನರು ರೂಢಿಗೆ ತಂದಿದ್ದ ಪ್ರಕ್ರಿಯೆಗಳು ಪರಾಕಾಷ್ಠೆಯನ್ನು ತಲುಪಿದ ಯುಗವಾಗಿತ್ತು. ಅಲ್ಲದೆ ಈ ಕಾಲದ

ಕಲೆ ಮತ್ತು ವಾಸ್ತುಶಿಲ್ಪಗಳು ಮುಸ್ಲಿಂ ಹಾಗೂ ಹಿಂದೂ ಕಲಾಪರಂಪರೆಗಳ ಹಾಗೂ ವಸ್ತುಗಳ ಸೊಗಸಾದ ಸಂಮಿಲನವಾಗಿತ್ತು. ಮೊಗಲರ ವಾಸ್ತುಶಿಲ್ಪದ ಇತಿಹಾಸ ಬಾಬರನ ಆಳ್ವಿಕೆಯಿಂದ ಪ್ರಾರಂಭವಾಗುತ್ತದೆ. ಮೊಗಲ್ ಸಾಮ್ರಾಟರು ಮಹಾ ನಿರ್ಮಾಣ ಕಾರಕರಾಗಿದ್ದರು. 'ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪ ಶೈಲಿ'ಯು ಬೆಳವಣಿಗೆಗೊಂಡಿತು.

ಬಾಬರನ ಕಾಲದಲ್ಲಿ ಹಲವು ಭವನಗಳನ್ನು ಆಗ್ರಾ, ಜೋಧಪುರ, ಗ್ವಾಲಿಯರ್ ಮತ್ತಿತರ ಪ್ರದೇಶಗಳಲ್ಲಿ ನಿರ್ಮಿಸಲಾಯಿತು. ಪಾಣಿಪತ್‌ನ ಕಾಬೂಲಿ ಬಾಗ್‌ನಲ್ಲಿನ ಒಂದು ಸ್ಮರಣಾರ್ಥ ಮಸೀದಿ, ರೋಹಿಲ್‌ಖಂಡದ ಸಂಬಾಲ್‌ನಲ್ಲಿನ ಜಾಮೀ ಮಸೀದಿ ಮತ್ತು ಮೂರನೆಯದು ಆಗ್ರಾದ ಹಳೆಯ ಲೋದಿ ಕೋಟೆಯೊಳಗಿರುವ ಒಂದು ಮಸೀದಿ, ಅಯೋಧ್ಯೆಯ ಬಾಬರಿ ಮಸೀದಿ ಈತನ ಕಾಲದಲ್ಲಿ ನಿರ್ಮಿತವಾದವು.

ಹುಮಾಯೂನನು ಪ್ರಪಂಚ ದೀನ್‌ಫನಾ (ರಕ್ಷಣಾಸ್ಥಾನ) ಎಂಬ ಹೊಸ ನಗರವನ್ನು ದೆಹಲಿಯ ಬಳಿ ನಿರ್ಮಿಸಿದನು. ಆಗ್ರಾ ಮತ್ತು ಪಂಜಾಬ್‌ನ ಹಿಸ್ಸಾರ್‌ನ ಜಿಲ್ಲೆಯಲ್ಲಿ ಎರಡು ಮಸೀದಿಗಳಿವೆ. ಷೇರ್‌ಷಾಹನ ಕಟ್ಟಡಗಳಲ್ಲಿ ದೆಹಲಿಯ ಬಳಿಯ ಪುರಾನಖಿಲಾ ಮತ್ತು ಸಸಾರಾಮ್‌ನ ಒಂದು ಸರೋವರದ ಮಧ್ಯದಲ್ಲಿ ಎತ್ತರವಾದ ಚಾಚು ಭಾಗದಲ್ಲಿ ನಿರ್ಮಿತವಾದ ಷೇರ್‌ಷಾನ ಶೋಭಾಯಮಾನ ಸಮಾಧಿ ಭವನ ಮುಖ್ಯವಾದವುಗಳು. ಇವು ಪರ್ಷಿಯನ್ ಶೈಲಿಯಲ್ಲಿವೆ.

ಅಕ್ಬರ್‌ನ ಕಾಲದಲ್ಲಿ ನಿರ್ಮಾಣಗೊಂಡ ಕಟ್ಟಡಗಳಲ್ಲಿ ಹಿಂದೂ ಮತ್ತು ಪರ್ಷಿಯನ್ ಶೈಲಿಯ ಸಮ್ಮಿಲನವಿದೆ. ದೆಹಲಿಯಲ್ಲಿರುವ ಹುಮಾಯೂನನ ಸಮಾಧಿಯು ಪ್ರಮುಖವಾದುದು. ಆಗ್ರಾದ ಕೋಟೆಯಲ್ಲಿರುವ ಅರಮನೆಯನ್ನು ೧೫೬೮-೭೩ರ ಅವಧಿಯಲ್ಲಿ ನಿರ್ಮಿಸಲಾಯಿತು. ಈ ಅರಮನೆಯ ಬಗ್ಗೆ ಅಬುಲ್‌ಫಜಲ್‌ನು ತನ್ನ ಐನ್-ಇ-ಅಕ್ಬರಿಯಲ್ಲಿ 'ಈ ಆಗ್ರಾ ಕೋಟೆಯಲ್ಲಿ ಸಾಮ್ರಾಟ ಅಕ್ಬರನು ೫೦೦ ಭವನಗಳನ್ನು ಕೆಂಪುಶಿಲೆಗಳನ್ನು ಬಳಸಿ ಬಂಗಾಳ ಮತ್ತು ಗುಜರಾತಿನ ಶೈಲಿಯಲ್ಲಿ ನಿರ್ಮಿಸಿದನು' ಎಂದು ತಿಳಿಸಿದ್ದಾನೆ. ಅಕ್ಬರನ ಕಾಲದ ಇತರ ಕಟ್ಟಡಗಳೆಂದರೆ ಅಕ್ಬರಿ ಮಹಲ್, ಜಹಾಂಗಿರಿ ಮಹಲ್, ಹೊಸ ರಾಜಧಾನಿ ಫತೆಫುರ ಸಿಕ್ರಿ, ದಿವಾನ್-ಇ-ಖಾಸ್, ಪಂಚಮಹಲ್, ಜೋದಬಾಯಿ ಮಹಲ್, ಬೀರಬಲ್ ಮಹಲ್, ಇಬಾದತ್ ಖಾನ, ಬುಲಂದ್ ದರ್ವಾಜ ಮುಂತಾದವು ಉತ್ತಮ ಕಲಾಕೃತಿಗಳಾಗಿವೆ. ವಿ.ಎ. ಸ್ಮಿತ್ "ಫತೇಪುರ ಸಿಕ್ರಿಯಂತಹುದು ಹಿಂದೆ ನಿರ್ಮಾಣವಾಗಿರಲಿಲ್ಲ ಮತ್ತು ಮುಂದೆಯೂ ನಿರ್ಮಾಣವಾಗದು ಇದು ಶಿಲೆಯಲ್ಲಿನ ರಮ್ಯತೆ" ಎಂದಿದ್ದಾರೆ.

ಜಹಾಂಗೀರನು ಲಾಹೋರಿನಲ್ಲಿ ಬಾದ್‌ಷಾಹಿ ಮಸೀದಿಯನ್ನು ಕಟ್ಟಿಸಿದನು. ಕಾಶ್ಮೀರದಲ್ಲಿ ಸುಪ್ರಸಿದ್ಧ ಶಾಲಿಮಾರ್ ತೋಟವನ್ನು ನಿರ್ಮಿಸಿದನು. ಈತನು ಕೆಂಪುಬಣ್ಣದ ಮರಳುಶಿಲೆಯನ್ನು ಬಳಸಿದನು. ಜಹಾಂಗೀರನು ಸಿಕಂದರ್‌ನಲ್ಲಿ ನಿರ್ಮಿಸಿದ ಅಕ್ಬರನ ಗೋರಿಯನ್ನು ಕುರಿತು ಇ.ಬಿ. ಹ್ಯಾವೆಲ್‌ರು "ಅಕ್ಬರನ ಗೋರಿ ಭಾರತದ ಶ್ರೇಷ್ಠ ಸಾಮ್ರಾಟ

ನಿಗೆ ತಕ್ಕಂತಹ ಸ್ಮಾರಕ'' ಎಂದಿದ್ದಾರೆ. ಇದರಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ, ಬೌದ್ಧ ಕಲೆಗಳ ಸಂಮಿಲನವನ್ನು ಕಾಣಬಹುದು.

ಷಹಜಹಾನನ ಕಾಲವನ್ನು ಮೊಗಲರ ವಾಸ್ತುಶಿಲ್ಪದ 'ಸುವರ್ಣಯುಗ'ವೆನ್ನಲಾಗಿದೆ. ಇವನು ಬಿಳಿಬಣ್ಣದ ಅಮೃತಶಿಲೆಯ ಕಟ್ಟಡಗಳನ್ನು ಹೆಚ್ಚಾಗಿ ನಿರ್ಮಿಸಿದ್ದಾನೆ. ಈತನ ಕಾಲದಲ್ಲಿ ದೆಹಲಿ, ಆಗ್ರಾ, ಲಾಹೋರ್, ಕಾಬೂಲ್, ಕಾಶ್ಮೀರ, ಅಜ್ಮೀರ್, ಕಾಂದಹಾರ್, ಅಹಮದಾಬಾದ್‌ಗಳಲ್ಲಿ ಕೋಟೆಗಳು, ಅರಮನೆಗಳು, ಮಸೀದಿಗಳು, ಗೋರಿಗಳು, ಕಟ್ಟಡಗಳು ಅಮೃತಶಿಲಾ ಮಂಟಪಗಳು ನಿರ್ಮಾಣವಾದವು. ಆಗ್ರಾದಲ್ಲಿ ತಾಜ್‌ಮಹಲ್, ದಿವಾನಿ-ಏ-ಆಂ, ದಿವಾನ್-ಏ-ಖಾಸ್, ಖಾಸ್ ಮಹಲ್, ಶೇಷ ಮಹಲ್, ಮುಸಮ್ಮಾನ್ ಬುರ್ಜ್, ಮುಜ್ಜಿ ಭವನ, ಮೋತಿ ಮಸೀದಿ, ದೆಹಲಿ ಕೆಂಪುಕೋಟೆ ಮತ್ತು ಅದರೊಳಗೆ ಮೋತಿ ಮಹಲ್, ಹೀರಾ ಮಹಲ್, ರಂಗ ಮಹಲ್, ದಿವಾನ್-ಏ-ಆಂ, ಸಂಗೀತದ ಅಟ್ಟಣಿಗೆ ಮುಂತಾದವು ನಿರ್ಮಾಣವಾದವು. ದೆಹಲಿಯ 'ಜುಮ್ಮಾಮಸೀದಿ' ಈತನ ಕಾಲದಲ್ಲಿಯೇ ನಿರ್ಮಾಣವಾಯಿತು. 'ತಾಜ್‌ಮಹಲ್' ಷಹಜಹಾನ್‌ನಿಂದ ನಿರ್ಮಿತವಾದ ಪ್ರಸಿದ್ಧ ಭವನಗಳಲ್ಲಿ ಒಂದು. ಇದನ್ನು ಈತನ ನೆಚ್ಚಿನ ಮಡದಿ ಮುಮ್ತಾಜ್ ಮಹಲ್‌ಳ ಜ್ಞಾಪಕಾರ್ಥವಾಗಿ ಆಗ್ರಾದಲ್ಲಿ ೧೬೩೧ ರಿಂದ ೧೬೫೩ ರ ಅವಧಿಯಲ್ಲಿ ಬಿಳಿ ಅಮೃತಶಿಲೆಯಲ್ಲಿ ನಿರ್ಮಿಸಲಾಗಿದೆ. ಇದರ ಮುಖ್ಯ ನಕ್ಷೆಗಾರ ಉಸ್ತಾದ್ ಅಹಮದ್ ಲಹೋರಿ. ಇದನ್ನು ''ಶಿಲೆಯಲ್ಲಿನ ಭಾವಗೀತೆ'' ಎಂದು ವರ್ಣಿಸಲಾಗಿದೆ. ೨೦ ಸಾವಿರ ಕುಶಲ ಕರ್ಮಿಗಳು ಸತತ ೨೨ ವರ್ಷಗಳ ಕಾಲ ನಿರ್ಮಿಸಿದರು.

**ಕಲೆ:** ಷಹಜಹಾನನ ಕಾಲದ ಪ್ರಮುಖ ಕಲಾ ಕೃತಿಯೆಂದರೆ ಮಯೂರ ಸಿಂಹಾಸನ. ಇದನ್ನು ಏಳು ವರ್ಷಗಳ ಅವಧಿಯಲ್ಲಿ ಅಂದಿನ ಒಂದು ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲಾಗಿತ್ತು. ಸಿಂಹಾಸನ ಸುವರ್ಣಪಾದಗಳ ಮೇಲೆ ನಿಂತ ತೂಗುಮಂಚದಂತಿತ್ತು.

ಮೊಗಲ್ ಅರಸರು ವರ್ಣ ಚಿತ್ರಕಲೆಗೂ ಪ್ರೋತ್ಸಾಹ ನೀಡಿದರು. ಇವರಲ್ಲಿ ಪ್ರಮುಖರಾದ ಜಹಾಂಗೀರ್, ಹುಮಾಯೂನ್ ಮತ್ತು ಅಕ್ಬರನ ಆಸ್ಥಾನದಲ್ಲಿ ಅಬ್ದುಲ್ ಸಮದ್ ಮತ್ತು ಮೀರ್‌ಸಯ್ಯದ್ ಆಲಿ ಎಂಬ ಪ್ರಸಿದ್ಧ ಚಿತ್ರಕಾರರಿದ್ದರು. ಅಕ್ಬರ್ ದಾಸ್ತಾನ್-ಏ-ಹಮೀರ್- ಹಮ್ಜ ಮತ್ತು ತವಾರಿಖ್-ಏ-ಖಾಂದನ್-ಎ-ತೈಮೂರಿಯಾ ಕೃತಿಗಳಲ್ಲಿ ಸಂಮಿಲನದ ಚಿತ್ರಕಲೆಯನ್ನು ಕಾಣಬಹುದು. ಆತನ ಆಸ್ಥಾನದಲ್ಲಿದ್ದ ೧೭ ಚಿತ್ರಕಲಾಕಾರರಲ್ಲಿ ೧೩ ಹಿಂದೂಗಳಾಗಿದ್ದರು. ಅವರಲ್ಲಿ ಪ್ರಮುಖರೆಂದರೆ ದಸ್ವಂತ್, ಒಸ್ವಾನ್, ತಾರಚಂದ್, ಜಗನ್ನಾಥ, ಕೇಶು, ಮುಕುಂದ ಮುಂತಾದವರು. ಜಹಾಂಗೀರನು ಶ್ರೇಷ್ಠ ಕಲಾ ವಿಮರ್ಶಕನಾಗಿದ್ದನು. ಇವನ ಆಸ್ಥಾನದಲ್ಲಿ ಹೀರತ್‌ನ ಆಗಾರೆಜಾ ಅವನ ಮಗ ಅಬುಲ್ ಹಸನ್ ಎಂಬ ಮುಸ್ಲಿಂ ಕಲಾಕಾರರಿದ್ದರು. ಷಹಜಹಾನನಿಗೆ ಚಿತ್ರಕಲೆಯ ಬಗ್ಗೆ ಆಸಕ್ತಿ ಯಿರಲಿಲ್ಲ. ಅಂತೆಯೇ ಔರಂಗಜೇಬ್ ಚಿತ್ರಕಲೆಯ ಬಗ್ಗೆ ನಿರ್ಲಕ್ಷ್ಯ ತಾಳಿದ್ದನು.

ಔರಂಗಜೇಬನನ್ನು ಹೊರತುಪಡಿಸಿ ಉಳಿದೆಲ್ಲಾ ಸಾಮ್ರಾಟರು ಸಂಗೀತದ ಅಭಿಮಾನಿಗಳಾಗಿದ್ದರು. ಬಾಬರ್ ಸಂಗೀತದ ಮೇಲೆ ಒಂದು ಗ್ರಂಥ ಬರೆದನು. ಅಕ್ಬರ್ ಡ್ರಂ (ನಖ್ಬರ್) ಬಾರಿಸುತ್ತಿದ್ದನು. ಅಕ್ಬರನ ಆಸ್ಥಾನದ ೩೬ ಸಂಗೀತಗಾರರಲ್ಲಿ ತಾನ್‌ಸೇನ್ ಮತ್ತು ಬಾಜ್ ಬಹಾದ್ದೂರ್ ಪ್ರಮುಖರಾಗಿದ್ದರು. ಷಹಜಹಾನನು ಸಂಗೀತ ಮತ್ತು ಕವನ ವಾಚನಗಳಲ್ಲಿ ಆಸಕ್ತಿ ಹೊಂದಿದ್ದನು. ಇವನು ಸ್ವತಃ ಸಂಗೀತಗಾರ. ದಿವಾನ್-ಎ-ಖಾಸ್‌ನಲ್ಲಿ ಸಂಗೀತ ಗೋಷ್ಠಿಗಳು ನಡೆಯುತ್ತಿದ್ದವು. ಜಗನ್ನಾಥ ಪಂಡಿತನ ಸಂಗೀತದಿಂದ ಸುಪ್ರೀತನಾಗಿ ಅವನಿಗೆ ಬಂಗಾರದ ತುಲಾಭಾರ ಮಾಡಿಸಿದನು.

ಅಕ್ಬರ್, ಜಹಾಂಗೀರ್ ಮತ್ತು ಷಹಜಹಾನರು ನೃತ್ಯ ಕಲೆಗೆ ಪ್ರೋತ್ಸಾಹ ನೀಡಿದ್ದರು. ಔರಂಗಜೇಬ್ ಇದನ್ನು ನಿಷೇಧಿಸಿದ. ದಂತದ ಕೆತ್ತನೆ ಕೆಲಸ, ತೋಟಗಾರಿಕೆಗೆ ಪ್ರೋತ್ಸಾಹ ನೀಡಲಾಗಿತ್ತು. ಬಾಬರನು ಆಗ್ರಾದಲ್ಲಿ ನೂರ್ ಅಫ್ಘಾನ್ ತೋಟ ನಿರ್ಮಿಸಿದ. ಇದನ್ನು ಈಗ 'ರಾಂ ಭಾಗ್' ಎಂದು ಕರೆಯುತ್ತಾರೆ. ಕಾಶ್ಮೀರದಲ್ಲಿ 'ಶಾಲಿಮಾರ್ ತೋಟ'ವನ್ನು ಜಹಾಂಗೀರ್ ನಿರ್ಮಿಸಿದನು. ಅಲ್ಲದೆ ಪ್ರಾಂತೀಯ ಸುಲ್ತಾನರು ಮತ್ತು ಶ್ರೀಮಂತರು ತಮ್ಮದೇ ಆದ ತೋಟಗಳನ್ನು ನಿರ್ಮಿಸಿದರು.

ಮೇಲ್ಕಂಡ ಎಲ್ಲಾ ರೀತಿಯಲ್ಲಿ ಮೊಗಲರು ಭಾರತೀಯ ಆಡಳಿತ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಿಗೆ ಅಪಾರ ಪ್ರಮಾಣದಲ್ಲಿ ತಮ್ಮದೇ ಆದ ವಿಶಿಷ್ಟ ಕೊಡುಗೆಗಳನ್ನು ನೀಡಿದ್ದಾರೆ.

# ೩.೫. ಶಿವಾಜಿಯು ಏಳಿಗೆ

## ಶಿವಾಜಿಯ ದಿಗ್ವಿಜಯಗಳು ಮತ್ತು ಆಡಳಿತ

ಕ್ರಿ.ಶ. ೧೭ನೆ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಮರಾಠರ ಇತಿಹಾಸವು ಭಾರತದ ಇತಿಹಾಸದಲ್ಲಿ ಬಹುಮುಖ್ಯವಾದ ಅಧ್ಯಾಯವಾಗಿದೆ. ಮರಾಠರು ವಿಜಯನಗರ ಸಾಮ್ರಾಜ್ಯದ ಪತನಾನಂತರ ಮುಸ್ಲಿಮರ ವಿರುದ್ಧ ಸರಿಸಮವಾಗಿ ತಲೆ ಎತ್ತಿದರು. ಶಿವಾಜಿಯು ಮರಾಠರ ರಾಷ್ಟ್ರೀಯ ಪುನರುಜ್ಜೀವನದ ಮತ್ತು ಐಕ್ಯತೆಯ ನಾಯಕನೆಂಬುದಾಗಿ ಚಿತ್ರಿಸಲಾಗಿದೆ. ಶಿವಾಜಿ ಮತ್ತು ಅವನ ಉತ್ತರಾಧಿಕಾರಿಗಳು ಎಲ್ಲಾ ಕಾರಣಗಳಿಗಿಂತಲೂ ಮಿಗಿಲಾಗಿ ಮೊಗಲ್ ಸಾಮ್ರಾಜ್ಯದ ಪತನಕ್ಕೆ ಕಾರಣರಾದರು. ಮರಾಠರು ಶಿವಾಜಿಯ ನಾಯಕತ್ವದಲ್ಲಿ ಏಳಿಗೆ ಹೊಂದಲು ಅವರಿಗೆ ಅನೇಕ ಅಂಶಗಳು ಪ್ರೇರಕವಾದವು.

### ಮರಾಠರ ಉದಯಕ್ಕೆ ಪ್ರೇರಕವಾದ ಅಂಶಗಳು

೧. **ಮಹಾರಾಷ್ಟ್ರದ ಭೌಗೋಳಿಕ ಲಕ್ಷಣ :** ಮಹಾರಾಷ್ಟ್ರವು ದಖ್ಖನ್‌ನ ಒಂದು ಆಯಕಟ್ಟಿನ ಪ್ರದೇಶದಲ್ಲಿದೆ. ಉತ್ತರದಿಂದ ದಕ್ಷಿಣಕ್ಕೆ ಹಾದುಹೋಗಿರುವ ಸಹ್ಯಾದ್ರಿ ಶ್ರೇಣಿ ಮತ್ತು ಪೂರ್ವದಿಂದ ಪಶ್ಚಿಮಕ್ಕೆ ಹಬ್ಬಿರುವ ಸಾತ್ಪುರ ಮತ್ತು ವಿಂಧ್ಯ ಶ್ರೇಣಿಗಳಿಂದ ಸುತ್ತುವರಿದು, ನರ್ಮದಾ ಮತ್ತು ತಪತಿ ನದಿಗಳಿಂದ ಈ ಪ್ರದೇಶವು ರಕ್ಷಿತವಾಗಿದೆ. ಈ ದೇಶವು ಅನೇಕ ಕೋಟೆಕೊತ್ತಲೆಗಳಿಂದ ಕೂಡಿದ್ದು ಶತ್ರು ಸೈನಿಕರಿಂದ ಸುಲಭವಾಗಿ ಆಕ್ರಮಣಕ್ಕೆ ಒಳಗಾಗುವಂತಿರಲಿಲ್ಲ. ಬಂಜರು ಭೂಮಿ, ಅಲ್ಪ ಮಳೆ, ಕಡಿಮೆ ಸಂಪತ್ತು ಮರಾಠರನ್ನು ವೈಭವ ಮತ್ತು ಸೋಮಾರಿತನಗಳಿಂದ ಧೂರವಾಗಿಸಿವೆ. ಅವರಲ್ಲಿ ಸ್ವಾವಲಂಭತ್ವ, ಧೈರ್ಯ, ಸತತ ಪ್ರಯತ್ನ, ಕಟ್ಟುನಿಟ್ಟಾದ ಸರಳತೆ, ಒರಟಾದ ರುಜುತ್ವ, ಸಾಮಾಜಿಕ ಸಮಾನತೆಯ ಮನೋಭಾವನೆ ಮತ್ತು ವ್ಯಕ್ತಿ ಗೌರವದ ಗುಣಗಳನ್ನು ಬೆಳೆಸಿ ಕೊಳ್ಳುವಲ್ಲಿ ಸಹಕಾರಿಯಾಗಿದ್ದವು.

೨. **ಮರಾಠಿ ಧಾರ್ಮಿಕ ಸುಧಾರಕರ ಪಾತ್ರ :** ಮರಾಠಿ ಸಾಧುಸಂತರಾದ ಏಕನಾಥ, ತುಕಾರಾಮ, ರಾಮದಾಸ, ನಾಮದೇವ, ವಾಮನ ಪಂಡಿತ ಮೊದಲಾದ ಮರಾಠಿ ಧಾರ್ಮಿಕ ಸುಧಾರಕರು ದೇವರ ಬಗ್ಗೆ ಭಕ್ತಿ, ಜಾತಿಮತಗಳ ಅಂತರ ನಿರ್ಮೂಲನೆ, ಕಾಯಕ ಗೌರವದ ಬಗ್ಗೆ ಬೋಧನೆ, ಹಿಂದೂಧರ್ಮದ ಪುನರುಜ್ಜೀವನದ ಮೂಲಕ ಮರಾಠರಲ್ಲಿ ಜಾಗೃತಿ ಮತ್ತು ಐಕ್ಯತೆ ಮೂಡಿಸಿದ್ದರು. ಮುಸ್ಲಿಮರ ಧಾಳಿಯಿಂದ ಹಿಂದೂ ಧರ್ಮವನ್ನು ರಕ್ಷಿಸುವಂತೆ ಮಾಡಿ ರಾಷ್ಟ್ರೀಯತೆಯ ಬೀಜವನ್ನು ಬಿತ್ತಿದರು. ಭಾವೈಕ್ಯ ಮೂಡಿಸುವಂಥ ಧಾರ್ಮಿಕ ಚಳುವಳಿಯು ಮಹಾರಾಷ್ಟ್ರೀಗರನ್ನು ಜಾಗೃತಗೊಳಿಸಿತು.

೩. **ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆ :** ಸಾಹಿತ್ಯ ಮತ್ತು ಭಾಷೆ ಮಹಾರಾಷ್ಟ್ರದ ಮಣ್ಣಿನ ಮಕ್ಕಳ ಸಂಯೋಗದ ಮತ್ತೊಂದು ಬಂಧವಾಗಿ ಪರಿಣಮಿಸಿತು. ಧಾರ್ಮಿಕ ಸುಧಾರಕರ ದೇವರ ನಾಮಗಳು ಮರಾಠಿ ಭಾಷೆಯಲ್ಲಿ ರಚನೆಗೊಂಡವು. ಫಲಿತಾಂಶವಾಗಿ

ಆ ಪ್ರದೇಶದ ಜನತೆಯನ್ನು ಉತ್ಕಟಾಕಾಂಕ್ಷೆಗಳಿಂದ ಅಭಿವೃದ್ಧಿಗೊಳಿಸುವ ಮರಾಠಿ ಸಾಹಿತ್ಯಶ್ರೀ ಅಭಿವೃದ್ಧಿಗೊಂಡು ಶಿವಾಜಿ ರಾಜ್ಯ ರಚನೆಗೆ ಪೂರಕವಾದವು.

೪. ದಖ್ಖನಿ ಸುಲ್ತಾನ ರಾಜ್ಯಗಳಿಂದ ಪಡೆದ ಆಡಳಿತದ ಅನುಭವ : ಮರಾಠರು ದಖನಿ ಸುಲ್ತಾನ ರಾಜ್ಯಗಳಲ್ಲಿ ಸೇವೆ ಸಲ್ಲಿಸುವುದರ ಮೂಲಕ ರಾಜಕೀಯ ಹಾಗೂ ಸೇವಾ ಆಡಳಿತದಲ್ಲಿ ಸ್ವಲ್ಪಮಟ್ಟಿನ ಅನುಭವವನ್ನು ಗಳಿಸಿದ್ದರು. ಮರಾಠರು ಈ ಸುಲ್ತಾನರ ಬಳಿ ಮಂತ್ರಿಗಳಾಗಿಯೂ, ಅಧಿಕಾರಿಗಳಾಗಿಯೂ ಇರುತ್ತಿದ್ದರು. ಶಿವಾಜಿಯ ತಂದೆಯಾದ ಷಹಜಿ ಬೋನ್ಸ್ಲೆಯು ಅಹಮದ್‌ನಗರದ ಸೈನ್ಯದಲ್ಲಿ ಸಾಮಾನ್ಯ ಸೈನಿಕನಾಗಿ ಸೇರಿ ತನ್ನ ಶಕ್ತಿ ಸಾಮರ್ಥ್ಯಗಳಿಂದಾಗಿ ದಂಡನಾಯಕ ಪದವಿಗೇರಿದ್ದನು.

ಈ ಮೇಲ್ಕಂಡ ಎಲ್ಲಾ ಅಂಶಗಳು ಮರಾಠರ ಏಳಿಗೆಗೆ ಕಾರಣವಾದವು. ಮರಾಠರ ಇತಿಹಾಸವನ್ನು ಎರಡು ಭಾಗವಾಗಿ ವಿಭಾಗಿಸಿಬಹುದು.

೧. ೧೭ನೆ ಶತಮಾನದ ಉತ್ತರಾರ್ಧದಿಂದ ಔರಂಗಜೇಬನ ಮರಣದವರೆಗೆ (ಶಿವಾಜಿ, ಸಾಂಬಾಜಿ, ರಾಜಾರಾಮ್, ತಾರಾಬಾಯ್)

೨. ಪೇಶ್ವೆಗಳ ಆಳ್ವಿಕೆಯ ಕಾಲ.

**ಷಹಜಿ**

ಷಹಜಹಾನ್ ಉತ್ತರ ಭಾರತದಲ್ಲಿ ಆಳ್ವಿಕೆ ನಡೆಸುತ್ತಿದ್ದಾಗ ದಕ್ಷಿಣದಲ್ಲಿ ಬಿಜಾಪುರದ ಮಹಮದ್ ಆದಿಲ್‌ಷಾ ಪ್ರಬಲನಾಗಿದ್ದನು. ಇವನ ಸೇನೆಯಲ್ಲಿ ಷಹಜಿ ಬೋನ್ಸ್ಲೆಯು ಸೇವೆ ಸಲ್ಲಿಸಿ ಅದರ ಫಲವಾಗಿ ಪುಣೆ ತರುವಾಯ ಬೆಂಗಳೂರನ್ನು ಜಹಗೀರಾಗಿ ಪಡೆದನು. ಷಹಜಿ ತನ್ನ ಪೂರ್ಣ ಆಯಸ್ಸನ್ನು ಬೇರೆಯವರ ಸೇವೆಯಲ್ಲೇ ಕಳೆದುದರಿಂದ ಮರಾಠ ರಾಜ್ಯ ಸ್ಥಾಪನೆ ಇವನಿಂದಾಗಲಿಲ್ಲ. ಆದರೂ ಕರ್ನಾಟಕದಲ್ಲಿ ಅನೇಕ ಜಹಗೀರುಗಳನ್ನು ಸಂಪಾದಿಸಿ ತನ್ನ ಮಗ ಶಿವಾಜಿಯ ಕಾಲದಲ್ಲಿ ಮರಾಠ ರಾಜ್ಯ ಸ್ಥಾಪನೆಗೆ ಕಾರಣನಾದನು.

## ಶಿವಾಜಿ (ಕ್ರಿ.ಶ. ೧೬೨೭-೮೦)

ಶಿವಾಜಿಯು ಕ್ರಿ.ಶ. ೧೬೨೭ ರಲ್ಲಿ ಜುನ್ನಾರದ ಬಳಿಯ 'ಶಿವನೇರು ದುರ್ಗ'ದಲ್ಲಿ ಜನಿಸಿದನು. ತಂದೆ ಷಹಜಿ ಬೋನ್ಸ್ಲೆ, ತಾಯಿ ಜೀಜಾಬಾಯಿ. ಶಿವಾಜಿಯು ತನ್ನ ತಾಯಿ ಜೀಜಾಬಾಯಿ ಮತ್ತು ಗುರು ದಾದಾಜಿ ಕೊಂಡದೇವರ ಪೋಷಣೆ ಮತ್ತು ಶಿಷ್ಯತ್ವದಲ್ಲಿ ಉತ್ತಮ ಶಿಕ್ಷಣವನ್ನು ಪಡೆದನು. ಜೀಜಾಬಾಯಿ ತನ್ನ ಮಗನಿಗೆ ಬಾಲ್ಯದಲ್ಲಿ ರಾಮಾಯಣ, ಮಹಾಭಾರತ ಮೊದಲಾದ ಪೌರಾಣಿಕ ಕಥೆಗಳನ್ನು ಹೇಳುವುದರ ಮೂಲಕ ಅವನ ಮನಸ್ಸಿನಲ್ಲಿ ಉನ್ನತ ಹಾಗೂ ಸ್ಫೂರ್ತಿದಾಯಕ ಭಾವನೆಗಳನ್ನು ತುಂಬಿದಳು. ಧರ್ಮ ರಕ್ಷಣೆಯ ಬಗ್ಗೆ ಅವನನ್ನು ಪ್ರೋತ್ಸಾಹಿಸಿದಳು. ಗುರು ದಾದಾಜಿಕೊಂಡದೇವನು ಶಿವಾಜಿ ಯನ್ನು ಧೈರ್ಯವಂತನಾಗಿ, ಉದ್ಯಮಶೀಲ ಪ್ರವೃತ್ತಿಯುಳ್ಳವನನ್ನಾಗಿ ಮಾಡುವಲ್ಲಿ ಯಶಸ್ವಿಯಾದನು. ಅಲ್ಲದೆ ಕುದುರೆ ಸವಾರಿ, ಕತ್ತಿ ವರಸೆಗಳಲ್ಲಿ ಉತ್ತಮ ಶಿಕ್ಷಣ

ನೀಡಿದನಲ್ಲದೆ, ಆಡಳಿತ ತಂತ್ರಗಳ ಬಗ್ಗೆಯೂ ಬೋಧಿಸಿದನು. ಇವರೇ ಅಲ್ಲದೆ ಶಿವಾಜಿಯ ಮೇಲೆ ಪರಿಣಾಮ ಬೀರಿದವರಲ್ಲಿ ಪ್ರಸಿದ್ಧ ಸಂತರಾದ ರಾಮದಾಸ ಮತ್ತು ತುಕಾರಾಮರು ಮುಖ್ಯರಾಗಿದ್ದಾರೆ.

ಶಿವಾಜಿಯು ಮೇಲಿನ ಎಲ್ಲಾ ಪೂರಕ ಸನ್ನಿವೇಶಗಳ ಪರಿಣಾಮವಾಗಿ ಧೈರ್ಯ ಸಾಹಸಗಳ ಯೋಧನಾಗಿ ಬೆಳೆದು ತಾನು ಯಾವುದನ್ನು ವಿದೇಶಿ ದಬ್ಬಾಳಿಕೆ ಎಂದು ಭಾವಿಸಿದ್ದನೋ ಅದರಿಂದ ತನ್ನ ತಾಯ್ನಾಡನ್ನು ಮುಕ್ತಗೊಳಿಸಬೇಕೆಂಬ ಇಚ್ಛೆಯುಳ್ಳವನಾಗಿದ್ದನು. ಶೂರನೂ, ದೇಶಪ್ರೇಮಿಯೂ ಆಗಿ ಬೆಳೆದ ಶಿವಾಜಿಯು ಪಶ್ಚಿಮಘಟ್ಟಗಳ ಉದ್ದಕ್ಕೂ ಮಾಳವ ದೇಶದ ಗುಡ್ಡಗಾಡಿನ ಜನರೊಡನೆ ತನ್ನ ಮೊದಲ ನಿಕಟ ಸಂಪರ್ಕ ಬೆಳೆಸಿಕೊಂಡದ್ದು ನಂತರದ ವರ್ಷಗಳಲ್ಲಿ ಉಪಯೋಗಕ್ಕೆ ಬಂದಿತು. 'ಮಾವಳಿ'ಗಳೆಂಬ ಈ ಗುಡ್ಡಗಾಡಿನ ಜನರು ಸಾಹಸಿಗಳೂ, 'ಗೆರಿಲ್ಲಾ ಯುದ್ಧ ಪದ್ಧತಿ'ಯ ಪ್ರವೀಣರೂ ಆಗಿದ್ದು, ಶಿವಾಜಿಯ ಹಲವಾರು ಯೋಜನೆಗಳಿಗೆ ಬೆಂಬಲ ಮತ್ತು ಸಹಾಯ ನೀಡಿದರು. ಈ ರೀತಿಯ ಆರಂಭದ ತರಬೇತಿ ಮತ್ತು ಪರಿಸರದ ಪ್ರಭಾವಗಳು ಶಿವಾಜಿಯಲ್ಲಿ ಒಂದು ಸ್ವತಂತ್ರ ರಾಜ್ಯ ಸ್ಥಾಪನೆಯ ಮಹಾಧ್ಯೇಯವನ್ನು ಪ್ರೇರೇಪಿಸಿಲು ಕಾರಣವಾಯಿತು. ತಾನೇ ಸ್ವತಂತ್ರ ಜೀವನದ ಆಯ್ಕೆ ಮಾಡಿಕೊಂಡನು.

### ಶಿವಾಜಿಯ ದಾಳಿಗಳು

ಉತ್ತರ ಭಾರತದಲ್ಲಿನ ಸಾಮ್ರಾಜ್ಯಗಳ ನಿರಂತರ ದಂಡಯಾತ್ರೆಗಳು ಮತ್ತು ದಖಿನ್ ಸುಲ್ತಾನ ರಾಜ್ಯಗಳಲ್ಲಿದ್ದ ದೌರ್ಬಲ್ಯ ಮರಾಠರ ಪ್ರಾಬಲ್ಯಕ್ಕೆ ಬಹುಮಟ್ಟಿಗೆ ಅನುಕೂಲಕರ ವಾಗಿ ಪರಿಣಮಿಸಿದವು. ಹೀಗಾಗಿ ಶಿವಾಜಿಯು ತನ್ನ ೧೬ನೆಯ ವಯಸ್ಸಿನಲ್ಲಿ ಮೊಗಲರ ವಿರುದ್ಧ ಒಂದು ರಾಜ್ಯವನ್ನು ಕಟ್ಟಲು ಹವಣಿಸಿದನು. ಕ್ರಿ.ಶ. ೧೬೪೬ ರಲ್ಲಿ ಬಿಜಾಪುರದ ಸುಲ್ತಾನನು ಅನಾರೋಗ್ಯಕ್ಕೆ ತುತ್ತಾದಾಗ ಶಿವಾಜಿಯು ಬಿಜಾಪುರದ ಅಧೀನದಲ್ಲಿದ್ದ ತೋರಣದುರ್ಗ, ರಾಯಘಡ, ಪ್ರತಾಪಘಡ ಮೊದಲಾದವುಗಳನ್ನು ವಶಪಡಿಸಿಕೊಂಡು ತಕ್ಷಣ ತೋರಣದುರ್ಗಕ್ಕೆ ಐದು ಮೈಲಿಗಳ ಪೂರ್ವದಲ್ಲಿ ರಾಯಘಡಕ್ಕೆ ಕೋಟೆ ಕಟ್ಟಿಸಿದನು. ಕ್ರಿ.ಶ. ೧೬೪೭ ರಲ್ಲಿ ದಾದಾಜಿ ಕೊಂಡದೇವನು ಮರಣ ಹೊಂದಿದ ಮೇಲೆ ಶಿವಾಜಿಯು ಬಲಾತ್ಕಾರ, ಹಣ ಮತ್ತು ಉಪಾಯದಿಂದ ಅನೇಕ ಕೋಟೆಗಳನ್ನು ಅವುಗಳ ಒಡೆಯರಿಂದ ವಶಪಡಿಸಿಕೊಂಡು ಹೊಸ ಕೋಟೆಗಳನ್ನು ನಿರ್ಮಿಸಿದನು. ಇದರಿಂದಾಗಿ ಅನೇಕ ಕೋಟೆ ಕೊತ್ತಲುಗಳಿಂದ ಕೂಡಿದ್ದ ವಿಶಾಲ ಪ್ರದೇಶವು ಅವನ ಕೈಸೇರಿತು. ಇದು ಬಿಜಾಪುರದ ಸುಲ್ತಾನನ್ನು ಎಚ್ಚರಗೊಳಿಸಿತು.

ಶಿವಾಜಿಯು ಕೊಂಕಣ ಪ್ರಾಂತ್ಯದ ಕಡೆಗೆ ತನ್ನ ಗಮನವನ್ನು ಕೇಂದ್ರೀಕರಿಸಿ ಅಬಾಜಿ ಸೊಂದರ ನೇತೃತ್ವದಲ್ಲಿ ಕೊಂಕಣ ಪ್ರಾಂತ್ಯದ ಕಲ್ಯಾಣ ಪಟ್ಟಣವನ್ನು ವಶಪಡಿಸಿಕೊಂಡನು. ಶಿವಾಜಿಯ ಪ್ರಗತಿಯ ವಿರುದ್ಧ ಕ್ರಮಗಳನ್ನು ತೆಗೆದುಕೊಳ್ಳಲು ಬಿಜಾಪುರದ ಸುಲ್ತಾನನು ಬಿಜಾಪುರದ ಆಡಳಿತ ಸೇವೆಯಲ್ಲಿದ್ದ ಶಿವಾಜಿಯ ತಂದೆ ಷಹಜಿಯನ್ನು ಬಂಧಿಸಿದನು.

ತಂದೆಯ ಮೇಲಿನ ಗೌರವದಿಂದ ಶಿವಾಜಿ ತನ್ನ ಧಾಳಿಗಳನ್ನು ಸ್ಥಗಿತಗೊಳಿಸಿದನು. ನಂತರ ಶಿವಾಜಿಯ ಸದ್ವರ್ತನೆಯ ಷರತ್ತಿನ ಆಧಾರದ ಮೇಲೆ ಷಹಜಿಯನ್ನು ಬಿಡುಗಡೆ ಮಾಡಿದನು. ಆದಕಾರಣ ಶಿವಾಜಿಯು ೧೬೪೯ ರಿಂದ ೧೬೫೫ ರವರೆಗೆ ರಾಜ್ಯ ವಿಸ್ತರಣೆಯ ಕಾರ್ಯವನ್ನು ಕೈಗೊಳ್ಳದೆ ಈ ಅವಧಿಯಲ್ಲಿ ತನ್ನ ಆಡಳಿತ ಕ್ರಮವನ್ನು ಸುಸಂಘಟಿತವಾಗಿ ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿದ. ೧೬೫೬ ರಲ್ಲಿ ಜಾವಳಿ ಎಂಬ ಸಣ್ಣ ಮರಾಠಿ ರಾಜ್ಯವನ್ನು ಅದರ ಅರೆಸ್ವತಂತ್ರ ಮರಾಠಿ ಚಂದ್ರರಾವ್ ಮೋರೆಯನ್ನು ನಿಯೋಗಿಯೊಬ್ಬನಿಂದ ಕೊಲ್ಲಿಸುವ ಮುಖಾಂತರ ಹಿಡಿದುಕೊಂಡನು.

ದಖನ್ನಿನ ಪ್ರಾಂತಾಧಿಕಾರಿಯಾಗಿದ್ದ ಔರಂಗಜೇಬನು ಬಿಜಾಪುರದ ಮುತ್ತಿಗೆಯಲ್ಲಿ ಮಗ್ನನಾಗಿರುವ ಅವಕಾಶ ಬಳಸಿಕೊಂಡ ಶಿವಾಜಿ ಮೊಗಲರ ಅಧೀನದಲ್ಲಿದ್ದ ಅಹಮದ್ ನಗರ ಮತ್ತು ಜುನ್ನಾರ್ ಜಿಲ್ಲೆಗಳಿಗೆ ಮುತ್ತಿಗೆ ಹಾಕಿ ಜುನ್ನಾರ್ ನಗರವನ್ನು ಲೂಟಿ ಮಾಡಿದನು. ಔರಂಗಜೇಬನು ಸೈನ್ಯವೊಂದನ್ನು ತನ್ನ ಅಧಿಕಾರಿಗಳ ನೆರವಿಗೆ ಕಳುಹಿಸಿ ಶಿವಾಜಿ ಯನ್ನು ಸೋಲಿಸಿದ. ಹೀಗಾಗಿ ಶಿವಾಜಿಯು ಔರಂಗಜೇಬನೊಂದಿಗೆ ಒಪ್ಪಂದ ಮಾಡಿಕೊಂಡ. ಆದರೆ ಔರಂಗಜೇಬ್ ಉತ್ತರಕ್ಕೆ ನಿರ್ಗಮಿಸಿದ ತಕ್ಷಣವೇ ಶಿವಾಜಿಯು ತನ್ನ ಆಕ್ರಮಣಕಾರಿ ನೀತಿಯನ್ನು ಮುಂದುವರಿಸಿದ. ಕಲ್ಯಾಣ, ಬಿವಾಂಢೀ ಮತ್ತು ಮಾಹುಲಗಳನ್ನು ಸ್ವಾಧೀನ ಪಡಿಸಿಕೊಂಡು ಮಾಹದ್‌ವರೆಗೆ ತನ್ನ ಅಧಿಕಾರವನ್ನು ವಿಸ್ತರಿಸಿದನು.

### ಶಿವಾಜಿ ಮತ್ತು ಅಫಜಲ್‌ಖಾನ್

ಶಿವಾಜಿಯ ಪ್ರಗತಿಯನ್ನು ಬಿಜಾಪುರದ ಸುಲ್ತಾನನು ಸಹಿಸದಾದನು. ಅವನು ಔರಂಗಜೇಬನೊಡನೆ ಹೋರಾಡುತ್ತಿದ್ದರಿಂದ ಶಿವಾಜಿಯ ಕಡೆ ಗಮನ ಕೊಡಲಾಗಲಿಲ್ಲ. ಆದರೆ ಔರಂಗಜೇಬನ ನಿರ್ಗಮನದ ನಂತರ ಕ್ರಿ.ಶ. ೧೬೫೯ ರಲ್ಲಿ ತನ್ನ ಸೇನಾನಿ ಅಫಜಲ್ ಖಾನ್‌ನ ನೇತೃತ್ವದಲ್ಲಿ ದೊಡ್ಡ ಸೈನ್ಯವೊಂದನ್ನು ಶಿವಾಜಿಯ ವಿರುದ್ಧ ಹೋರಾಡಲು ಕಳುಹಿಸಿ ಶಿವಾಜಿಯನ್ನು ಜೀವಂತವಾಗಿ ಅಥವಾ ಕೊಲೆ ಮಾಡಿ ತರಲೆಂದು ಹೇಳಿದನು. ಬಿಜಾಪುರದ ಸೈನ್ಯ ಶಿವಾಜಿಯ ಪ್ರದೇಶಗಳನ್ನು ಲೂಟಿ ಮಾಡುತ್ತಾ ಮುನ್ನುಗ್ಗಿತು. ಶಿವಾಜಿಯು ಪ್ರತಾಪ ಘಡದ ಕೋಟೆಯಲ್ಲಿ ರಕ್ಷಣೆ ಪಡೆದನು. ನಂತರ ಶಿವಾಜಿಯು ಮರಾಠ ಬ್ರಾಹ್ಮಣ ಕೃಷ್ಣಾಜಿ ಭಾಸ್ಕರ ಮೂಲಕ ಸಂಧಾನಕ್ಕೆ ಮುಂದಾದನು. ಆದರೆ ಅಫಜಲ್‌ಖಾನ್‌ನ ನಿಜವಾದ ಉದ್ದೇಶ ತಿಳಿದಿದ್ದ ಶಿವಾಜಿ ರಕ್ಷಣೆಗೆ ಮತ್ತು ಧಾಳಿಗೆ ಸಿದ್ಧತೆ ಮಾಡಿಕೊಂಡು ಅಫಜಲ್‌ಖಾನ್‌ನನ್ನು ಭೇಟಿಯಾದನು. ಆ ಸಂದರ್ಭದಲ್ಲಿ ಅಫಜಲ್‌ಖಾನ್ ಶಿವಾಜಿಯನ್ನು ಕೊಲ್ಲಲು ಪ್ರಯತ್ನಿಸಿದ. ಆದರೆ ಶಿವಾಜಿಯು 'ವ್ಯಾಘ್ರನಖ' (ಹುಲಿಯ ಉಗುರು) ಎಂಬ ಆಯುಧದಿಂದ ಅಫಜಲ್‌ಖಾನ್‌ನನ್ನು ಕೊಂದು ಹಾಕಿದನು. ನಂತರ ಬಿಜಾಪುರದ ಸೈನ್ಯವನ್ನು ಸೋಲಿಸಿ ಅವರ ಠಾಣೆಗಳನ್ನು ಸಹ ಲೂಟಿ ಮಾಡಿದನು. ನಂತರ ದಕ್ಷಿಣ ಕೊಂಕಣ, ಕೊಲ್ಹಾಪುರಗಳನ್ನು ವಶಪಡಿಸಿಕೊಂಡು ಬಿಜಾಪುರದವರೆಗೂ ಧಾಳಿ ಮುಂದುವರಿಸಿದನು. ಇದನ್ನು ತಡೆಗಟ್ಟಲು ಬಂದ ರುಸ್ತುಂಖಾನನನ್ನು ಸೋಲಿಸಿ ಅನೇಕ ಬೆಲೆಬಾಳುವ ವಸ್ತುಗಳು ಮತ್ತು

ಯುದ್ಧೋಪಕರಣಗಳನ್ನು ವಶಪಡಿಸಿಕೊಂಡನು. ಕೊನೆಗೆ ಬಿಜಾಪುರದ ಸುಲ್ತಾನನೇ ದಂಡೆತ್ತಿ ಬಂದು ಫಲಕಾರಿಯಾಗದೆ ಶಿವಾಜಿಯೊಂದಿಗೆ ಸಂಧಿಮಾಡಿಕೊಂಡ. ಆ ಪ್ರಕಾರ ಬಿಜಾಪುರದ ಸುಲ್ತಾನನು ಶಿವಾಜಿಯನ್ನು ಸ್ವತಂತ್ರ ರಾಜನೆಂದು ಒಪ್ಪಿಕೊಳ್ಳಬೇಕಾಯಿತು.

### ಶಿವಾಜಿ ಮತ್ತು ಔರಂಗಜೇಬ

ದಖನ್ನಿನಲ್ಲಿ ಪ್ರಬಲನಾಗಿದ್ದ ಮರಾಠ ನಾಯಕ ಶಿವಾಜಿಯನ್ನು ಹತ್ತಿಕ್ಕಲು ಔರಂಗಜೇಬ್ ತನ್ನ ಸೋದರಮಾವ ಷಹಿಸ್ತಾಖಾನ್‌ನನ್ನು ದಖನ್ನಿನ ರಾಜ್ಯಪಾಲನನ್ನಾಗಿ ನೇಮಕ ಮಾಡಿದನು. ಷಹಿಸ್ತಾಖಾನನು ಉತ್ತರ ಕೊಂಕಣ, ಕಲ್ಯಾಣ ಮತ್ತು ಪುಣೆಯನ್ನು ವಶಪಡಿಸಿ ಕೊಂಡನು. ಶಿವಾಜಿಯು ೧೬೬೩ ರಲ್ಲಿ ಪುಣೆಗೆ ಹೋಗಿ ಷಹಿಸ್ತಾಖಾನನು ಬೀಡುಬಿಟ್ಟಿದ್ದ ಸ್ಥಳದ ಮೇಲೆ ಹಠಾತ್ತನೆ ಧಾಳಿಮಾಡಿ ಅವನ ಬೆರಳುಗಳನ್ನು ತುಂಡರಿಸಿದನು. ತಪ್ಪಿಸಿ ಕೊಂಡರೂ ಷಹಿಸ್ತಾಖಾನ್ ಅವನ ಮಗ ಮತ್ತು ಅವನ ಅನೇಕ ಸೈನಿಕರು ಶಿವಾಜಿಯ ಸೈನಿಕರಿಂದ ಕೊಲ್ಲಲ್ಪಟ್ಟರು. ಇದು ಮೊಗಲರಿಗೆ ತೀವ್ರ ಅಘಾತವುಂಟು ಮಾಡಿತು. ತರುವಾಯ ಶಿವಾಜಿ ಸೂರತ್, ಅಹಮದ್‌ನಗರಗಳನ್ನು ಕೊಳ್ಳೆ ಹೊಡೆದನು. ಇದರಿಂದ ಷಹಿಸ್ತಾಖಾನ್‌ನನ್ನು ವಾಪಸ್ಸು ಕರೆಸಿಕೊಂಡ ಔರಂಗಜೇಬ್ ತನ್ನ ಪುತ್ರ ಆಜಾಮ್‌ನನ್ನು ರಾಜ್ಯಪಾಲನನ್ನಾಗಿ ನೇಮಿಸಿದನು.

### ಜೈಸಿಂಗ್ ಮತ್ತು ಪುರಂದರ ಒಪ್ಪಂದ

ದಖ್ಖನ್ನಿನಲ್ಲಿ ಬೆಳೆಯುತ್ತಿರುವ ಶಿವಾಜಿಯ ಪ್ರತಿಷ್ಠೆಯನ್ನು ಸಹಿಸದ ಔರಂಗಜೇಬ್ ಆತನನ್ನು ಹತ್ತಿಕ್ಕಲು ೧೬೬೫ ರಲ್ಲಿ ದಿಲೀಪ್‌ಖಾನ್ ಮತ್ತು ಅಂಬರದ ದೊರೆ ರಾಜ ಜೈಸಿಂಗ್‌ರನ್ನು ಕಳುಹಿಸಿದನು. ಜೈಸಿಂಗ್ ಬಿಜಾಪುರದ ಸುಲ್ತಾನನೊಡನೆ ಒಪ್ಪಂದ ಮಾಡಿ ಕೊಂಡು ಪುರಂದರ ಕೋಟೆಯನ್ನು ವಶಪಡಿಸಿಕೊಂಡನು. ಶಿವಾಜಿ ತನ್ನ ರಾಜ್ಯ ರಕ್ಷಣೆಗಾಗಿ ಮಾಡಿದ ಪ್ರಯತ್ನವೆಲ್ಲ ವಿಫಲವಾಗಿ ೧೬೬೫ ರ ಜೂನ್ ೨೨ ರಂದು 'ಪುರಂದರ ಒಪ್ಪಂದ' ವನ್ನು ಮಾಡಿಕೊಂಡನು. ಇದರಂತೆ ಮೊಗಲರಿಗೆ ೨೩ ಕೋಟೆಗಳನ್ನು ಬಿಟ್ಟುಕೊಟ್ಟು ೧೨ ಕೋಟೆಗಳನ್ನು ಮಾತ್ರ ತನ್ನ ಅಧೀನದಲ್ಲಿಟ್ಟುಕೊಳ್ಳಬೇಕಾಯಿತು. ಇದಲ್ಲದೆ ೫೦೦೦ ಅಶ್ವಗಳನ್ನು ನೀಡಿ, ತನ್ನ ಪ್ರಾಂತ್ಯಗಳನ್ನು ಕಳೆದುಕೊಂಡುದದರಿಂದ ಆದ ನಷ್ಟವನ್ನು ಸರಿದೂಗಿಸಿಕೊಳ್ಳಲು ಬಿಜಾಪುರ ರಾಜ್ಯದ ಕೆಲವು ಜಿಲ್ಲೆಗಳಲ್ಲಿ 'ಚೌತ್' ಮತ್ತು 'ಸರದೇಶ ಮುಖಿ'ಗಳನ್ನು ವಸೂಲಿ ಮಾಡಲು ಶಿವಾಜಿಯು ಅನುಮತಿ ಪಡೆದುಕೊಂಡನು. ಬಿಜಾಪುರದ ವಿರುದ್ಧ ಒಂದು ಯುದ್ಧದಲ್ಲಿ ಹೋರಾಡಲು ಜೈಸಿಂಗ್‌ನೊಡನೆ ಭಾಗವಹಿಸಿದನು. ಆದರೆ ಈ ಮುತ್ತಿಗೆಯು ಯಶಸ್ವಿಯಾಗಲಿಲ್ಲ. ನಂತರ ಜೈಸಿಂಗ್ ಉಪಾಯದಿಂದ ಶಿವಾಜಿಯನ್ನು ನಂಬಿಸಿ ಆಗ್ರಾಕ್ಕೆ ಬರುವಂತೆ ಮನವೊಲಿಸಿದನು. ೧೬೬೬ ರ ಮಾರ್ಚ್ ೧೬ ರಂದು ತನ್ನ ಹಿರಿಯ ಮಗ ಸಾಂಬಾಜಿಯೊಂದಿಗೆ ಶಿವಾಜಿಯು ಆಗ್ರಾಕ್ಕೆ ಹೋದನು. ಆದರೆ ಆಗ್ರಾದ ಆಸ್ಥಾನದಲ್ಲಿ ಔರಂಗಜೇಬನಿಂದ ಅವಮಾನಕ್ಕೀಡಾಗಿ, ಕ್ರೋಧಗೊಂಡ ಶಿವಾಜಿಯು

ದರ್ಬಾರಿನಲ್ಲಿಯೇ ಚಕ್ರವರ್ತಿಯ ಮೇಲೆ ನಂಬಿಕೆ ದ್ರೋಹದ ಆಪಾದನೆ ಹೊರಿಸಿ ಪ್ರತಿಭಟಿಸಿದನು. ಇದರ ಫಲವಾಗಿ ಅವನು ಆಗ್ರಾದ ಸೆರೆಮನೆಯನ್ನು ಸೇರಿದನು. ಆದರೆ ಮನೋಸ್ಥೈರ್ಯವನ್ನು ಕಳೆದುಕೊಳ್ಳದ ಶಿವಾಜಿ ಉಪಾಯದಿಂದ ತನ್ನ ಮಗನೊಂದಿಗೆ ಆಗ್ರಾದಿಂದ ತಪ್ಪಿಸಿಕೊಂಡು ೧೬೬೬ ರ ನವೆಂಬರ್ ೩೦ ರಂದು ರಾಯಘಡವನ್ನು ತಲುಪಿದ.

ಇದಾದ ಮೇಲೆ ಶಿವಾಜಿಯು ಮೂರು ವರ್ಷಗಳ ಕಾಲ ಮೊಗಲರೊಡನೆ ಶಾಂತಿಯಿಂದ ವರ್ತಿಸಿ ಆ ವೇಳೆಯಲ್ಲಿ ತನ್ನ ಆಂತರಿಕ ಆಡಳಿತವನ್ನು ವ್ಯವಸ್ಥೆಗೊಳಿಸಿಕೊಂಡ. ದಖನ್ನಿನ ಮೊಗಲ್ ರಾಜ್ಯಪಾಲನಾಗಿದ್ದ ಆಜಮ್‌ಖಾನ್‌ನು ಶಿವಾಜಿಯೊಡನೆ ಸೌಹಾರ್ದಯುತ ನೀತಿಯನ್ನು ಅಳವಡಿಸಿಕೊಂಡನು. ಔರಂಗಜೇಬನು ಶಿವಾಜಿಗೆ 'ರಾಜ' ಎಂಬ ಬಿರುದು ನೀಡಿ ಗೌರವಿಸಿದ ಅಲ್ಲದೆ ಅವನ ಮಗ ಸಾಂಬಾಜಿಯನ್ನು ೫,೦೦೦ ಸೈನಿಕ ಮನ್ಸಬ್ದಾರನನ್ನಾಗಿ ಮಾಡಿ ಬೀರಾರನ್ನು ಜಹಗೀರಾಗಿ ನೀಡಿದನು. ಆದರೆ ಮೊಗಲರ ಶಕ್ತಿಯು ಕ್ಷೀಣಿಸುತ್ತಿರುವುದನ್ನು ಗಮನಿಸಿದರೆ ಶಿವಾಜಿ ೧೬೭೦ ಲ್ಲಿ ಮೊಗಲರ ಮೇಲೆ ಪುನಃ ದಾಳಿ ಮಾಡಿ ಕೊಂಕಣ, ಖಾಂದೇಶ, ಬೀರಾರ್‌ಗಳನ್ನು ವಶಪಡಿಸಿಕೊಂಡನು. ಸೂರತ್‌ನ್ನೂ ಕೊಳ್ಳೆ ಹೊಡೆದನು. ೧೬೭೦-೭೪ ರ ನಡುವೆ ಅನೇಕ ಯಶಸ್ವಿ ಧಾಳಿಗಳನ್ನು ಶಿವಾಜಿಯು ಮಾಡಿದನು. ಹೀಗೆ ಎಲ್ಲೆಡೆ ಯಶಸ್ವಿ ಕಂಡ ಶಿವಾಜಿಯು ಕ್ರಿ.ಶ. ೧೬೭೪ ರ ಜೂನ್ ೧೬ ರಂದು ರಾಯಘಡದಲ್ಲಿ ಸಕಲ ರಾಜವೈಭವಗಳೊಡನೆ ಪಟ್ಟಾಭಿಷೇಕ ನಡೆಸಿಕೊಂಡು 'ಛತ್ರಪತಿ' (ರಾಜರರಾಜ) ಎಂಬ ಬಿರುದನ್ನು ಧರಿಸಿದನು.

ಶಿವಾಜಿಯು ಮೊಗಲರ ಮತ್ತು ಬಿಜಾಪುರದ ವಿರುದ್ಧವಾಗಿ ಹೋರಾಟವನ್ನು ತನ್ನ ಕೊನೆಯುಸಿರಿನವರೆಗೂ ಮುಂದುವರಿಸಿದನು. ನಂತರ ಜಿಂಜಿ, ವೆಲ್ಲೂರು, ತಂಜಾವೂರು ಮತ್ತು ಕರ್ನಾಟಕದ ಕೆಲವು ಜಿಲ್ಲೆಗಳನ್ನೊಳಗೊಂಡಂತೆ ೩೦ ಲಕ್ಷ ಹೊನ್ನುಗಳ ಆದಾಯ ಬರುವ ಹಾಗೂ ೧೦೦ ಕೋಟೆಗಳನ್ನೊಳಗೊಂಡ ಮೈಸೂರಿನ ಪ್ರಸ್ಥಭೂಮಿಯ ವಿಶಾಲ ಭೂಪ್ರದೇಶವನ್ನು ಗೆದ್ದುಕೊಂಡನು. ದಕ್ಷಿಣ ಭಾರತದ ಆಕ್ರಮಣಗಳು ಅವನನ್ನು ನಿಜವಾದ ಸಾಮ್ರಾಟನನ್ನಾಗಿ ಮಾಡಿದವು. ಹೊಸದಾಗಿ ಬಿಜಾಪುರದಿಂದ ವಶಪಡಿಸಿಕೊಂಡ ಪ್ರದೇಶಗಳಿಂದ 'ಚೌತ್' ಮತ್ತು 'ಸರದೇಶ್‌ಮುಖಿ'ಗಳನ್ನು ವಸೂಲಿ ಮಾಡುತ್ತಾ ದಕ್ಷಿಣ ಭಾರತದಲ್ಲಿ ಮುಸ್ಲಿಂ ಪ್ರಭುತ್ವಕ್ಕೆ ಬಲವಾದ ಪೆಟ್ಟನ್ನು ಕೊಟ್ಟನು. ಹೀಗೆ ವಿಶಾಲ ಸಾಮ್ರಾಜ್ಯ ಸಂಪಾದಿಸಿದ ಶಿವಾಜಿಯ ಕೊನೆಯ ದಿನಗಳು ದುರಂತಮಯವಾಗಿದ್ದವು. ಶಿವಾಜಿಯು ೧೬೮೦ ಏಪ್ರಿಲ್ ೪ ರಂದು ಅನಾರೋಗ್ಯದ ನಿಮಿತ್ತ ಮರಣ ಹೊಂದಿದನು. ಶಿವಾಜಿಯ ರಾಜ್ಯವು ಡಯಾನ್, ಸಾಲ್ಸೆಟ್, ಬೆಸ್ಸಿನ್, ಚೌಲ್, ಗೋವಾ, ಜಂಜೀರಾ, ಬೊಂಬಾಯಿಯ ಪೋರ್ಚುಗೀಸ್ ವಸಾಹತುಗಳ ಹೊರತಾಗಿ ಉತ್ತರದಲ್ಲಿ ಸೂರತ್, ರಾಮನಗರ, ಕಾರವಾರ, ನಾಸಿಕ್, ಪೂನಾ, ಸತಾರ, ಬೆಳಗಾವಿ, ಬಳ್ಳಾರಿ, ಚಿತ್ತೂರು, ಅರ್ಕಾಟ್ ಜಿಲ್ಲೆಗಳನ್ನು ಸಹ ಒಳಗೊಂಡಿದ್ದಿತು. ಇವನ ರಾಜ್ಯದಲ್ಲಿ ೧೪೦ ಕೋಟೆಗಳಿದ್ದು, ೭ ಕೋಟಿ ರೂಪಾಯಿಗಳ

ಆದಾಯ ಬರುತ್ತಿದ್ದಿತು. ಆದರೆ ನಿಜವಾದ ವಸೂಲಿಯು ೧ ಕೋಟಿಗಿಂತ ಹೆಚ್ಚಿರಲಿಲ್ಲವೆಂದು ಹೇಳಲಾಗಿದೆ.

## ಶಿವಾಜಿಯ ಆಡಳಿತ ಕ್ರಮ

ಶಿವಾಜಿ ಅಪ್ರತಿಮ ವೀರಯೋಧ ಮತ್ತು ಯಶಸ್ವಿ ಸೇನಾನಿ ಮಾತ್ರವಲ್ಲದೇ ತನ್ನ ಜನತೆಗೆ ಜ್ಞಾನ ಬೋಧನೆಯನ್ನು ನೀಡುವ ದೊರೆಯೂ ಆಗಿದ್ದನು. ರಾಲಿನ್‌ಸನ್‌ರವರು ಹೇಳಿರುವಂತೆ "ಶಿವಾಜಿಯು ನೆಪೋಲಿಯನ್‌ನಂತೆ ಒಬ್ಬ ಪ್ರಸಿದ್ಧ ಆಡಳಿತ ದುರಂಧರ ನಾಗಿದ್ದನು. ಸಮರ್ಥನಾದ ಸೇನಾ ನಾಯಕನೂ, ಯಶಸ್ವಿಯಾದ ಆಡಳಿತ ವ್ಯವಸ್ಥೆಗಾರನೂ ಮತ್ತು ರಾಜತಾಂತ್ರಿಕ ನಿಪುಣನೂ ಆಗಿ ಕೀರ್ತಿ ಪಡೆಯಲು ಅತ್ಯಗತ್ಯವಾದ ಸದ್ಗುಣಗಳನ್ನು ಹೊಂದಿದವನಾಗಿದ್ದನು". ಭಾರತದಲಿ ಮುಸ್ಲಿಂ ದೊರೆಗಳ ಸರ್ಕಾರದ ವ್ಯವಸ್ಥೆಯಂತೆ ಅವನ ಸರ್ಕಾರದ ವ್ಯವಸ್ಥೆಯೂ ಕೂಡ ಸ್ವಾಯತ್ತತೆಯನ್ನು ಹೊಂದಿತ್ತು. ತಾನು ಕಟ್ಟಿದ ರಾಜ್ಯಕ್ಕೆ ಉತ್ತಮ ಆಡಳಿತ ಏರ್ಪಡಿಸಿ ತನ್ನ ರಾಜನೀತಿ ನೈಪುಣ್ಯತೆಯನ್ನು ಪ್ರದರ್ಶಿಸಿದ್ದನು. ಅವನ ಆಡಳಿತ ವ್ಯವಸ್ಥೆಗೆ ಪುರಾತನ ಹಿಂದೂ ತತ್ವಗಳೇ ಆಸ್ತಿಭಾರವಾಗಿದ್ದವು.

ಶಿವಾಜಿಯು ಮಹಾರಾಷ್ಟ್ರ, ಕರ್ನಾಟಕ, ತಮಿಳುನಾಡಿನ ಭಾಗಗಳನ್ನೊಳಗೊಂಡ ವಿಶಾಲ ಪ್ರಾಂತ್ಯಗಳ ದೊರೆಯಾಗಿದ್ದು, ಈತನ ಸಾಮ್ರಾಜ್ಯವನ್ನೂ ಎರಡು ಭಾಗಗಳಾಗಿ ವಿಭಾಗಿಸ ಲಾಗಿತ್ತು.

೧. ಸ್ವರಾಜ್ಯ ಅಥವಾ ಮುಲ್ಕ್-ಇ-ಕದಿಮ್ (ನೇರ ಆಡಳಿತ)

೨. ಚೌತ್ ನೀಡುವ ಆಶ್ರಿತ ರಾಜ್ಯಗಳು

ಶಿವಾಜಿಯು ಆಡಳಿತದಲ್ಲಿ ಹಿಂದೂಗಳಿಗೆ ಉನ್ನತ ಹುದ್ದೆಗಳನ್ನು ನೀಡಿದನು. ಉರ್ದು ಮತ್ತು ಪರ್ಷಿಯನ್ ಭಾಷೆಯ ಬದಲಿಗೆ ಮರಾಠಿ ಭಾಷೆಯನ್ನು ಆಡಳಿತ ಭಾಷೆಯಾಗಿ ಜಾರಿಗೆ ತಂದನು. ಇದಕ್ಕಾಗಿ *ರಾಜ ವ್ಯವಹಾರ ಕೋಶ* ಎಂಬ ನಿಘಂಟನ್ನು ಸಿದ್ಧಪಡಿಸಿದ್ದನು. ಗೂಢಾಚಾರ ವ್ಯವಸ್ಥೆ ರಾಜ್ಯದ ಸ್ಥಿತಿಗತಿಗಳ ಬಗ್ಗೆ ಮಾಹಿತಿ ನೀಡುತ್ತಿದ್ದಿತು.

### ಕೇಂದ್ರ ಸರಕಾರ

ಶಿವಾಜಿಯು ರಾಜ್ಯದ ಸರ್ವ ಶ್ರೇಷ್ಠ ಅಧಿಕಾರಿಯಾಗಿದ್ದು ಎಲ್ಲಾ ಅಧಿಕಾರವು ಅವನಲ್ಲಿಯೇ ಕೇಂದ್ರೀಕೃತವಾಗಿದ್ದವು. ಪ್ರಜೆಗಳ ಕಲ್ಯಾಣವೇ ರಾಜನ ಮುಖ್ಯ ಗುರಿ ಯಾಗಿತ್ತು. 'ಅಷ್ಟ ಪ್ರಧಾನ'ರೆಂಬ ಎಂಟು ಜನ ಮಂತ್ರಿಗಳು ಆಡಳಿತದಲ್ಲಿ ಸಹಾಯ ನೀಡುತ್ತಿದ್ದನು. ಆ ಅಷ್ಟ ಪ್ರಧಾನರೆಂದರೆ,

೧. ಪೇಶ್ವೆ (ಪ್ರಧಾನಮಂತ್ರಿ) : ಎಲ್ಲಾ ಆಡಳಿತ ಇಲಾಖೆಗಳ ಮೇಲ್ವಿಚಾರಕ. ರಾಜ್ಯದ ಹಿತಾಸಕ್ತಿ ಮತ್ತು ಸಾರ್ವತ್ರಿಕ ಅಭ್ಯುದಯವನ್ನು ನೋಡಿಕೊಳ್ಳುತ್ತಿದ್ದನು.

೨. ಅಮಾತ್ಯ : ವಿತ್ತ ಮಂತ್ರಿ ಮತ್ತು ಸಾರ್ವಜನಿಕ ಲೆಕ್ಕಪತ್ರಗಳನ್ನು ಪರಿಶೀಲಿಸಿ ಸ್ವೀಕರಿಸುತ್ತಿದ್ದನು.

೩. **ಮಂತ್ರಿ :** ರಾಜನ ದೈನಂದಿನ ಕಾರ್ಯಗಳ ಮತ್ತು ಅವನ ಆಸ್ಥಾನದ ಕಾರ್ಯ ಕಲಾಪಗಳ ದಾಖಲೆಯಿಡುತ್ತಿದ್ದನು.

೪. **ಸುಮಂತ :** ಈತನು ವಿದೇಶಾಂಗ ವ್ಯವಹಾರಗಳನ್ನು ನೋಡಿಕೊಳ್ಳುವ ಕಾರ್ಯದರ್ಶಿಯಾಗಿದ್ದು, ರಾಜನಿಗೆ ಯುದ್ಧ ಮತ್ತು ಶಾಂತಿ ಸನ್ನಾಹಗಳ ಬಗ್ಗೆ ಸಲಹೆ ನೀಡುತ್ತಿದ್ದನು. ಅವನು ರಾಜ್ಯದ ವಿದೇಶಿ ನೀತಿಯ ವಹಿವಾಟನ್ನು ನಿರ್ವಹಿಸುತ್ತಿದ್ದನು.

೫. **ಸಚಿವ :** ಈತನು ರಾಜನ ಪತ್ರ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದನು. ಅವನು ಪರಗಣಗಳ ಲೆಕ್ಕಪತ್ರಗಳ ತನಿಖೆ ಮಾಡುತ್ತಿದ್ದನು.

೬. **ಪಂಡಿತ್‌ರಾವ್ :** ಈತನು ದಂಡಾಕ್ಷನು, ರಾಜಪುರೋಹಿತನೂ ಆಗಿದ್ದು ರಾಜನ ಧಾರ್ಮಿಕ ನೀತಿಯ ಬಗ್ಗೆ ಸಲಹೆ ಕೊಡುತ್ತಿದ್ದನು. ಅವನು ಧಾರ್ಮಿಕ ಸಲಹೆಗಳನ್ನು ವಿಚಾರಣೆ ಮಾಡುವ ನ್ಯಾಯಾಧೀಶನಾಗಿದ್ದನು.

೭. **ಸೇನಾಪತಿ :** ಪ್ರಧಾನ ದಂಡನಾಯಕನೂ, ಸೈನ್ಯಾಧಿಕಾರಿಯೂ ಆಗಿದ್ದು, ಸೈನಿಕ ಶಿಕ್ಷಣ, ಸೈನ್ಯದ ಶಿಸ್ತು, ಸಂಘಟನೆ ಮತ್ತು ವ್ಯೂಹ ರಚನೆ ಮುಂತಾದವುಗಳನ್ನು ನೋಡಿಕೊಳ್ಳುತ್ತಿದ್ದನು.

೮. **ನ್ಯಾಯಾಧೀಶ :** ಪ್ರಮುಖ ನ್ಯಾಯಮೂರ್ತಿ. ಪೌರ ಮತ್ತು ಸೈನಿಕ ನ್ಯಾಯಾಡಳಿತದ ಮುಖ್ಯನಾಗಿದ್ದನು.

ಪಂಡಿತ್‌ರಾವ್ ಮತ್ತು ನ್ಯಾಯಾಧೀಶರನ್ನು ಬಿಟ್ಟು ಉಳಿದ ಮಂತ್ರಿಗಳೆಲ್ಲರೂ ತಮ್ಮ ನಾಗರಿಕ ಅಧಿಕಾರಗಳೊಂದಿಗೆ ಸೈನಿಕ ಅಧಿಕಾರವನ್ನು ಹೊಂದಿದ್ದರು. ಇವರಲ್ಲಿ ಕೆಲವರು ಪ್ರಾಂತಾಧಿಕಾರಿಗಳೂ ಆಗಿದ್ದರು. ಇವರುಗಳು ಅಗತ್ಯಬಿದ್ದಾಗ ಯುದ್ಧಗಳಲ್ಲಿ ಭಾಗವಹಿಸಬೇಕಾಗಿದ್ದಿತು. ಕೇಂದ್ರದಲ್ಲಿ ೩೦ಕ್ಕೂ ಹೆಚ್ಚು ಆಡಳಿತ ವಿಭಾಗಗಳಿದ್ದವು. ಇವು ಮಂತ್ರಿಗಳ ಮೇಲ್ವಿಚಾರಣೆಗೆ ಒಳಗಾಗಿದ್ದವು. ಶಿವಾಜಿಯು ತನ್ನ ರಾಜ್ಯವನ್ನು ಅನೇಕ ಪ್ರಾಂತ್ಯಗಳಾಗಿ ವಿಂಗಡಿಸಿದ್ದನು. ಪ್ರಾಂತಾಧಿಕಾರಿಗಳು ತಮ್ಮದೇ ಆದ ಅಷ್ಟ ಪ್ರಧಾನರನ್ನು ಹೊಂದಿದ್ದರು. ಇವರನ್ನು ನೇಮಕ ಮಾಡುವ ಮತ್ತು ಅಧಿಕಾರದಿಂದ ನಿವೃತ್ತಿಗೊಳಿಸುವ ಅಧಿಕಾರ ರಾಜನಿಗೆ ಸೇರಿತ್ತು. ರಾಜ್ಯ ವ್ಯವಹಾರಗಳಿಗೆ ಸಂಬಂಧಿಸಿದ ಎಲ್ಲ ಪತ್ರಗಳಿಗೂ, ಒಪ್ಪಂದಗಳಿಗೂ ಕಾನೂನು ಕರಾರುಗಳಿಗೂ ರಾಜ ಮುದ್ರೆಯನ್ನು ಹಾಕಬೇಕಾಗಿದ್ದಿತು. ರಾಜ್ಯದಲ್ಲಿ ೧೮ ಪ್ರತ್ಯೇಕ ಇಲಾಖೆಗಳಿದ್ದು ಅವುಗಳ ಆಡಳಿತವನ್ನು ಬೇರೆ ಬೇರೆ ಅಧಿಕಾರಿಗಳು ನಿರ್ವಹಿಸುತ್ತಿದ್ದರು. ಈ ಅಧಿಕಾರಿಗಳು ತಮ್ಮ ಇಲಾಖೆಯ ಆಡಳಿತವನ್ನಲ್ಲದೆ ಸೈನ್ಯದಲ್ಲಿಯೂ ಸಹ ಪಾಲ್ಗೊಳ್ಳುತ್ತಿದ್ದರು. ರಾಜ್ಯದ ಆಡಳಿತ ವ್ಯವಹಾರಗಳಲ್ಲಿ ಅಧಿಕಾರಿಗಳು ಪ್ರಬಲರಾಗುವುದನ್ನು ತಪ್ಪಿಸಲು ಅನುವಂಶಿಕ ಅಧಿಕಾರ ಪದ್ಧತಿಯನ್ನು ರದ್ದುಪಡಿಸಿದನು. ಇದರಿಂದ ಊಳಿಗಮಾನ್ಯ ರೀತಿಯ ವ್ಯವಸ್ಥೆ ಕಡಿಮೆಯಾಗಿ ದಕ್ಷತೆ ಹೆಚ್ಚಿತು.

## ಪ್ರಾಂತೀಯ ಸರ್ಕಾರ

ಸಾಮ್ರಾಜ್ಯವನ್ನು ಶಿವಾಜಿಯು 'ಸ್ವರಾಜ್ಯ' ಎಂಬುದಾಗಿ ಕರೆಯುತ್ತಿದ್ದನು. ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯವನ್ನು ಪ್ರಾಂತಗಳನ್ನಾಗಿ ವಿಂಗಡಿಸಲಾಗಿತ್ತು. ಪ್ರಾಂತಾಧಿಕಾರಿಗಳು (ಸರ್ದೇಶಿ) ಇಲ್ಲಿ ಆಡಳಿತವನ್ನು ನಿರ್ವಹಿಸುತ್ತಿದ್ದರು. ಪ್ರಾಂತಗಳನ್ನು ಅನೇಕ ಜಿಲ್ಲೆಗಳಾಗಿ ವಿಂಗಡಿಸಿ ಮುಖ್ಯ ದೇಶಾಧಿಕಾರಿಯ ಅಧೀನಕ್ಕೆ ವಹಿಸಲಾಗಿತ್ತು. ಈ ಜಿಲ್ಲೆಗಳನ್ನು ಅನೇಕ 'ಫರ್ಗಣ' ಅಥವಾ 'ತರ್ಫ'ಗಳಾಗಿ ವಿಂಗಡಿಸಿ ಅಮಲ್ದಾರರೆಂಬ ಅಧಿಕಾರಿಗಳಿಗೆ ವಹಿಸಿ ಕೊಡಲಾಗಿತ್ತು. ಫರ್ಗಣ (ತರ್ಫ್)ಗಳನ್ನು ಗ್ರಾಮಗಳಾಗಿ ವಿಭಾಗಿಸಿ ಪಟೇಲನು ಮುಖ್ಯಾಧಿಕಾರಿಯಾಗಿದ್ದನು.

## ಕಂದಾಯ ಪದ್ಧತಿ

ಶಿವಾಜಿಯ ಕಂದಾಯ ಪದ್ಧತಿಯು ಅಹಮದ್‌ನಗರ ರಾಜ್ಯದ ಮಲ್ಲಿಕ್ ಅಂಬರ್‌ನ ಕಂದಾಯ ಪದ್ಧತಿಯನ್ನು ಹೋಲುತ್ತಿತ್ತು. ಜಮೀನಿನ ಕಂದಾಯವನ್ನು ಗುತ್ತಿಗೆಗೆ ಕೊಡುವ ಕ್ರಮವನ್ನು ತೆಗೆದುಹಾಕಿ, ಅದಕ್ಕಾಗಿ ರಾಜ್ಯದ ಅಧಿಕಾರಿಗಳು ನೇರವಾಗಿ ರೈತರಿಂದ ಕಂದಾಯ ವಸೂಲಿ ಮಾಡುವ ಪದ್ಧತಿಯನ್ನು ಜಾರಿಗೆ ತಂದನು. ಕಂದಾಯ ವಸೂಲಿಗೆ ಪ್ರಾಂತಗಳಲ್ಲಿ ಸುಬೇದಾರ, ಕಾರಕೂನ ಅಥವಾ ಮುಖ್ಯ ದೇಶಾಧಿಕಾರಿಯೆಂಬ ಅಧಿಕಾರಿಗಳಿದ್ದರು. ಈ ಅಧಿಕಾರಿಗೆ ತನ್ನ ರಾಜಕೀಯ ಅಧಿಪತಿಯ ಶಕ್ತಿಯನ್ನು ಪ್ರಯೋಗಿಸುವ ಅಥವಾ ರೈತರಿಗೆ ಉಪದ್ರವ ಕೊಡುವ ಅಧಿಕಾರವಿರಲಿಲ್ಲ. ಎಚ್ಚರಿಕೆಯಿಂದ ಭೂಸರ್ವೇಕ್ಷಣೆ ಮಾಡಿದ ನಂತರ ಕಂದಾಯ ನಿಗಧಿಪಡಿಸುತ್ತಿದ್ದರು. ಇದಕ್ಕಾಗಿ ರಾಜ್ಯದಾದ್ಯಂತ ಏಕರೂಪ ಅಳತೆ ಮಾಪನವನ್ನು ಜಾರಿಗೆ ತರಲಾಯಿತು. ರಾಜ್ಯದ ಕಂದಾಯ ಭಾಗವನ್ನು ಅಂದಾಜು ಮಾಡಿ ಒಟ್ಟು ಉತ್ಪನ್ನದ ಶೇಕಡ ೩೦ ಭಾಗ ಎಂದು ನಿಗಧಿಪಡಿಸಲಾಗಿತ್ತು. ಕೆಲವು ಕಾಲಾನಂತರ ಶಿವಾಜಿ ಇತರ ತೆರಿಗೆಗಳನ್ನು ರದ್ದುಗೊಳಿಸಿ ಇದನ್ನು ಶೇಕಡ ೪೦ ಕ್ಕೆ ಹೆಚ್ಚಿಸಿದನು. ರೈತರು ಕಂದಾಯದ ಬಾಕಿಯನ್ನು ಖಚಿತವಾಗಿ ತಿಳಿದುಕೊಂಡಿದ್ದರಿಂದ ಯಾವುದೇ ರೀತಿಯ ಉಪದ್ರವಕ್ಕೆ ಆಸ್ಪದವಿರಲಿಲ್ಲ. ರೈತರು ಕಂದಾಯವನ್ನು ನಗದು ಅಥವಾ ಧಾನ್ಯರೂಪದಲ್ಲಿ ಸರ್ಕಾರಕ್ಕೆ ನೀಡಬಹುದಾಗಿತ್ತು. ರೈತರಿಗೆ ಬೀಜ ಮತ್ತು ದನಕರುಗಳನ್ನು ಕೊಳ್ಳಲು ರಾಜ್ಯದ ಬೊಕ್ಕಸದಿಂದ ಸಾಲ ಕೊಡುವ ಪದ್ಧತಿ ರೂಢಿಯಲ್ಲಿತ್ತು. ರೈತರು ಈ ಸಾಲವನ್ನು ಸುಲಭ ಕಂತುಗಳಲ್ಲಿ ಮರುಪಾವತಿ ಮಾಡುತ್ತಿದ್ದರು. ಶಿವಾಜಿಯು ಆರ್ಥಿಕವಾಗಿ ರಾಜ್ಯವನ್ನು ಭದ್ರಪಡಿಸುವ ಸಲುವಾಗಿ ಕಂದಾಯದ ವಸೂಲಿ ವಿಚಾರದಲ್ಲಿ ಕಟ್ಟುನಿಟ್ಟಾದ ಕ್ರಮಗಳನ್ನು ಕೈಗೊಂಡಿದ್ದನು. ಫ್ರಿಯರ್‌ರವರು ಶಿವಾಜಿಯ ಕಂದಾಯದ ಅಧಿಕಾರಗಳು ಕೃಷಿಕರಿಂದ ಬಲತ್ಕಾರವಾಗಿ ಕಂದಾಯವನ್ನು ವಸೂಲಿ ಮಾಡುತ್ತಿದ್ದರೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಗ್ರಾಂಡ್‌ಢಫ್ ರವರು ''ಶಿವಾಜಿಯ ಕಂದಾಯ ವ್ಯವಸ್ಥೆ ಉದಾರ ರೀತಿಯದು, ಸಮರ್ಥವಾದುದು ಮತ್ತು ತನ್ನ ಪ್ರಜೆಗಳಿಗೆ ಹಿತಾಸಕ್ತಿಗೆ ನೆರವಾಗುವ ರೀತಿಯದಾಗಿತ್ತು'' ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ.

## ಚೌತ್ ಮತ್ತು ಸರ್ದೇಶ್‌ಮುಖಿ

ಮಹಾರಾಷ್ಟ್ರದ ಗುಡ್ಡಗಾಡು ಪ್ರದೇಶಗಳಿಂದ ಹೆಚ್ಚಿನ ಭೂಕಂದಾಯ ಸಂಗ್ರಹ ವಾಗುತ್ತಿರಲಿಲ್ಲ. ಇದಕ್ಕಾಗಿ ತನ್ನ ಅಧೀನ ಪ್ರಾಂತ್ಯಗಳು, ಬಿಜಾಪುರ, ಮೊಗಲ್ ಪ್ರಾಂತ್ಯಗಳ ಮೂಲಕ *ಚೌತ್* ಮತ್ತು *ಸರ್ದೇಶ್‌ಮುಖಿ* ಎಂಬ ಮಿಲಿಟರಿ ತೆರಿಗೆಗಳನ್ನು ವಿಧಿಸುತ್ತಿದ್ದನು. ಈ ತೆರಿಗೆಗಳು ಕ್ರಮವಾಗಿ ೧/೪ ಮತ್ತು ೧/೧೦ ಭಾಗಗಳಾಗಿದ್ದವು. 'ಚೌತ್' ವಿಧಿಸುವ ಪದ್ಧತಿ ಹೊಸದಾಗಿರದೇ ಈ ವೇಳೆಗಾಗಲೇ ಪಶ್ಚಿಮ ಭಾರತದಲ್ಲಿ ಜಾರಿಯಲ್ಲಿದ್ದು ರಾಮ ನಗರದ ರಾಜನು ಡಮಾನಿನ ಪೋರ್ಚುಗೀಸ್ ಪ್ರಜೆಗಳಿಂದ ವಸೂಲಿ ಮಾಡುತ್ತಿದ್ದನು. ಎಂ.ಜಿ. ರಾನಡೆಯವರು ಚೌತ್‌ನ್ನು ಲಾರ್ಡ್ ವೆಲ್ಲೆಸ್ಲಿಯ 'ಸಹಾಯಕ ಸೈನಿಕ ಪದ್ಧತಿ'ಗೆ ಹೋಲಿಸಿರುವರು. "ಅದು ಕೇವಲ ನೈತಿಕ ಅಥವಾ ಶಾಸನಬದ್ಧ ಹೊಣೆಗಾರಿಕೆ ಮಾತ್ರ ವಾಗಿರದೆ ಮೂರನೆಯ ಪಕ್ಷವೊಂದು ತನ್ನ ಮೇಲೆ ಧಾಳಿ ಮಾಡುವುದರ ವಿರುದ್ಧ ರಕ್ಷಣೆಯನ್ನು ಪಡೆದುಕೊಳ್ಳಲು ನೀಡಬೇಕಾದ ಒಂದು ವಿಧದ ತೆರಿಗೆಯಾಗಿತ್ತು". ಆದರೆ ಜೆ.ಎಸ್. ಸರ್ಕಾರ್‌ರವರು ಇದಕ್ಕೆ ತದ್ವಿರುದ್ಧವಾಗಿ "ಚೌತ್ ಒಂದು ದರೋಡೆಕೋರನ ಕಾಟವನ್ನು ಹಣವನ್ನು ಕೊಟ್ಟು ತಪ್ಪಿಸಿಕೊಳ್ಳುವ ಒಂದು ಮಾರ್ಗವಾಗಿದ್ದಿತು. ಇದು ಶತ್ರು ಗಳಿಂದ ರಕ್ಷಿಸಿಕೊಳ್ಳುವ ಶಾಂತಿ ಮತ್ತು ಶಿಸ್ತಿನ ಪಾಲನೆಗೆ ಸಹಾಯಕ ಸೇನಾ ಪದ್ಧತಿಯಾಗಿರ ಲಿಲ್ಲ" ಎಂದು ಅಭಿಪ್ರಾಯಪಟ್ಟಿದ್ದಾರೆ. ಡಾ. ಸೇನ್‌ರವರ ಪ್ರಕಾರ "ಸೇನಾ ನಾಯಕನೊಬ್ಬ ತನ ಸಾಮಂತರಿಂದ ಮತ್ತು ವಿರೋಧಿಗಳಿಂದ ವಸೂಲಿ ಮಾಡುತ್ತಿದ್ದ ಸೇನಾ ಕಾಣಿಕೆ" ಎಂದಿದ್ದಾರೆ. ಸರ್ದೇಸಾಯಿಯವರ ಪ್ರಕಾರ "ಇದು ಶತ್ರುಗಳ ಅಥವಾ ಆಕ್ರಮಿತ ಪ್ರದೇಶ ಗಳಿಂದ ವಸೂಲಿ ಮಾಡುತ್ತಿದ್ದ ಕಪ್ಪವಾಗಿದ್ದಿತು. ಆದಾಯದ ೧/೪ ಭಾಗವನ್ನು 'ಚೌತ್' ಎಂದು ವಸೂಲಿ ಮಾಡುತ್ತಿದ್ದರು. ಇದಲ್ಲದೆ ಶಿವಾಜಿಯು ೧/೧೦ ಭಾಗ 'ಸರ್ದೇಶ್‌ಮುಖಿ' ತೆರಿಗೆಯನ್ನು ತಾನು ಅನುವಂಶಿಕವಾಗಿ ಮಹಾರಾಷ್ಟ್ರದ ಸರ್ದೇಶ್‌ಮುಖನಾಗಿದ್ದ ಆಧಾರದ ಮೇಲೆ ವಸೂಲಿ ಮಾಡುತ್ತಿದ್ದನು. ಇದೊಂದು ಕಾನೂನಿನ ಕಲ್ಪನೆಯಾಗಿತ್ತು". ಈ ಚೌತ್ ಮತ್ತು ಸರ್ದೇಶ್‌ಮುಖಿ ವಸೂಲಿ ಮರಾಠರಿಗೆ ತಮ್ಮ ಆಡಳಿತ ವ್ಯಾಪ್ತಿಯ ಹೊರಗಿದ್ದ ಪ್ರದೇಶಗಳ ಮೇಲೆ ಪ್ರಾಬಲ್ಯ ಹೊಂದುವಂತೆ ಮಾಡಿ ನಂತರ ಅವುಗಳನ್ನು ಸುಲಭವಾಗಿ ಸೇರಿಸಿಕೊಂಡು ಅವರ ರಾಜ್ಯ ಗಡಿಯಾಚೆ ವಿಸ್ತರಿಸಿದ್ದಿತು.

## ಸೈನ್ಯಾಡಳಿತ

ಮಹಾಯೋಧನಾದ ಶಿವಾಜಿಯು ಹೊಸ ಮಾದರಿಯಲ್ಲಿ ಮರಾಠರ ಸೇನಾ ವ್ಯವಸ್ಥೆ ಯನ್ನು ಮಾಡಿದುದು ಅವನ ಸೇನಾ ಪ್ರತಿಭೆಗೆ ಉತ್ತಮ ಸಾಕ್ಷಿಯಾಗಿದೆ. ಹಿಂದೆ ಮರಾಠರ ಯುದ್ಧ ಸೇನೆಯ ಹೆಚ್ಚಿನ ಭಾಗ ಅಶ್ವಪಡೆಯಿಂದ ಕೂಡಿದ್ದು, ಈ ಪಡೆಯಲ್ಲಿದ್ದವರು ವರ್ಷದಲ್ಲಿ ಆರು ತಿಂಗಳ ಕಾಲ ತಮ್ಮ ಜಮೀನುಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಉದ್ಯಮಶೀಲರಾಗಿದ್ದರು. ಆದರೆ ಶಿವಾಜಿಯು ಶಿಸ್ತಿನಿಂದ ಕೂಡಿದ ಸೈನಿಕ ಪಡೆಯನ್ನು ಆರಂಭಿಸಿದನು. ಈ ಸೈನಿಕರು ಸದಾಕಾಲ ಸಿದ್ಧರಾಗಿರಬೇಕಾಗಿತ್ತು. ಅವರಿಗೆ ಮಳೆಗಾಲದಲ್ಲಿ

ಸಂಬಳ ಮತ್ತು ವಸತಿಯ ಸೌಲಭ್ಯವನ್ನು ಕಲ್ಪಿಸಿಕೊಡಲಾಗಿತ್ತು. ಇದರಿಂದ ಸೈನ್ಯದ ಸಂಖ್ಯೆಯು ೩೦,೦೦೦ ದಿಂದ ೪೦,೦೦೦ ಅಶ್ವದಳ ಮತ್ತು ೧೦,೦೦೦ ಕಾಲ್ದಳಕ್ಕೆ ಏರಿತು. ಶಿವಾಜಿಯು ಒಂದು ನೌಕಾಬಲವನ್ನು ರಚಿಸಿಕೊಂಡಿದ್ದು, ಈ ನೌಕಪಡೆಗೆ ಬೇಕಾದ ನಾವಿಕರನ್ನು ಬೊಂಬಾಯಿಯ ಕರಾವಳಿಯ ಕೆಳವರ್ಗದ ಹಿಂದೂಗಳಿಂದ ಆಯ್ಕೆ ಮಾಡಿ ಕೊಳ್ಳುತ್ತಿದ್ದನು. ಈತನ ನಾಯಕತ್ವದಲ್ಲಿ ಮರಾಠ ನೌಕಾಬಲ ಅಷ್ಟೇನು ಪ್ರಾಮುಖ್ಯತೆ ಪಡೆಯದಿದ್ದರೂ ನಂತರದಲ್ಲಿ ಬ್ರಿಟಿಷ್, ಫ್ರೆಂಚ್ ಮತ್ತು ಡಚ್ಚರಿಗೆ ಸಾಕಷ್ಟು ತೊಂದರೆ ಯನ್ನುಂಟುಮಾಡಿತು. ಅಲ್ಲದೆ ಸಿದ್ಧಿಗಳೆಂಬ ಕಡಲ್ಗಳ್ಳರನ್ನು ಹತ್ತಿಕ್ಕಲು ಸಹಕಾರಿಯಾಯಿತು.

ಶಿವಾಜಿಯೇ ಪ್ರತಿಯೊಬ್ಬ ಸೈನಿಕರನ್ನು ಪರೀಕ್ಷಿಸಿ ಆಯ್ಕೆ ಮಾಡುತ್ತಿದ್ದನು. ಮರಾಠ ಸೈನ್ಯದಲ್ಲಿ, ಅಶ್ವದಳ, ಗಜದಳ, ಒಂಟೆದಳಗಳಿದ್ದವು. ಅಶ್ವದಳಕ್ಕೆ ಪ್ರಾಧಾನ್ಯತೆ ನೀಡ ಲಾಗಿತ್ತು. ಅಶ್ವದಳದಲ್ಲಿ ಎರಡು ವಿಭಾಗಗಳಿದ್ದವು.

೧. **ಭಾಗೀರ್ :** ಸರ್ಕಾರದಿಂದ ಪೋಷಿಸಲ್ಪಡುವ ಅಶ್ವದಳಕ್ಕೆ 'ಭಾಗೀರ್' ಎನ್ನುತ್ತಿದ್ದರು.

೨. **ಸಿಲ್ಹಾದಾರ್ :** ತಾವೇ ಸ್ವತಃ ಕುದುರೆಗಳನ್ನು ಹೊಂದಿ ಅದರ ಪೋಷಣೆಗೆ ಬೇಕಾದ ನೆರವನ್ನು ಸರ್ಕಾರದಿಂದ ಪಡೆಯುತ್ತಿದ್ದ ಅಶ್ವಪಡೆಗೆ 'ಸಿಲ್ಹಾದಾರ್' ಎಂದು ಕರೆಯುತ್ತಿದ್ದರು.

**ಅಶ್ವಪಡೆ :** ೨೫ ರಾವುತರ ತಂಡದ ನಾಯಕ ಹವಾಲ್ದಾರ, ೫ ಹವಾಲ್ದಾರರ ಮೇಲೆ ಒಬ್ಬ ಜುಮ್ಲಾದಾರ, ೧೦ ಜುಮ್ಲಾದಾರರ ಮೇಲೆ ಒಬ್ಬ ಹಜಾರಿಯಿರುತ್ತಿದ್ದನು (ವಾರ್ಷಿಕ ೧೦೦೦ ಹೊನ್ನುಗಳನ್ನು ಸಂಬಳವಾಗಿ ಪಡೆಯುತ್ತಿದ್ದರು). ಹಜಾರಿಗಳ ಮೇಲ್ವಿಚಾರಕನಾಗಿ ಷಾಂಜಹಜಾರಿಯು ಮತ್ತು ಸರ್ನೋಬತ್ ಅಥವಾ ಅಶ್ವಪಡೆಯ ಮಹಾದಂಡನಾಯಕ ನಾಗಿದ್ದನು.

**ಕಾಲ್ದಳ :** ೯ ಜನ ಸಾಮಾನ್ಯ ಸೈನಿಕರಿಗೆ ಒಬ್ಬ ನಾಯಕ್‌ನೂ, ೫ ನಾಯಕ್‌ಗಳ ಮೇಲೆ ಒಬ್ಬ ಹವಾಲ್ದಾರನು, ೩ ಹವಾಲ್ದಾರರ ಮೇಲೆ ಒಬ್ಬ ಜುಮ್ಲಾದಾರನು. ೧೦ ಜುಮ್ಲಾಗಾರರ ಮೇಲ್ಪಟ್ಟು ಒಬ್ಬ ಹಜಾರಿಯು, ೭ ಹಜಾರಿಗಳ ಮೇಲ್ಪಟ್ಟು ಒಬ್ಬ ಸರ್ನೋಬತನಿರುತ್ತಿದ್ದನು. ಸೇನಾಪತಿಯು ಪಡೆಯ ಮುಖ್ಯನಾಗಿರುತ್ತಿದ್ದನು. ಇವರೆಲ್ಲಾ ಒಟ್ಟಿಗೆ ಕೆಲಸ ಮಾಡಬೇಕಿತ್ತು ಮತ್ತು ಹೀಗೆ ಒಬ್ಬರ ಮೇಲೆ ಮತ್ತೊಬ್ಬರು ಪ್ರತಿಬಂಧಕರಾಗಿರುತ್ತಿದ್ದರು. ಅಲ್ಲದೆ ಶಿವಾಜಿಯು ಸರ್ವೋಚ್ಛ ಸೇನಾ ಸೇನಾಪತಿಯಾಗಿದ್ದನು. ಸಬಸದ್-ಬಖರ್‌ರವರ ಪ್ರಕಾರ ಶಿವಾಜಿಯ ಬಳಿ ಒಂದು ಲಕ್ಷ ಕಾಲ್ದಳ ೩೦,೦೦೦ ಅಶ್ವಪಡೆ, ೩೦೦೦ ಒಂಟೆಗಳು, ೧೨೬೦ ಗಜದಳವಿದ್ದಿತೆಂದಿದ್ದಾರೆ. ಶಿವಾಜಿಯು ಸೈನ್ಯಾಧಿಕಾರಿಗಳಿಗೆ ಜಹಗೀರು ನೀಡುವ ಬದಲು ವೇತನ ನೀಡುತ್ತಿದ್ದನು. ಸೈನಿಕರು ಕಟ್ಟುನಿಟ್ಟಾದ ಶಿಸ್ತಿನಿಂದ ವರ್ತಿಸುವಂತೆ ಎಚ್ಚರವಹಿಸಿ ಅವರ ನೈತಿಕ ಮಟ್ಟ ಅಧೋಗತಿಗಿಳಿಯುವುದನ್ನು ತಪ್ಪಿಸಲು ಅವರಿಗಾಗಿ ವರ್ತನೆಯ ನೀತಿ ಸಂಹಿತೆಯೊಂದನ್ನು ರೂಪಿಸಿದನು. ಆ ನಿಯಮಗಳ ಪೈಕಿ ಅತಿ ಪ್ರಮುಖವಾದವುಗಳೆಂದರೆ "ಯಾವ ಸ್ತ್ರೀಯಾಗಲಿ, ಸ್ತ್ರೀ ಸೇವಕಿಯಾಗಲಿ ಅಥವಾ ನರ್ತಕಿಯಾಗಲಿ ಸೇನೆಯೊಡನೆ

ಹೋಗಕೂಡದು. ಇವರ ಪೈಕಿ ಯಾರಾದರೊಬ್ಬರು ಸೈನಿಕನ ಜೊತೆಯಲ್ಲಿದ್ದರೆ ಆ ಸೈನಿಕನ ತಲೆ ಕತ್ತರಿಸಲಾಗುತ್ತಿತ್ತು. ಹಸುಗಳನ್ನು ಸ್ವಾಧೀನಪಡಿಸಿಕೊಳ್ಳುವಂತಿರಲಿಲ್ಲ. ದಂಡಯಾತ್ರೆಯ ಕಾಲದಲ್ಲಿ ಯಾವ ಸೈನಿಕನೇ ಆಗಲಿ ಹೀನ ರೀತಿಯಲ್ಲಿ ವರ್ತಿಸುವಂತಿರಲಿಲ್ಲ. ಶಿವಾಜಿಯು ಯುದ್ಧದ ಲೂಟಿಗೆ ಸಂಬಂಧಿಸಿದಂತೆ ಈ ರೀತಿ ಆದೇಶ ನೀಡಿದ್ದನು. ಯುದ್ಧಗಳಲ್ಲಿ ದೊರೆತ ಅಮೂಲ್ಯ ಸಂಪತ್ತನ್ನು ಅದರಲ್ಲಿ ಸ್ವಲ್ಪ ಭಾಗವನ್ನೂ ತೆಗೆದುಕೊಳ್ಳದೆ ಸರ್ಕಾರಕ್ಕೆ ಒಪ್ಪಿಸಬೇಕು. ಕೈ ಸೆರೆಯಾದ ಸ್ತ್ರೀಯರನ್ನು ತಮ್ಮ ಸಹೋದರಿಯರಂತೆ ಪರಿಗಣಿಸಿ ರಕ್ಷಿಸುವ ಆದರ್ಶ ಗುಣವನ್ನು ಬೆಳೆಸಿಕೊಳ್ಳಬೇಕು ಎಂಬುದಾಗಿತ್ತು. ಬೆಟ್ಟಗುಡ್ಡಗಳಲ್ಲಿ ಅವಿತು ಯುದ್ಧ ಮಾಡುವ "ಗೆರಿಲ್ಲಾ ಯುದ್ಧವು" ಮರಾಠ ಸೈನ್ಯದ ವಿಶಿಷ್ಟ ಅಂಶವಾಗಿದ್ದಿತು. ಆದ್ದರಿಂದಲೇ ಶಿವಾಜಿ ಪ್ರಬಲ ಔರಂಗಜೇಬನನ್ನು ಯಶಸ್ವಿಯಾಗಿ ಎದುರಿಸಲು ಸಾಧ್ಯವಾಯಿತು.

### ಚರಿತ್ರೆಯಲ್ಲಿ ಶಿವಾಜಿಯ ಸ್ಥಾನ ಮತ್ತು ಅವನ ವ್ಯಕ್ತಿತ್ವ

ಶಿವಾಜಿಯು ಭಾರತದ ಇತಿಹಾಸದಲ್ಲಿ ವ್ಯಕ್ತಿ ಮತ್ತು ದೊರೆಯಾಗಿ ವಿಶಿಷ್ಟ ಸ್ಥಾನ ಗಳಿಸಿಕೊಂಡಿದ್ದಾನೆ. ಹುಟ್ಟಿನಿಂದಲೇ ನಾಯಕನ ಗುಣವನ್ನು ಹೊಂದಿದ್ದು ತನ್ನೊಡನೆ ಸಂಪರ್ಕ ಪಡೆದವರನ್ನೆಲ್ಲಾ ಆಕರ್ಷಿಸಬಲ್ಲ ವ್ಯಕ್ತಿತ್ವವನ್ನು ಪಡೆದಿದ್ದನು. ಅಸಾಧಾರಣ ಧೈರ್ಯ, ಶಕ್ತಿ ಮತ್ತು ಯುಕ್ತಿಗಳಿಂದ ಬಲವನ್ನು-ಬಲದಿಂದಲೂ, ಕುತಂತ್ರವನ್ನು- ಕುತಂತ್ರದಿಂದಲೂ ಎದುರಿಸುತ್ತಾ ಜಹಗೀರುದಾರನ ಹುದ್ದೆಯಿಂದ ಛತ್ರಪತಿಯ ಸ್ಥಾನವನ್ನಲಂಕರಿಸಿದನು. ಮೊಗಲ್ ಮತ್ತು ಬಿಜಾಪುರ ಸಾಮ್ರಾಜ್ಯಗಳು ಉನ್ನತ ಸ್ಥಿತಿಯಲ್ಲಿದ್ದಾಗ ಧೈರ್ಯದಿಂದ ಅವರಿಗೆ ಸರಿಸಮಾನವಾದ ಹಿಂದೂ ರಾಜ್ಯವನ್ನು ನಿರ್ಮಿಸಿದನು. ಶಿವಾಜಿಯ ಸ್ಫೂರ್ತಿಯಿಂದ ಮರಾಠರಲ್ಲಿ ಉದಯಿಸಿದ ದೇಶಪ್ರೇಮವನ್ನು ಮರಾಠರು ಎಂಥ ಕಷ್ಟ ಬಂದರೂ ಬಿಡಲಿಲ್ಲವೆಂಬ ಕಾರಣದ ಮೇಲೆ ವಾರನ್‌ಹೇಸ್ಟಿಂಗ್ಸ್ ಮತ್ತು ಸರ್ ಚಾರ್ಲ್ಸ್ ಮೆಟ್‌ಕಾಫ್ ರವರು 'ಮರಾಠರು ಇಂಡಿಯಾ ದೇಶದ ಇತರ ಜನಗಳಿಗಿಂತ ಬೇರೆಯವರಾಗಿರುತ್ತಾರೆ' ಎಂದು ತಿಳಿಸುತ್ತಾರೆ.

ಶಿವಾಜಿಯ ಆಡಳಿತ ಉದಾರತೆ ಮತ್ತು ದಕ್ಷತೆಯಿಂದ ಕೂಡಿತ್ತು. ಕಾಫಿಖಾನ್‌ನ ಪ್ರಕಾರ "ಯುದ್ಧದಲ್ಲಿ ಸೆರೆಯಾದ ಮುಸ್ಲಿಮ ಸ್ತ್ರೀಯರನ್ನು, ಮಕ್ಕಳನ್ನು ಉದಾರತೆಯಿಂದ ಮತ್ತು ಗೌರವದಿಂದ ಕಾಣುತ್ತಿದ್ದನು. ಪವಿತ್ರ ಕುರಾನನ್ನು ಸಹ ಗೌರವಿಸುತ್ತಿದ್ದನು. ಇಂತಹ ಉದಾರತೆ ಆತನ ಪ್ರತಿಸ್ಪರ್ಧಿ ಔರಂಗಜೇಬನಿಗಿರಲಿಲ್ಲ" ಎಂದಿದ್ದಾನೆ. ಮರಾಠ ದೇಶೋದ್ಧಾರ ಕಾರ್ಯದಲ್ಲಿ ಧರ್ಮವನ್ನೇ ಒಂದು ಪ್ರಧಾನಶಕ್ತಿಯಾಗಿರಿಸಿಕೊಂಡು ಹಿಂದೂ ಧರ್ಮ ಹಾಗೂ ಶಿಕ್ಷಣಕ್ಕೆ ಸದಾ ಕಾಲ ಪ್ರೋತ್ಸಾಹ ನೀಡಿದನು. ಇತರ ಧರ್ಮಗಳ ಬಗ್ಗೆ ಸಹಿಷ್ಣುತೆಯನ್ನು ಹೊಂದಿದ್ದ ಅವನು ಮುಸಲ್ಮಾನ ಸಂತರನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದನು. ಮಂದಿರ ಮಸೀದಿಗಳಿಗೆ ಕಂದಾಯವಿಲ್ಲದ ಜಮೀನುಗಳನ್ನು ನೀಡಿದ್ದನು. ಶಿವಾಜಿಯು ಒಬ್ಬ ಶ್ರೇಷ್ಠ ವ್ಯಕ್ತಿಯಾಗಿದ್ದು ಉತ್ತಮ ವ್ಯಕ್ತಿತ್ವವನ್ನು ಹೊಂದಿದ್ದು, ಇಂದಿಗೂ ಭಾರತೀಯ ಇತಿಹಾಸದಲ್ಲಿ ಅಚ್ಚಳಿಯದ ಸ್ಥಾನವನ್ನು ಗಳಿಸಿಕೊಂಡಿದ್ದಾನೆ.

## ಪರಿಕಲ್ಪನೆಗಳು / ಪಾರಿಭಾಷಿಕ ಪದಕೋಶ

| | | |
|---|---|---|
| ಪೈಬೋಸ್ | - | ಸುಲ್ತಾನರ ಕಾಲದಲ್ಲಿ ಸುಲ್ತಾನನಿಗೆ ಸಾಷ್ಟಾಂಗವೆರಗುವ ಪದ್ಧತಿ. ಇದನ್ನು ಬಲ್ಬನ್ ಜಾರಿಗೆ ತಂದನು. |
| ನವ ಮುಸಲ್ಮಾನರು | - | ಖಿಲ್ಜಿಗಳ ಕಾಲದಲ್ಲಿ ಇಸ್ಲಾಂ ಧರ್ಮವನ್ನು ಒಪ್ಪಿಕೊಂಡು ದೆಹಲಿಯ ಹತ್ತಿರ ನೆಲೆಸಿದ ಮಂಗೋಲಿಯನ್ ಉಲೂಫ್‌ಖಾನನ ಅನುಯಾಯಿಗಳು. ಇವರನ್ನು ಹೊಸ ಮುಸಲ್ಮಾನರು ಎಂದು ಕರೆಯುತ್ತಾರೆ. |
| ದಾಗ್ | - | ಕುದುರೆಗಳ ಮೇಲೆ ಸರ್ಕಾರ ಹಾಕುತ್ತಿದ್ದ ಗುರುತು. ಇದನ್ನು ಅಲ್ಲಾಉದ್ದೀನ್ ಜಾರಿಗೆ ತಂದ. |
| ಚಹರಾ ಅಥವಾ ಹುಲಿಯ | - | ಸೈನಿಕರ ಚಹರೆಗಳ ಬಗ್ಗೆ ವಿವರಣೆಯನ್ನು ಬರೆದಿಡುವ ಅರಸನ ಹಸ್ತಮುದ್ರಿಕೆಯ ಗುರುತು. |
| ಫರ್ಮಾನ್ | - | ರಾಜನ ಶಾಸನಗಳು ಅಥವಾ ಆಜ್ಞೆಗಳು. |
| ಸಜ್‌ದಾ | - | ಕುಳಿತು ಪ್ರಾರ್ಥನೆ ಮಾಡುವುದು (ಮಾಡುವವರು). |
| ಕೋನಿಸ್ | - | ನಿಂತು ಪ್ರಾರ್ಥನೆ ಮಾಡುವುದು. |
| ಬಜಕ್ | - | ಕಬೀರರ ಭಕ್ತಿ ಕೀರ್ತನೆಗಳು (ಹಾಡುಗಳು). |
| ಜವಹರ್ | - | ಯುದ್ಧದಲ್ಲಿ ರಜಪೂತ ಅರಸರು ಸೋತು ಹೋದ ಮೇಲೆ ವೈರಿಯ ದುರ್ನಡವಳಿಕೆಯನ್ನು ತಪ್ಪಿಸಿಕೊಳ್ಳಲು ಅವರ ರಾಣಿಯರು ರಾಣಿವಾಸವನ್ನು ಒಳಗೊಂಡಂತೆ ಮಾಡಿಕೊಳ್ಳುವ ಸಾಮೂಹಿಕ ದಹನ. |
| ಪೆಟ್ಟಿಕೋಟ್ ಗೌರ್ನಮೆಂಟ್ | - | ಸ್ತ್ರೀ ಪ್ರಭುತ್ವ |
| ಆನಾಬಜಾರ್ | - | ಮೊಗಲರ ಕಾಲದಲ್ಲಿ ಚಕ್ರವರ್ತಿಯ ಸಲುವಾಗಿ ವಿಶೇಷವಾಗಿ ನಡೆಯುತ್ತಿದ್ದ ಮಾರುಕಟ್ಟೆ. |
| ಜರೊಕಾ-ಎ-ದರ್ಶನ್ | - | ಅಕ್ಬರನು ಪ್ರಾರಂಭಿಸಿದ ಸಾರ್ವಜನಿಕ ಜನದರ್ಶನಾ ಕಾರ್ಯಕ್ರಮ. |
| ಇಬಾದತ್‌ಖಾನ | - | ಅಕ್ಬರನು ಫತೇಪುರ್ ಸಿಕ್ರಿಯಲ್ಲಿ ಪ್ರಾರಂಭಿಸಿದ ಸಾರ್ವಜನಿಕ ಆರಾಧನಾ ಮಂದಿರ. |
| ದೀನ್-ಎ-ಇಲಾಹಿ/ ತೌಹೀದ್-ಎ-ಇಲಾಹಿ | - | ಅಕ್ಬರನು ಪ್ರಾರಂಭಿಸಿದ ಹೊಸ ಧರ್ಮ (ಕ್ರಿ.ಶ. ೧೫೮೨) |
| ಅಲ್ಲಾಹು ಅಕ್ಬರ್ | - | ದೇವರು ಒಬ್ಬನೇ. |
| ಮನ್‌ಸಭ್ | - | ಮೊಗಲರ ಕಾಲದ ಆಡಳಿತ, ಸೈನಿಕ, ಕಂದಾಯಿಕ ಅಧಿಕಾರಿ. ಅಕ್ಬರನು ಜಾರಿಗೆ ತಂದನು (ಮನ್-ಸಭ್‌ದಾರಿ ವ್ಯವಸ್ಥೆ ನೋಡಿ). |

| | | |
|---|---|---|
| ಉಲೇಮ | - | ಮುಸ್ಲಿಂ ಧಾರ್ಮಿಕ ನಾಯಕರು (ಉಲ್ಮ). |
| ಕುತ್ಬಾ (Khutaba) | - | ಮುಸ್ಲಿಂ ಹಬ್ಬಗಳಾದ ಈದ್-ಉಲ್-ಪಿತ್ರಾ ಮತ್ತು ಈದ್-ಮಜುಹಾಗಳ ಕಾಲದಲ್ಲಿ ನೀಡುವ ಧರ್ಮಬೋಧನೆ. |
| ವತನ್ | - | ಶಿವಾಜಿಯ ಕಾಲದಲ್ಲಿ ಸರ್‌ದೇಶ್ ಮುಖ್ ಪ್ರಾಂತ್ಯಗಳನ್ನು ಗುರುತಿಸುವ ಬಗೆ. |
| ರಾಷ್ಟ್ರ | - | ಶಿವಾಜಿಯ ರಾಜ್ಯ. |
| ಚೌಕ್ | - | ಶಿವಾಜಿಯು ಮೊಗಲಾಯಿ ಪ್ರಾಂತ್ಯಗಳ ಮೇಲೆ ವಸೂಲಿ ಮಾಡುತ್ತಿದ್ದ ೧/೪ ಭಾಗದ ಕಂದಾಯ. |
| ಸರ್‌ದೇಶ್‌ಮುಖಿ | - | ಶಿವಾಜಿಯು ವತನ್ ಪ್ರಾಂತ್ಯಗಳ ಮೇಲೆ ವಿಧಿಸುತ್ತಿದ್ದ ೧/೧೦ ಭಾಗದ ಪಾರಂಪರಿಕ ತೆರಿಗೆ. |
| ಜಖಾತ್ | - | ಮಧ್ಯಕಾಲೀನ ಭಾರತದಲ್ಲಿ ಮುಸ್ಲಿಮರ ಮೇಲೆ ವಿಧಿಸುತ್ತಿದ್ದ ಧಾರ್ಮಿಕ ತೆರಿಗೆ. |
| ಜಜಿಯ | - | ಮಧ್ಯಕಾಲೀನ ಭಾರತದಲ್ಲಿ ಮುಸ್ಲಿಮರಲ್ಲದವರ ಮೇಲೆ ವಿಧಿಸುತ್ತಿದ್ದ ಕಂದಾಯ. |

**ಹೆಚ್ಚಿನ ಓದಿಗಾಗಿ**


೧. ಶ್ರೀವಾಸ್ತವ ಎ.ಎಲ್ - ದಿ ದೆಹಲಿ ಸುಲ್ತಾನೇಟ್
೨. ಶ್ರೀವಾಸ್ತವ ಎ.ಎಲ್ - ದಿ ಮುಘಲ್ ಎಂಫೈರ್ (೧೫೨೬-೧೮೦೩)
೩. ಮಜುಂದಾರ್ ಆರ್.ಸಿ - ದಿ ಮಿಡೈವಲ್ ಇಂಡಿಯನ್ ಹಿಸ್ಟರಿ
೪. ಶರ್ಮಾ ಆರ್.ಎಸ್ - ಪರ್ಸ್ಪೆಕ್ಟೀವ್ಸ್ ಇನ್ ಸೋಷಿಯಲ್ ಅಂಡ್ ಎಕನಾಮಿಕ್ ಹಿಸ್ಟರಿ ಆಫ್ ಅರ್ಲಿ ಇಂಡಿಯ
೫. ಶರ್ಮಾ ಆರ್.ಎಸ್ - ಅರ್ಬನ್ ಡಿಕೆ ಇನ್ ಇಂಡಿಯ
೬. ಶರ್ಮಾ ಆರ್.ಎಸ್ - ಇಂಡಿಯನ್ ಫ್ಯೂಡಲಿಸಂ
೭. ಶರ್ಮಾ ಆರ್.ಎಸ್ - ಮೆಟರಿಯಲ್ ಕಲ್ಚರ್ ಅಂಡ್ ಸೋಷಿಯಲ್ ಫಾರ್ಮೇಷನ್ ಇನ್ ಏನ್ಸಿಯಂಟ್ ಇಂಡಿಯ
೮. ಹಬೀಬುಲ್ಲಾ ಎ.ಬಿ.ಎಂ - ದಿ ಫೌಂಡೇಷನ್ ಆಫ್ ಮುಸ್ಲಿಮ್ ರೂಲ್ ಇನ್ ಇಂಡಿಯ
೯. ಮೇರ್‌ಲ್ಯಾಂಡ್ ಡಬ್ಲ್ಯೂ.ಎಚ್ - ದಿ ಅಗ್ರೇರಿಯನ್ ಸಿಸ್ಟಂ ಆಫ್ ಮೊಸ್ಲಿಂ ಇಂಡಿಯ
೧೦. ತ್ರಿಪಾಠಿ ಆರ್.ಪಿ - ಸಮ್ ಆಸ್ಪೆಕ್ಟ್ಸ್ ಆಫ್ ಮುಸ್ಲಿಂ ಅಡ್ಮಿನಿಸ್ಟ್ರೇಷನ್
೧೧. ಲಾಲ್ ಕೆ.ಎಸ್ - ಹಿಸ್ಟರಿ ಆಫ್ ಖಿಲ್ಜೀಸ್

೧೨. ಮಹಮದ್ ಹಬೀಬ್ ಮತ್ತು ನಿಜಾಮಿ ಕೆ.ಎ - ಎ ಕಾಂಪ್ರೆಹೆನ್ಸಿವ್ ಹಿಸ್ಟರಿ ಆಫ್ ಇಂಡಿಯ, ಸಂಪುಟ I ಮತ್ತು II
೧೩. ಪಾಂಡೆ ಎ.ಬಿ - ಅರ್ಲಿ ಮಿಡೈವಲ್ ಇಂಡಿಯ
೧೪. ಭಾಷ್ಯಂ ಎ.ಎಲ್. (ಸಂ) - ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯ
೧೫. ಅಸ್ರಫ್ ಕೆ.ಎಂ. - ಲೈಫ್ ಅಂಡ್ ಕಂಡೀಷನ್ಸ್ ಆಫ್ ದಿ ಪೀಪಲ್ ಆಫ್ ಹಿಂದೂಸ್ತಾನ್
೧೬. ಯೂಸುಫ್ ಹುಸೇನ್ ಖಾನ್ - ಗ್ಲಿಂಪ್ಸಸ್ ಆಫ್ ಮಿಡೈವಲ್ ಇಂಡಿಯನ್ ಕಲ್ಚರ್
೧೭. ಜಾಧುನಾಥ ಸರ್ಕಾರ್ - ದಿ ಮುಘಲ್ ಇಂಡಿಯ
೧೮. ಜಾಧುನಾಥ ಸರ್ಕಾರ್ - ಅಕ್ಬರ್ ಟು ಔರಂಗಜೇಬ್
೧೯. ಜಾಧುನಾಥ ಸರ್ಕಾರ್ - ದಿ ಮರಾಠಾಸ್
೨೦. ಈಶ್ವರಿಪ್ರಸಾದ್ - ಹಿಸ್ಟರಿ ಆಫ್ ಮುಸ್ಲಿಂ ರೂಲ್ ಇನ್ ಇಂಡಿಯ

## ಮಾದರಿ ಪ್ರಶ್ನೆಗಳು

**I.** ಒಂದು ವಾಕ್ಯದಲ್ಲಿ ಉತ್ತರಿಸಿ

೧. 'ಎರಡನೆಯ ಅಲೆಗ್ಸಾಂಡರ್' ಎಂದು ಯಾರನ್ನು ಕರೆಯುತ್ತಿದ್ದರು?
೨. ಮಂಗೋಲರಿಗೆ ಆಶ್ರಯ ಕೊಟ್ಟ ರಜಪೂತ ದೊರೆ ಯಾರು?
೩. ದೇವಗಿರಿಯನ್ನು ಆಳುತ್ತಿದ್ದವರು ಯಾರು?
೪. ಕಾಕತೀಯರ ರಾಜಧಾನಿ ಯಾವುದು?
೫. ತುಘಲಕ್ ಸಂತತಿಯ ಸ್ಥಾಪಕನಾರು?
೬. ಜೌನಾಖಾನ್ ಯಾರು?
೭. ಭಕ್ತಿ ಪಂಥ (ಚಳುವಳಿ) ಎಂದರೇನು?
೮. ಸಿಖ್ ಪಂಥದ ಸ್ಥಾಪಕ ಯಾರು?
೯. ಸಿಖ್ಖರ ಪವಿತ್ರ ಗ್ರಂಥ ಯಾವುದು?
೧೦. ಅಕ್ಬರನು ಎಲ್ಲಿ ಯಾವಾಗ ಜನಿಸಿದನು?
೧೧. ಅಕ್ಬರನ ತಂದೆ, ತಾಯಿ ಯಾರು?
೧೨. ಅಕ್ಬರನ ರಾಜಪ್ರತಿನಿಧಿ ಯಾರು?
೧೩. ಶಿವಾಜಿಯು ಎಲ್ಲಿ ಎಷ್ಟರಲ್ಲಿ ಜನಿಸಿದನು?

**II.** ಎರಡು ವಾಕ್ಯಗಳಲ್ಲಿ ಉತ್ತರಿಸಿ

೧. ಖಿಲ್ಜಿ ಸಂತತಿಯ ಸ್ಥಾಪಕ ಯಾರು? ಎಷ್ಟರಲ್ಲಿ ಸ್ಥಾಪಿಸಿದನು?
೨. ಅಮೀರ್‌ಖುಸ್ರು ಯಾರು? ಅವನು ರಚಿಸಿದ ಕೃತಿ ಯಾವುದು?

೩. ಮಹಮದ್ ಬಿನ್ ತುಘಲಕ್‌ನು ತನ್ನ ರಾಜಧಾನಿಯನ್ನು ಎಲ್ಲಿಂದ ಎಲ್ಲಿಗೆ ಎಷ್ಟರಲ್ಲಿ ಬದಲಾಯಿಸಿದನು?
೪. ಮಧ್ಯಕಾಲೀನ ಇತಿಹಾಸದ ಭಕ್ತಿ ಪಂಥದ ಪ್ರಮುಖ ಸುಧಾರಕರುಗಳನ್ನು ಹೆಸರಿಸಿ.
೫. ಮೀರಾಬಾಯಿಯ ಭಕ್ತಿ ಸಂದೇಶವೇನು?
೬. ೩ನೇ ಪಾಣಿಪತ್ ಕದನ ಎಷ್ಟರಲ್ಲಿ ನಡೆಯಿತು? ಅದರ ಪ್ರಾಮುಖ್ಯತೆ ಏನು?
೭. ಅಬ್ಬುಲ್ ಫಜಲ್ ಯಾರು? ಅವನ ಕೃತಿಗಳನ್ನು ಹೆಸರಿಸಿ.
೮. ಅಕ್ಬರನು ಸ್ಥಾಪಿಸಿದ ಹೊಸ ಧರ್ಮ ಯಾವುದು? ಎಷ್ಟರಲ್ಲಿ ಸ್ಥಾಪಿಸಿದನು?
೯. ಮನ್ಸಬ್ದಾರಿ ಎಂದರೇನು? ವಿವರಿಸಿ.
೧೦. ಶಿವಾಜಿಯ ತಂದೆ, ತಾಯಿ ಮತ್ತು ಗುರು ಯಾರು?
೧೧. ಶಿವಾಜಿಯ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳಾರು?
೧೨. ಶಿವಾಜಿಯು ಎಲ್ಲಿ ಮತ್ತು ಎಷ್ಟರಲ್ಲಿ ಪಟ್ಟಾಭಿಷಕ್ತನಾದನು?

**III. ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ**

೧. 'ಖಿಲ್ಜಿ ಕ್ರಾಂತಿ' ಎಂದರೇನು?
೨. ಹೊಯ್ಸಳರ ಮೇಲೆ ನಡೆದ ಧಾಳಿಯನ್ನು ಕುರಿತು ಬರೆಯಿರಿ.
೩. 'ಜಿಜಿಯಾ' ಎಂದರೇನು? ಅದರ ಸ್ವರೂಪದ ಬಗ್ಗೆ ಬರೆಯಿರಿ.
೪. ಮಹಮದ್ ಬಿನ್ ತುಘಲಕ್‌ನು ಸಿಂಹಾಸನಕ್ಕೆ ಬಂದ ಬಗೆ ತಿಳಿಸಿ.
೫. ಮಹಮದ್ ಬಿನ್ ತುಘಲಕ್‌ನ ವ್ಯಕ್ತಿತ್ವವನ್ನು ಪರೀಕ್ಷಿಸಿ.
೬. ಮಹಮದ್ ಬಿನ್ ತುಘಲಕ್‌ನು 'ದ್ವಂದ್ವಗಳ ಮಿಶ್ರಣ' ಎಂದು ಕರೆಯಲು ಕಾರಣವೇನು?
೭. ಕಬೀರ್‌ರ ಜೀವನ ಮತ್ತು ಬೋಧನೆಗಳನ್ನು ವಿವರಿಸಿ.
೮. ಭಕ್ತಿ ಪಂಥದ (ಚಳುವಳಿಯ) ಪ್ರಮುಖ ತತ್ವಗಳಾವುವು?
೯. ಚೈತನ್ಯರನ್ನು ಕುರಿತು ಬರೆಯಿರಿ.
೧೦. ಅಕ್ಬರನ ದಿಗ್ವಿಜಯಗಳನ್ನು ವಿವರಿಸಿ.
೧೧. ಅಕ್ಬರನ ರಜಪೂತ ನೀತಿಯ ಮಹತ್ವವೇನು?
೧೨. ದೀನ್-ಏ-ಇಲಾಹಿಯನ್ನು ವಿವರಿಸಿ.
೧೩. ರಾಜ ತೋದರಮಲ್ಲನ 'ಬಂದೋಬಸ್ತ್'ನ್ನು ವಿವರಿಸಿ.
೧೪. ಮರಾಠರ ಏಳಿಗೆಗೆ ಪ್ರೇರಕವಾದ ಅಂಶಗಳನ್ನು ಪಟ್ಟಿಮಾಡಿ.
೧೫. ಶಿವಾಜಿಯ ಸೈನಿಕ ದಾಳಿಗಳಾವುವು?
೧೬. ಶಿವಾಜಿ ಮತ್ತು ಔರಂಗಜೇಬರ ನಡುವಣ ಯುದ್ಧಗಳನ್ನು ವಿವರಿಸಿ.
೧೭. ಅಷ್ಟಪ್ರಧಾನರು ಯಾರು? ಅವರ ಕರ್ತವ್ಯಗಳನ್ನು ವಿವರಿಸಿ.

IV. ೩೦ ರಿಂದ ೪೦ ವಾಕ್ಯಗಳಲ್ಲಿ ಉತ್ತರಿಸಿ

೧. ಅಲ್ಲಾವುದ್ದೀನ್ ಖಿಲ್ಜಿಯ ಆಡಳಿತಾವಧಿಯನ್ನು ಕುರಿತು ತಿಳಿಸಿ.

೨. ಅಲ್ಲಾವುದ್ದೀನ್ ಖಿಲ್ಜಿಯ ಉತ್ತರ ಭಾರತದ ದಿಗ್ವಿಜಯಗಳನ್ನು ವಿವರಿಸಿ.

೩. ಮಲಿಕ್ ಕಾಫೂರ್ ಯಾರು? ಅವನ ದಕ್ಷಿಣ ಭಾರತದ ದಂಡಯಾತ್ರೆಗಳನ್ನು ವಿವರಿಸಿ.

೪. ಅಲ್ಲಾವುದ್ದೀನ್ ಖಿಲ್ಜಿಯ ವಾಯುವ್ಯ ಗಡಿನೀತಿಯನ್ನು ಪರೀಕ್ಷಿಸಿ.

೫. "ಅಲ್ಲಾವುದ್ದೀನ್‌ನ ಆರ್ಥಿಕ ಸುಧಾರಣೆಗಳು ಇಂದಿಗೂ ಮಾದರಿಯಾಗಿವೆ" ಸಮರ್ಥಿಸಿ.

೬. ಮಹಮದ್ ಬಿನ್ ತುಘಲಕ್‌ನು ಕೈಗೊಂಡ ಐದು ಯೋಜನೆಗಳ ಸಫಲತೆ ಮತ್ತು ವಿಫಲತೆಗಳನ್ನು ಪರಿಶೀಲಿಸಿ.

೭. ಮಹಮದ್ ಬಿನ್ ತುಘಲಕ್‌ನು ತನ್ನ ಯೋಜನೆಗಳಲ್ಲಿ ವಿಫಲನಾಗಲು ಕಾರಣಗಳೇನು?

೮. ಭಕ್ತಿ ಪಂಥದ (ಚಳುವಳಿಯ) ಪರಿಣಾಮಗಳನ್ನು ಪರೀಕ್ಷಿಸಿ.

೯. ಗುರುನಾನಕ್‌ರ ಜೀವನ ಮತ್ತು ಬೋಧನೆಗಳನ್ನು ವಿವರಿಸಿ.

೧೦. ಅಕ್ಬರನ ಧಾರ್ಮಿಕ ನೀತಿ ಮತ್ತು ಅದರ ಪರಿಣಾಮಗಳನ್ನು ತಿಳಿಸಿ.

೧೧. ಇತಿಹಾಸದಲ್ಲಿ ಅಕ್ಬರನ ವ್ಯಕ್ತಿತ್ವ ಮತ್ತು ಸ್ಥಾನವನ್ನು ಪರೀಕ್ಷಿಸಿ.

೧೨. ಭಾರತೀಯ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅಕ್ಬರನ ಕೊಡುಗೆಯೇನು?

೧೩. ಮೊಗಲರ ಆಡಳಿತವನ್ನು ವಿವರಿಸಿ.

೧೪. ಮೊಗಲರ ಸಾಹಿತ್ಯಕ ಕೊಡುಗೆಗಳಾವುವು?

೧೫. ಶಿವಾಜಿಯ ನಾಯಕತ್ವ ಮತ್ತು ಸಂಘಟನೆಯ ಗುಣಗಳನ್ನು ಪ್ರಶಂಸಿಸಿ.

೧೬. ಪುರಂದರ ಒಪ್ಪಂದ ಎಷ್ಟರಲ್ಲಿ ನಡೆಯಿತು ಮತ್ತು ಅದರ ಫಲಿತಾಂಶಗಳಾವುವು?

೧೭. ಚೌತ್ ಮತ್ತು ಸರ್ದೇಶ್‌ಮುಖಿ ಎಂದರೇನು?

೧೮. ಶಿವಾಜಿಯ ಆಡಳಿತವನ್ನು ವಿವರಿಸಿ.

೧೯. ಭೂಪಟದಲ್ಲಿ ಅಕ್ಬರನ ಸಾಮ್ರಾಜ್ಯವನ್ನು ಗುರ್ತಿಸಿ ಮತ್ತು ಕೆಳಕಂಡ ಸ್ಥಳಗಳನ್ನು ಗುರ್ತಿಸಿ.

ಎ. ದೆಹಲಿ ಬಿ. ಆಗ್ರಾ ಸಿ. ಅಹಮದ್‌ನಗರ ಡಿ. ರಣಥಂಬೋರ್ ಇ. ಅಜ್ಮೀರ್ ಎಫ್. ಬೂಂದಿ ಜಿ. ಗೋಲ್ಕಂಡ

೨೦. ಶಿವಾಜಿಯ ಸಾಮ್ರಾಜ್ಯವನ್ನು ಭೂಪಟದಲ್ಲಿ ಗುರ್ತಿಸಿ ಮತ್ತು ಈ ಕೆಳಕಂಡ ಸ್ಥಳಗಳನ್ನು ಅದರಲ್ಲಿ ಗುರ್ತಿಸಿ.

ಅ. ಶಿವನೇರು ದುರ್ಗ ಆ. ಪುರಂಧರ ಇ. ರಾಯಘಡ ಈ. ತೋರಣಗಲ್ಲು ಉ. ಪುಣೆ

## V. ಹೆಚ್ಚಿನ ಜ್ಞಾನಕ್ಕಾಗಿ ಕಾರ್ಯ-ಯೋಜನೆಗಳು

೧. ಅಲ್ಲಾ-ಉದ್ದಿನ್- ಖಿಲ್ಜಿಯ ಭಾವಚಿತ್ರವನ್ನು ತಯಾರಿಸುವುದು. ಅಥವಾ ಅವನ ರಾಜ್ಯ ವಿಸ್ತರಣೆಯ ಬಗ್ಗೆ ವಿಭಿನ್ನ ಭೂಪಟಗಳನ್ನು (Maps) ತಯಾರಿಸುವುದು. ಅಥವಾ ಅವನು ಹಮ್ಮಿಕೊಂಡಿದ್ದ ಮಾರುಕಟ್ಟೆ ಸುಧಾರಣೆಗಳ ಬಗ್ಗೆ ಪ್ರಬಂಧಗಳನ್ನು ತಯಾರಿಸಿ, ಪ್ರಸ್ತುತಪಡಿಸುವುದು ಅಥವಾ ಅವನ ಸುಧಾರಣೆಗಳನ್ನು ಈಗಿನ ಕಾಲಕ್ಕೆ ಹೋಲಿಕೆ ಮಾಡಿ ನೋಡುವ ಚರ್ಚಾಕೂಟಗಳನ್ನು ಏರ್ಪಡಿಸುವುದು.

೨. ಮಹಮದ್ ಬಿನ್ ತುಘಲಕ್‌ನನ್ನು ಕುರಿತಂತೆ (paintings) ಕಲಾಚಿತ್ರಗಳನ್ನು ತಯಾರಿಸುವುದು. ಅಥವಾ ಅವನ ಕಾಲದ ನಾಣ್ಯಗಳನ್ನು ಸಂಗ್ರಹಿಸಿ, ಸಾಂಸ್ಕೃತಿಕ ಅಂಶಗಳನ್ನು ಕುರಿತು ಪರಿಶೀಲಿಸುವುದು ಅಥವಾ ದೇವಗಿರಿಗೆ ಪ್ರವಾಸವನ್ನು ಕೈಗೊಳ್ಳು ವುದು ಅಥವಾ ದೇವಗಿರಿಯ ನಗರ ಯೋಜನೆಯ ಬಗ್ಗೆ ಚಿತ್ರಗಳನ್ನು ಬಿಡಿಸುವುದು. ಅಥವಾ ತುಘಲಕ್‌ನ ವೈಯಕ್ತಿಕ ಸ್ಥಾನವನ್ನು ಆ ಕಾಲದ ಬರಹಗಾರರು ಮತ್ತು ಕವಿಗಳು ವಿವರಿಸುವಂತೆ ರಚಿಸಿ, ಚರ್ಚೆ ಗಳನ್ನು ಏರ್ಪಡಿಸುವುದು ಅಥವಾ ತುಘಲಕನನ್ನು ಕುರಿತಂತೆ ವಿದೇಶಿ ಪ್ರವಾಸಿಗರ ಅಭಿಪ್ರಾಯಗಳನ್ನು ಸಂಗ್ರಹಿಸಿ, ಚರ್ಚಿಸುವುದು.

೩. ಅಕ್ಬರನನ್ನು ಕುರಿತಂತೆ ಇದುವರೆವಿಗೂ ಬಂದಿರುವ ಸಾಹಿತ್ಯ ಕೃತಿಗಳು, ಚರಿತ್ರೆಯ ಬರವಣಿಗೆಗಳ ಮುಖೇನ ಅವನ ವ್ಯಕ್ತಿತ್ವವನ್ನು ಪರಿಶೀಲಿಸುವುದು.

೪. ಸಂತ ಕಬೀರ್, ಚೈತನ್ಯ, ಗುರುನಾನಕ್ ಮತ್ತು ಮೀರಾಬಾಯಿ ಅವರುಗಳ ಚಿತ್ರಗಳನ್ನು ಪ್ರದರ್ಶಿಸಿ. ಅಥವಾ ಈ ಸುಧಾರಕರ ಬೋಧನೆಗಳು ಸಮಕಾಲೀನ ಸಂದರ್ಭಕ್ಕೆ ಎಷ್ಟು ಪ್ರಸ್ತುತವಾಗುತ್ತವೆ ಎಂಬುದನ್ನು ಪರಿಶೀಲಿಸಿ.

೫. ಶಿವಾಜಿಯ ಸಾಮ್ರಾಜ್ಯದ ಎಲ್ಲೆಗಳನ್ನು ಭೂಪಟದಲ್ಲಿ ಗುರುತಿಸಿ, ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.

## ಅಧ್ಯಾಯ ೪

# ಪ್ರಾಚೀನ ಕರ್ನಾಟಕ

## ೪.೧ ಶಾತವಾಹನರು

ಮೌರ್ಯ ಸಾಮ್ರಾಜ್ಯದ ಆಳ್ವಿಕೆ ಕ್ರಿ.ಪೂ. ೧೮೭ರ ವೇಳೆಗೆ ಕೊನೆಗೊಂಡ ನಂತರ ಕ್ರಿ.ಪೂ. ೭೫ರವರೆಗೆ ಶುಂಗ ಅರಸು ಮನೆತನದ ಹತ್ತು ರಾಜರು, ಅನಂತರ ಕ್ರಿ.ಪೂ.೩೦ರ ತನಕ ಕಾಣ್ವ ವಂಶದ ನಾಲ್ಕು ರಾಜರು ದಖ್ಖನ್ ಮತ್ತು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದರು. ಕ್ರಮೇಣ ಅವರ ರಾಜಕೀಯ ಹಿಡಿತ ದುರ್ಬಲವಾಗುತ್ತಾ ಬಂದಾಗ ದಖ್ಖನ್ನಿನ ಇತಿಹಾಸದಲ್ಲಿ ಶಾತವಾಹನರೆಂಬ 'ಆಂಧ್ರಭೃತ್ಯ'ರು ರಾಜಕೀಯ ಅವಕಾಶಗಳನ್ನು ಉಪಯೋಗಿಸಿಕೊಂಡು ಯಶಸ್ವಿಯಾದರು. ಇವರು ಕರ್ನಾಟಕದ ಉತ್ತರಭಾಗವೂ ಸೇರಿದಂತೆ ಸ್ವಲ್ಪ ಹೆಚ್ಚು ಕಡಿಮೆ ನರ್ಮದಾ ನದಿಯವರೆಗಿನ ಪ್ರದೇಶವನ್ನೊಳಗೊಂಡ ರಾಜ್ಯವನ್ನು ನಿರ್ಮಿಸಿದರು.

### ಆಧಾರಗಳು

ಶಾತವಾಹನರ ಇತಿಹಾಸವನ್ನು ಅರಿಯಲು 'ಮತ್ಸ್ಯ', 'ವಿಷ್ಣು', 'ಭಾಗವತ' ಪುರಾಣಗಳು ಬಹುಮುಖ್ಯ ಆಕರಗಳಾಗಿವೆ. ಪುರಾಣಗಳಲ್ಲಿ ದೊರೆಯುವ ಐತಿಹಾಸಿಕ ಅಂಶಗಳನ್ನು ದೃಢೀಕರಿಸಲು ಕಾರ್ಲೆ, ನಾಸಿಕ್, ಕನ್ಹೇರಿ ಮುಂತಾದಡೆ ದೊರೆತಿರುವ ಪ್ರಾಕೃತ ಶಾಸನಗಳು ಸಹಾಯಕವಾಗಿವೆ. ಶಾತವಾಹನರ ನಾಣ್ಯಗಳು ಅವರ ಅನೇಕ ಅರಸರ ಬಗೆಗೆ ತಿಳಿಸುವ ಪ್ರಮುಖ ಸಾಧನಗಳಾಗಿವೆ. ಗುಣಾಢ್ಯನ *ಬೃಹತ್ಕಥೆ* ಇವರ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಗ್ರಂಥವಾಗಿದೆ. 'ದಕ್ಷಿಣಾಪಥದ ಸ್ವಾಮಿ'ಗಳೆಂದು ತಮ್ಮನ್ನು ಕರೆದುಕೊಂಡ ಶಾತವಾಹನರ ವಂಶದ ೩೦ ಅರಸರು ಒಟ್ಟು ೪೬೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರೆಂದು *ಮತ್ಸ್ಯಪುರಾಣ*ದಿಂದ ಹೇಳಬಹುದು.

### ಮೂಲ

'ಶಾತವಾಹನ' ಎಂಬ ಪದಕ್ಕೆ ನಿರ್ದಿಷ್ಟವಾದ ಅರ್ಥವಿಲ್ಲ. 'ಸಾತ' ಎಂದರೆ 'ವೇಗ' 'ಸಾತವಾಹನ' ಎಂದರೆ 'ವೇಗವಾದ ವಾಹನ ಸವಾರಿ ಮಾಡುವವನು' ಎಂದರ್ಥ. ಅಂದರೆ "ಕುದುರೆ ಸವಾರ". 'ಶಾತಕರ್ಣಿ' ಎಂದರೆ 'ಸೂಕ್ಷ್ಮವಾದ ಕಿವಿ ಉಳ್ಳವನು' ಎಂಬ ಅರ್ಥವಿದೆ. ಇವರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಈ ವಿದ್ವಾಂಸರು

ಶಾತವಾಹನರು ಪೂರ್ವದವರು ಮತ್ತು ಪಶ್ಚಿಮದವರು ಎಂಬ ಎರಡು ವಾದಗಳನ್ನು ಮಂಡಿಸಿದ್ದಾರೆ.

ಪೂರ್ವ ಮೂಲಸಿದ್ಧಾಂತದ ರೂವಾರಿಗಳಾದ ವಿ.ಎ. ಸ್ಮಿತ್, ರ್‍ಯಾಪ್ಸನ್, ಡಿ.ಆರ್. ಭಂಡಾರ್‌ಕರ್ ಮುಂತಾದವರು ಶಾತವಾಹನರ ಮೂಲಸ್ಥಾನ ಕೃಷ್ಣಾ ಮತ್ತು ಗೋದಾವರಿ ನದಿಯ ನಡುವಿನ ಪ್ರದೇಶವಾಗಿದೆ. ಕೃಷ್ಣಾನದಿ ತೀರದ ಶ್ರೀಕಾಕುಲಂ ಇವರ ರಾಜಧಾನಿ ಯಾಗಿದೆ ಎಂದಿದ್ದಾರೆ. ಪಶ್ಚಿಮ ಮೂಲಸಿದ್ಧಾಂತದ ಪ್ರತಿಪಾದಕರಾದ ಗೋಪಾಲಚಾರಿ ಯವರು ಅವರ ಮೂಲನೆಲೆ ಪಶ್ಚಿಮ ದಖ್ಖನ್, ಮಹಾರಾಷ್ಟ್ರದ ಔರಂಗಾಬಾದ್ ಜಿಲ್ಲೆ ಯಲ್ಲಿರುವ ಇಂದಿನ ಪೈಠಾಣವೇ ಅವರ ರಾಜಧಾನಿ 'ಪ್ರತಿಷ್ಠಾಣ'ವಾಗಿತ್ತೆಂದು ಅಭಿಪ್ರಾಯ ಪಡುತ್ತಾರೆ. 'ಆಂಧ್ರ' ಎಂಬುದು ಅವರ ಕುಲನಾಮ 'ಶಾತವಾಹನ' ಎಂಬುದು ವಂಶನಾಮ ಹಾಗೂ 'ಶಾತಕರ್ಣಿ' ಎಂಬುದು ವಂಶದ ಉಪನಾಮ ಎಂದು ತಿಳಿಸುತ್ತಾರೆ.

ಶಾತವಾಹನರನ್ನು ಆಂಧ್ರರು, ಆಂಧ್ರ ಜಾತಿಯವರು, ಮತ್ತು ಆಂಧ್ರ ಭೃತ್ಯರು ಎಂದು ಪುರಾಣಗಳಲ್ಲಿ ಹೇಳಲಾಗಿದೆ. ಆಂಧ್ರದವರಾದ ಇವರು ಮೌರ್ಯರು ಮತ್ತು ಶುಂಗರಿಗೆ ಸೇವಕರಾದುದರಿಂದ ಇವರನ್ನು 'ಆಂಧ್ರಭೃತ್ಯ'ರೆಂದು ಕರೆದಿರಬೇಕೆಂದು ವಿಶ್ಲೇಷಣೆಯನ್ನು ಮಾಡಲಾಗಿದೆ.

ಶಾತವಾಹನರ ಮೂಲ ನೆಲೆ ಪಶ್ಚಿಮ ದಖನ್ ಎಂದು ಸ್ಪಷ್ಟವಾಗಿ ಹೇಳಬಹುದು. ಪ್ರತಿಷ್ಠಾನ ಅಥವಾ ಪೈಠಾನ್ ಅವರ ರಾಜಧಾನಿಯಾಗಿತ್ತು ಇವರ ರಾಜ್ಯದ ವಿಸ್ತರಣೆ ಪೂರ್ವಾಭಿಮುಖವಾಗಿ ನಡೆದು ಆಂಧ್ರ ಇವರ ವಶವಾಯಿತು. ಇವರ ಹೆಚ್ಚಿನ ಶಾಸನಗಳು ಮತ್ತು ನಾಣ್ಯಗಳು ಪಶ್ಚಿಮ ದಖನ್‌ನಲ್ಲೇ ದೊರೆತಿವೆ ನಾಸಿಕ್ ಮತ್ತು ನಾಣೇಘಾಟ್‌ನಲ್ಲಿ ದೊರೆತಿರುವ ಶಾಸನಗಳು ಆರಂಭದ ಅರಸರಿಗೆ ಸಂಬಂಧಪಟ್ಟಿವೆ. ಆರಂಭದ ಅರಸರ ನಾಣ್ಯಗಳು ಪಶ್ಚಿಮ ದಖನ್‌ನಲ್ಲಿ ದೊರೆತಿದ್ದರೆ, ಅನಂತರದ ಅರಸರ ನಾಣ್ಯಗಳು ಆಂಧ್ರದಲ್ಲಿ ದೊರೆತಿವೆ. ಗೌತಮಿಪುತ್ರ ಶಾತಕರ್ಣಿಯ ಶಾಸನ ಅವನನ್ನು ಆಂಧ್ರದ ದೊರೆಯೆಂದು ಹೇಳುವುದಿಲ್ಲ. ವಾಸಿಷ್ಠಪುತ್ರ ಪುಲಿಮಾಯಿಯ ಕಾಲಕ್ಕೆ ಶಾತವಾಹನರು ದಖನ್ನಿನ ಪಶ್ಚಿಮ ಭಾಗದಿಂದ ಪೂರ್ವಕ್ಕೆ ಸರಿದು ಆಂಧ್ರದಲ್ಲಿ ನೆಲೆಸಿದರು. ಇದೇ ವೇಳೆ ಪುರಾಣಗಳ ಪುನರ್ ರಚನಾಕಾರ್ಯ ಕೊನೆಗೊಂಡಿದ್ದರಿಂದ ಅವುಗಳಲ್ಲಿ ಇವರನ್ನು 'ಆಂಧ್ರ'ರೆಂದು ಕರೆಯಲಾಗಿದೆ.

## ರಾಜಕೀಯ ಚರಿತ್ರೆ

ಪುರಾಣಗಳ ಪ್ರಕಾರ ಈ ವಂಶದ ಸ್ಥಾಪಕ 'ಸಿಮುಖ'. ಇವನು ಮಗಧ ರಾಜ್ಯವನ್ನಾಳು ತ್ತಿದ್ದ ಶುಂಗ ವಂಶದ ಕಾರಣ್ವಾಯನ್ ಸುಶರ್ಮನನ್ನು ಪರಾಭವಗೊಳಿಸಿ ದಖನ್ನಿನ ಮೇಲಿನ ಅವರ ಪ್ರಭುತ್ವವನ್ನು ಕೊನೆಗಾಣಿಸಿ ಶಾತವಾಹನ ಸಾಮ್ರಾಜ್ಯ ಸ್ಥಾಪಿಸಿದನು. ನಾನಾಘಾಟ್ ನಲ್ಲಿ ದೊರೆತಿರುವ ಶಾಸನವು ಇವನನ್ನು 'ರಾಜಾಸಿಮುಖ ಶಾತವಾಹನ' ಎಂದು ವರ್ಣಿಸಿದೆ. ಇತ್ತೀಚೆಗೆ ಆಂಧ್ರಪ್ರದೇಶದಲ್ಲಿ ಚಿಮುಖನೆಂಬ ಹೆಸರುಳ್ಳ ನಾಣ್ಯಗಳು ದೊರೆತಿವೆ. ಇವನ ಆಡಳಿತವು ಕ್ರಿ.ಪೂ. ಮೊದಲನೇ ಶತಮಾನದ ಮೂರನೇ ಭಾಗದಲ್ಲಿ ಊರ್ಜಿತದಲ್ಲಿತ್ತು.

ಸಿಮುಖನ ನಂತರ ಆತನ ಸಹೋದರ ಕೃಷ್ಣ ಅನಂತರ ಮೊಮ್ಮಗ ಶಾತಕರ್ಣಿಯೂ ಆಳಿದರು. ಇವನ ರಾಣಿ ನಗನ್ನಿಕಾ, ಅವಳ ಒಂದು ಶಾಸನದಲ್ಲಿ ತನ್ನ ಗಂಡನನ್ನು 'ದಕ್ಷಿಣಾ ಪಥಪತಿ' ಎಂದೂ ಮತ್ತು "ಯಾರೂ ಪ್ರಶ್ನಿಸಲಾಗದ ಪ್ರಭುತ್ವವನ್ನುಳ್ಳ ಯೋಧನೆಂದೂ" ವರ್ಣಿಸಿದ್ದಾಳೆ. ಶಾತಕರ್ಣಿಯು ಎರಡು ಅಶ್ವಮೇಧಯಾಗ ಮತ್ತು ಒಂದು ರಾಜಸೂಯ ಯಾಗವನ್ನು ಮಾಡಿದನು. ಇವನ ನಂತರ 'ಹಾಲ' ಎಂಬ ದೊರೆಯ ಆಳ್ವಿಕೆ ಆರಂಭ ವಾಗುತ್ತದೆ. ಶಾಂತಿ, ಸಂಮೃದ್ಧತೆಯಿಂದ ಕೂಡಿದ್ದ ಇವನ ಕಾಲದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಸರ್ವತೋಮುಖ ಪ್ರಗತಿ ಉಂಟಾಯಿತು. ಸ್ವತಃ ಪ್ರಾಕೃತ ಭಾಷೆಯ ವಿದ್ವಾಂಸನಾದ ಹಾಲ ಶೃಂಗಾರ ರಸ ಪ್ರಧಾನವಾದ *ಗಾಥ ಸಪ್ತಸತಿ* ಎಂಬ ಕಾವ್ಯವನ್ನು ರಚಿಸಿದ. ಇವನ ಆಸ್ಥಾನ ಕವಿಯಾದ 'ಗುಣಾಢ್ಯ'ನು ಪ್ರಾಕೃತದ ಪೈಶಾಚಿ ಭಾಷೆಯಲ್ಲಿ *ಬೃಹತ್ಕಥೆ*ರಚಿಸಿದನು. ಇವನ ನಂತರ ಸಕರು ಪ್ರಬಲರಾದರು ಇದರಿಂದ ಶಾತವಾಹನರು ತಮ್ಮ ಪ್ರಾಮುಖ್ಯವನ್ನು ಕಳೆದುಕೊಂಡರು. ಅವರ ಅಧಿಕಾರದ ಗ್ರಹಣದ ಕಾಲ ಪ್ರಾರಂಭವಾಯಿತು. ಗತಿಸಿಹೋಗಿದ್ದ ಶಾತವಾಹನರ ಪ್ರಾಬಲ್ಯವನ್ನು ಪುನಃ ಸ್ಥಾಪಿಸಿದ ವ್ಯಕ್ತಿಯೆಂದರೆ ಗೌತಮಿಪುತ್ರ ಶಾತಕರ್ಣಿ.

### **ಗೌತಮಿಪುತ್ರ ಶಾತಕರ್ಣಿ** (ಕ್ರಿ.ಶ.೧೦೬ - ಕ್ರಿ.ಶ.೧೩೦)

ಗೌತಮಿಪುತ್ರ ಶಾತಕರ್ಣಿಯು ಈ ಅರಸು ಮನೆತನದ ರಾಜಕೀಯ ಪ್ರಭುತ್ವವನ್ನು ಮತ್ತೆ ಉಚ್ಛ್ರಾಯ ಸ್ಥಿತಿಗೆ ತಂದ ದೊರೆ. ಈ ವಂಶದಲ್ಲೇ ಅತ್ಯಂತ ಪ್ರಸಿದ್ಧನಾದ ಈತನ ತಾಯಿ ಗೌತಮಿ ಬಲಶ್ರೀ. ಇವನ ವ್ಯಕ್ತಿತ್ವ ಮತ್ತು ಸಾಧನೆಗಳನ್ನು ಇವನ ಮಗ ವಾಸಿಷ್ಠಪುತ್ರ ಪುಳಮಾವಿಯ ನಾಸಿಕ್ ಪ್ರಶಸ್ತಿಯಲ್ಲಿ ನಿರೂಪಿಸಲಾಗಿದೆ. ಟಾಲೆಮಿಯ ಜಾಗ್ರಫಿಯೂ ಕೂಡಾ ಅನೇಕ ವಿಷಯಗಳನ್ನು ತಿಳಿಸುತ್ತದೆ.

ಗೌತಮಿಪುತ್ರ ಶಾತಕರ್ಣಿಯು ಇಂಡೋಗ್ರೀಕರು, ಪಾರ್ಥಿಯನ್ನರು ಮತ್ತು ಸಿಥಿಯನ್ನರನ್ನು ಸದೆಬಡಿದು ಶಾತವಾಹನರ ಕೀರ್ತಿಯನ್ನು ಹೆಚ್ಚಿಸಿದನು. ನಾಸಿಕ್ ಶಾಸನವು ಇವನನ್ನು 'ಶಾತವಾಹನ ಕುಲಯಶಃ ಪ್ರತಿಷ್ಠಾಪನ' 'ಶಕಯ-ಯವನ-ಪಹ್ಲವನಿಸೂದನ' ಎಂದು ಹೊಗಳಿದೆ. ಇವನ ಮಹತ್ತರವಾದ ಸಾಧನೆ ಎಂದರೆ ನಹಪಾಣನು ಸೇರಿದ ಕ್ಷಹರಾತ ವಂಶವನ್ನು ಉಚ್ಛಾಟಿಸಿದುದಾಗಿದೆ. ಈ ವಂಶದ ಅರಸರಾದ ಕ್ಷತ್ರಪನಹಪಾಣ ಮತ್ತು ಋಷಪದತ್ರರನ್ನು ತನ್ನ ೧೮ನೇ ವರ್ಷದ ಆಳ್ವಿಕೆಯಲ್ಲಿ ಸೋಲಿಸಿ ಕೊಂದುಹಾಕಿದನು. ಆದುದರಿಂದಲೇ ಈತನನ್ನು ಶಾಸನವು "ಕ್ಷಹರಾತವಂಶನಿರವಶೇಷಕರ" ಎಂದು ವರ್ಣಿಸಿದೆ. ಜೋಗಲತಂಬಿ (ನಾಸಿಕ್)ನಲ್ಲಿ ದೊರೆತಿರುವ ನಹಪಾಣನ ಬೆಳ್ಳಿಯ ನಾಣ್ಯಗಳ ಮೇಲೆ ಇವನ ಹೆಸರನ್ನು ಮುದ್ರಿಸಲಾಗಿದೆ. ಇದರಿಂದ ಈತನು ಕ್ಷಹರಾತ ಅರಸರನ್ನು ಪರಾಭವ ಗೊಳಿಸಿರುವುದು ಸ್ಪಷ್ಟವಾಗುತ್ತದೆ. ನಾಸಿಕ್ ಶಾಸನದಲ್ಲಿರುವಂತೆ ಇವನ ಆಡಳಿತಕ್ಕೆ ಅಪರಾಂತ ಅನೂಪ, ಸೌರಾಷ್ಟ್ರ, ಕುಕುರ, ಆಕರ, ಆವಂತಿ, ಋಷಿಕ, ಆಷ್ಮಕ, ಮುಳಕ ಮುಂತಾದ ಪ್ರದೇಶಗಳು ಒಳಪಟ್ಟಿದ್ದವು. ಇವೆಲ್ಲವೂ ಸೇರಿದರೆ ಇಡೀ ದಖ್ಖನ್ ಇವನ ರಾಜ್ಯವಾಗಿತ್ತು. ಇವುಗಳೇ ಅಲ್ಲದೆ ವಿಂಧ್ಯಪರ್ವತ ಪ್ರದೇಶ ಋಕ್ಷಪತ್ (ನರ್ಮದೆಯ

ಉತ್ತರಕ್ಕಿರುವ ವಿಂಧ್ಯಪ್ರದೇಶ) ಪಾರಿಯಾತ್ರಾ (ಅರಾವಳಿ ಪರ್ವತ) ಸಹ್ಯ (ಪಶ್ಚಿಮ ಘಟ್ಟಪ್ರದೇಶ) ಕೃಷ್ಣಗಿರಿ (ಕನ್ಹೇರಿ ಪ್ರದೇಶ) ಮಲಯ (ನೀಲಗಿರಿಯ ದಕ್ಷಿಣದ ಪ್ರದೇಶ) ಮಹೇಂದ್ರ (ಪೂರ್ವಘಟ್ಟ ಪ್ರದೇಶ) ಇವೆಲ್ಲವೂ ಇವನ ರಾಜ್ಯದಲ್ಲಿ ಸೇರಿಕೊಂಡಿದ್ದವೆಂದು ಹೇಳಲಾಗಿದೆ. ಅಂದರೆ ಉತ್ತರದ ವಿಂಧ್ಯಪರ್ವತ ಪ್ರದೇಶದಿಂದ ದಕ್ಷಿಣದ ನೀಲಗಿರಿಯವರೆಗೆ ಇವನ ರಾಜ್ಯವು ವಿಸ್ತರಿಸಿತ್ತು. ಆದ್ದರಿಂದ ಈತನಿಗೆ 'ತ್ರಿಸಮುದ್ರ ತೋಯಾಪೀತವಾಹನ' ನೆಂಬ ಬಿರುದು ಇತ್ತು. ಇತ್ತೀಚೆಗೆ ಸನ್ನತಿಯಲ್ಲಿ ದೊರೆತ ವಾಸಿಷ್ಠೀಪುತ್ರ ಪುಳುಮಾವಿಯ ಶಾಸನವೂ ಕೂಡಾ ಸ್ವಲ್ಪ ಹೆಚ್ಚು ಕಡಿಮೆ ಇದೇ ರೀತಿ ಇವನ ದಂಡಯಾತ್ರೆಯ ವಿವರಣೆಯನ್ನು ಸಂಕ್ಷಿಪ್ತವಾಗಿ ನಿರೂಪಿಸಿದೆ. ಇದು ಗೌತಮಿಪುತ್ರ ಶಾತಕರ್ಣಿಯನ್ನು ಅಭಗವಾಹನ (ಮೇಘ ವಾಹನ) ಶಾತವಾಹನನೆಂದು ಸಂಬೋಧಿಸಲಾಗಿದೆ. ಇವನು ತಾಳಗುಂದದಲ್ಲಿನ ಭವ (ಮಹಾದೇವ) ದೇವಾಲಯವನ್ನು ಸಂದರ್ಶಿಸಿ ನಮನವನ್ನು ಸಲ್ಲಿಸಿದನೆಂದು ಹೇಳಲಾಗಿದೆ. ಚಂದ್ರವಳ್ಳಿ ಮೊದಲಾದ ನೆಲೆಗಳಲ್ಲಿ ಗೌತಮಿಪುತ್ರ ಶಾತಕರ್ಣಿ ಇವನ ಮಗ ವಾಸಿಷ್ಠೀಪುತ್ರ ಪುಳುಮಾವಿಯ ಮತ್ತು ಯಜ್ಞಶ್ರೀ ಶಾತಕರ್ಣಿಯ ನಾಣ್ಯಗಳು ದೊರಕಿವೆ.

'ಪ್ರತಿಷ್ಠಾನಪತಿ' ಎಂಬ ಬಿರುದು ಧರಿಸಿದ್ದ ಗೌತಮಿಪುತ್ರ ಶಾತಕರ್ಣಿಯ ಕೊನೆಯ ದಿನಗಳು ಸುಖಮಯವಾಗಿರಲಿಲ್ಲ. ಶಕರಾಜನಾದ ಕಾರ್ದಮಕ ರುದ್ರಧಾಮನು ಕ್ಷಹಾರಾತ ದಿಂದ ಗೆದ್ದುಕೊಂಡಿದ್ದ ಪ್ರದೇಶವನ್ನು ಶಾತಕರ್ಣಿಯಿಂದ ವಶಪಡಿಸಿಕೊಂಡನು. ಪ್ರಾಯಶಃ ಇದನ್ನರಿತು ಮತ್ತೆ ತನ್ನ ರಾಜ್ಯವು ತತ್ತರಿಸದಿರಲು ಅವನು ರುದ್ರಧಾಮನ ಮಗಳನ್ನು ತನ್ನ ಮಗನಾದ ವಾಸಿಷ್ಠೀಪುತ್ರ ಪುಳುಮಾವಿಗೆ ವಿವಾಹ ಮಾಡಿಕೊಂಡು ಅವನೊಂದಿಗೆ ಇದ್ದ ಘರ್ಷಣೆಯನ್ನು ಕಡಿಮೆ ಮಾಡಿಕೊಂಡನು. ಅಂತಿಮ ದಿನಗಳಲ್ಲಿ ಇವನಿಗೆ ಆರೋಗ್ಯ ಕೈ ಕೊಟ್ಟಿದುದರಿಂದ ರಾಜ್ಯವನ್ನು ತನ್ನ ಮಗ ವಾಸಿಷ್ಠೀಪುತ್ರ ಪುಳುಮಾವಿಗೆ ಬಿಟ್ಟುಕೊಟ್ಟನು. ಪ್ರಾಯಶಃ ಈ ರಾಜನು ಅನಾರೋಗ್ಯದಿಂದ ಬಳಲುತ್ತಿದ್ದ ಸನ್ನಿವೇಶವನ್ನು ಸನ್ನತಿಯ ಚಿತ್ರ ಫಲಕದಲ್ಲಿ ಬಹುಮಾರ್ಮಿಕವಾಗಿ ನಿರೂಪಿಸಲಾಗಿದೆ.

ಗೌತಮಿಪುತ್ರ ಶಾತಕರ್ಣಿಯು ದಿಗ್ವಿಜಯಿಯಾಗಿದ್ದಂತೆ ಪ್ರಜಾಪೋಷಣೆಗೂ ಖ್ಯಾತಿ ಪಡೆದಿದ್ದಾನೆ. ಆಕರ್ಷಕ ತೇಜಸ್ವಿ ವ್ಯಕ್ತಿ, ಗಂಭೀರ ನಡತೆ, ಬಲಿಷ್ಠವಾದ ದೇಹವುಳ್ಳವ ನಾಗಿದ್ದನು. ಯಾವಾಗಲೂ ತಾಯಿಗೆ ವಿಧೇಯನೂ, ತನಗೆ ತೊಂದರೆಯನ್ನು ಕೊಡುವ ಶತ್ರುಗಳಿಗೂ ಕೂಡಾ ನೋವನ್ನುಂಟು ಮಾಡದವನು, ತನ್ನ ಪ್ರಜೆಗಳ ಕಷ್ಟಗಳನ್ನು ಪರಿಹರಿಸು ವುದರಲ್ಲಿ ಸಹಾನುಭೂತಿ ಉಳ್ಳವನೂ ಆಗಿದ್ದನೆಂದೂ, ನ್ಯಾಯಬದ್ಧವಾಗಿ ತೆರಿಗೆ ತೆಗೆದು ಕೊಳ್ಳುತ್ತಿದ್ದನೆಂದೂ ಹೇಳಲಾಗಿದೆ. ಇವನನ್ನು ಪೌರಾಣಿಕ ಆದರ್ಶ ವ್ಯಕ್ತಿಗಳಿಗೆ ಮತ್ತು ದೇವತೆಗಳಿಗೆ ಸರಿಸಮಾನನೆಂದೂ ಪ್ರಶಂಸಿಸಲಾಗಿದೆ. ನಾಸಿಕ್ ಶಾಸನ ಇವನ ರೂಪ ಲಾವಣ್ಯ ವನ್ನು ಈ ರೀತಿ- "ಪರಿಪೂರ್ಣ ಮಂಡಲ ಸಶ್ರೀಕ ಪ್ರಿಯದರ್ಶಿಕ, ಭುಜಗಜಪತಿ ಭೋಗ ಪೀನ ವೃತ್ತ, ವಿಪುಲ ದೀರ್ಘಸುಂದರಭುಜ" ವರ್ಣಿಸಿದೆ. ಇವನು ನಾಸಿಕ್ ಬಳಿ ಪಂಡುಲೇನ್ ಗುಹಾಲಯವನ್ನು ಬೌದ್ಧ ಸನ್ಯಾಸಿಗಳಿಗೆ ನಿರ್ಮಿಸಿದನು.

### ಕೊನೆಯ ಅರಸರು

ಗೌತಮಿಪುತ್ರ ಶಾತಕರ್ಣಿಯ ನಂತರ ಅವನ ಮಗ ವಾಸಿಷ್ಠೀಪುತ್ರ ಪುಳುಮಾವಿಯು ಕ್ರಿ.ಶ. ೧೩೦ ರಿಂದ ೧೫೪ ರವರೆಗೆ ಆಳಿದ್ದು, ಈತನು ಪೈಠಾಣದಿಂದ ಆಳುತ್ತಿದ್ದನೆಂದು ಟಾಲೆಮಿಯು ತಿಳಿಸಿದ್ದಾನೆ. ಇವನು ಆಂಧ್ರದ ಕೆಲಭಾಗಗಳನ್ನು ಗೆದ್ದುಕೊಂಡನು ಸಕರ ಸತ್ರಪ ರುದ್ರಧಾಮನೊಂದಿಗೆ ಹೋರಾಡಿ ಎರಡು ಬಾರಿ ಸೋತನು 'ದಕ್ಷಿಣ ಪಥೇಶ್ವರ' ಎಂಬ ಬಿರುದನ್ನು ಹೊಂದಿದ್ದ ಈತನು ನವನಗರ ಎಂಬ ಪಟ್ಟಣವನ್ನು ನಿರ್ಮಿಸಿದನು. ಇವನು ಅಮರಾವತಿ ಸ್ತೂಪದ ರಚನೆಗೆ ಸಹಾಯ ಮಾಡಿದನು. ಇವನ ಕಾಲದಲ್ಲಿ ಶಾತ ವಾಹನರ ರಾಜ್ಯವು ಕುಂದುತ್ತಾ ಬಂದಿತು. ಇಳಿಮುಖವಾಗುತ್ತಿದ್ದ ಶಾತವಾಹನರ ಪ್ರಭುತ್ವ ವನ್ನು ಸ್ವಲ್ಪ ಕಾಲದವರೆಗೆ ಎತ್ತಿ ಹಿಡಿದವನೆಂದರೆ ನಂತರ ಆಳ್ವಿಕೆ ಮಾಡಿದ ಯಜ್ಞಶ್ರೀ ಶಾತಕರ್ಣಿ. ಸಾರ್ವಭೌಮ ಶಾತವಾಹನ ಅರಸು ಮನೆತನದಲ್ಲಿ ಇವನೇ ಕೊನೆಯ ಶಕ್ತಿಶಾಲಿ ಅರಸು. ಇವನ ನಾಣ್ಯಗಳು ಚಂದ್ರವಳ್ಳಿ, ಬನವಾಸಿ ವಡಗಾಂವ್, ಮಾಧವಪುರ, ಸನ್ನತಿ ಮೊದಲಾದ ನೆಲೆಗಳಲ್ಲಿ ದೊರೆತಿವೆ. ಪುರಾಣಗಳ ಪ್ರಕಾರ ಯಜ್ಞಶ್ರೀ ಶಾತಕರ್ಣಿಯ ನಂತರ ವಿಜಯ, ಚಂಡಶ್ರೀ ಮತ್ತು ಪುಲೋಮ ಆಳ್ವಿಕೆ ನಡೆಸಿದರು. ಇವರ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಪುಲೋಮನು ಶಾತವಾಹನ ಮನೆತನದ ಕೊನೆಯ ಅರಸು. ಒಟ್ಟಿನಲ್ಲಿ ಸು. ಮೂರನೆ ಶತಮಾನದ ಆದಿಭಾಗದಲ್ಲಿ ಈ ರಾಜರುಗಳ ಕರ್ನಾಟಕದ ಮೇಲಿನ ಆಳ್ವಿಕೆಯು ಕೊನೆಯಾಯಿತೆಂದು ಹೇಳಬಹುದು. ಅನಂತರ ಅಭೀರರು ಮಹಾರಾಷ್ಟ್ರದಲ್ಲೂ, ಇಕ್ಷ್ವಾಕು ಗಳು ಆಂಧ್ರದಲ್ಲೂ, ಪಲ್ಲವರು ದಕ್ಷಿಣದಲ್ಲೂ ಪ್ರಬಲರಾದರು.

## ಕೊಡುಗೆಗಳು

ದಕ್ಷಿಣ ಭಾರತದಲ್ಲಿ ರಾಜಕೀಯ ಏಕತೆಯನ್ನು ಮೊದಲ ಬಾರಿಗೆ ಸ್ಥಾಪಿಸಿದ ಶಾತವಾಹನರು ನಾಲ್ಕೂವರೆ ಶತಮಾನಗಳ ಕಾಲ ಆಳ್ವಿಕೆ ಮಾಡಿ ಹೊಸದಾದ ರಾಜಕೀಯ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಹುಟ್ಟು ಹಾಕಿದರು. ರಾಜಧಾನಿಯಾಗಿದ್ದ 'ಪ್ರತಿಷ್ಠಾನ ಪುರ'ವು ದಖನ್ನಿನ ಸಾಂಸ್ಕೃತಿಕ ಕೇಂದ್ರವಾಯಿತು. ಗುಣಾಢ್ಯನ *ಬೃಹತ್ಕಥೆ*ಮತ್ತು ಟಾಲೆಮಿಯ *ಜಾಗ್ರಫಿ* ಕೃತಿಗಳು ಶಾತವಾಹನ ಸಾಂಸ್ಕೃತಿಕ ಹಿರಿಮೆಯ ಬಗ್ಗೆ ವರ್ಣಿಸುತ್ತವೆ. ಅವುಗಳನ್ನೀಗ ಒಂದೊಂದಾಗಿ ಸಂಕ್ಷಿಪ್ತವಾಗಿ ಪರಿಶೀಲಿಸೋಣ.

### ಆಡಳಿತ

ಮೌರ್ಯರಂತೆ ಬಲಪ್ರಧಾನ ಆಡಳಿತ ವ್ಯವಸ್ಥೆ ಹುಟ್ಟು ಹಾಕದ ಶಾತವಾಹನರ ಆಡಳಿತ ಬಹು ಸರಳವಾಗಿತ್ತು. ರಾಜತ್ವ ಪದ್ಧತಿ ವಂಶಪಾರಂಪರ್ಯವಾಗಿತ್ತು ರಾಜನು ಸಮಗ್ರ ಆಡಳಿತದ ಮುಖ್ಯಸ್ಥನೂ ಆಗಿದ್ದನು. ಅವನು ನಿರಂಕುಶಾಧಿಕಾರಿಯಾಗಿದ್ದರೂ ಅವನನ್ನು ಧರ್ಮ ಶಾಸ್ತ್ರಗಳು ನಿಯಂತ್ರಿಸುವ ಅದೃಶ್ಯ ಶಕ್ತಿಗಳಾಗಿದ್ದವು. ರಾಜನ ಹಿರಿಯ ಪುತ್ರನೇ ಯುವರಾಜ. ಇವನು ರಾಜನಿಗೆ ಆಡಳಿತದಲ್ಲಿ ಸಹಾಯಕನಾಗಿದ್ದನು. ಉಳಿದ ರಾಜಪುತ್ರರನ್ನು ಕುಮಾರ

ರೆಂದು ಕರೆಯಲಾಗುತ್ತಿತ್ತು. ಅವರನ್ನು ಪ್ರಾಂತ್ಯಗಳಿಗೆ ನೇಮಿಸಲಾಗುತ್ತಿತ್ತು. ಅರಸ ಅಪ್ರಾಪ್ತ ವಯಸ್ಕನಾಗಿದ್ದರೆ ಆಡಳಿತವನ್ನು ಅವನ ತಂದೆಯ ಸೋದರ ಅಥವಾ ಅವನ ತಾಯಿ ನೋಡಿ ಕೊಳ್ಳುತ್ತಿದ್ದಳು. ಈ ಸನ್ನಿವೇಶ ಶಾತವಾಹನರ ರಾಣಿಯರಾದ ನಾಗನಿಕ ಮತ್ತು ಬಲಶ್ರೀ ಯವರ ಕಾಲದಲ್ಲಿ ನಿರ್ಮಾಣವಾಗಿತ್ತು. ರಾಜನು ಯುದ್ಧದಲ್ಲಿ ಸೇನೆಯ ಮುಖಂಡತ್ವವನ್ನು ವಹಿಸುತ್ತಿದ್ದನು. ದಿನನಿತ್ಯದ ಆಡಳಿತ ನಿರ್ವಹಣೆಯಲ್ಲಿ ನೆರವಾಗಲು ರಾಜನು ಮಂತ್ರಿ ಪರಿಷತ್ ನೇಮಕ ಮಾಡಿಕೊಳ್ಳುತ್ತಿದ್ದನು. ಗ್ರಾಮೀಣ ಪ್ರದೇಶದಲ್ಲಿ ಗೌಲ್ಮಿಕ ಎಂಬ ಸೇನಾಧಿ ಕಾರಿ ಇರುತ್ತಿದ್ದನು. ಇವನು ೯ ರಥ, ೯ ಆನೆ, ೨೫ ಕುದುರೆ, ೪೫ ಕಾಲಾಳುಗಳ ಒಡೆಯನಾಗಿರುತ್ತಿದ್ದನು.

ಆಡಳಿತದ ನಿರ್ವಹಣೆಗೋಸ್ಕರ ಸಾಮ್ರಾಜ್ಯವನ್ನು ಹಲವು ಪ್ರಾಂತ್ಯಗಳನ್ನಾಗಿ ಮಾಡ ಲಾಗಿತ್ತು. ಇವುಗಳನ್ನು 'ಜನಪದ'ಗಳೆಂದು ಕರೆಯುತ್ತಿದ್ದರು. ಜನಪದಗಳನ್ನು 'ಆಹಾರ' ಗಳನ್ನಾಗಿ ಪುನರ್ ವಿಭಜಿಸಿದ್ದರು. ಗ್ರಾಮಗಳು ಗ್ರಾಮಿಕನ ಮೇಲ್ವಿಚಾರಣೆಗೆ ಒಳಪಟ್ಟಿದ್ದವು. ಸ್ಥಳೀಯ ಆಡಳಿತವನ್ನು ಬೇರೆ ಬೇರೆ ಮಾಂಡಲಿಕರಿಗೆ ಬಿಟ್ಟಿದ್ದರು. ಈ ಮಾಂಡಲಿಕ ಅರಸರನ್ನು ಹದ್ದುಬಸ್ತಿನಲ್ಲಿಡಲು ತಮ್ಮ ಅಧಿಕಾರಿಗಳನ್ನು ಪ್ರತಿಯೊಂದು ಪ್ರಾಂತ್ಯದಲ್ಲಿಯೂ ನೇಮಿಸಿದ್ದರು. ಮಾಂಡಲಿಕರಲ್ಲಿ ಮೂರು ವರ್ಗಗಳಿದ್ದು, ಒಂದು ವರ್ಗದವರು 'ರಾಜಾ' ಎಂಬ ಹೆಸರುಳ್ಳ ನಾಣ್ಯವನ್ನು ಟಂಕಿಸುವ ಅಧಿಕಾರವುಳ್ಳವರು. ಮಹಾಭೋಜ ಅಥವಾ ಮಹಾರಥಿಗಳೆಂಬ ಮಾಂಡಲಿಕರು ರಾಜವಂಶಕ್ಕೆ ಸಂಬಂಧಿಗಳಾದವರು. ಬನವಾಸಿಯ ಚುಟು ಗಳು ಇದೇ ವರ್ಗಕ್ಕೆ ಸೇರಿದವರಾಗಿದ್ದರು. ದೂರದ ಕೇಂದ್ರಗಳಲ್ಲಿ ಮಹಾಸೇನಾಪತಿಗಳೆಂಬ ಸೇನೆಗೆ ಸೇರಿದ ಆಡಳಿತಗಾರರನ್ನು ನೇಮಿಸಲಾಗುತ್ತಿತ್ತು. ಇವರ ಕಾಲದಲ್ಲಿ ಪ್ರಾಯಶಃ ಪಶ್ಚಿಮದಲ್ಲಿ ಬನವಾಸಿ; ಪೂರ್ವದಲ್ಲಿ ಸನ್ನತಿ; ಆಡಳಿತ ಕೇಂದ್ರವಾಗಿದ್ದವು. ಒಟ್ಟಿನಲ್ಲಿ ಇವರ ಆಡಳಿತ ಮೌರ್ಯ ಸಾಮ್ರಾಜ್ಯದ ಬಲವಾದ ಕೇಂದ್ರೀಕೃತ ಅಧಿಕಾರಶಾಹಿ ಆಡಳಿತ ಪದ್ಧತಿಯಂತೆ ಇರಲಿಲ್ಲವೆಂದು ತೋರುವುದು.

### ಸಾಂಸ್ಕೃತಿಕ ಸಾಧನೆ

ಶಾತವಾಹನರು ವೈದಿಕ ಧರ್ಮಾನುಯಾಯಿಗಳು, ಯಜ್ಞ-ಯಾಗಾದಿಗಳಲ್ಲಿ ನಂಬಿಕೆ ಉಳ್ಳವರು. ಇವರು ಅಶ್ವಮೇಧ, ರಾಜಸೂಯ ಮುಂತಾದ ಯಜ್ಞಗಳನ್ನು ಆಚರಿಸಿದರು. ಹಾಲನ 'ಗಾಥ ಸಪ್ತಶತಿ' ಪಶುಪತಿಯ ಸ್ತುತಿಯಿಂದ ಆರಂಭವಾಗುವುದಲ್ಲದೆ ಅದರಲ್ಲಿ ಗೌರಿಮಂದಿರದ ಉಲ್ಲೇಖವಿದೆ. ಇಂದ್ರ, ಸೂರ್ಯ, ವಿಷ್ಣು, ವಾಸುದೇವ, ಗಣೇಶನ ಪೂಜೆ ರೂಢಿಯಲ್ಲಿತ್ತು. ಸನ್ನತಿಯು ಶಕ್ತಿ ಆರಾಧನೆಯ ಕೇಂದ್ರವಾಗಿತ್ತು. ಶಿವ ಮತ್ತು ಕೃಷ್ಣರ ಪೂಜೆ ಜನಪ್ರಿಯವಾಗಿತ್ತು. ತಾಳಗುಂದದ ಪ್ರಣವೇಶ್ವರ ದೇವಾಲಯವೂ ಇವರ ಕಾಲದ ರಚನೆ ಯೆಂದು ಹೇಳಲಾಗಿದೆ. ಐಹೊಳೆ, ವಾಸನ (ನರಗುಂದ ತಾ.) ಬೋಳೆ (ಅಂಕೋಲಾ ತಾ.) ಗಳಲ್ಲಿ ಅವರ ಕಾಲದಲ್ಲಿ ನಿರ್ಮಿತವಾದ ಇಟ್ಟಿಗೆಯ ದೇವಾಲಯಗಳನ್ನು ಸಂಶೋಧಿಸ

ಲಾಗಿದೆ. ವಾಸನದಲ್ಲಿನ ಚಂಡಶಿವ ಎಂಬ ದೇವಾಲಯವನ್ನು ವಾಸಿಷ್ಠೀಪುತ್ರ ಪುಳುಮಾವಿಯ ಕಾಲದಲ್ಲಿ ನಿರ್ಮಿಸಲಾಯಿತು. ವೈದಿಕ ಧರ್ಮದಂತೆ ಬೌದ್ಧಧರ್ಮವೂ ಆ ಕಾಲದಲ್ಲಿ ಜನಪ್ರಿಯವಾಗಿತ್ತು ಚೈತ್ಯ, ವಿಹಾರ, ಸ್ತೂಪಗಳ ರಚನೆಗೂ ಅವುಗಳ ನಿರ್ವಹಣೆಗೂ ಉದಾರ ವಾದ ದಾನಗಳನ್ನು ನೀಡಿದರು. ಬನವಾಸಿಯ ಭೂತಪಾಲಶೆಟ್ಟಿ ಎಂಬ ವರ್ತಕನು ಕಾರ್ಲದಲ್ಲಿ ಪ್ರಸಿದ್ಧವಾದ ಚೈತ್ಯಾಲಯವನ್ನು ನಿರ್ಮಿಸಿದನು. ಸಿಂಹಧ್ವಜ ಮತ್ತು ಧರ್ಮ ರೆಂಬ ಇಬ್ಬರು ಯವನರು ಬೌದ್ಧ ಧರ್ಮೀಯರಾಗಿರುವುದು ಕಾರ್ಲದ ಶಾಸನದಿಂದ ತಿಳಿದುಬರುತ್ತದೆ. ನಾಸಿಕ್, ಕನ್ಹೇರಿ, ಜುನ್ನರ್, ಅಮರಾವತಿ ಮೊದಲಾದ ಪ್ರದೇಶಗಳೂ ಬೌದ್ಧ ಧಾರ್ಮಿಕ ಕೇಂದ್ರಗಳು ಆಗಿದ್ದವು. ಇವರ ಕಾಲದಲ್ಲಿ ಸನ್ನತಿಯು ಅತಿ ದೊಡ್ಡ ಪಟ್ಟಣವಾಗಿದ್ದು, ಅಲ್ಲಿ ಸ್ತೂಪಗಳು, ಇಟ್ಟಿಗೆಯ ಕಟ್ಟಡಗಳು, ಶಿಲ್ಪಾಲಂಕೃತ ಶಿಲಾ ಶಾಸನಗಳು ವಿಪುಲವಾಗಿವೆ. ಜ್ಞಾನಾರ್ಜನೆಗೆ ಬೆಂಬಲ ನೀಡಲು ಅನೇಕ ಅಗ್ರಹಾರಗಳನ್ನು ಸ್ಥಾಪಿಸಿದ್ದು; ತಾಳಗುಂದ ಅಂತಹ ಒಂದು ಅಗ್ರಹಾರವಾಗಿತ್ತು. ಒಟ್ಟಿನಲ್ಲಿ ಎರಡೂ ಧರ್ಮಗಳು ಹಾರ್ದಿಕವಾಗಿ ಸಹ ಬದುಕನ್ನು ನಡೆಸಿದ್ದವು.

**ಭಾಷೆ ಮತ್ತು ಸಾಹಿತ್ಯ**

ಮೌರ್ಯರ ತರುವಾಯ ಕರ್ನಾಟಕದ ಭಾಗಗಳಲ್ಲಿ ಅಧಿಕಾರಕ್ಕೆ ಬಂದ ಶಾತವಾಹನರು ಹಿಂದೂ ಮತ್ತು ಬೌದ್ಧಮತಗಳಿಗೆ ಆಶ್ರಯ ನೀಡುವುದರ ಜೊತೆಗೆ ಪ್ರಾಕೃತವನ್ನೇ ಅವರು ತಮ್ಮ ಅಧಿಕೃತ ಭಾಷೆ ಮಾಡಿಕೊಂಡರು. ಈ ಅರಸರ ಎಲ್ಲಾ ಶಾಸನಗಳೂ ಪ್ರಾಕೃತ ಭಾಷೆಯಲ್ಲಿ ಬ್ರಾಹ್ಮಿಲಿಪಿಯಲ್ಲಿ ಇವೆ. 'ರಾಜಕವಿ'ಯೆಂದೇ ಪ್ರಸಿದ್ಧಿಯಾದ ಹಾಲನು ಗಾಥಸಪ್ತಸತಿ ಎಂಬ ೭೦೦ ಪದ್ಯಗಳನ್ನೊಳಗೊಂಡ ಶೃಂಗಾರ ಕಾವ್ಯವನ್ನು ರಚಿಸಿದ್ದಾನೆ. ಇದು ಆರ್ಯಾಛಂದಸ್ಸಿನಲ್ಲಿದೆ. ಅಕ್ಷಯ ಕಥಾಗಣಿ ಎನಿಸಿದ, *ಬೃಹತ್ಕಥೆ*ಯನ್ನು ಗುಣಾಢ್ಯನು ಪ್ರಾಕೃತದ ಪ್ರಭೇದವಾದ ಪೈಶಾಚಿ ಭಾಷೆಯಲ್ಲಿ ರಚಿಸಿದ್ದಾನೆ. ಇದು ರಮ್ಯಕಥೆಗಳ ಸಂಗ್ರಹವಾಗಿದೆ. ನಂತರ ಕ್ಷೇಮೇಂದ್ರ, ಸೋಮದೇವ ಮೊದಲಾದವರು ಅದನ್ನು ಸಂಸ್ಕೃತಕ್ಕೆ ಭಾಷಾಂತರಿಸಿದರು. ಸರ್ವವರ್ಮನು ಸಂಸ್ಕೃತ ಭಾಷೆಯಲ್ಲಿ *ಕಾತಂತ್ರ ವ್ಯಾಕರಣ* ಎಂಬ ಕೃತಿಯನ್ನು ಅವರ ಆಶ್ರಯದಲ್ಲಿ ರಚಿಸಿದನು. ಇದರಿಂದ ಶಾತವಾಹನರು ಸಂಸ್ಕೃತಕ್ಕೂ ಕೂಡಾ ಪ್ರೋತ್ಸಾಹ ನೀಡಿದರು ಎಂದು ತಿಳಿಯುತ್ತದೆ. ಆದರೂ ಕೂಡಾ ಜನಸಮೂಹದ ಭಾಷೆಯಾದ ಪ್ರಾಕೃತವನ್ನು ಮಾನ್ಯ ಮಾಡಲೇಬೇಕಾಯಿತು. ಇದೇ ವೇಳೆಗೆ ದಕ್ಷಿಣ ದ್ರಾವಿಡ ದಿಂದ ಕನ್ನಡವು ಪ್ರತ್ಯೇಕಗೊಂಡು ತನ್ನ ಸ್ವತಂತ್ರರೂಪ ಪಡೆಯುವಲ್ಲಿ ಪ್ರಾದೇಶಿಕತೆಯ ಜೊತೆ ಆಯಾ ಮೂಲದ ಬೌದ್ಧ-ಜೈನ ಧರ್ಮಗಳ ಪ್ರಭಾವ ಮತ್ತು ನಂದ-ಮೌರ್ಯರ ಆಳ್ವಿಕೆಗಳೂ ಕೂಡಾ ಕಾರಣವಾಗಿವೆ. ಶಾತವಾಹನರ ಆಳ್ವಿಕೆಯಲ್ಲಿ ಕನ್ನಡ ಭಾಷೆಯು ಪ್ರತ್ಯೇಕ ಮತ್ತು ವಿಸ್ತೃತ ಜನಪದವಾಗಿ ರೂಪುಗೊಂಡಿತು. ಟಾಲೆಮಿಯ ಬರಹಗಳಲ್ಲಿ ಕನ್ನಡ ಭಾಷೆಯ ಊರ ಶಬ್ದಗಳಿರುವುದರಿಂದ ಕನ್ನಡವು ಪ್ರಚಲಿತದಲ್ಲಿತ್ತೆಂದು ತಿಳಿಯಬಹುದು.

ಉದಾಹರಣೆಗೆ: ಚಿಮ್ಮಲಗಿ, ಕಲ್ಕೇರಿ, ಬನೌಸಿ, ಮೊದೂಗಲ ಇತರೆ ಆ ಕಾಲದ ಪ್ರಾಕೃತ ಭಾಷೆಯಲ್ಲಿ ಅನೇಕ ಕನ್ನಡ ಶಬ್ದಗಳಿದ್ದವು. ಉದಾಹರಣೆಗೆ: ಹಾಲನು ತನ್ನ *ಗಾಥಸಪ್ತಶತಿ* ಯಲ್ಲಿ ಪೊಟ್ಟೆ, ತುಪ್ಪ, ತೀರ್, ಪಟ್ಟು ಮೊದಲಾದ ಕನ್ನಡ ಶಬ್ದಗಳನ್ನು ಪ್ರಯೋಗಿಸಿದ್ದಾನೆಂದು ಗೋವಿಂದ ಪೈ ತೋರಿಸಿಕೊಟ್ಟಿದ್ದಾರೆ. ಹೀಗೆ ಕ್ರಿ.ಶ. ೩ನೆ ಶತಮಾನದ ವೇಳೆಗೆ ಕನ್ನಡ ಭಾಷೆ ಮತ್ತು ಕರ್ನಾಟಕಗಳು ಸ್ವತಂತ್ರ ಅಸ್ತಿತ್ವ ಪಡೆದಿದ್ದವು.

**ಕಲೆ ಮತ್ತು ವಾಸ್ತುಶಿಲ್ಪ**

ಶಾತವಾಹನರ ಕಾಲದ ರಚನೆಗಳು ಕಲೆಯ ಕ್ಷೇತ್ರದ ಗಣ್ಯ ಸಾಧನೆಗಳಾಗಿವೆ. ಇವರು ಗುಡ್ಡ ಬೆಟ್ಟಗಳ ಹೆಬ್ಬಂಡೆಯನ್ನು ಕೊರೆದು ಚೈತ್ಯಾಲಯ ಮತ್ತು ವಿಹಾರಗಳನ್ನು ನಿರ್ಮಿಸಿದರು. ಚೈತ್ಯವು ಬೌದ್ಧಧರ್ಮೀಯರ ಆಯತಾಕಾರದ ಪ್ರಾರ್ಥನಾ ಭವನ. ಅದರ ಹಿಂಭಾಗವು ಗಜಪೃಷ್ಠಾಕಾರದಲ್ಲಿರುತ್ತದೆ. ಇಡೀ ಭವನವು ಉದ್ದಕ್ಕೆ ಕಂಬಗಳ ಎರಡು ಸಾಲುಗಳಿಂದ ಮೂರು ಭಾಗಗಳಾಗಿ ವಿಭಜಿತವಾಗಿದೆ. ಮಧ್ಯದ ಭಾಗವು ಎಡಬಲಗಳ ಭಾಗಕ್ಕಿಂತ ಹೆಚ್ಚು ಅಗಲವಾಗಿದೆ. ಹಿಂಭಾಗದಲ್ಲಿ ಗೋಡೆಯಿಂದ ಮುಂದಕ್ಕೆ ಮಧ್ಯದಲ್ಲಿ ಚಿಕ್ಕ ಶಿಲಾ ಸ್ತೂಪವಿದೆ. ಕಂಬಗಳ ಸಾಲು ಸ್ತೂಪದ ಸುತ್ತಲೂ ಮುಂದುವರಿಯುತ್ತದೆ. ಇದರ ಛಾವಣಿ ಅರೆ ಪೀಪಾಯಿಯಂತಿರುತ್ತದೆ. ಸ್ತೂಪಕ್ಕೆ ಸರಿಯಾಗಿ ಎದುರು ದಿಕ್ಕಿನಲ್ಲಿ ಪ್ರವೇಶದ್ವಾರವಿದ್ದು. ಅದರ ಮೇಲೆ ಕಮಾನಿನ ಆಕಾರದ ಅಗಲವಾದ ಕಿಟಕಿ ಇದ್ದು ಅದು ಕುದುರೆಯ ಲಾಳಾಕೃತಿಯಲ್ಲಿದೆ. ಹೊರಗಿನಿಂದ ಅದು ಬೋಧಿಪತ್ರದಂತೆ (ಅಶ್ವತ್ಥರ ಎಲೆ) ತೋರುತ್ತದೆ. ಇಂತಹ ಚೈತ್ಯಾಲಯಗಳನ್ನು ಕಾರ್ಲೆ, ಭಾಜಾ, ಬೇಡ್ಸ, ಕನ್ಹೇರಿ, ಕೊಂಡಾನೆ, ಅಜಂತ, ಪಿತಲ್‌ಕೋರಾ ಮುಂತಾದೆಡೆ ಕಾಣಬಹುದು.

ಹೆಬ್ಬಂಡೆಗಳಿಂದ ಕೊರೆದು ನಿರ್ಮಾಣ ಮಾಡಿದ ಆಲಯಗಳ ನಿರ್ಮಾಣ ಕ್ರಿ.ಪೂ. ೨೦೦ ರಿಂದಲೇ ಆರಂಭವಾಯಿತು. ಕಾರ್ಲೆ ಮತ್ತು ಬೇಡ್ಸದಲ್ಲಿನ ಚೈತ್ಯಾಲಯಗಳು ಆರಂಭದ ರಚನೆಗಳಾಗಿವೆ. ಕಾರ್ಲೆಯಲ್ಲಿನ ಚೈತ್ಯಾಲಯ ಅತ್ಯಂತ ಸುಂದರವೂ ದೊಡ್ಡದೂ ಆಗಿದೆ. ಇದು ೪೫ ಮೀಟರ್ ಉದ್ದ ೧೫ ಮೀಟರ್ ಅಗಲ ಮತ್ತು ೧೫ ಮೀಟರ್ ಎತ್ತರವಿದೆ. ಅದರ ಕಂಬಗಳು ತಳದಲ್ಲಿ ಹೂಜಿಯ ಆಕಾರವೂ, ಕಾಂಡದಲ್ಲಿ ಅಷ್ಟಕೋನದವೂ, ತುದಿಯಲ್ಲಿ ತಲೆಕೆಳಗಾದ ಹೂಜಿಯಾಕಾರದಲ್ಲಿದೆ ಅವುಗಳ ಮೇಲೆ ಚಾಚುಪೀಠದಲ್ಲಿ ಆನೆಗಳನ್ನು ಏರಿರುವ ಸ್ತ್ರೀಪುರುಷರ ಪ್ರತಿಮೆಗಳಿವೆ. ಪ್ರವೇಶದ್ವಾರದ ಮೇಲ್ಭಾಗದಲ್ಲಿರುವ ವಿಶಾಲ ಕಿಟಕಿಯಿಂದ ಬಿಸಿಲು ಬೆಳಿಗ್ಗೆ ನೇರವಾಗಿ ಒಳಗಡೆ ಬೀಳುತ್ತದೆ. ಇದು ಭಾರತದಲ್ಲೇ ಅತ್ಯಂತ ಭವ್ಯವಾದ ಗುಹಾಲಯವೆಂದು ಆನಂದಕುಮಾರ ಸ್ವಾಮಿಯವರು ಹೇಳುತ್ತಾರೆ.

ವಿಹಾರವು ಬೌದ್ಧಭಿಕ್ಷುಗಳ ನಿವಾಸ ಅಥವಾ ಮಠ. ಇದು ಒಂದೇ ಬಾಗಿಲನ್ನು ಹೊಂದಿರುವ ವಿಶಾಲವಾದ ಹಜಾರ. ಇದರ ಸುತ್ತಲೂ ವಿದ್ಯಾರ್ಥಿಗಳ ಕೋಣೆಗಳನ್ನು ಕೊರೆದಿರುತ್ತಾರೆ. ಕೋಣೆಗಳಲ್ಲಿ ಮಲಗಲು, ಪುಸ್ತಕ ಮತ್ತು ದೀಪಗಳನ್ನಿಡುವ ವ್ಯವಸ್ಥೆ ಇರುತ್ತಿತ್ತು. ಈ ಹಜಾರವನ್ನು ಭಿಕ್ಷುಗಳ ಪ್ರಾರ್ಥನೆಗಾಗಿ ಉಪಯೋಗಿಸಲಾಯಿತು. ಇವೂ

ಕೂಡಾ ಚೈತ್ಯದಂತೆ ಬಂಡೆಯನ್ನು ಕೊರೆದು ಮಾಡಿದ ರಚನೆಗಳೇ ಆಗಿವೆ. ನಹಾಪಣ ಮತ್ತು ಗೌತಮೀ ಪುತ್ರರಿಬ್ಬರೂ ನಾಸಿಕದಲ್ಲಿ ವಿಹಾರ ನಿರ್ಮಿಸಿದರು. ಕನ್ಹೇರಿಯಲ್ಲಿ ನೂರಾರು ಕೊಠಡಿಗಳನ್ನು ಕೊರೆದಿದ್ದಾರೆ. ಕಾರ್ಲೆಯಲ್ಲಿನ ವಿಹಾರ ಮಹಡಿಯದು.

ಇವರ ಕಾಲದ ಮತ್ತೊಂದು ವಾಸ್ತುವಿನ ರಚನೆ ಸ್ತೂಪವಾಗಿದೆ. ಸ್ತೂಪಗಳೆಂದರೆ ಬುದ್ಧನ ಅಥವಾ ಬೌದ್ಧಭಿಕ್ಷುಗಳ ಪವಿತ್ರ ಅವಶೇಷಗಳನ್ನಿಟ್ಟು ಅವುಗಳ ರಕ್ಷಣೆಗಾಗಿ ಕಟ್ಟಿದ ಕಟ್ಟಡಗಳು. ಅವುಗಳು ಬಹುದೊಡ್ಡದಾದ ಅರೆಗೋಲಾಕಾರದ ರಚನೆಗಳಾಗಿವೆ. ಇವರ ಕಾಲದ ಸ್ತೂಪಗಳು ಆಂಧ್ರಪ್ರದೇಶದ ಗೋಳಿ, ಜಗ್ಗಯಪೇಠಾ, ಭಟ್ಟಿಪ್ರೋಲು, ಘಂಟಸಾಲ, ಅಮರಾವತಿ ಮತ್ತು ನಾಗಾರ್ಜುನಕೊಂಡದಲ್ಲಿ ಇವೆ. ಇವುಗಳಲ್ಲಿ ಹೆಚ್ಚಿನವು ಮೌರ್ಯರ ರಚನೆಗಳಾಗಿದ್ದು ಶಾತವಾಹನರ ಕಾಲದಲ್ಲಿ ಪುನರ್ ರಚನೆಯಾಗಿವೆ. ಇವುಗಳಲ್ಲಿ ಅಮರಾವತಿಯಲ್ಲಿನ ಸ್ತೂಪವು ಅತ್ಯಂತ ದೊಡ್ಡದಾಗಿದೆ. ಇದರ ನಿರ್ಮಾಣಕಾರ್ಯವು ಕ್ರಿ.ಪೂ. ೨೦೦ರಲ್ಲಿ ಆರಂಭವಾಗಿ ಕ್ರಿ.ಶ.೨ನೆ ಶತಮಾನದಲ್ಲಿ ಕೊನೆಗೊಂಡಿತು. ಇದು ೫೩ ಮೀಟರ್ ವ್ಯಾಸ ಹಾಗೂ ೩೩ ಮೀಟರ್ ಎತ್ತರವಿದೆ. ಬುದ್ಧನ ಜೀವಿತಕ್ಕೆ ಸಂಬಂಧಿಸುವ ಶಿಲ್ಪಗಳನ್ನು ಈ ಸ್ತೂಪಕ್ಕೆ ಹೊದಿಸಲಾಗಿದೆ. ಈಗ ಮದ್ರಾಸ್ ವಸ್ತು ಸಂಗ್ರಹಾಲಯದಲ್ಲಿರುವ ಅಮರಾವತಿಯ ಒಂದು ಬೃಹತ್ ಶಿಲಾಪದಕದಲ್ಲೂ ಆನೆಯನ್ನು ಪಳಗಿಸುವ ಒಂದು ಅತ್ಯಂತ ಸಹಜ ಹಾಗೂ ಸುಂದರ ಶಿಲ್ಪವಿದೆ. ನಾಗಾರ್ಜುನಕೊಂಡ ಮತ್ತೊಂದು ಪ್ರಮುಖ ಬೌದ್ಧ ಕಲಾಕೇಂದ್ರ. ಇತ್ತೀಚಿನ ಸಂಶೋಧನೆಗಳಿಂದ ಸನ್ನತಿ ಹಾಗೂ ಅದರ ಸುತ್ತಮುತ್ತಲಿನ ಕಣಗಿನಹಳ್ಳಿ ಮುಂತಾದ ಹತ್ತು ಹಳ್ಳಿಗಳಲ್ಲಿ ಬೌದ್ಧಸ್ತೂಪ ಮತ್ತು ಶಿಲ್ಪಾವಶೇಷಗಳನ್ನು ಸಂಶೋಧಿಸಲಾಗಿದೆ. ಕಣಗಿನಹಳ್ಳಿಯಲ್ಲಿ ದೊರೆತ ದುಂಡುಶಿಲ್ಪದ ಬುದ್ಧಮೂರ್ತಿಗಳಲ್ಲಿ ಒಂದು ನಿಂತ ಭಂಗಿಯಲ್ಲಿ ಮೂರು ಕುಳಿತ ಭಂಗಿಯಲ್ಲಿವೆ. ಆಂಧ್ರದ ಭಾವಿಕೊಂಡ ಮತ್ತೊಂದು ಮಹತ್ವದ ಬೌದ್ಧರ ಕೇಂದ್ರವಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ಕ್ರಿ.ಶ. ಪ್ರಾರಂಭದ ಶತಮಾನಗಳಲ್ಲಿ ಭರತಖಂಡದ ವಾಸ್ತುಶಿಲ್ಪ ನಿರ್ಮಾಣಕ್ಕೆ ಕಾರಣವಾದ ಪ್ರಮುಖ ಶಕ್ತಿ ಎಂದರೆ ಬೌದ್ಧಧರ್ಮ, ಜೈನಧರ್ಮವನ್ನು ಅದರಲ್ಲಿ ಸಮಾವೇಶಗೊಳಿಸಬಹುದು. ವಾಸ್ತುಶಿಲ್ಪದ ವಿವಿಧ ರೀತಿಗಳು ಸ್ವತಂತ್ರವಾಗಿ ಬೆಳೆದವು. ಇಟ್ಟಿಗೆ ಮರಗಳಿಂದ ಕಟ್ಟುತ್ತಿದ್ದ ಕಾಲದಿಂದ ಹಿಡಿದು ಕಲ್ಲನ್ನು ಬಳಸುವವರೆಗೂ ಅವುಗಳ ವ್ಯಾಪ್ತಿ ಬೆಳೆದಿತ್ತು, ವಾಸ್ತುಶಿಲ್ಪದ ಇತಿಹಾಸದಲ್ಲಿ ಶಾತವಾಹನರ ಕಾಲ ಬಹಳ ಮುಖ್ಯವಾದ ಯುಗವಾಗಿದೆ.

## ೪.೨ ಕದಂಬರು

ಕರ್ನಾಟಕದ ಚರಿತ್ರೆಯಲ್ಲಿ ಕದಂಬ ಸಾಮ್ರಾಜ್ಯವು ಅತ್ಯಂತ ಪ್ರಾಚೀನ ಹಾಗೂ ಚಿರಸ್ಥಾಯಿಯಾಗಿದೆ. ಕಂಚಿಯ ಪಲ್ಲವರು ಚುಟು ಮನೆತನದವರನ್ನು ಸರಿಸಿ ಕೆಲಕಾಲ ಬನವಾಸಿ ನಾಡನ್ನು ಆಳಿದ ನಂತರ ಕದಂಬರು ಈ ಪ್ರದೇಶದ ಮೇಲೆ ತಮ್ಮ ಸ್ವಾಮ್ಯ ಸ್ಥಾಪಿಸಿದರು. ಇವರು ಇಲ್ಲಿಂದ ಅಂದರೆ ನಾಲ್ಕನೆಯ ಶತಮಾನದಿಂದ ಆರನೆಯ ಶತಮಾನದ ನಡುವೆ ಆಳಿದರು. ಕನ್ನಡ ನಾಡಿನ ಪ್ರಥಮ ಅರಸು ಮನೆತನವಾದ ಕದಂಬರು ಕರ್ನಾಟಕದ ಉತ್ತರ ವಲಯದಲ್ಲೂ, ಗಂಗರು ದಕ್ಷಿಣ ವಲಯದಲ್ಲೂ ಸಮಕಾಲೀನರಾಗಿ ಆಳ್ವಿಕೆ ನಡೆಸಿದರು. ಶಿರಸಿ ತಾಲ್ಲೂಕಿನ ವರದಾ ನದಿಯ ಎಡದಂಡೆಯ ಮೇಲಿರುವ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಕದಂಬರು 'ಸಿಂಹಲಾಂಛನ' ಹೊಂದಿದ್ದರು. ಬನವಾಸಿಯನ್ನು ವನವಾಸಕ, ಬನೌಸಿ, ಸಂಜಯಂತಿ, ವೈಜಯಂತಿ. ಜಯಂತಿಪುರ, ನಂದನವನ, ಕನಕಾವತಿ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು.

### ಮೂಲ

ಕದಂಬರ ಇತಿಹಾಸವನ್ನು ರಚನೆ ಮಾಡಲು ಇರುವ ಮುಖ್ಯ ಆಧಾರಗಳೇ ಶಾಸನಗಳು. ಈ ಶಾಸನಗಳು ಕದಂಬರ ಮೂಲದ ಬಗ್ಗೆ ವಿಭಿನ್ನ ಮಾಹಿತಿ ನೀಡುತ್ತವೆ. ಗೋವೆಯ ಕದಂಬರ ಶಾಸನಗಳಲ್ಲಿ ಉಕ್ತವಾಗಿರುವಂತೆ ತ್ರಿಪುರನೆಂಬ ರಾಕ್ಷಸನನ್ನು ಶಿವನು ಸೋಲಿಸಿದಾಗ ಅವನ ಹಣೆಯ ಬೆವರಿನ ಹನಿ ಭೂಮಿಯ ಮೇಲೆ ಕಂದಬ ವೃಕ್ಷದ ಸಮೀಪ ಬಿದ್ದು ಆ ಹನಿಯಿಂದ ತ್ರಿಲೋಚನ ಕದಂಬ ಉದಯಿಸಿದ. ಅವನ ಮಗನೇ ಮಯೂರಶರ್ಮ. ಹಲಸಿ ಶಾಸನವು ಸಮುದ್ರ ಮಂಥನ ನಡೆದಾಗ ಭೂಮಿಯ ಮೇಲೆ ಬಿದ್ದ ಅಮೃತ ಬಿಂದುವಿನಿಂದ ಕದಂಬ ಬೆಳೆಯಿತು. ಕದಂಬ ಮನೆತನದ ಮೊದಲನೆ ರಾಜನಾದ ಮಯೂರನು ತ್ರಿನೇತ್ರನ ಮಗ ಎಂದು ವರ್ಣಿಸಲಾಗಿದೆ. ಪರಶುರಾಮನು ಹೈಗ ಮತ್ತು ತುಳುದೇಶಗಳನ್ನು ಸೃಷ್ಟಿಸಿದನು. ಶಿವ ಮತ್ತು ಪಾರ್ವತಿಯರು ಸಹ್ಯಾದ್ರಿಗೆ ಬಂದಾಗ ಅವರಿಗೆ ಕದಂಬ ವೃಕ್ಷದ ಅಡಿಯಲ್ಲಿ ಮಗು ಜನಿಸಿತು. ಆದುದರಿಂದ ಆ ಮಗುವಿಗೆ 'ಕದಂಬ' ಎಂಬ ಹೆಸರು ಬಂದಿತು, ಎಂಬುದು ಇನ್ನೊಂದು ಪೌರಾಣಿಕ ಕಥೆ. ಜೈನ ತೀರ್ಥಂಕರ ಆನಂದ ಜಿನವ್ರತೀಂದ್ರನ ಸಹೋದರಿಯ ಮಗನೇ ಮಯೂರವರ್ಮ ಎಂದು ಜೈನ ಸಂಪ್ರದಾಯದಿಂದ ತಿಳಿದುಬರುತ್ತದೆ. ಈ ವಾದಗಳೆಲ್ಲಾ ಸಮಕಾಲೀನ ಶಾಸನಗಳಲ್ಲಿ ಉಲ್ಲೇಖಿತವಾಗಿರದೆ ಅನಂತರದ ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಕದಂಬ ಮನೆತನದ ಮೂಲಪುರುಷನ ಜನನವು ದೈವಿಕವಾಗಿದ್ದು ಶಿವ ಪಾರ್ವತಿ ಭೂದೇವಿಗಳೇ ಕಾರಣ ಎಂಬುದು ಈ ಪುರಾಣ ಕಥನಗಳ ಸಾರ. ಸಾಕ್ಷಾತ್ ಪರಮಾತ್ಮನಿಂದಲೇ ತಮ್ಮ ವಂಶ ಪ್ರಾರಂಭವಾಯಿತೆಂದು ಹೇಳಿಕೊಳ್ಳುವುದು ಅಂದಿನ ರಾಜ ಮನೆತನಗಳಲ್ಲಿ ಸಾಮಾನ್ಯ ಸಂಪ್ರದಾಯವಾಗಿತ್ತು. ಹೀಗಾಗಿ ಇಂತಹ ವಾದಗಳಿಗೆ ಹೆಚ್ಚಿನ ಐತಿಹಾಸಿಕ ಮಹತ್ವಕೊಡುವುದು ಸೂಕ್ತವಲ್ಲ. ಶಾಂತಿವರ್ಮನ ತಾಳಗುಂದ ಶಾಸನ,

ರವಿವರ್ಮನ ಗುಡ್ನಾಪುರ ಶಾಸನಗಳು ಮೇಲಿನ ಎಲ್ಲ ವಾದಗಳನ್ನು ಹುಸಿಗೊಳಿಸಿ ಐತಿಹಾಸಿಕ ಸತ್ಯವನ್ನು ಬೆಳಕಿಗೆ ತಂದಿವೆ.

## ಮಯೂರ ಶರ್ಮ (ಕ್ರಿ.ಶ. ೩೨೫-೩೪೫)

ಕ್ರಿ.ಶ. ೫೦೦ರ ರವಿವರ್ಮನ ಗುಡ್ನಾಪುರ ಶಾಸನವು ಮಾನವ್ಯ ಗೋತ್ರದ ರೀತಿ ವಂಶದ ಬ್ರಾಹ್ಮಣ ವೀರಶರ್ಮ ಈ ವಂಶದ ಮೊದಲ ಐತಿಹಾಸಿಕ ವ್ಯಕ್ತಿ ಎಂದು ಹೇಳುತ್ತದೆ. ವೇದ, ವಿದ್ಯಾಪ್ರವೀಣನಾದ ಈತನ ವಂಶಕ್ಕೆ ಕದಂಬ ಕುಲವೆಂಬ ಹೆಸರಿತ್ತು. ಆತನ ಹಿರಿಯ ಮಗ ಬಂಧಷೇಣ. ಕ್ಷಾತ್ರ ವೃತ್ತಿಯನ್ನವಲಂಬಿಸಿದ್ದ ಈತನ ಮಗನೇ ಮಯೂರಶರ್ಮ. ಇವನು ವೇದಾಂಗ ವಿದ್ಯಾವಿಶಾರದನಾಗಿದ್ದನೆಂದು ತಿಳಿಸುತ್ತದೆ. ಮೂಲತಃ ಬ್ರಾಹ್ಮಣರಾಗಿ ಯಜ್ಞಯಾಗಾದಿಗಳಲ್ಲಿ ನಿರತರಾಗಿದ್ದ ಈ ವಂಶಸ್ಥರಿಗೆ ತಮ್ಮ ಮನೆಯ ಸಮೀಪದಲ್ಲಿದ್ದ ಏಕೈಕ ಕದಂಬ ವೃಕ್ಷದಿಂದ 'ಕದಂಬ' ಎಂಬ ಹೆಸರು ಬಂದಿತೆಂದು ತಾಳಗುಂದ ಶಾಸನವು ತಿಳಿಸುತ್ತದೆ. ಇಂತಹ ಕುಲದಲ್ಲಿ ಜನಿಸಿದ ಬ್ರಾಹ್ಮಣ ಮಯೂರಶರ್ಮನು ತನ್ನ ಗುರು (ತಾತ) ವೀರಶರ್ಮನ ಜೊತೆಯಲ್ಲಿ ಪಲ್ಲವರ ರಾಜಧಾನಿಯಾದ ಕಂಚಿಯ ಘಟಿಕಾಸ್ಥಾನಕ್ಕೆ ಹೋದನು. ಅಲ್ಲಿಯ ಪಲ್ಲವ ಅರಸು ಅಶ್ವಮೇಧಯಾಗಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿದ್ದನು ಈ ಸನ್ನಿವೇಶದಲ್ಲಿ ಮಯೂರಶರ್ಮ ಮತ್ತು ಪಲ್ಲವರ ಅಶ್ವಸಂಸ್ಥೆಯ ಮಧ್ಯೆ ಜಗಳ ಆರಂಭವಾಗುತ್ತದೆ. ಇದರಲ್ಲಿ ಮಯೂರನಿಗೆ ಅಪಮಾನವಾಗುತ್ತದೆ. ಇದರಿಂದ ರೊಚ್ಚಿಗೆದ್ದ ಈ ಬ್ರಾಹ್ಮಣ ಕುಶ ಸಮಿತ್ತು, ಅಜ್ಯ, ಚರುಗಳನ್ನು ಬಿಸುಟು ಶಸ್ತ್ರವನ್ನು ಹಿಡಿದನು. ತನ್ನದೆ ಆದ ಒಂದು ಸೈನ್ಯವನ್ನು ಕಟ್ಟಿಕೊಂಡು ಪಲ್ಲವರ ಗಡಿ ಪ್ರದೇಶವಾದ ಶ್ರೀಪರ್ವತ ಭಾಗವನ್ನು ಆಕ್ರಮಿಸಿದನು. ಪಲ್ಲವ ದೊರೆ ಸಿಂಹವರ್ಮ ಮತ್ತು ಶಿವಸ್ಕಂದವರ್ಮರು ಮಯೂರ ಶರ್ಮನ ಬಲವನ್ನಡಗಿಸಲು ವ್ಯರ್ಥ ಪ್ರಯತ್ನಗಳನ್ನು ಮಾಡಿದರು. ಶ್ರೀಶೈಲಮ್ ಪ್ರಾಂತ್ಯ ದಲ್ಲಿ ಪಲ್ಲವರ ಮಾಂಡಲಿಕರಾಗಿದ್ದ ಬಾಣ ದೊರೆಗಳಿಂದ ಕಪ್ಪ ಸಂಗ್ರಹಿಸಿದನು. ಕಾಡು ಪ್ರಾಂತ್ಯವೊಂದರಲ್ಲಿ ಪಲ್ಲವರು ವಿಶ್ರಾಂತಿಯನ್ನು ಪಡೆಯುವಾಗ ಮಯೂರಶರ್ಮನು ಅವರೊಂದಿಗೆ ರಾತ್ರಿಯುದ್ಧದಲ್ಲಿ ತೊಡಗಿ ಸೋಲಿಸಿದನೆಂದು ಹೇಳಲಾಗಿದೆ. ಹೀಗೆ ಮಯೂರಶರ್ಮನೊಂದಿಗೆ ವಿರೋಧ ಬೆಳೆಸಿಕೊಳ್ಳಲಿಚ್ಛಿಸದ ಪಲ್ಲವರು ಅವನೊಂದಿಗೆ ಸ್ನೇಹ ಸಂಬಂಧವೇ ಹೆಚ್ಚು ಅನುಕೂಲ ಎಂದು ತಿಳಿದುಕೊಂಡು ಸ್ನೇಹವನ್ನು ಬೆಳಸಿದರು. ಅವರು ಅವನನ್ನು ಸ್ವತಂತ್ರರಾಜನೆಂದು ಮನ್ನಿಸಿ ಅವನ ರಾಜ್ಯಾಭಿಷೇಕವನ್ನೂ ಕೂಡಾ ತಾವೆಯೇ ನೆರವೇರಿಸಿದರು. ಅವರು ಅವನಿಗೆ ಪ್ರೇಹರಾ (ಮಲಪ್ರಭಾ ಅಥವಾ ಘಟಪ್ರಭಾ) ನದಿ ಪ್ರದೇಶವನ್ನು ಬಿಟ್ಟುಕೊಟ್ಟರು. ಹೀಗೆ ಪಲ್ಲವರ ವಶವಾಗಿದ್ದ ಕರ್ನಾಟಕದ ಭಾಗಗಳನ್ನು ಸ್ವತಂತ್ರಗೊಳಿಸಿದ ಕನ್ನಡ ಮೂಲದ ಗಣ್ಯ ದೊರೆ ಮಯೂರವರ್ಮ ಇವನು ಕದಂಬ ರಾಜ್ಯವನ್ನು ಸ್ಥಾಪಿಸಿ ಪಲ್ಲವರ ಸಾಮಂತನಾಗಿ ಆಳ್ವಿಕೆಯನ್ನು ಆರಂಭಿಸಿದನು. ಸ್ವಲ್ಪಕಾಲ ದಲ್ಲಿಯೇ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು.

ಮಯೂರಶರ್ಮನ ಚಂದ್ರವಳ್ಳಿ ಶಾಸನದಂತೆ ಅವನು ತ್ರೈಕೂಟ, ಅಭಿರ, ಪಲ್ಲವ, ಶಕಸ್ಥಾನ, ಪುನ್ನಾಟ, ಪಾರಿಯಾತ್ರ ಮೌಖರಿ ಹಾಗೂ ಸೇಂದ್ರಕರನ್ನು ಸೋಲಿಸಿದನೆಂದು ಪ್ರೊ.ಎಂ.ಹೆಚ್. ಕೃಷ್ಣರವರು ಹೇಳಿದ್ದರು. ಆದರೆ ಇತ್ತೀಚಿನ ಅಧ್ಯಯನಗಳು ಅದರ ಪುನರ್ ಅಧ್ಯಯನ ಮಾಡಿ ಇದರಲ್ಲಿ ಅವನ ದಂಡಯಾತ್ರೆಯ ವಿವರಗಳು ಇಲ್ಲ. ಅದಕ್ಕೆ ಬದಲಾಗಿ ಅವನು ಚಂದ್ರವಳ್ಳಿ ಬಳಿಯ ಕೆರೆಯನ್ನು ಭದ್ರಗೊಳಿಸಿದನೆಂದು ಹೇಳುತ್ತವೆ. ಒಟ್ಟಿನಲ್ಲಿ ಮಯೂರವರ್ಮನು ಅನೇಕ ರಾಜ್ಯಗಳೊಂದಿಗೆ ಯುದ್ಧ ಮಾಡಿರುವುದು ಸತ್ಯ ಸಂಗತಿಯಾಗಿದೆ. ದಿಗ್ವಿಜಯದ ಸಂಕೇತವಾಗಿ ಮಯೂರವರ್ಮನು ಅಶ್ವಮೇಧಯಾಗ ಮಾಡಿದನು.

ಮಯೂರವರ್ಮನ ನಂತರ ಅವನ ಮಗ ಕಂಗವರ್ಮ ಕದಂಬರ ದೊರೆಯಾದನು. ಅನೇಕ ಕದನಗಳಲ್ಲಿ ಸೆಣಸಿ ರಾಜ್ಯ ಕಾಪಾಡಿಕೊಂಡ ಈತನ ನಂತರ ಕ್ರಮವಾಗಿ ಭಗೀರಥ ವರ್ಮ ಮತ್ತು ರಘುವರ್ಮ ಆಳ್ವಿಕೆ ನಡೆಸಿದರು. ರಘುವರ್ಮನಿಗೆ ಸಂತಾನವಿಲ್ಲದ ಕಾರಣ ಆತನ ಸೋದರ ಕಾಕುತ್ಸವರ್ಮ ಅಧಿಕಾರಕ್ಕೆ ಬಂದನು.

**ಕಾಕುತ್ಸವರ್ಮ (ಕ್ರಿ.ಶ. ೪೦೫-೪೩೦)**

ಭಗೀರಥನ ಪುತ್ರನಾದ ಕಾಕುತ್ಸವರ್ಮ ತನ್ನ ಅಣ್ಣ ರಘುವರ್ಮನ ಕಾಲದಲ್ಲಿ ಯುವರಾಜನಾಗಿದ್ದನು. ಇವನ ಕಾಲದಲ್ಲಿ ಕದಂಬ ವಂಶ ಅತ್ಯುನ್ನತ ಸ್ಥಿತಿಯನ್ನು ಮುಟ್ಟಿತು. ಇವನು ಎಷ್ಟು ಪರಾಕ್ರಮಿಯೋ ಅಷ್ಟೇ ಪ್ರಜ್ಞಾವಂತನೂ, ಆಡಳಿತ ವಿಚಕ್ಷಣನೂ, ಪ್ರಜಾನುರಾಗಿಯೂ ಆಗಿದ್ದನು. ಅವನ ಅರಮನೆಯು ನಾನಾ ವಿಧದ ದ್ರವ್ಯದ ರಾಶಿಯಿಂದ ತುಂಬಿತ್ತು. ಅದರ ಗೋಪುರಗಳು ಮದ್ದಾನೆಗಳ ಮದದಿಂದ ಸುವಾಸಿತವಾಗಿದ್ದವು. ಚಂಚಲೆ ಎನಿಸಿದ ದೇವಿ ಲಕ್ಷ್ಮಿಯು ಅಲ್ಲಿ ಸ್ಥಿರವಾಗಿ ನಿಂತು ಆನಂದಿಸುತ್ತಿದ್ದಾಳೆ ಎಂದು ತಾಳಗುಂದ ಶಾಸನ ವರ್ಣಿಸುತ್ತದೆ.

ಕಾಕುತ್ಸವರ್ಮನ ವಿದೇಶಾಂಗ ನೀತಿಯ ಮುಖ್ಯ ಲಕ್ಷಣವೆಂದರೆ ತನ್ನ ಸಮಕಾಲೀನ ಬಲಿಷ್ಠ ಅರಸರೊಂದಿಗೆ ವೈವಾಹಿಕ ಸಂಬಂಧಗಳ ಮೂಲಕ ಮಿತ್ರತ್ವ ಸಂಪಾದಿಸುವುದು. ವಾಕಾಟಕ ಅರಸು ನರೇಂದ್ರಸೇನನು ಕುಂತಳೇಶ್ವರನ ಜೇಷ್ಠಪುತ್ರಿಯಾದ ಅಜಿತ ಭಟ್ಟಾರಿಕೆಯನ್ನು ವಿವಾಹವಾಗಿದ್ದನು. ಈ ಕುಂತಳೇಶ್ವರನು ಕಾಕುತ್ಸವರ್ಮನೇ ಆಗಿದ್ದಾನೆ. ತನ್ನ ಇನ್ನೊಬ್ಬ ಮಗಳನ್ನು ಕುಮಾರಗುಪ್ತನ ಮಗನಾದ ಸ್ಕಂದಗುಪ್ತನಿಗೆ ವಿವಾಹ ಮಾಡಿ ಕೊಟ್ಟಿದ್ದನು. ಮತ್ತೊಬ್ಬ ಮಗಳನ್ನು ಹತ್ತು ಮಾಂಡಲಿಕರ ನಾಯಕನಾದ ಭಟಾರಿ ವಂಶದ ಪಶುಪತಿಗೆ ವಿವಾಹ ಮಾಡಿಕೊಡಲಾಗಿತ್ತು. ಗಂಗವಂಶದ ಮಾಧವನನ್ನು ಕಾಕುತ್ಸವರ್ಮನ ಅಳಿಯನೆಂದು ಶಾಸನಾಧಾರದಿಂದ ತಿಳಿಯಬಹುದು. ಹೀಗೆ ನೆರೆಯ ಗುಪ್ತ, ವಾಕಾಟಕ, ಭಟಾರಿ ಮತ್ತು ಗಂಗ ವಂಶದವರ ಜೊತೆ ವೈವಾಹಿಕ ಸಂಬಂಧ ಬೆಳಸಿದ ಕಾಕುತ್ಸವರ್ಮನು ರಾಜನೀತಿ ನಿಪುಣನಾಗಿದ್ದನೆಂದು ಹೇಳಬಹುದು.

ಕಾಕುತ್ಸವರ್ಮನು ತಾಳಗುಂದಕ್ಕೆ ಆಗಮಿಸಿ ಅಲ್ಲಿನ ಪ್ರಣವೇಶ್ವರ ದೇಗುಲದಲ್ಲಿ ಪೂಜೆ ಸಲ್ಲಿಸಿ ಭಕ್ತರ ಉಪಯೋಗಕ್ಕಾಗಿ ದೇಗುಲದ ಹತ್ತಿರ ಒಂದು ತಟಾಕವನ್ನು ನಿರ್ಮಿಸಿದನು ಎಂದು ತಾಳಗುಂದ ಶಾಸನವು ತಿಳಿಸುತ್ತದೆ. ತನ್ನ ತಂದೆಯ ಜೊತೆ ಸ್ವಲ್ಪ ಕಾಲ ಜಂಟಿ ಅರಸರನಾಗಿದ್ದ ಶಾಂತಿವರ್ಮನು ಸು. ಕ್ರಿ.ಶ. ೪೫೫ ರಲ್ಲಿ ತನ್ನ ತಂದೆಯ ಮರಣಾನಂತರ ಪೂರ್ಣ ಅಧಿಕಾರ ಪಡೆದು ಅಲ್ಪಕಾಲ ಆಳಿದನು. ಈ ಶಾಂತಿವರ್ಮನು ಉದಾರಿ, ದಾನಿ, ಉನ್ನತಶೀಲವುಳ್ಳವನೂ ಆಗಿದ್ದನೆಂದು ತಿಳಿದುಬರುತ್ತದೆ. ಕನ್ನಯ್ಯ ಎಂಬುವನಿಂದ ನಿರ್ಮಾಣವಾದ ಎರಡು ದೇವಾಲಯಗಳಿಗೆ ಈತ ಸಹಾಯ ನೀಡಿದನೆಂದು ಶಾಸನಗಳು ತಿಳಿಸುತ್ತವೆ. ಶಾಂತಿವರ್ಮನು ಬನವಾಸಿಯಿಂದ ಆಳ್ವಿಕೆ ನಡೆಸಿದರೆ ಇವನ ಸೋದರ ಕೃಷ್ಣ ವರ್ಮನು ತ್ರಿಪರ್ವತವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡ ತೊಡಗಿದನು. ಒಟ್ಟಿನಲ್ಲಿ ಕಾಕುತ್ಸವರ್ಮನ ಮರಣಾನಂತರ ಕದಂಬ ರಾಜ್ಯ ಇಬ್ಭಾಗ ವಾಯಿತು. ಮುಂದೆ ನೂರು ವರ್ಷಗಳ ಕಾಲ ಎರಡೂ ಶಾಖೆಯವರು ಪ್ರತ್ಯೇಕವಾಗಿ ಆಳ್ವಿಕೆ ನಡೆಸಿದರು. ಅನಂತರ ಇಮ್ಮಡಿ ಕೃಷ್ಣವರ್ಮನ ಕಾಲದಲ್ಲಿ ಕದಂಬ ರಾಜ್ಯ ಒಂದುಗೂಡಿತು. ನಂತರ ಮೃಗೇಶವರ್ಮ, ರವಿವರ್ಮ, ಹರಿವರ್ಮ ಕ್ರಮವಾಗಿ ರಾಜ್ಯಭಾರ ಮಾಡಿದರು. ಕ್ರಿ.ಶ. ೫೪೦ ರಲ್ಲಿ ಬಾದಾಮಿಯ ಚಾಲುಕ್ಯರ ದೊರೆ ಕದಂಬರನ್ನು ಸೋಲಿಸಿ ಬನವಾಸಿಯನ್ನು ವಶಪಡಿಸಿಕೊಂಡರು. ಇಲ್ಲಿಗೆ ಕದಂಬರ ಪರಮಾಧಿಕಾರ ಕೊನೆಯಾಯಿತು. ಹಾನಗಲ್ಲು, ಗೋವಾ ಮುಂತಾದ ಕಡೆಗಳಲ್ಲಿಯೂ ಇದರ ಶಾಖೆಗಳು ಹರಡಿ ಅವರು ಮಾಂಡಲಿಕರಾಗಿ ಬಹುಕಾಲ ಕರ್ನಾಟಕದ ಹಲವು ಭಾಗಗಳನ್ನು ಆಳುತ್ತಿದ್ದರು. ಆದರೆ ಕಾಕುತ್ಸವರ್ಮ, ಶಾಂತಿವರ್ಮರ ಕಾಲವೇ ಈ ವಂಶದ ಅತ್ಯುನ್ನತಿಯ ಕಾಲವೆನ್ನಬಹುದು.

### ಆಡಳಿತ ಕ್ರಮ

ಶಾತವಾಹನ ದೊರೆಗಳಂತೆ ಕದಂಬರು ತಮ್ಮನ್ನು 'ಧರ್ಮ ಮಹಾರಾಜರು' ಎಂದು ಕರೆದುಕೊಂಡಿದ್ದಾರೆ. ಮಯೂರವರ್ಮನನ್ನು 'ವೈಜಯಂತಿ ಧರ್ಮ ಮಹಾರಾಜಾಧಿರಾಜ' ಮತ್ತು 'ವೇದಾಂಗ ವೇದ ವಿದ್ಯಾವಿಶಾರದ' ಎಂದೂ, ಮೊದಲನೆ ಕೃಷ್ಣವರ್ಮನನ್ನು 'ಧರ್ಮ ಮಹಾರಾಜ' ಎಂದೂ ಕರೆಯಲಾಗಿದೆ. ವಿಷ್ಣುವರ್ಮನು ವ್ಯಾಕರಣ ಮತ್ತು ತರ್ಕಶಾಸ್ತ್ರಗಳಲ್ಲಿ, ಸಿಂಹವರ್ಮನು ಹಲವಾರು ವಿದ್ಯೆಗಳಲ್ಲಿ ಪಾರಂಗತರಾಗಿದ್ದರೆಂದು ಉದಾಹರಿಸಬಹುದು. ರಾಜತ್ವವು ವಂಶಪಾರಂಪರ್ಯವಾಗಿ ಮುಂದುವರಿಯುತ್ತಿತ್ತು. ರಾಜನ ಹಿರಿಯ ಮಗನೇ ರಾಜ್ಯದ ಉತ್ತಾರಾಧಿಕಾರಿ. ರಾಜಪುತ್ರರನ್ನು ಮಾಂಡಲಿಕರಾಗಿ ನೇಮಿಸುತ್ತಿದ್ದರು. ಅರಸರು ರಾಜಗುರುಗಳ ಉಪದೇಶಗಳಿಗೆ ಗಮನ ನೀಡುತ್ತಿದ್ದರು. ಇದನ್ನು 'ವೃದ್ಧೋಪದೇಶಗ್ರಾಹೀ' ಎಂದು ಕರೆಯಲಾಗಿದೆ. ಹರಿವರ್ಮನಿಗೆ ಅವನ ಚಿಕ್ಕಪ್ಪ ಶಿವರಥನೂ, ಕೃಷ್ಣವರ್ಮನಿಗೆ ಹರಿದತ್ತಶ್ರೇಷ್ಠಿಯೂ, ಮೃಗೇಶವರ್ಮನಿಗೆ ಧರ್ಮಾನನ್ಯಾಚಾರ್ಯರು ಮಾರ್ಗದರ್ಶಕ ರಾಗಿದ್ದರು. ರಾಜನಿಗೆ ಸಲಹೆ ನೀಡಲು ಮಂತ್ರಿಗಳಿದ್ದರು. ಪ್ರಧಾನ, ಮನೆವೆರ್ಗಡೆ (ಅರಮನೆ

ಆಡಳಿತಗಾರ), ಕ್ರಮುಕಪಾಲ (ವೀಳ್ಯಕ್ಕೆ ಸಂಬಂಧಿಸಿದ ಕಾರ್ಯದರ್ಶಿ), ತಂತ್ರಪಾಲ, ಹಾಗೂ ಸಭಾ ಕಾರ್ಯಸಚಿವ ಎಂಬ ಐದು ಜನರ ಮಂತ್ರಿಮಂಡಲ ಕದಂಬರಿಗಿತ್ತೆಂದು ಡಾ. ಮೊರೆಸ್ ಅಭಿಪ್ರಾಯಪಟ್ಟಿದ್ದಾರೆ. ರವಿವರ್ಮನಿಗೆ ನೀಲಕಂಠನೆಂಬ ಹೆಸರಿನ ದೇಶಾಮಾತ್ಯನಿದ್ದನೆಂದು ಶಿರಸಿ ತಾಮ್ರಶಾಸನ ತಿಳಿಸುತ್ತದೆ. ಅಲ್ಲದೆ ರಹಸ್ಯಾದಿಕೃತ ಹಾಗೂ ಸರ್ವಕಾರ್ಯಕರ್ತ ಎಂಬ ಅಧಿಕಾರಿಗಳಿದ್ದರು. ರಾಜ್ಯವನ್ನು ಆಡಳಿತದ ಅನುಕೂಲಕ್ಕೋಸ್ಕರ ರಾಷ್ಟ್ರ, ವಿಷಯ, ನಾಡು ಎಂದು ವಿಂಗಡಿಸಲಾಗಿತ್ತು. ಕರವನ್ನಾಡ್ಗ ವಿಷಯ, ತಗರೆ ವಿಷಯ, ಸೇಂದ್ರಕ ವಿಷಯಗಳನ್ನು ಉದಾಹರಿಸಬಹುದು. ವಿಷಯವನ್ನು ನಾಡುಗಳನ್ನಾಗಿ ವಿಭಜಿಸಲಾಗಿತ್ತು. ಉದಾಹರಣೆಗೆ ನರಿದಾವಿಳೆ ನಾಡು, ವಿಷಯಪತಿ, ಸಾಮಂತ, ಗ್ರಾಮಭೋಗಿಕ ಮಹತ್ತರ ದೇಶಾಧಿಪತಿ, ರಾಜಪುರುಷರೆಂಬ ಅಧಿಕಾರಿಗಳಿದ್ದರು. ಕದಂಬರು 'ಪದ್ಮಟಂಕ' ಎಂಬ ಹೆಸರಿನ ನಾಣ್ಯಗಳನ್ನು ಟಂಕಿಸಿದ್ದರು.

## ಸಾಂಸ್ಕೃತಿಕ ಕೊಡುಗೆಗಳು

ಕದಂಬರು ಮೂಲತಃ ಬ್ರಾಹ್ಮಣರಾಗಿದ್ದರೂ ಮಯೂರವರ್ಮನ ನಂತರ ಕ್ಷಾತ್ರಧರ್ಮವನ್ನನುಸರಿಸಿದರು. ವೈದಿಕ ಧರ್ಮದ ಅನುಯಾಯಿಗಳಾದ ಇವರು ಅಶ್ವಮೇಧಯಾಗವನ್ನು ಮಾಡಿದರು. ತಾಳಗುಂದ ಶಾಸನವು "ನಮಃಶಿವಾಯ" ಎಂಬ ಪಂಚಾಕ್ಷರದಿಂದ ಆರಂಭವಾಗಿರುವುದೇ ಅಲ್ಲದೆ, ಅದರಲ್ಲಿ ಶಿವನ ಸಂಕ್ಷಿಪ್ತ ಸುಂದರ ವರ್ಣನೆ ಇರುವುದರಿಂದ ಇವರು ಶೈವ ಸಂಪ್ರದಾಯಸ್ಥರಾಗಿದ್ದರೆನ್ನಬಹುದು. ಬನವಾಸಿಯ ಮಧುಕೇಶ್ವರ ಇವರ ಆರಾಧ್ಯದೈವ. ರವಿವರ್ಮನ ಅಮಾತ್ಯನಾದ ನೀಲಕಂಠ ಸಾರೆಯಲ್ಲಿ ಮಹದೇವ ದೇವಾಲಯವನ್ನು, ಮೃಗೇಶವರ್ಮನ ಕಾಲದಲ್ಲಿ ಗೋವೆಯ ಆರವೇಲಂನಲ್ಲಿ ಹರದೇವಾಲಯವನ್ನು, ಹರಿವರ್ಮ ತನ್ನನ್ನು 'ಪರಮಮಹೇಶ್ವರ'ನೆಂದು ಕರೆದುಕೊಂಡಿರುವುದನ್ನು ಗಮನಿಸಿದರೆ ಶೈವಪಂಥ ಜನಪ್ರಿಯವಾಗಿತ್ತೆನ್ನಬಹುದು. ಪಶುಪತಿ, ರುದ್ರಾರ್ಯ, ನಂದಾರ್ಯ, ಶಿವಶರ್ಮ, ಭವಸ್ವಾಮಿ ಮೊದಲಾದ ಹೆಸರುಗಳನ್ನು ಸಾಮಾನ್ಯ ಜನರಿಟ್ಟುಕೊಳ್ಳುತ್ತಿದ್ದರು. 'ಹಲ್ಮಿಡಿ' ಮತ್ತು 'ಬನವಾಸಿ' ಶಾಸನಗಳು ವಿಷ್ಣು ಸ್ತುತಿಯಿಂದ ಆರಂಭವಾಗಿರುವುದು ವೈಷ್ಣವ ಪಂಥವೂ ಕೂಡಾ ಕದಂಬರ ಕಾಲದಲ್ಲಿತ್ತೆಂದು ಹೇಳಬಹುದು. ಮನ್ಮಥ ದೇವಾಲಯವೊಂದರ ರಚನೆಯ ವಿಚಾರ ಗುಡ್ನಾಪುರ ಶಾಸನದಲ್ಲಿದೆ. ಅಲ್ಲಿ ಚೈತ್ರಮಾಸದಲ್ಲಿ ವಸಂತೋತ್ಸವ ನಡೆಯುತ್ತಿತ್ತು.

ಬೌದ್ಧಧರ್ಮದ ಯಥಾಸ್ಥಿತಿ ಮುಂದುವರಿಯಿತು. ಬುದ್ಧನನ್ನು ಜನ ಸರ್ವಲೋಕ ನಾಥನೆಂದು ಆರಾಧಿಸುತ್ತಿದ್ದರು. ಹರಿದತ್ತಿ ಎಂಬುವನ ವಿಜ್ಞಾಪನೆಯನ್ನು ಗೌರವಿಸಿ ಕದಂಬ ಅರಸರು ಬೌದ್ಧ ಧರ್ಮಕ್ಕೆ ಆಶ್ರಯ ನೀಡಿದರು. ದೊರೆ ರವಿವರ್ಮನು ಸಿದ್ಧಾಯತನ ಪೂಜೆಗಾಗಿ ಅಸಂದಿ ಎಂಬ ಗ್ರಾಮವನ್ನು ದಾನವಾಗಿ ನೀಡಿದ್ದೇ ಅಲ್ಲದೆ ಬೌದ್ಧ ಸಂಘಗಳ ಅಭ್ಯುದಯಕ್ಕಾಗಿ ಮತ್ತೆರಡು ಗ್ರಾಮಗಳನ್ನು ನೀಡಿದನು. ಕದಂಬರ ಮತ್ತೊಂದು ರಾಜಧಾನಿ ಪಲಾಶಿಕಾ (ಹಲಸಿ) ಜೈನರ ಮಹತ್ವದ ಕೇಂದ್ರ. ಜೈನರು ಅಲ್ಲಿ ಸ್ಥಾಪಿಸಿದ ವಿವಿಧ

ಸಂಸ್ಥೆಗಳೊಂದಿಗೆ ರಾಜರು ಅತ್ಯಂತ ಆತ್ಮೀಯತೆ ಹೊಂದಿದ್ದರು. ಕಾಕುತ್ಸವರ್ಮ ಜೈನ ಧರ್ಮವನ್ನು ಪ್ರೋತ್ಸಾಹಿಸಿದನು. ಮೃಗೇಶವರ್ಮನು ಪಲಾಶಿಕಾದಲ್ಲಿ ತನ್ನ ತಂದೆ ಶಾಂತಿ ವರ್ಮನ ನೆನಪಿಗಾಗಿ ಜಿನಾಲಯವನ್ನು ಕಟ್ಟಿಸಿದನು. ಅಲ್ಲದೆ ಅಲ್ಲಿರುವ ಪೂಜ್ಯರಾದ ಅರ್ಹಂತರಿಗೆ ದಾನ ನೀಡಿದನು. ರವಿವರ್ಮ ತನ್ನ ಅರಮನೆಯ ಪಕ್ಕದಲ್ಲೇ ಜಿನಾಲಯ ನಿರ್ಮಿಸಿದನು. ಆ ಕಾಲದ ಜೈನಧರ್ಮದಲ್ಲಿ ಹಲವು ಪಂಥಗಳಿದ್ದವು. ಅವರ ಶಾಸನಗಳು ಯಾಪನೀಯ ನಿರ್ಗ್ರಂಥ (ದಿಗಂಬರ) ಕೂರ್ಚಕ ಮತ್ತು ಶ್ವೇತಪಟ (ಶ್ವೇತಾಂಬರ) ಪ್ರಸ್ತಾಪ ಬರುತ್ತದೆ. ಒಟ್ಟಿನಲ್ಲಿ ಕದಂಬರು ಪ್ರಮುಖ ಮೂರು ಧರ್ಮಗಳಿಗೂ ಪ್ರೋತ್ಸಾಹ ನೀಡಿದ್ದರು.

### ಶಿಕ್ಷಣ

ಕದಂಬರು ಶೈಕ್ಷಣಿಕ ಪ್ರಗತಿಗೆ ಹೆಚ್ಚು ಪ್ರೋತ್ಸಾಹ ನೀಡಿದರು. ವೇದಾಧ್ಯಯನಕ್ಕೆ ವಿಶೇಷವಾದ ಅವಕಾಶ ಒದಗಿಸಲಾಗಿತ್ತು. ಅಗ್ರಹಾರ, ಬ್ರಹ್ಮಪುರಿ ಮತ್ತು ಮಠಗಳು ಉನ್ನತ ಶಿಕ್ಷಣದ ಕೇಂದ್ರಗಳಾಗಿದ್ದವು. ಘಟಿಕಗಳು ವಿದ್ಯಾಪೀಠಗಳಾಗಿದ್ದವು. ಬೆಳಗಾವಿ, ಸ್ಥಾನ ಕುಂದೂರು, ಕುಪ್ಪಟೂರು, ದೇಗಾಮೆ, ಆನಂದೂರು, ಬಳ್ಳಿಗಾಮೆ, ಎಲಿಸೆ ಮುಂತಾದ ಅಗ್ರಹಾರಗಳಿದ್ದವು. ಅಗ್ರಹಾರಗಳಲ್ಲಿ ವ್ಯಾಕರಣ ದರ್ಶನ, ಲಕುಳ ಸಿದ್ಧಾಂತ, ಪಾತಂಜಲ ಮತ್ತಿತರ ಯೋಗ ಶಾಸ್ತ್ರಗಳು, ಪುರಾಣಗಳು, ಧರ್ಮಶಾಸ್ತ್ರಗಳು, ಕಾವ್ಯ, ನಾಟಕ, ವೇದ, ಆಗಮ, ತರ್ಕ ಚಿತ್ರಕಲೆ, ಸಂಗೀತ, ಅರ್ಥಶಾಸ್ತ್ರ ಮುಂತಾದವುಗಳನ್ನು ಬೋಧಿಸಲಾಗುತ್ತಿತ್ತು. ಈ ಎಲ್ಲಾ ಉದ್ಯೋಗಗಳನ್ನು ಕಲಿಯುವ ಅವಕಾಶ ಕೆಲವೇ ವರ್ಗಗಳ ಜನಕ್ಕೆ ಸೀಮಿತ ವಾಗಿತ್ತು. ವೈದಿಕ ವಿದ್ಯೆಯೆಲ್ಲಾ ಪ್ರಧಾನವಾಗಿ ಸಂಸ್ಕೃತ ಭಾಷೆಯಲ್ಲಿತ್ತು. ಜೈನ, ಬೌದ್ಧ ಕೇಂದ್ರಗಳು ಪ್ರಾಕೃತವನ್ನು ಬೆಳೆಸಿದವು. ವಿರಳವಾಗಿ ಕನ್ನಡ ಭಾಷೆ ಶಾಸನಗಳಲ್ಲಿ ಬಳಕೆ ಯಾಗುತ್ತಿತ್ತು. ಹಲ್ಮಿಡಿ, ಕೆಳಗುಂದ್ಲಿ, ಕಂಪ್ಲಿ ಶಾಸನಗಳು ಕನ್ನಡದಲ್ಲಿವೆ. ಸಂಸ್ಕೃತ ಗ್ರಂಥಸ್ಥ ಭಾಷೆಯಾಗಿತ್ತು. ಕನ್ನಡ ಭಾಷೆ ಸಾಹಿತ್ಯ ಮಾಧ್ಯಮವಾಗಿ ಬೆಳೆದಿರಲಿಲ್ಲವೆಂದು ಹೇಳಬಹುದು.

### ವಾಸ್ತುಶಿಲ್ಪ

ಶಾತವಾಹನರ ಕಾಲದ ವಾಸ್ತುನಿರ್ಮಾಣದ ತಂತ್ರ ಮತ್ತು ಪರಂಪರೆಯು ಕದಂಬರ ಕಾಲದಲ್ಲಿಯೂ ಮುಂದುವರಿಯಿತು. ಕಲಸು ಮಣ್ಣಿನಿಂದ ಕಟ್ಟಿದ ಇಟ್ಟಿಗೆ ಕಟ್ಟಡಗಳೇ ಅಧಿಕ. ಆದರೂ ವಾಸ್ತು ನಿರ್ಮಿತಿಯಲ್ಲಿ ಒಂದು ಹೊಸ ಬೆಳವಣಿಗೆಯು ಕಾಣುತ್ತದೆ. ಇಟ್ಟಿಗೆ ಬಳಕೆಯ ಜೊತೆಗೆ ಕಲ್ಲಿನ ಉಪಯೋಗವೂ ಆರಂಭವಾಯಿತು. ಕಟ್ಟಡಗಳ ನಿರ್ಮಾಣಕ್ಕೆ ಜಂಬಿಟ್ಟಿಗೆ ಕಲ್ಲನ್ನು ಉಪಯೋಗಿಸಲಾಗುತ್ತಿತ್ತು. ಜೊತೆಗೆ ಹಸಿರುಛಾಯೆಯ ಬಳಪದ ಕಲ್ಲನ್ನು ಮೂರ್ತಿಶಿಲ್ಪಗಳಿಗೆ ಬಳಸಲಾರಂಭಿಸಿದರು. ಬನವಾಸಿ, ಹಲಸಿ, ಹಾನಗಲ್ ಮೊದಲಾದ ಪ್ರದೇಶಗಳಲ್ಲಿ ೪-೬ನೇ ಶತಮಾನದ ಇಟ್ಟಿಗೆ ಕಟ್ಟಡಗಳ ಅವಶೇಷಗಳು

ಅಲ್ಪಸ್ವಲ್ಪ ಬೆಳಕಿಗೆ ಬಂದಿವೆ. ಇವರ ದೇವಾಲಯಗಳು ಸರಳ ರಚನೆಗಳು. ಗರ್ಭಗೃಹ ಅದರ ಎದುರು ತೆರೆದ ಮೊಗಸಾಲೆ ಇವಷ್ಟೇ ಅವುಗಳ ಆರಂಭದ ಸ್ವರೂಪ, ಕದಂಬರ ಕಾಲದ ಮೊಟ್ಟಮೊದಲ ರಚನೆಯೆಂದರೆ ಮೃಗೇಶವರ್ಮನ ಕಾಲದ ಹಲಸಿಯಲ್ಲಿರುವ ಜೈನಬಸದಿ. ಗರ್ಭಗೃಹ, ಸುಖನಾಸಿ, ಮುಖಮಂಟಪಗಳನ್ನು ಒಳಗೊಂಡಿರುವ ಈ ಬಸದಿಯಲ್ಲಿ ಸುಖನಾಸಿಗಿಂತ ಗರ್ಭಗೃಹ ಚಿಕ್ಕದಾಗಿದೆ. ಇದರಿಂದ ಆ ಕಾಲದಲ್ಲಿ ದೇವಾಲಯಗಳ ರಚನೆ ಜಾರಿಯಲ್ಲಿತ್ತೆಂದು ತಿಳಿಯುತ್ತದೆ. ಇವರ ಮನೆದೇವರಾದ ಬನವಾಸಿಯ ಮಧುಕೇಶ್ವರ ಕದಂಬರ ಕಾಲದಿಂದ ಹಿಡಿದು ೧೫-೧೬ನೆ ಶತಮಾನದವರೆಗೂ ನವೀಕರಣವಾಗುತ್ತಾ ಬಂದಿದೆ. ಇದರ ಗರ್ಭಗೃಹ ಮಾತ್ರ ಕದಂಬರ ಕಾಲದ್ದು. ಹಲಸಿಯಲ್ಲಿನ ಪ್ರಾಚೀನ ದೇಗುಲಗಳಾದ ಹಟ್ಟಿಕೇಶ್ವರ, ಕಲ್ಲೇಶ್ವರ, ಸುವರ್ಣೇಶ್ವರ, ನರಸಿಂಹ ಮುಂತಾದವು ಕದಂಬ ಶೈಲಿಯಲ್ಲಿ ನಿರ್ಮಾಣವಾಗಿವೆ. ಈ ದೇಗುಲದ ವಿಮಾನಗಳು ಮೇಲೇರಿದಂತೆ ಕಿರಿದಾಗುವ, ವಿವಿಧ ಹಂತಗಳಿಂದ ಕೂಡಿದ ಒಟ್ಟು ಪಿರಮಿಡ್ ಆಕೃತಿಯನ್ನು ಹೊಂದಿವೆ. ಕದಂಬ ವಿಮಾನವು ಆ ಕಾಲದ ಗಣ್ಯ ಕೊಡುಗೆಯಾಗಿದ್ದು ಬೆಳಗಾವಿ ಜಿಲ್ಲೆಯ ಕಾದರೋಳಿಯ ಶಂಕರದೇವ ಮಂದಿರದ ವಿಮಾನ ಇದಕ್ಕೆ ಉತ್ತಮ ಉದಾಹರಣೆ. ಇಲ್ಲಿನ ಚೌಕಾಕಾರದ ಗರ್ಭಗೃಹವು ಪಿರಮಿಡನ್‌ನಂತಹ ಮೆಟ್ಟಿಲು ಮೆಟ್ಟಿಲಾಗಿ ಮೇಲೇರುವ ಗೋಪುರವನ್ನು ಹೊಂದಿದ್ದು, ಪ್ರತಿಹಂತದಲ್ಲೂ ಈ ಮೆಟ್ಟಿಲುಗಳು ಕಿರಿದಾಗುತ್ತಾ ಸಾಗುವುದಲ್ಲದೆ ಯಾವುದೇ ಅಲಂಕಾರವಿಲ್ಲದೆ ಸಪಾಟಾಗಿವೆ. ತುದಿಯಲ್ಲಿ ಒಂದು ಸ್ತೂಪಿಕೆಯೂ, ಅದರ ಮೇಲೆ ಕಲಶವೂ ಇದೆ. ಹಲಸಿಯ ಕಲ್ಲೇಶ್ವರ ದೇವಾಲಯದಲ್ಲಿ ಚೌಕ ಮತ್ತು ಅಷ್ಟಕೋನಾಕೃತಿಯ ಭಾಗಗಳಾಗಿ ವಿಭಜಿತವಾದ ಕಂಬಗಳಿವೆ. ಹೊಯ್ಸಳ ಶೈಲಿಯ ಆರಂಭದ ದೇವಾಲಯವಾದ ದೊಡ್ಡಗದ್ದವಳ್ಳಿಯ ಲಕ್ಷ್ಮೀ ದೇಗುಲ ಕದಂಬಶೈಲಿಗೆ ಸೇರುತ್ತದೆ ಎಂದು ಮೊರೇಸ್‌ರು ಅಭಿಪ್ರಾಯ ಪಡುತ್ತಾರೆ. ಗೋವೆಯ ಬಳಿಯ ಅರ್ವಾಲೆಂನಲ್ಲಿ ಕದಂಬರ ಕಾಲದ ವೈದಿಕ ಗುಹೆಯೊಂದಿದ್ದು ಅದು ತ್ರಿಕೂಟವಾಗಿದೆ. ಗರ್ಭಗೃಹ ಮೊಗಸಾಲೆಗಳನ್ನು ಹೊಂದಿರುವ ಈ ರಚನೆಯನ್ನು ಕೆ.ವಿ. ಸೌಂದರರಾಜನ್ ಗುರುತಿಸಿದರು. ಬೆಳಗಾವಿಯ ವಡಗಾಂವ-ಮಾಧವಪುರದಲ್ಲಿ ಇತ್ತೀಚೆಗೆ ನಡೆಸಿದ ಶೋಧಗಳಿಂದ ಕದಂಬರ ದೇಗುಲಗಳಿರುವ ಸಾಂದರ್ಭಿಕ ಸಾಕ್ಷ್ಯಗಳು ದೊರೆತಿವೆ. ಇವುಗಳ ಜೊತೆಯಲ್ಲಿ ಬೌದ್ಧಸ್ತೂಪ, ಚೈತ್ಯಾಲಯಗಳ ಅವಶೇಷಗಳೂ ಕೂಡ ಇವೆ. ರವಿವರ್ಮನ ಗುಡ್ನಾಪುರ ಶಾಸನದಂತೆ ಮನ್ಮಥದೇವನಿಗೆ ಅಲ್ಲಿ ಒಂದು ಮಂದಿರವನ್ನು ಕಟ್ಟಿಸಲಾಗಿದೆ. ಆದರೆ ಇದರ ಅವಶೇಷಗಳು ಇಂದು ಉಳಿದಿಲ್ಲ. ಕದಂಬರ ಕಾಲದ ಕೆಲವೊಂದು ಶಿಲ್ಪಗಳು ಬನವಾಸಿಯಂತಹ ಪ್ರಮುಖ ನೆಲೆಗಳಲ್ಲಿ ದೊರಕಿದ್ದು ಅವು ಶಿಲ್ಪಕಲೆಯ ಪ್ರಗತಿಯನ್ನು ಸೂಚಿಸುತ್ತವೆ.

ಒಟ್ಟಿನಲ್ಲಿ ಕದಂಬ ವಂಶ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಅನೇಕ ದೃಷ್ಟಿಯಿಂದ ಪ್ರಮುಖವಾದುದು. ಕರ್ನಾಟಕದ ರಾಜಕೀಯಕ್ಕೆ ಔನ್ನತ್ಯ, ಪ್ರಜಾವಾತ್ಸಲ್ಯ, ಪರಮತ ಸಹಿಷ್ಣುತೆ ಮೊದಲಾದ ಶಾಶ್ವತ ಆದರ್ಶಗಳನ್ನು ಹಾಕಿಕೊಟ್ಟಿತು. ಇವರು ಶಿವನ ಉಪಾಸಕ

ರಾಗಿದ್ದರೂ ಎಲ್ಲ ಮತಗಳನ್ನು ಸಮಾನ ಗೌರವದಿಂದ ಕಾಣುತ್ತಿದ್ದರು. ದೇವಾಲಯಗಳ ನಿರ್ಮಾಣಕ್ಕೆ ಸಹಾಯಕರಾದರು. ವಾಸ್ತುಶಿಲ್ಪ, ಶಿಲ್ಪಕಲೆಗೆ ಆಶ್ರಯವನ್ನಿತ್ತರು. ಜನ ಜೀವನ ವನ್ನು ಹಸನುಗೊಳಿಸಲು ಪ್ರಯತ್ನಿಸಿದರು. ಒಟ್ಟಿನಲ್ಲಿ ಕರ್ನಾಟಕದ ಗೌರವವನ್ನು ಎತ್ತಿಹಿಡಿದ ಅತ್ಯಂತ ಪ್ರಾಚೀನವಾದ ರಾಜವಂಶ ಕದಂಬ ಕುಲವಾಗಿದೆ.

## ಕದಂಬರ ಪ್ರಮುಖ ಶಾಸನಗಳು

### ತಾಳಗುಂದ ಶಾಸನ

ತಾಳಗುಂದದ ಪ್ರಣವೇಶ್ವರ ದೇವಾಲಯದ ಮುಂದೆ ನಿಲ್ಲಿಸಲಾದ ಕಲ್ಲಿನ ಕಂಬದ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ. ಶಾಸನದಲ್ಲಿ ೧೫ ಶ್ಲೋಕಗಳಿದ್ದು ಅದು ಶ್ರೇಷ್ಠ ಕಾವ್ಯ ಲಕ್ಷಣವನ್ನು ಹೊಂದಿದೆ. ಶಾಸನವು ಸಂಸ್ಕೃತ ಭಾಷೆಯಲ್ಲಿದ್ದು ಅದನ್ನು ಕುಬ್ಜ ಕವಿಯು ರಚಿಸಿದ್ದಾನೆ. ಈ ಶಾಸನದ ಕಾಲಕ್ಕೆ ಶಾಂತಿವರ್ಮನು ಆಳುತ್ತಿದ್ದರೂ ಕಾಕುತ್ಸ ವರ್ಮನು ಇನ್ನೂ ಜೀವಿಸಿದ್ದನು. ಇದನ್ನು ಮೊದಲು ಬಿ. ಲೂಯಿ ರೈಸ್‌ರವರು *ಎಪಿಗ್ರಾಫಿಯ ಕರ್ನಾಟಿಕ*ದ ೮ನೇ ಸಂಪುಟದಲ್ಲಿ ಪ್ರಕಟಿಸಿದರು. ಈ ಶಾಸನವು ಮಯೂರ ಶರ್ಮನ ಪೂರ್ವಿಕರ ಬಗೆಗೆ ವಿವರ ನೀಡುತ್ತಾ ಮಯೂರಶರ್ಮನು ಹೇಗೆ ಸ್ವತಂತ್ರ ರಾಜ್ಯ ಸ್ಥಾಪಿಸಿದನು ಎಂಬ ವಿಷಯವನ್ನು ತಿಳಿಸುತ್ತದೆ.

### ಗುಡ್ನಾಪುರ ಶಾಸನ

ರವಿವರ್ಮನ ಕ್ರಿ.ಶ. ೫೦೦ ರ ಶಾಸನವು ಗುಡ್ನಾಪುರದಲ್ಲಿ ದೊರೆತಿದ್ದು ಸಂಸ್ಕೃತ ಭಾಷೆಯಲ್ಲಿದೆ. ಆ ಶಾಸನದಲ್ಲಿ ದೇವತೆಯ ಸ್ತುತಿಯ ನಂತರ ಕದಂಬ ಅರಸು ಮನೆತನದ ವರ್ಣನೆ ಬರುತ್ತದೆ. ಹಾರೀತಿಪುತ್ರ ಮಾನವ್ಯಗೋತ್ರೋತ್ಭವ ವೀರಶರ್ಮನೆಂಬ ವಿದ್ಯಾ ಪ್ರವೀಣನಾದ ದ್ವಿಜೋತ್ತಮನಿದ್ದ ಆತನ ವಂಶಕ್ಕೆ ಕದಂಬ ಕುಲವೆಂಬ ಹೆಸರಿತ್ತೆಂದು ತಿಳಿಸುತ್ತದೆ. ಮಯೂರನನ್ನು ವೇದಾಂಗ ವಿದ್ಯಾವಿಶಾರದನೆಂದೂ ಶುಭ ಲಕ್ಷಣಕಾಯವುಳ್ಳವ ನೆಂದು ವರ್ಣಿಸಿದೆ. ರವಿವರ್ಮನು ಗುಡ್ನಾಪುರದಲ್ಲಿ ಅರಮನೆ ಮತ್ತು ರಾಣಿವಾಸದ ನೃತ್ಯ ಶಾಲೆಗಳ ಮಧ್ಯೆ ಕಾಮಜಿನಾಲಯವನ್ನು ಕಟ್ಟಿಸಿದನು. ಅದರಲ್ಲಿ ವಸಂತೋತ್ಸವ ನಡೆಯು ವಂತೆ ಅರಸನು ನಿರ್ದೇಶಿಸಿದ್ದನು. ಅದೇ ಪ್ರಕಾರ ಗುಡ್ಡ ತಟಾಕವೆಂಬ ಒಂದು ಕೆರೆ ಕಟ್ಟಿಸಿ ಅದರ ನೀರಾವರಿ ಕೆಳಗೆ ಬರುವ ಎಲ್ಲ ಭೂಮಿಯನ್ನು ಈ ಕಾಮಜಿನಾಲಯದಲ್ಲಿ ನಡೆಯತಕ್ಕ ಪೂಜೆ ಪುನಸ್ಕಾರಗಳಿಗೆ ರವಿವರ್ಮನು ದತ್ತಿಹಾಕಿಕೊಟ್ಟನೆಂದು ಶಾಸನವು ತಿಳಿಸುತ್ತದೆ. ಎಂ.ಶೇಷಾದ್ರಿ, ಎ.ವಿ.ನರಸಿಂಹಮೂರ್ತಿ, ಬಾ.ರಾ.ಗೋಪಾಲ್, ಕೆ.ವಿ.ರಮೇಶ್ ಮುಂತಾದವರು ಈ ಶಾಸನದ ಬಗೆಗೆ ವಿಶೇಷ ಅಧ್ಯಯನ ಮಾಡಿದ್ದಾರೆ.

### ಚಂದ್ರವಳ್ಳಿ ಶಾಸನ

ಎಂ.ಎಚ್.ಕೃಷ್ಣ ಅಯ್ಯಂಗಾರರು ೧೯೨೦ ರಲ್ಲಿ ಈ ಶಾಸನ ಸಂಶೋಧಿಸಿದರು. ಚಂದ್ರವಳ್ಳಿ ಶಾಸನವು ಚಿತ್ರದುರ್ಗ ಜಿಲ್ಲೆಯಲ್ಲಿದೆ. ಅವರ ಪ್ರಕಾರ ಇದರ ಭಾಷೆ ಪ್ರಾಕೃತ.

ಗುಹಾಮಾದರಿಯ ದಾಕ್ಷಿಣಾತ್ಯ ಲಿಪಿ. ತ್ರಿಕೂಟ, ಅಭೀರಾ, ಪಾರಿಯಾತ್ರಕ, ಸಕಸ್ಥಾನ ಸೇಂದ್ರಕ, ಪುನ್ನಾಟ, ಮೋಕರಿಗಳನ್ನು ಗೆದ್ದುಕೊಂಡ ಕದಂಬ ಮಯೂರಶರ್ಮನಿಂದ ಈ ತಟಾಕವು ನಿರ್ಮಾಣವಾಯಿತು ಎಂದು ಅವರು ಶಾಸನವನ್ನು ಅರ್ಥೈಸಿದ್ದಾರೆ. ಇತ್ತೀಚೆಗೆ ವಿದ್ವಾಂಸರು ಇದನ್ನು ಪುನರ್ ಅಧ್ಯಯನ ಮಾಡಿ ಇದರ ಭಾಷೆ ಪ್ರಾಕೃತವಲ್ಲ ಸಂಸ್ಕೃತ ಎಂದೂ ತಿಳಿಸುತ್ತಾ, ಕದಂಬರ ಮಯೂರವರ್ಮನಿಂದ ಈ ಕೆರೆಯು ಬಲಪಡಿಸಲ್ಪಟ್ಟಿತ್ತು ಎಂದಿದ್ದಾರೆ. ಇದರಲ್ಲಿ ಇವನ ದಿಗ್ವಿಜಯಗಳ ಪ್ರಸ್ತಾಪ ಇಲ್ಲ. ಹಿಂದೆ ಇದ್ದ ಕೆರೆಯನ್ನು ಭದ್ರಪಡಿಸಿದ್ದನ್ನು ಹೇಳಲಾಗಿದೆ. ಕುಪಣಚಮ ಎಂಬುದು ಕೆರೆಯನ್ನು ಕಟ್ಟಿದ ಮತ್ತು ಶಾಸನವನ್ನು ಬರೆದ ಶಿಲ್ಪಿಯ ಹೆಸರಿರಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ದೃಷ್ಟಿಯಿಂದ ಚಂದ್ರವಳ್ಳಿಶಾಸನ ಕರ್ನಾಟಕದ ಪ್ರಥಮ ಸಂಸ್ಕೃತ ಶಾಸನವಾಗುತ್ತದೆ. ಈ ಶಾಸನವನ್ನು ಚಿತ್ರದುರ್ಗ ಸಮೀಪದ ಚಂದ್ರವಳ್ಳಿಯ ಹುಲೆಗೊಂದಿ ಕಣಿವೆಭೈರವೇಶ್ವರ ದೇಗುಲ ದ್ವಾರ ಪಕ್ಕ ಇರುವ ಸಮೀಪದ ಬಂಡೆಗಲ್ಲಿನ ಮೇಲೆ ಕೊರೆಯಲಾಗಿದೆ.

**ಹಲ್ಮಿಡಿ ಶಾಸನ**

ಮೈಸೂರು ಪುರಾತತ್ವ ಇಲಾಖೆಯ ಅಧಿಕಾರಿಯಾದ ಎಂ.ಎಚ್. ಕೃಷ್ಣರವರು ೧೯೩೬ ರಲ್ಲಿ ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಹಲ್ಮಿಡಿ ಗ್ರಾಮದ ವೀರಭದ್ರೇಶ್ವರ ದೇವಾಲಯದಲ್ಲಿ ಈ ಶಿಲಾಶಾಸನವನ್ನು ಪತ್ತೆಹಚ್ಚಿದರು. ಕನ್ನಡ ಭಾಷೆಯ ಮೊತ್ತ ಮೊದಲ ಶಾಸನವಾದ ಇದನ್ನು ಕದಂಬರ ದೊರೆ ಕಾಕುತ್ಸವರ್ಮನು ಬರೆಯಿಸಿದನು. ಇದರ ಕಾಲ ಕ್ರಿ.ಶ ೪೫೦. ಸಂಸ್ಕೃತ ಭೂಯಿಷ್ಠ ಕನ್ನಡದಲ್ಲಿರುವ ಈ ಶಾಸನ ೧೬ ಸಾಲುಗಳಿಂದ ಕೂಡಿದೆ. ಅದರಲ್ಲಿ ಮೊದಲನೆ ಸಾಲು ಸಂಸ್ಕೃತ ಶ್ಲೋಕ ದೇವತಾಸ್ತುತಿ. ಶಾಸನೋದ್ದಿಷ್ಟ ಸಾಹಿತ್ಯವು ಎರಡನೇ ಸಾಲಿನಿಂದ ಆರಂಭವಾಗುತ್ತದೆ. ಈ ಶಾಸನವು "ನಮಸ್ಕಾರ ಕದಂಬರ ಒಡೆಯನು ಆದ ಶ್ರೀಮತ್ ಕಕುಸ್ಥ ಭಟ್ಟೋರನು ರಾಜ್ಯಭಾರ ಮಾಡುತ್ತಿರಲು ನಂದಾವಿಳೆ ನಾಡಿನಲ್ಲಿ ಮೃಗೇಶ ಮತ್ತು ನಾಗ ಎಂಬ ಹೆಸರಿನ ಬಟರಿ ಕುಲದ ವೀರರು ಆಳ ಕದಂಬನ ಆಜ್ಞಾನುಸಾರ ಸೇಂದ್ರಕ ಮತ್ತು ಬಾಣ ಎಂಬುವರ ಸಮಕ್ಷಮದಲ್ಲಿ ಪಲ್ಲವರ ವಿರುದ್ಧ ದಂಡೆತ್ತಿ ಹೋಗಿ ಜಯಶಾಲಿಯಾದ ವಿಜ ಅರಸರಿಗೆ ಬಾಳ್ಗಚ್ಚಾಗಿ ಪಲ್ಮಿಡಿಯನ್ನು ಮೂಳೆವಳ್ಳಿವನ್ನು ದಾನವಾಗಿ ನೀಡಿದನು" ಎಂದು ತಿಳಿಸುತ್ತದೆ. ಕನ್ನಡದ ಪ್ರಥಮ ಶಾಸನವಾದ ಈ ಶಿಲಾಲೇಖವನ್ನು ಬೆಂಗಳೂರಿನ ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶನಕ್ಕೆ ಇರಿಸಲಾಗಿದೆ.

## ೪.೩ ಗಂಗರು

ಕದಂಬರಂತೆ ಗಂಗರು ಕರ್ನಾಟಕದ ಕಾವೇರಿ ನದಿ ಭಾಗವನ್ನೊಳಗೊಂಡ ಆಗ್ನೇಯ ಭಾಗದಲ್ಲಿ ಪ್ರಪ್ರಥಮ ಸ್ವತಂತ್ರ ರಾಜ್ಯವನ್ನು ಸ್ವಲ್ಪ ಹೆಚ್ಚು ಕಡಿಮೆ ಅದೇ ಸಮಯದಲ್ಲಿ ಸ್ಥಾಪಿಸಿ ಸುಮಾರು ಎರಡು ನೂರು ವರ್ಷಗಳು (ಕ್ರಿ.ಶ ೩೫೦-೫೫೦) ಸ್ವತಂತ್ರರಾಗಿ ಅನಂತರ ಚಾಲುಕ್ಯ, ರಾಷ್ಟ್ರಕೂಟ ಅರಸು ಮನೆತನಗಳ ಮಾಂಡಲಿಕರಾಗಿ ದೀರ್ಘಕಾಲ ರಾಜ್ಯವಾಳಿದರು. ಇವರ ರಾಜ್ಯವನ್ನು ಶಾಸನಗಳಲ್ಲಿ 'ಗಂಗವಾಡಿ ೯೬,೦೦೦' ಎಂದು ಕರೆಯಲಾಗಿದೆ. ಆರಂಭದಲ್ಲಿ ಕೋಲಾರ ('ಕುವಲಾಲ') ನಂತರ 'ತಲಕಾಡು' ('ತಲವನಪುರ') ಮಣ್ಣೆ ಇವರ ರಾಜಧಾನಿಗಳಾಗಿದ್ದವು. 'ಮದಗಜ' ಇವರ ರಾಜಲಾಂಛನವಾಗಿತ್ತು. ಇವರ ಇತಿಹಾಸಕ್ಕೆ ಶಾಸನಗಳೇ ಪ್ರಮುಖ ಮೂಲಾಧಾರಗಳಾದರೂ *ಲೋಕವಿಭಾಗ* ಎಂಬ ಪ್ರಾಕೃತ ಕೃತಿ *ಚಾವುಂಡರಾಯಪುರಾಣ* ಎಂಬ ಗದ್ಯಕೃತಿಯಲ್ಲೂ ಇವರ ಕುರಿತು ಕೆಲ ಅಂಶಗಳು ದೊರೆಯುತ್ತವೆ. ತಮಿಳು ಶಾಸನಗಳು ಗಂಗರನ್ನು ಕೊಂಗಣಿ ಅರಸರೆಂದು ಕರೆದಿವೆ. ಅವರು ತಮ್ಮನ್ನು ಜಾಹ್ನವೇಯ ಕುಲದವರೂ, ಕಾಣ್ವಾಯನ ಗೋತ್ರದವರೂ ಎಂದು ಕರೆದುಕೊಂಡಿದ್ದಾರೆ.

### ಮೂಲ

ಎಲ್ಲ ರಾಜಮನೆತನಗಳ ಮೂಲದಂತೆ ಗಂಗರಾಜಮನೆತನದ ಮೂಲವೂ ಒಗಟಾಗಿದೆ. ವಿದ್ವಾಂಸರು ವಿಭಿನ್ನ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇವರ ಮೂಲದ ವಿಚಾರವು ಕ್ರಿ.ಶ. ೧೧ನೇ ಶತಮಾನದಿಂದೀಚೆಗಿನ ಶಾಸನಗಳಲ್ಲಿ ಮಾತ್ರ ಕಂಡುಬರುತ್ತದೆ. ಅವುಗಳ ಪ್ರಕಾರ,

ಗಂಗರು ಉತ್ತರ ಭಾರತದ ಇಕ್ಷ್ವಾಕು ಕುಲಕ್ಕೆ ಸೇರಿದವರೆಂದೂ, ಅವರು ಅಯೋಧ್ಯೆಯಲ್ಲಿ ಆಳುತ್ತಿದ್ದರೆಂದೂ ಅನಂತರ ಅಹಿಚ್ಛತ್ರಕ್ಕೆ ಬಂದರೆಂದೂ ಹೇಳಲಾಗಿದೆ. ತರುವಾಯ ಈ ವಂಶದ ದಡಿಗ ಮತ್ತು ಮಾಧವ ಎಂಬ ಇಬ್ಬರು ರಾಜಕುಮಾರರು ದಕ್ಷಿಣದಲ್ಲಿನ ಗಂಗಪೆರೂರಿಗೆ (ಕಡಪಾಜಿಲ್ಲೆ) ವಲಸೆ ಹೋಗಿ ನಂದಗಿರಿ ಮತ್ತು ಕುವಲಾಲಪುರ ಎಂಬ ಮುಖ್ಯ ನಗರಗಳನ್ನುಳ್ಳ 'ಗಂಗವಾಡಿ ೯೬,೦೦೦' ಪ್ರಾಂತ್ಯದಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿದರೆಂದು ತಿಳಿದುಬರುತ್ತದೆ. ಸ್ವಲ್ಪ ಕಾಲಾನಂತರ ಅವರು ತಮ್ಮ ರಾಜಧಾನಿಯನ್ನು ಕುವಲಾಲಪುರದಿಂದ ಮಣ್ಣೆಗೂ ನಂತರ ತಲಕಾಡಿಗೂ ಬದಲಾಯಿಸಿದರು.

ಜೈನ ಆಕರಗ್ರಂಥಗಳ ಪ್ರಕಾರ 'ಸಿಂಹನಂದಿ' ಎಂಬ ಮುನಿಯು ಇವರ ರಾಜ್ಯಸ್ಥಾಪನೆಗೆ ಕಾರಣಕರ್ತನು. ಸಿಂಹನಂದಿಯು, ದಡಿಗ ಮತ್ತು ಮಾಧವ ಎಂಬ ಸಹೋದರರು ರಾಜ್ಯ ಸ್ಥಾಪನೆಗೆ ಅರ್ಹರೆಂದು ಭಾವಿಸಿ ಪದ್ಮಾವತಿದೇವಿಯ ವರಪ್ರಸಾದದಿಂದ ಅವರಿಗೆ ಕತ್ತಿಯನ್ನು ಮತ್ತು ರಾಜ್ಯವನ್ನು ಕೊಟ್ಟನೆಂದು ಹೇಳಲಾಗಿದೆ. ಇದರಿಂದ ಗಂಗ ಸಾಮ್ರಾಜ್ಯ ಜೈನಮುನಿಯ ಸಹಾಯದಿಂದ ಸ್ಥಾಪಿತವಾಯಿತೆನ್ನಬಹುದು. ಮತ್ತೊಂದು ವಾದದ ಪ್ರಕಾರ ಗಂಗವಂಶಸ್ಥರು ಕೊಯಮತ್ತೂರು ಜಿಲ್ಲೆಯ ಪೇರೂರಿನವರು. ಕೊಂಗುದೇಶದ ರಾಜನಾದ ವಿಕ್ರಮದೇವ

ಶೈವನಾದುದರಿಂದ ಜೈನಧರ್ಮದ ಪ್ರಭಾವಕ್ಕೆ ಒಳಗಾಗಿದ್ದ ಕೊಂಗು ದೇಶವನ್ನು ಆಳಲು ತಕ್ಕವನಲ್ಲವೆಂದು ಮಾಧವನಿಗೆ ಪೇರೂರಿನಲ್ಲಿ ಪಟ್ಟಾಭಿಷೇಕ ಮಾಡಿದರು. ಅವನೇ ಗಂಗ ವಂಶದ ಮೂಲಪುರುಷ ಎಂದು ಹೇಳಲಾಗಿದೆ.

ಹೀಗೆ ಗಂಗರ ಮೂಲದ ಬಗ್ಗೆ ಹಲವಾರು ವಾದಗಳಿವೆ ಅನೇಕ ದಂತ ಕಥೆಗಳಿವೆ. ಇವುಗಳೆಲ್ಲಾ ಬಹುಪಾಲು ಹೇಳುವಂತೆ ಗಂಗರು ಹೊರಗಿನವರಲ್ಲ ಅವರು ಕನ್ನಡಿಗರು. ಕುವಲಾಲ, ನಂದಗಿರಿ ಪ್ರದೇಶಗಳ ಅಧಿಪತಿಗಳು ಎಂದು ಶಾಸನಗಳು ತಿಳಿಸುತ್ತಿರುವುದರಿಂದ ಮೂಲತಃ ಇವರು ಕೋಲಾರ ಪ್ರದೇಶಕ್ಕೆ ಸೇರಿದವರು. ಅವಕಾಶ ದೊರೆತಂತೆ ರಾಜ್ಯವನ್ನು ವಿಸ್ತರಿಸುತ್ತಾ ಗಂಗವಾಡಿ ರಾಜ್ಯ ಕಟ್ಟಿದರು.

## ರಾಜಕೀಯ ಚರಿತ್ರೆ

ಕೊಂಗುಣಿವರ್ಮ ಗಂಗವಾಡಿ ರಾಜ್ಯದ ಸ್ಥಾಪಕ. ಇವನನ್ನು ಶಾಸನಗಳು ಜಾಹ್ನವೇಯ ಕುಲದವನೆಂದೂ, ಕಾಣ್ವಾಯನ ಗೋತ್ರದವನೆಂದೂ ವರ್ಣಿಸಿವೆ. ಇವನು ಕೊಂಕಣಿತೀರ ಪ್ರದೇಶದ ತನಕ ದಂಡಯಾತ್ರೆ ಮಾಡಿದ್ದನೆಂದೂ ಅನಂತಪುರ ಪ್ರದೇಶದ ತುರಮಾರ ವಿಷಯ ಭಾಗಕ್ಕೆ ಬಾಣರಿಗೋಸ್ಕರ ಹೋಗಿದ್ದನೆಂದೂ ಹೇಳಲಾಗಿದೆ. ಈ ರೀತಿಯ ಹಲವಾರು ಯುದ್ಧಗಳಿಂದ ಗಂಗರ ಸಾಮ್ರಾಜ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದನು. ಪ್ರಾಯಶಃ ಇವನು ನಾಲ್ಕನೇ ಶತಮಾನದ ಮಧ್ಯಭಾಗದಲ್ಲಿದ್ದನು. ಇವನನ್ನು ದಡಿಗನೆಂದೂ ಕರೆಯುತ್ತಾರೆ.

### ಏಳಿಗೆ

ಕೊಂಗುಣಿವರ್ಮನ ನಂತರ ಅವನ ಮಗ ಒಂದನೇ ಮಾಧವ ಗಂಗರಾಜ್ಯದ ದೊರೆಯಾದನು. ಇವನು *ದತ್ತಕಸೂತ್ರ* ಎಂಬ ಕೃತಿಗೆ ವೃತ್ತಿಯನ್ನು ಬರೆದನು. ಇವನಿಗೆ ಹರಿವರ್ಮನೆಂಬ ಪುತ್ರನಿದ್ದನು. ಇವನನ್ನು ಆರ್ಯವರ್ಮ, ಕೃಷ್ಣವರ್ಮ ಎಂದೂ ಕೂಡಾ ಕರೆಯಲಾಗಿದೆ. ಇವನ ಆಳ್ವಿಕೆಯ ಕಾಲದಲ್ಲಿ ಈ ಅರಸು ಮನೆತನದವರು ತಮ್ಮ ಆಡಳಿತ ಕೇಂದ್ರವನ್ನು ತಲಕಾಡಿಗೆ ಬದಲಾಯಿಸಿದರು ಎಂದು ಕೃತಕವೆಂದು ಹೇಳಲಾದ ಹರಿವರ್ಮನ ಒಂದು ಶಾಸನದಲ್ಲಿ ಹೇಳಲಾಗಿದೆ. ಹರಿವರ್ಮನಿಗೆ ಮೂರು ಜನ ಪುತ್ರರು ಇಮ್ಮಡಿ ಮಾಧವ, ವಿಷ್ಣುಗೋಪ ಮತ್ತು ವೀರವರ್ಮ.

ಹರಿವರ್ಮನ ನಂತರ ಇಮ್ಮಡಿ ಮಾಧವನು ಪಲ್ಲವ ಅರಸ ಸ್ಕಂದವರ್ಮನ ನೆರವಿನಿಂದ ಸಿಂಹಾಸನವನ್ನು ಪಡೆದುಕೊಂಡನು. ಇದಕ್ಕೆ ಕಾರಣ ತಿಳಿಯದು. ಸ್ವಸಾಮರ್ಥ್ಯದಿಂದ ಗಂಗ ರಾಜ್ಯವನ್ನು ವಿಸ್ತರಿಸಿದ. ಈತನ ನಂತರ ಅವನ ತಮ್ಮ ವಿಷ್ಣುಗೋಪ ರಾಜ್ಯವಾಳಿದನು. ಇವನ ಮಗನೇ ಮುಮ್ಮಡಿ ಮಾಧವ. ಇವನು ಕದಂಬ ದೊರೆ ಕಾಕುತ್ಸವರ್ಮನ ಮಗಳನ್ನು ಮದುವೆಯಾಗಿದ್ದನು. ಪ್ರಾಯಶಃ ಒಂದು ಕಾಲು ಕುಂಟಾಗಿದ್ದುದರಿಂದ ಇವನನ್ನು 'ತಿಡಂಗಾಲು ಮಾಧವ'ನೆಂದು ಕರೆಯಲಾಗಿತ್ತು. ಅವನೀತ ಇವನ ಮಗ. ಕದಂಬರಾಣಿಯಲ್ಲಿ

ಜನಿಸಿದವನು. ಈ ವೈವಾಹಿಕ ಸಂಬಂಧವನ್ನು ಬೆಳಸುವುದರಲ್ಲಿ ಎರಡೂ ಅರಸು ಮನೆತನಗಳ ನಡುವಿನ ವೈಮನಸ್ಸನ್ನು ತಿಳಿಯಾಗಿಸುವ ಉದ್ದೇಶವಿತ್ತು. ಇದರ ಪರಿಣಾಮವಾಗಿ ಗಂಗ-ಪಲ್ಲವರ ಸಂಬಂಧವು ಕೊನೆಗೊಂಡಿತು. ಇಮ್ಮಡಿ ಮಾಧವನ ನಂತರ ಅವನ ಮಗ ಅವನೀತನಿಗೆ ಆತನು ಹಸುಗೂಸಾಗಿದ್ದಾಗಲೇ ಯುವರಾಜನೆಂದು ಘೋಷಿಸಲಾಗಿತ್ತು. ಪುನ್ನಾಡಿನ ಅರಸನಾದ ಸ್ಕಂದವರ್ಮನ ಮಗಳಾದ ಜೇಷ್ಠಾದೇವಿ ಇವನ ರಾಣಿ. ಪುನ್ನಾಡ ಪ್ರದೇಶವು ಮೈಸೂರು ಜಿಲ್ಲೆ ಹೆಗ್ಗಡದೇವನ ಕೋಟೆ ತಾಲ್ಲೂಕು ಪ್ರದೇಶವಾಗಿತ್ತು. ಇದರ ರಾಜಧಾನಿ ಕಿತ್ತೂರು. ಇದು ಕಪಿನಿ ನದಿ ದಂಡೆಯ ಮೇಲಿದೆ. ಅವನೀತನಿಗೆ ವೈಯಕ್ತಿಕವಾಗಿ ಜೈನಧರ್ಮದ ಕಡೆ ಒಲವಿತ್ತು. ಇವನ ಗುರು ಜೈನಾಚಾರ್ಯ ವಿಜಯಕೀರ್ತಿಯಾದರೂ ಇವನು ಶಿವನ ಆರಾಧಕನೆಂದು ಪ್ರಶಂಸಿಸಲಾಗಿದೆ. ಪ್ರಾಯಶಃ ಇದೆಲ್ಲವೂ ಇವನ ಈ ಧಾರ್ಮಿಕ ಸಹಿಷ್ಣುತೆಯನ್ನು ತೋರಿಸುವುದೆಂದು ಕಾಣುತ್ತದೆ. ತನ್ನ ಆಡಳಿತಾವಧಿಯಲ್ಲಿ ಎಲ್ಲ ಅವಿಧೇಯ ತುಂಡರಸರನ್ನು ತನ್ನ ದಾರಿಗೆ ಬರುವಂತೆ ಮಾಡಿ ರಾಜ್ಯವನ್ನು ಶಕ್ತಿಶಾಲಿ ಯನ್ನಾಗಿ ಮಾಡಿದನು.

### ದುರ್ವಿನೀತ (ಕ್ರಿ.ಶ. ೫೨೯-೫೭೩)

ಗಂಗ ಅರಸರಲ್ಲಿಯೇ ಗಣ್ಯನಾದ ದುರ್ವಿನೀತ ದಿಗ್ವಿಜಯಿಯೇ ಅಲ್ಲದೆ ವಿದ್ವಾಂಸನೂ, ಬರಹಗಾರನೂ ಆಗಿದ್ದನು. ಇವನ ತಂದೆ ಸುಮಾರು ೬೦ ವರ್ಷಗಳ ಕಾಲ ಸುದೀರ್ಘವಾದ ಗಂಗರಾಜ್ಯವನ್ನಾಳಿದ ಅವನೀತ. ತಾಯಿ ಪುನ್ನಾಡದ ದೊರೆ ಇಮ್ಮಡಿ ಸ್ಕಂದವರ್ಮನ ಮಗಳಾದ ಜೇಷ್ಠಾದೇವಿ. ಇವನ ಮತ್ತೊಂದು ಹೆಸರು ನಿರ್ವಿನೀತ. ಇವನ ಕಾಲವು ಗಂಗ ಸಾಮ್ರಾಜ್ಯದ ವೈಭವದ ಮೆಟ್ಟಿಲನ್ನು ಏರಿತು. ಸೈನಿಕ ಚಟುವಟಿಕೆ, ಧಾರ್ಮಿಕ ವೈಶಾಲ್ಯ, ಸಾಹಿತ್ಯದ ಬೆಳವಣಿಗೆ ಇವನ ಕಾಲದ ವಿಶಿಷ್ಟ ಅಂಶಗಳಾಗಿವೆ. ಇವನು ಅಧಿಕಾರ ವಹಿಸಿಕೊಂಡ ಕಾಲದಲ್ಲಿಯೇ ದಕ್ಷಿಣದಲ್ಲಿ ಪಲ್ಲವರು, ಉತ್ತರದಲ್ಲಿ ಬಾದಾಮಿ ಚಾಲುಕ್ಯರು ಪ್ರಬಲರಾಗುತ್ತಿದ್ದರು. ಇವರಿಬ್ಬರ ಮಧ್ಯೆ ಆ ವೇಳೆಗಾಗಲೇ ಅನೇಕ ಯುದ್ಧಗಳು ನಡೆದು ಪರಸ್ಪರ ಶತ್ರುಗಳಾಗಿದ್ದರು. ತಂದೆ ಅವನೀತನ ಮರಣಾನಂತರ ಅವನ ಹಿರಿಯ ಪುತ್ರ ದುರ್ವಿನೀತನಿಗೆ ಸಿಂಹಾಸನ ಸುಲಭವಾಗಿ ದೊರೆಯಲಿಲ್ಲ. ಅವನ ಮಲಸಹೋದರ ದಂಗೆ ಎದ್ದು ಪಲ್ಲವರ ಸಹಾಯ ಕೋರಿದನು. ರಾಜನೀತಿ ಚತುರನಾಗಿದ್ದ ದುರ್ವಿನೀತ ಮುಂಬರುವ ಅಪಾಯವನ್ನರಿತು ಪಲ್ಲವರ ವೈರಿಗಳಾಗಿದ್ದ ಬಾದಾಮಿ ಚಾಲುಕ್ಯರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳಸಿಕೊಂಡು ಅವನ ಯೋಜನೆಯನ್ನು ನಿಷ್ಫಲಗೊಳಿಸಿದನು. ಆದ್ದರಿಂದ ಅವನು ಅನೇಕ ಯುದ್ಧಗಳನ್ನು ಮಾಡಬೇಕಾಯಿತು. ಅಲತ್ತೂರು. ಪರುಳರ, ಪೆನ್ನಗರ ಮುಂತಾದ ಕಡೆ ನಡೆದ ಯುದ್ಧಗಳಲ್ಲಿ ಶತ್ರುಗಳನ್ನು ಸೋಲಿಸಿದ್ದಾಗಿ ಗುಮ್ಮರೆಡ್ಡಿಪುರ ಶಾಸನವು ತಿಳಿಸುತ್ತದೆ. ಸಮರಶೂರನಾದ ಇವನು ಪುನ್ನಾಟ ಮತ್ತು ಪಾಣ್ಡಾಡವನ್ನು ಗೆದ್ದುಕೊಂಡನು. ಪುನ್ನಾಟವು ಅವನ ತಾಯಿ ಜೇಷ್ಠಾದೇವಿಯ ತವರುಮನೆ, ಅಲ್ಲಿ ಅವಳ

ತಂದೆಗೆ ಗಂಡು ಸಂತಾನವಿಲ್ಲದಿದ್ದುದರಿಂದ ಅವನ ಮರಣಾನಂತರ ಪ್ರಾಯಶಃ ಆ ರಾಜ್ಯವು ದುರ್ವಿನೀತನಿಗೆ ಸಂದಿರಬೇಕು.

ದುರ್ವಿನೀತನು ಶೂರನು ಮಾತ್ರವಲ್ಲದೆ, ವಿದ್ವಾಂಸನು ವಿದ್ಯೆಗೆ ಪ್ರೋತ್ಸಾಹದಾಯಕನೂ ಆಗಿದ್ದನು. ಶಾಸನಗಳು ಇವನನ್ನು ಅವನೀತ, ಸ್ಥಿರ, ಪ್ರಜ್ವಲ, ವಿನೀತ, ನಿರ್ವಿನೀತ ಎಂದು ಹೊಗಳಿವೆ. ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡಿರುವ ಇವನು ಭಾರವಿ ಮಹಾಕವಿಯ *ಕಿರಾತಾರ್ಜುನೀಯಂ* ಕಾವ್ಯದ ೧೫ನೇ ಸರ್ಗದ ಮೇಲೆ ವ್ಯಾಖ್ಯಾನವನ್ನು ಬರೆದನು. ಪೈಶಾಚಿ ಭಾಷೆಯ *ವಡ್ಡಕಥಾ* ವನ್ನು ಸಂಸ್ಕೃತ ಭಾಷೆಗೆ ಅನುವಾದಿಸಿದನು. *ಶಬ್ದಾವತಾರ* ಎಂಬ ವ್ಯಾಕಾರಣ ಗ್ರಂಥವನ್ನು ರಚಿಸಿದನು. ಜೈನಾಚಾರ್ಯ ಪೂಜ್ಯಪಾದರ *ಪಾಣಿನೀ ಸೂತ್ರವೃತ್ತಿ* ಕೃತಿಯ ಮೇಲೆ ವ್ಯಾಖ್ಯಾನ ಬರೆದನು. ಈ ವ್ಯಾಖ್ಯಾನವು ಕನ್ನಡದಲ್ಲಿದೆ ಯೆಂದು ಹೇಳಲಾಗಿದೆ. ಪೂಜ್ಯಪಾದರು ಇವನ ಗುರುಗಳಾಗಿದ್ದರು. ಇವನೊಬ್ಬ ಪ್ರಸಿದ್ಧ ಬರಹಗಾರನೆಂದು *ಕವಿರಾಜಮಾರ್ಗ* ವು ಹೇಳಿದೆ. ಸಾಗರದೋಪಾದಿಯ ಅನೇಕ ಕೆರೆಗಳನ್ನು ನೀರಾವರಿಗಾಗಿ ಅವನು ಕಟ್ಟಿಸಿದನೆಂದು ನಲ್ಲಾಳ ತಾಮ್ರಪಟಗಳು ತಿಳಿಸುತ್ತವೆ. ಹೀಗೆ ಇವನೊಬ್ಬ ಬಹುಮುಖ ಪ್ರತಿಭಾನ್ವಿತ ವ್ಯಕ್ತಿ, ಸ್ವತಃ ವಿದ್ವಾಂಸ, ವಿದ್ವತ್ತಿನ ಪೋಷಕ, ರಾಜಕವಿ, ರಾಜಕೀಯ ಚತುರನಾದ ಈತನ ೫೦ ವರ್ಷಗಳ ಆಳ್ವಿಕೆ ಗಂಗರ ಆಡಳಿತದಲ್ಲಿ ಚಿರಸ್ಮರಣೀಯವಾಗಿದೆ.

ದುರ್ವಿನೀತನ ನಂತರ ಕ್ರಮವಾಗಿ ಮುಷ್ಕರ, ಭೂವಿಕ್ರಮ, ಮತ್ತು ಮೊದಲನೆ ಶಿವಮಾರನು ಗಂಗ ದೊರೆಗಳಾದರು. ಇವರ ನಂತರ ಶ್ರೀಪುರುಷ ಕ್ರಿ.ಶ. ೭೨೫ ರಲ್ಲಿ ಪಟ್ಟಕ್ಕೆ ಬಂದನು.

**ಶ್ರೀಪುರುಷ (ಕ್ರಿ.ಶ. ೭೨೫-೭೮೮)**

ಗಂಗ ವಂಶದ ಪ್ರಮುಖರಲ್ಲಿ ಶ್ರೀಪುರುಷನು ಆರು ದಶಕಗಳ ದೀರ್ಘಕಾಲ ಆಳಿದನು. ಯುದ್ಧ ದುರಂದರನಾದ ಈತನು ಶತ್ರುಗಳೊಂದಿಗೆ ಹೋರಾಡಿ ಗಂಗ ಸಾಮ್ರಾಜ್ಯದ ಘನತೆ ಯನ್ನು ಹೆಚ್ಚಿಸಿದನು. ಪಲ್ಲವ ನಂದಿವರ್ಮನ ಮೇಲೆ ವಿಲಂದೆ ಎಂಬಲ್ಲಿ ಜಯಗಳಿಸಿ ಅವನಿಂದ 'ಪೆರ್ಮನಾಡಿ' ಎಂಬ ಬಿರುದನ್ನು ಕಿತ್ತುಕೊಂಡನು. ಗಂಗ ರಾಜಕುಮಾರಿಯನ್ನು ಅಪಹರಿಸಿ ವರಿಸಿದ್ದ ಪಾಂಡ್ಯತೇರ್ಮಾನನ ವಿರುದ್ಧ ಯುದ್ಧ ಘೋಷಿಸಿದನು. ವೆಣ್‌ಬೈಯಲ್ಲಿ ನಡೆದ ಯುದ್ಧದಲ್ಲಿ ಶ್ರೀಪುರುಷ ಸೋತನು. ಆಗ ಪಲ್ಲವರು ಗಂಗರಾಜ್ಯದ ಮೇಲೆ ದಂಡೆತ್ತಿ ಬಂದು ಶ್ರೀಪುರುಷನನ್ನು ಸೋಲಿಸಿ ಅವನಲ್ಲಿದ್ದ 'ಉಗ್ರೋದಯ' ಎಂಬ ಕಂಠೀಹಾರವನ್ನು ಕಿತ್ತುಕೊಂಡರು. ರಾಷ್ಟ್ರಕೂಟರ ಮೊದಲನೇ ಕೃಷ್ಣನಿಂದಲೂ ಪರಾಭವಗೊಂಡ. ರಾಜಕೇಸರಿ, ಭೀಮಕೋಪ, ರಣಭಾಜನ ಇವನ ಬಿರುದುಗಳಾಗಿದ್ದವು. ಚಾಲುಕ್ಯರ ವಿಜಯಮಹಾದೇವಿ, ನೊಳಂಬ ವಂಶದ ನೊಳಂಬ ಮಾಧವೆ ಇವನ ರಾಣಿಯರು. ದುಗ್ಗಮಾರ, ಎರೆಯಪ್ಪ, ಇಮ್ಮಡಿ ಶಿವಮಾರ, ವಿಜಯಾದಿತ್ಯ ಇವನ ಪುತ್ರರು. ಚಾಲುಕ್ಯ ವಿಜಯಾದಿತ್ಯ, ಇಮ್ಮಡಿ ವಿಕ್ರಮಾದಿತ್ಯ, ಇಮ್ಮಡಿ ಕೀರ್ತಿವರ್ಮ ಪಲ್ಲವ ವಂಶದ ಒಂದನೇ ನರಸಿಂಹ, ಇಮ್ಮಡಿ

ಪರಮೇಶ್ವರವರ್ಮ, ನಂದಿವರ್ಮ ಇವನ ಸಮಕಾಲೀನ ರಾಜರು. ಶ್ರೀಪುರುಷನ ಕಾಲಕ್ಕೆ ಸೇರಿದ ಅನೇಕ ವೀರಗಲ್ಲುಗಳು ತುಮಕೂರು ಜಿಲ್ಲೆಯ ಹಿರೇಗುಂಡಗಲ್ ಬಳಿ ದೊರೆತಿದ್ದು ಅವು ರಾಷ್ಟ್ರಕೂಟ-ಗಂಗರ ಹೋರಾಟವನ್ನು ತಿಳಿಸುತ್ತವೆ. ವಿದ್ವಾಂಸನಾಗಿದ್ದ ಇವನು ಗಜಶಾಸ್ತ್ರ ಎಂಬ ಕೃತಿಯನ್ನು ಸಂಸ್ಕೃತ ಭಾಷೆಯಲ್ಲಿ ಬರೆದನು. ನೆಲಮಂಗಲದ ಬಳಿಯ ಮಣ್ಣೆ ಈತನ ರಾಜಧಾನಿಯಾಗಿತ್ತು. ಇವನ ರಾಜ್ಯವನ್ನು 'ಶ್ರೀರಾಜ್ಯ'ವೆಂದು ಕರೆಯಲಾಗಿದೆ.

**ಇಮ್ಮಡಿ ಶಿವಮಾರರು (ಕ್ರಿ.ಶ. ೭೮೮-೮೧೬)**

ಸಿಂಹಾಸನಕ್ಕೆ ಬಂದ ತರುವಾಯದಲ್ಲೇ ಶಿವಮಾರನು ರಾಷ್ಟ್ರಕೂಟ ಧ್ರುವನ ಆಕ್ರಮಣ ವನ್ನು ಎದುರಿಸಬೇಕಾಯಿತು. ಶಿವಮಾರನು ಸೋತು ಸೆರೆಯಾಳಾದನು. ಗಂಗಸಾಮ್ರಾಜ್ಯಕ್ಕೆ ಧ್ರುವನು ತನ್ನ ಹಿರಿಯ ಮಗ ಸ್ತಂಭನನ್ನು ರಾಜ್ಯಪಾಲನನ್ನಾಗಿ ಮಾಡಿದನು. ರಾಷ್ಟ್ರಕೂಟ ಧ್ರುವನ ಮರಣಾನಂತರ ಅವರಲ್ಲಿ ಸಿಂಹಾಸನಕ್ಕೆ ಅಂತಃಕಲಹಗಳು ಆರಂಭವಾದವು. ಈ ಸಮಯದಲ್ಲಿ ಶಿವಮಾರನು ಕಾರಾಗೃಹದಿಂದ ಬಿಡುಗಡೆ ಹೊಂದಿ ಪುನಃ ಗಂಗರ ದೊರೆ ಯಾದನು. ಅಂತಿಮವಾಗಿ ಅಮೋಘವರ್ಷನೊಡನೆ ನಡೆದ ಯುದ್ಧದಲ್ಲಿ ಕ್ರಿ.ಶ ೮೧೬ ರಲ್ಲಿ ಮಡಿದನು. ಇವನು ತನ್ನ ಜೀವಿತ ಕಾಲದ ಬಹುಭಾಗವನ್ನು ರಾಷ್ಟ್ರಕೂಟರ ಕಾರಾಗೃಹ ದಲ್ಲಿ ಕಳೆದರೂ ಕೂಡಾ ಅವನು ಸಾಹಿತ್ಯ ಮತ್ತು ಧರ್ಮದಲ್ಲಿ ಆಸಕ್ತಿ ವಹಿಸಿದನು. ಕಮ್ಮದ ವಾಡದಲ್ಲಿ ಜೈನ ಬಸದಿಯನ್ನು ನಿರ್ಮಿಸಿದನು. ಜೈನನಾದರೂ ದೇವಾಲಯ ಮತ್ತು ಅಗ್ರಹಾರ ಗಳಿಗೆ ಅಪಾರವಾದ ದತ್ತಿ ನೀಡಿದನು. ಶ್ರವಣಬೆಳಗೊಳದಲ್ಲಿ ಚಂದ್ರಪ್ರಭ ಬಸದಿ ನಿರ್ಮಿಸಿ ದನು. ಕನ್ನಡದಲ್ಲಿ ಗಜಾಷ್ಟಕ ಎಂಬ ಕೃತಿ ರಚಿಸಿದ್ದು ಅದು *ಒನಕೆವಾಡು* ಎಂಬ ಜಾನಪದ ರೂಪದಲ್ಲಿ ಇತ್ತಂತೆ. *ಸೇತುಬಂಧ* ಎಂಬ ಇನ್ನೊಂದು ಕೃತಿಯನ್ನು ರಚಿಸಿದ್ದಾನೆ.

ಎರಡನೆ ಶಿವಮಾರನ ನಂತರ ಮೊದಲನೆ ರಾಚಮಲ್ಲ ಗಂಗರ ಸ್ವಾತಂತ್ರಕ್ಕಾಗಿ ಹೋರಾಡಿದನು. ರಾಷ್ಟ್ರಕೂಟ ಅಮೋಘವರ್ಷ ನೃಪತುಂಗನು ತನ್ನ ಮಗಳು ಚಂದ್ರೋಬ ಲಬ್ಬೆಯನ್ನು ಯುವರಾಜ ಭೂತುಗನಿಗೆ ವಿವಾಹ ಮಾಡಿಕೊಟ್ಟಿದ್ದನು. ಭೂತುಗನ ಮಗ ಎರಡನೆ ನೀತಿಮಾರ್ಗ. ಅವನ ಉತ್ತರಾಧಿಕಾರಿ ಎರಡನೇ ರಾಚಮಲ್ಲ. ರಾಚಮಲ್ಲನ ಆಳ್ವಿಕೆಯಲ್ಲಿ ರಾಷ್ಟ್ರಕೂಟರ ಕೃಷ್ಣ ಅವನನ್ನು ಪದಚ್ಯುತಗೊಳಿಸಿ ಎರಡನೆ ಭೂತುಗನನ್ನು ಗಂಗ ಸಿಂಹಾಸನಕ್ಕೆ ತಂದನು. ನಂತರ ಮೂರನೆ ಮಾರಸಿಂಹ ಮತ್ತು ನಾಲ್ಕನೆ ರಾಚಮಲ್ಲ ಕ್ರಮವಾಗಿ ರಾಜ್ಯಭಾರ ಮಾಡಿದರು. ನಾಲ್ಕನೆ ರಾಚಮಲ್ಲನ ಆಳ್ವಿಕೆಯಲ್ಲಿ ಅವನ ಮಂತ್ರಿ ಚಾವುಂಡರಾಯನು ಕನ್ನಡದಲ್ಲಿ *ಚಾವುಂಡರಾಯ ಪುರಾಣ* ಕೃತಿಯನ್ನು ರಚಿಸಿದನು. ಇದು ೨೪ ತೀರ್ಥಂಕರರ ಜೀವನ ಚರಿತ್ರೆ. ಸಂಸ್ಕೃತದಲ್ಲಿ *ಚರಿತಸಾರ* ಕೃತಿ ರಚನೆ ಮಾಡಿದನು. ಶ್ರವಣಬೆಳಗೊಳದಲ್ಲಿ ಚಾವುಂಡರಾಯನು ಬಸದಿಯನ್ನು ಕಟ್ಟಿಸಿ ಗೊಮ್ಮಟೇಶ್ವರನ ಏಕಶಿಲಾ ವಿಗ್ರಹವನ್ನು ಕೆತ್ತಿಸಿದನು.

೫ನೆ ರಾಚಮಲ್ಲ ರಕ್ಕಸಗಂಗನು ಈ ವಂಶದ ಕೊನೆಯ ಅರಸು ಕ್ರಿ.ಶ. ೯೯೯ ರಲ್ಲಿ ಚೋಳರು ಗಂಗರ ಮೇಲೆ ಆಕ್ರಮಣ ಮಾಡಿ ಅವನನ್ನು ಸೋಲಿಸಿ ಇವರ ರಾಜ್ಯವನ್ನು ಚೋಳಸಾಮ್ರಾಜ್ಯದಲ್ಲಿ ವಿಲೀನಗೊಳಿಸಿಕೊಂಡರು.

## ಸಾಂಸ್ಕೃತಿಕ ಕೊಡುಗೆಗಳು

### ಧರ್ಮ

ಗಂಗರು ಬೌದ್ಧ, ಜೈನ, ವೈದಿಕ ಧರ್ಮಗಳನ್ನು ಪೋಷಿಸಿ ಅವುಗಳನ್ನು ಮತ್ತಷ್ಟು ಸದೃಢವಾಗಿ ಬೆಳೆಸಿದರು. ಬೌದ್ಧ ಧರ್ಮ ಆ ವೇಳೆಗಾಗಲೇ ಇಳಿಮುಖವಾಗಿತ್ತು. ಐದನೇ ಶತಮಾನದಲ್ಲಿದ್ದ ಎರಡನೇ ಗಂಗ ಮಾಧವವರ್ಮನು ಪೇರೂರು ಮತ್ತು ಮಣಿಗ್ರಾಮ ಎಂಬ ಗ್ರಾಮಗಳಲ್ಲಿದ್ದ ಬೌದ್ಧ ಸಂಘಕ್ಕೆ ನೀಡಿದ ದಾನ ಬಿಟ್ಟರೆ ಹೆಚ್ಚಿನ ಬೌದ್ಧ ಚಟುವಟಿಕೆಗಳು ಇರಲಿಲ್ಲ.

ಕರ್ನಾಟಕದಲ್ಲಿ ಭದ್ರವಾಗಿ ತಳವೂರದ ಜೈನಧರ್ಮಕ್ಕೆ ಗಂಗ ವಂಶದವರ ಬೆಂಬಲ ಮತ್ತು ಆಶ್ರಯ ದೊರೆತು ಅದು ಕರ್ನಾಟಕದಲ್ಲಿ ಕ್ಷಿಪ್ರವಾದ ಪ್ರಗತಿಯನ್ನು ಸಾಧಿಸ ತೊಡಗಿತು. ಗಂಗ ರಾಜ್ಯ ಸ್ಥಾಪನೆಗೆ ಜೈನಮುನಿ ಸಿಂಹನಂದಿಯ ಆಶೀರ್ವಾದವೇ ಕಾರಣ ಎಂದು ನಂಬಲಾಗಿದೆ. ವಕ್ರಗ್ರೀವ ವಜ್ರನಂದಿ ಜೈನಮತದ ಶ್ರದ್ಧಾವಂತ ಅನುಯಾಯಿಗಳಾದರು. ಜಿನಸೇನಾಚಾರ್ಯ, ಅಜಿತಸೇನಾಚಾರ್ಯ, ವೀರಸೇನಾಚಾರ್ಯ, ಶಿವನಂದಿ ಆಚಾರ್ಯ ಮುಂತಾದ ಹೆಸರಾಂತ ಜೈನ ವಿದ್ವಾಂಸರೂ, ಮುನಿಗಳೂ ಇವರ ಕಾಲದಲ್ಲಿದ್ದು ಜೈನಧರ್ಮ ಪ್ರಚಾರಕ್ಕೆ ಕಾರಣರಾದರು. ನೀತಿಮಾರ್ಗ, ಭೂತುಗ ಮತ್ತು ಮಾರಸಿಂಹ ಜೈನ ತತ್ವ ಸಿದ್ಧಾಂತಗಳಲ್ಲಿ ಪಾರಂಗತರಾಗಿದ್ದರು. ಗಂಗರ ಉದಾರ ನೀತಿಯಿಂದ ಬಸದಿಗಳು, ಮಾನಸ್ತಂಭಗಳು ನಿರ್ಮಾಣವಾದವು. ಶ್ರವಣಬೆಳಗೊಳದ ಚಂದ್ರಗಿರಿಯ ಮೇಲೆ ಬಸದಿ ನಿರ್ಮಿಸಲಾಯಿತು. ದೊರೆ ೩ನೇ ಮಾರಸಿಂಹನು ಅಲ್ಲಿ ಮಾನಸ್ತಂಭ ನಿಲ್ಲಿಸಿ ಸಲ್ಲೇಖನವ್ರತ ಆಚರಿಸಿ ದೇಹತ್ಯಾಗ ಮಾಡಿದನು. ಮಂತ್ರಿ ಚಾವುಂಡರಾಯನ ಶ್ರಮದಿಂದ ಶ್ರವಣಬೆಳಗೊಳದಲ್ಲಿ ಗೊಮ್ಮಟ ಮೂರ್ತಿಯನ್ನು ನಿರ್ಮಿಸಲಾಯಿತು. ಶ್ರವಣಬೆಳಗೊಳವು ದಿಗಂಬರರ ಪವಿತ್ರ ಕ್ಷೇತ್ರವಾಗಿ ಮುಂದುವರಿಯಿತು. ಗಂಗವಾಡಿ ಪ್ರಾಂತ್ಯದಲ್ಲಿನ ಅನೇಕ ಜೈನ ಸ್ಮಾರಕಗಳು ಗಂಗರ ಆಳ್ವಿಕೆಯು 'ಜೈನಧರ್ಮದ ಸುವರ್ಣಯುಗ' ಆಗಿತ್ತೆಂದು ಹೇಳುತ್ತವೆ. ಗೊಮ್ಮಟೇಶ್ವರ ವಿಗ್ರಹ ಇವರ ಕೀರ್ತಿಯನ್ನು ಚಿರಂತನವಾಗಿ ಉಳಿಸಿ ಭವ್ಯ ಸ್ಮಾರಕವಾಗಿ ಪರಿಣಮಿಸಿತು.

ಗಂಗ ವಂಶದ ರಾಜರು ವೈದಿಕ ಧರ್ಮಾವಲಂಬಿಗಳಾಗಿದ್ದರು. ಶ್ರೀಕಂಠಶಾಸ್ತ್ರಿಗಳು ಆರಂಭದ ಗಂಗ ದೊರೆಗಳೆಲ್ಲಾ ವೈದಿಕರಾಗಿದ್ದರು ಎಂದು ತಿಳಿಸುತ್ತಾರೆ. ಮೊದಲನೇ ಮಾಧವ, ಹರಿವರ್ಮ ದೊರೆಗಳು ತಮ್ಮನ್ನು ಗೋಬ್ರಾಹ್ಮಣ್ಯ ರಕ್ಷಕರೆಂದು ಕರೆದುಕೊಂಡಿದ್ದಾರೆ. ದುರ್ವಿನೀತ ಹಿರಣ್ಯಗರ್ಭವೆಂಬ ಯಜ್ಞವನ್ನು ಮಾಡಿದನು. ವಿಷ್ಣುಗೋಪ ವೈಷ್ಣವನಾಗಿದ್ದು 'ನಾರಾಯಣಚರಣಾನುದ್ಯಾತ'ನೆಂದು ಕರೆದುಕೊಂಡಿದ್ದಾನೆ. ಅವಿನೀತನನ್ನು 'ಹರಚರಣಾರವಿಂದ ಪ್ರಣಿಪಾತ'ನೆಂದು ಕರೆಯಲಾಗಿದೆ. ಹೀಗೆ ಶೈವ, ವೈಷ್ಣವ, ಪಾಶುಪಥ, ಕಾಪಾಲಿಕ, ಕಾಳಾಮುಖ ಮತ್ತು ಇತರ ಪಂಗಡಗಳು ಗಂಗರ ಕಾಲದಲ್ಲಿ ಪ್ರಚಲಿತವಾಗಿದ್ದವು. ಸರ್ಪಗಳ ಆರಾಧನೆ ಗಂಗವಾಡಿಯಲ್ಲಿ ಪ್ರಬಲವಾಗಿತ್ತು. ಕ್ಷುದ್ರದೇವತೆಗಳು ಆರಾಧನೆ ಅತ್ಯಂತ

ಜನಪ್ರಿಯವಾಗಿತ್ತು. ತಮ್ಮ ಕಷ್ಟಗಳನ್ನು ಹೋಗಲಾಡಿಸಲು ದುರ್ಗಮ್ಮ, ಮಾರಿಯಮ್ಮ, ಕಾಳಮ್ಮ ಮುಂತಾದ ದೇವತೆಗಳನ್ನು ಜನರು ಪೂಜಿಸುತ್ತಿದ್ದರು. ಗ್ರಾಮ ದೇವತೆಗಳ ಪ್ರೀತ್ಯರ್ಥವಾಗಿ ಪ್ರಾಣಿಬಲಿ ಕೊಡುವುದು ರೂಢಿಯಲ್ಲಿತ್ತು. ಒಟ್ಟಿನಲ್ಲಿ ಗಂಗ ರಾಜ್ಯದ ಕಾಲದಲ್ಲಿ ಶಿಷ್ಟಧರ್ಮಗಳ ಆಚರಣೆಯ ಜೊತೆಗೆ ಜನಪದ ಧರ್ಮವು ಕೂಡ ಜನಪ್ರಿಯ ವಾಗಿದ್ದವು. ಗಂಗರು ಯಾವ ಧರ್ಮದಲ್ಲೂ ಹಸ್ತಕ್ಷೇಪ ಮಾಡದೆ ಎಲ್ಲರಿಗೂ ಸಮಾನ ಅವಕಾಶ ನೀಡಿ ಧಾರ್ಮಿಕ ಸಮನ್ವಯತೆಯನ್ನು ಸಾಧಿಸಿದ್ದರು.

**ಸಾಹಿತ್ಯ**

ಗಂಗರು ಕನ್ನಡ ಮತ್ತು ಸಂಸ್ಕೃತ ಸಾಹಿತ್ಯದ ಆಶ್ರಯದಾತರು. ಗಂಗರಲ್ಲಿ ಹಲವು ರಾಜರು ವಿಶೇಷ ಪಾಂಡಿತ್ಯ ಪಡೆದಿದ್ದು ಗ್ರಂಥರಚನೆ ಮಾಡಿದ್ದಾರೆ. ಜೈನ ಗುರು ದೇವನಂದಿ ಅಥವಾ ಪೂಜ್ಯಪಾದ ಜೈನ ಸಿದ್ಧಾಂತದ ಬಗ್ಗೆ *ಸರ್ವಾಣಸಿದ್ಧಿ* ಎಂಬ ಕೃತಿ ಮತ್ತು *ಜಿನೇಂದ್ರ ವ್ಯಾಕರಣ* ಬರೆದಿದ್ದಾನೆ. ಗಂಗರ ದೊರೆ ಎರಡನೆ ಮಾಧವನ *ದತ್ತಕ ಸೂತ್ರ ವೃತ್ತಿ* ಎಂಬ ಶೃಂಗಾರ ಗ್ರಂಥದ ಮೇಲೆ ಒಂದು ಭಾಷ್ಯವನ್ನು ಬರೆದಿದ್ದಾನೆ. 'ರಾಜಕವಿ' ಎನಿಸಿದ್ದ ದುರ್ವಿನೀತ ಕನ್ನಡದಲ್ಲಿ ಗದ್ಯಕೃತಿ ರಚಿಸಿದ ಪ್ರಸಿದ್ಧ ಲೇಖಕ. ಇವನು ಭಾರವಿಯ *ಕಿರಾತಾರ್ಜುನೀಯ*ದ ೧೫ನೇ ಸರ್ಗಕ್ಕೆ ವ್ಯಾಖ್ಯಾನವನ್ನು ಬರೆದಿದ್ದಲ್ಲದೆ ಪೈಶಾಚಿ ಭಾಷೆಯಲ್ಲಿದ್ದ ಗುಣಾಢ್ಯನ *ಬೃಹತ್ಕಥೆ*ಯನ್ನು (ವಡ್ಡಕಥಾ) ಸಂಸ್ಕೃತ ಭಾಷೆಗೆ ತರ್ಜುಮೆ ಮಾಡಿದನೆಂದು ಉತ್ತನೂರು ತಾಮ್ರಶಾಸನವು ತಿಳಿಸುತ್ತದೆ. ಇನ್ನೊಬ್ಬ ರಾಜಕವಿ ಶ್ರೀಪುರುಷ ಸಂಸ್ಕೃತದಲ್ಲಿ *ಗಜಶಾಸ್ತ್ರ* ಎಂಬ ಕೃತಿಯನ್ನು ರಚಿಸಿದನು. ಇಮ್ಮಡಿ ಶಿವಮಾರನು ಕನ್ನಡದಲ್ಲಿ *ಗಜಾಷ್ಟಕ* ಎಂಬ ಕೃತಿಯನ್ನು ಬರೆದನು. ಅದು ಒನಕೆವಾಡು ಎಂಬ ಜಾನಪದ ರೂಪದಲ್ಲಿದೆ. *ರಾಘವ ಪಾಂಡವೀಯ* ಕೃತಿ (ರಾಮ ಮತ್ತು ಪಾಂಡವ ಕಥೆ ಒಟ್ಟಾಗಿ ಹೇಳುವ)ಯ ಕರ್ತೃವಾದ ಹೇಮಸೇನ ಗಂಗರ ದೊರೆ ಎರಡನೆ ಭೂತುಗನ ಆಸ್ಥಾನದಲ್ಲಿದ್ದನು. ಈತನ ಶಿಷ್ಯನಾದ ವಾದೀಭಸಿಂಹನು *ಗದ್ಯಚಿಂತಾಮಣಿ* ಮತ್ತು *ಕ್ಷಾತ್ರಚೂಡಾಮಣಿ* ಗಳನ್ನು ಗದ್ಯದಲ್ಲಿ ಬಾಣನನ್ನು ಅನುಸರಿಸಿ ಬರೆದಿರುವನು. ಈ ಕೃತಿಗಳು ಜೈನಧರ್ಮದ ನೀತಿ ಕಥೆಗಳನ್ನು ಮನೋಹರವಾಗಿ ಹೇಳುತ್ತವೆ.

ದುರ್ವಿನೀತನು ಕನ್ನಡ ಭಾಷೆಯ ಶ್ರೇಷ್ಠ ಕವಿ ಎಂದು *ಕವಿರಾಜಮಾರ್ಗ* ಉಲ್ಲೇಖಿಸಿದೆ. ಪಂಪನ ಸಮಕಾಲೀನ ಹಾಗೂ ಗಂಗ ದೊರೆಗಳ ಮಂತ್ರಿ ಚಾವುಂಡರಾಯನು ಕನ್ನಡ ಮತ್ತು ಸಂಸ್ಕೃತ ಭಾಷೆಯ ಅದ್ವಿತೀಯ ಕವಿ. ಇವನು ಕ್ರಿ.ಶ. ೯೭೮ ರಲ್ಲಿ ಕನ್ನಡದ *ಚಾವುಂಡರಾಯ ಪುರಾಣ* ಎಂಬ ಗದ್ಯಕೃತಿಯನ್ನು ರಚಿಸಿದನು. ಇದು ೨೪ ತೀರ್ಥಂಕರರ ಜೀವನ ಚರಿತ್ರೆಯ ನ್ನೊಳಗೊಂಡಿದೆ. ಇದನ್ನು *ತ್ರಿಷಷ್ಠಿ ಲಕ್ಷಣ ಮಹಾಪುರಾಣ* ಎಂದೂ ಕರೆಯುವರು. ಚರಿತ್ರ ಸಾರ ಎಂಬ ಸಂಸ್ಕೃತ ಕೃತಿಯನ್ನೂ ಕೂಡ ರಚಿಸಿದ್ದಾನೆ. ಒಂದನೆ ನಾಗವರ್ಮನು ರಕ್ಕಸಗಂಗ ನಿಂದ ಆಶ್ರಿತನಾಗಿ *ಛಂದೋಂಬುದಿ* ಎಂಬ ಛಂದಶಾಸ್ತ್ರವನ್ನು *ಕರ್ನಾಟಕ ಕಾದಂಬರಿ* ಎಂಬ ಬಾಣನ ಕಾದಂಬರಿಯ ಭಾಷಾಂತರವನ್ನು ಮಾಡಿದನು.

## ಕಲೆ ಮತ್ತು ವಾಸ್ತುಶಿಲ್ಪ

ಕರ್ನಾಟಕದ ವಾಸ್ತು ಪರಂಪರೆಗೆ ಗಂಗರು ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸಿದ್ದಾರೆ. ಗಂಗರು ತಮ್ಮ ಸಮಕಾಲೀನರಾದ ಪಲ್ಲವ, ಚಾಲುಕ್ಯ, ರಾಷ್ಟ್ರಕೂಟರಿಂದ ಪ್ರಭಾವಿತರಾದರೂ ವಾಸ್ತುಶಿಲ್ಪದಲ್ಲಿ ತಮ್ಮದೇ ಆದ ಶೈಲಿಯನ್ನು ಬೆಳಸಿಕೊಂಡಿದ್ದಾರೆ. ದ್ರಾವಿಡ ಶೈಲಿಯನ್ನೇ ಸಣ್ಣಪುಟ್ಟ ಬದಲಾವಣೆಗಳೊಂದಿಗೆ ಅಳವಡಿಸಿಕೊಂಡ ಗಂಗರ ಕಾಲದ ದೇವಾಲಯಗಳು ಚಿಕ್ಕದಾದ ಗರ್ಭಗೃಹ, ತೆರೆದ ಸುಕನಾಸಿ, ಸಣ್ಣ ಪ್ರಮಾಣದ ನವರಂಗ, ಪೀಠದ ಮೇಲೆ ಗುಂಡಗಿರುವ ತೆಳುಗಂಬಗಳು, ಅವುಗಳ ತುದಿಯಲ್ಲಿ ಕಲಶಾಕೃತಿ, ನವರಂಗದ ಮಧ್ಯೆ ದೊಡ್ಡ ಅಂಕಣ, ಅದರ ಮೇಲೆ ಮಧ್ಯದಲ್ಲಿ ಅಷ್ಟದಿಕ್ಪಾಲಕರ ಮಧ್ಯೆ ಶಿವ, ನಟರಾಜ, ಇಲ್ಲವೆ ಜಿನಮೂರ್ತಿಗಳು ದ್ರಾವಿಡ ಶೈಲಿಯ ಕಲ್ಲಿನ, ಇಟ್ಟಿಗೆ ಗಾರೆಯ ವಿಮಾನ ಇವು ಗಂಗರ ದೇವಾಲಯಗಳ ಮುಖ್ಯ ಲಕ್ಷಣಗಳಾಗಿವೆ.

ಮಣ್ಣೆಯ ಕಪಿಲೇಶ್ವರ, ವರುಣದ ಮಹಾಲಿಂಗೇಶ್ವರ, ತಲಕಾಡಿನ ಪಾತಾಳೇಶ್ವರ ಹಾಗೂ ಮರುಳೇಶ್ವರ ಕೋಲಾರದ ಕೋಲಾರಮ್ಮನ ಮಂದಿರ ಬೇಗೂರಿನ ನಾಗೇಶ್ವರ, ಗಂಗರ ಕಾಲದ ದೇವಾಲಯಗಳಾಗಿವೆ. ಕಪಿಲೇಶ್ವರ ದೇಗುಲ ಇಟ್ಟಿಗೆಯ ರಚನೆಯಾಗಿದೆ. ತಲಕಾಡಿನ ಪಾತಾಳೇಶ್ವರ ದೇವಾಲಯವೂ ಗರ್ಭಗೃಹ, ಅಂತರಾಳ ಮತ್ತು ನವರಂಗ ಮಂಟಪವನ್ನು ಹೊಂದಿದೆ. ಇಲ್ಲಿಯ ಲಿಂಗ ಕೆಂಪು ಬಣ್ಣದಲ್ಲಿದ್ದು ನವರಂಗದಲ್ಲಿ ಬ್ರಹ್ಮ, ದುರ್ಗ, ದಕ್ಷಿಣಾ ಮೂರ್ತಿ, ಭೈರವ, ಗಣಪತಿ ಮತ್ತು ಬಸವನ ಶಿಲ್ಪಗಳಿವೆ. ತಿಪಟೂರು ತಾಲ್ಲೂಕಿನ ಅರಳುಗುಪ್ಪೆಯ ಕಲ್ಲೇಶ್ವರ ದೇವಾಲಯ ಕಲೆಯ ದೃಷ್ಟಿಯಿಂದ ಆಕರ್ಷಕವಾದುದು. ಇದನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯದ ನವರಂಗದ ಮೇಲ್ಛಾವಣಿಯಲ್ಲಿರುವ ಅಷ್ಟದಿಕ್ಪಾಲಕರ ಶಿಲ್ಪ ಭಾರತದಲ್ಲೇ ಅತ್ಯಂತ ಸುಂದರಶಿಲ್ಪ. ಹೀಗೆ ಗಂಗರು ನಿರ್ಮಿಸಿದ ಕಟ್ಟಡಗಳಲ್ಲಿ ಪ್ರಾಚೀನವಾದವುಗಳು ಶಿವದೇವಾಲಯಗಳೇ ಆಗಿವೆ. ವೈಷ್ಣವ ದೇವಾಲಯಗಳು ತೀರಾ ಕಡಿಮೆ ಎಂದೇ ಹೇಳಬಹುದು.

ಗಂಗರ ಕಾಲದ ಸ್ಮಾರಕಗಳಲ್ಲಿ ಶ್ರವಣಬೆಳಗೊಳದ ಚಂದ್ರಪ್ರಭ ಮತ್ತು ಚಾವುಂಡರಾಯ ಬಸದಿಗಳು ಮುಖ್ಯವಾಗಿವೆ. 'ಚಂದ್ರಪ್ರಭ ಬಸದಿ'ಯನ್ನು ಶಿವಮಾರಸು ಕ್ರಿ.ಶ ೮೦೦ ರಲ್ಲಿ ನಿರ್ಮಿಸಿದನು. 'ಚಾವುಂಡರಾಯ ಬಸದಿ'ಯನ್ನು ಚಾವುಂಡರಾಯ ಕ್ರಿ.ಶ.೯೮೨ ರಲ್ಲಿ ಕಟ್ಟಿಸಿದನು. ಎರಡು ಅಂತಸ್ತುಗಳುಳ್ಳ ಈ ಬಸದಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಇಡೀ ದೇವಾಲಯ ಆಯತಾಕಾರದ ತಳಪಾಯ ಹೊಂದಿದ್ದರೂ ಒಳಭಾಗದಲ್ಲಿ ಚಿಕ್ಕದಾದ ಗರ್ಭಗೃಹ, ದೇವಾಲಯದ ಪ್ರವೇಶದಲ್ಲಿ ಎತ್ತರವಾದ ಮುಖಮಂಟಪವಿದೆ. ದ್ರಾವಿಡ ಶೈಲಿಯ ತ್ರಿತಳ ವಿಮಾನವುಳ್ಳ ಈ ಬಸದಿಯ ಹೊರಗೋಡೆಗಳು ಶಿಲ್ಪಗಳಿಂದ ಅಲಂಕೃತವಾಗಿವೆ.

ಭಾರತೀಯ ಕಲಾ ಚರಿತ್ರೆಗೆ ಗಂಗರ ಕೊಡುಗೆಯನ್ನು ಕಂಬಗಳಲ್ಲಿ ನೋಡಬಹುದು. ಇವರ ಕಾಲದಲ್ಲಿ ಜೈನ ಬಸದಿಗಳ ಮುಂದೆ ಸ್ತಂಭ ನಿಲ್ಲಿಸಿರುವುದು ಸಾಮಾನ್ಯ ಸಂಗತಿ

ಯಾಗಿದೆ. ಈ ಸ್ತಂಭಗಳು ಸಾಮಾನ್ಯವಾಗಿ ಕಣಶಿಲೆಯಿಂದ (ಗ್ರಾನೈಟ್) ನಿರ್ಮಿತ ವಾಗಿರುತ್ತವೆ. ಜೈನ ಬಸದಿಯ ಮುಂದೆ ಕಾಣುವ ಸ್ತಂಭಗಳನ್ನು ಮಾನಸ್ತಂಭ ಮತ್ತು ಬ್ರಹ್ಮದೇವಸ್ತಂಭ ಎಂದು ಗುರುತಿಸಬಹುದು. ಆ ಮಾನಸ್ತಂಭದ ಮೇಲ್ಭಾಗದಲ್ಲಿ ಜಿನಶಿಲ್ಪ ವಿರುತ್ತದೆ. ಬ್ರಹ್ಮದೇವ ಸ್ತಂಭವೂ ಜೈನರದೇ ಆಗಿದ್ದು ಅದರ ಮೇಲೆ ಯಕ್ಷನ ಬಿಂಬವನ್ನು ಇಟ್ಟಿರುತ್ತಾರೆ. ಎಂ.ಚಿದಾನಂದಮೂರ್ತಿಯವರು ಬಸದಿಯ ಮುಂದೆ ಬಹು ಚಿಕ್ಕ ಮಂಟಪ ವಿರುವ ದೊಡ್ಡ ಕಂಬಕ್ಕೆ ಮಾನಸ್ತಂಭವೆಂದೂ, ಬೃಹತ್ ವಿಗ್ರಹಗಳ ಮುಂದಿನ ಸರಳ ಸ್ತಂಭಗಳಿಗೆ ಬ್ರಹ್ಮಸ್ತಂಭಗಳೆಂದೂ ಕರೆದಿದ್ದಾರೆ. ಉದಾಹರಣೆಗೆ ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿರುವ ಬ್ರಹ್ಮಸ್ತಂಭ ಹಾಗೂ ಚಾವುಂಡರಾಯನ ತ್ಯಾಗದ ಬ್ರಹ್ಮದೇವ ಸ್ತಂಭವನ್ನು ಹೆಸರಿಸಬಹುದು.

ಕ್ರಿ.ಶ. ೯೮೨ ರಲ್ಲಿ ಚಾವುಂಡರಾಯನು ಶ್ರವಣಬೆಳಗೊಳದ ದೊಡ್ಡಬೆಟ್ಟದ ಮೇಲೆ ನಿರ್ಮಿಸಿದ ೫೭ ೧/೨ ಅಡಿ ಎತ್ತರದ ಗೊಮ್ಮಟೇಶ್ವರ ವಿಗ್ರಹ ಅಪೂರ್ವವಾದುದು. ಗಾಢವೂ, ಪ್ರಭಾವವೂ ಆದ ಆಧ್ಯಾತ್ಮಿಕ ನಗುವನ್ನು ಇದರ ಮುಖ ಸೂಚಿಸುತ್ತದೆ. ಗುಂಗುರು ಕೂದಲು, ನೀಳನಾಸಿಕ, ಅರ್ಧನಿಮೀಲಿತ ನೇತ್ರಗಳು, ಮಾಟವಾದ ತುಟಿ ಹಾಗೂ ಕಪಾಲ ಈ ವಿಗ್ರಹದ ಅತ್ಯುತ್ಕೃಷ್ಟ ಅಂಗಗಳು. ಪಾದಗಳ ಮೇಲೆ ಸಮಭಾರ ಹಾಕಿ ನಿಂತು ತನ್ನ ಬೃಹತ್ ಬಾಹುಗಳನ್ನು ಇಳಿಬಿಟ್ಟ, ವಿಶಾಲ ಭುಜಗಳುಳ್ಳ ಈ ಶಿಲ್ಪದ ಮುಖ ೧೧ ಅಡಿ ಎತ್ತರವಿದೆ.

ಹೀಗೆ ಗಂಗವಂಶ ತನ್ನ ಇತಿಮಿತಿಗಳನ್ನರಿತು ಹಿತಕರವಾದ ರೀತಿಯಲ್ಲಿ ರಾಜ್ಯಭಾರ ಮಾಡಿತು. ಗಂಗವಾಡಿಯಷ್ಟರಿಂದಲೇ ತೃಪ್ತವಾಗಿ ನಿಷ್ಠೆಯಿಂದ ಪ್ರಜಾಪರಿಪಾಲನೆ ಮಾಡಿತು. ಪ್ರಧಾನವಾಗಿ ಜೈನಮತದ ಕಡೆಗೆ ಅದರ ಒಲವಿದ್ದರೂ ಪರಮತ ಸಹಿಷ್ಣುತೆಯನ್ನು ತನ್ನ ಆದರ್ಶವನ್ನಾಗಿಟ್ಟುಕೊಂಡಿತು. ಸಾಹಿತ್ಯ ಕಲೆಗೆ ಪ್ರೋತ್ಸಾಹವನ್ನಿತ್ತಿತು. ದುರ್ವಿನೀತನಂತಹ ನೀತಿವಂತ ರಾಜನನ್ನು ಚಾವುಂಡರಾಯನಂತಹ ದಂಡನಾಯಕನನ್ನು ಸ್ವಲ್ಪಕಾಲ ರನ್ನನಂತಹ ಕವಿಯನ್ನು ಪಡೆದ ಈ ವಂಶ ಕರ್ನಾಟಕದ ಚರಿತ್ರೆಯಲ್ಲಿ ತನ್ನದೇ ಆದ ಪ್ರಾಮುಖ್ಯತೆ ಪಡೆದಿದೆ.

## ೪.೪ ಬಾದಾಮಿ ಚಾಲುಕ್ಯರು

ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಚಾಲುಕ್ಯರ ಸ್ಥಾನ ಬಹಳ ಹಿರಿದಾದುದು. ಚಾಲುಕ್ಯರು ತಮ್ಮ ಅಧಿಕಾರವನ್ನು ಇಡೀ ದಕ್ಷಿಣ ಭಾರತದಾದ್ಯಂತ ಸ್ಥಾಪಿಸಿದ್ದಲ್ಲದೆ ಉತ್ತರದ ಕಡೆಗೂ ಪ್ರಭಾವ ಬೀರಿದರು. ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಕದಂಬರಾಗಲಿ, ಗಂಗರಾಗಲಿ ಒಂದು ಸಾಮ್ರಾಜ್ಯವನ್ನು ಬೆಳಸಲಾಗದೆ ಹೋದರು. ಆದರೆ ಬಾದಾಮಿ ಚಾಲುಕ್ಯರು ಈ ಕಾರ್ಯದಲ್ಲಿ ಯಶಸ್ವಿಯಾದರು. ದಕ್ಷಿಣದ ತುತ್ತತುದಿಯ ಪಲ್ಲವ ಮತ್ತು ಉತ್ತರ ಭಾರತದ ಹರ್ಷನ ಸಮಕಾಲೀನರಾದ ಇವರು ಅವರಿಬ್ಬರನ್ನು ರಾಜಕೀಯ ವಾಗಿ ಸದೆಬಡಿದು ಅಖಿಲಭಾರತದ ರಾಜಕೀಯದಲ್ಲಿಯೂ ಮತ್ತು ಸಾಂಸ್ಕೃತಿಕ ಬೆಳವಣಿಗೆಯಲ್ಲಿಯೂ ಕರ್ನಾಟಕಕ್ಕೆ ಒಂದು ವಿಶಿಷ್ಟವಾದ ಸ್ಥಾನವನ್ನು ತಂದುಕೊಟ್ಟರು. ಅದೃಷ್ಟವಶಾತ್ ಈ ವಂಶದ ರಾಜರು ಹಲವಾರು ನೈಜ ಶಾಸನಗಳನ್ನು ಬಿಟ್ಟುಹೋಗಿರುವುದರಿಂದ ಇವರ ಇತಿಹಾಸದ ಪುನರ್ರಚನೆಗೆ ಸಹಾಯವಾಗಿದೆ. ಅಲ್ಲದೆ ಬಾದಾಮಿ, ಐಹೊಳೆ, ಪಟ್ಟದಕಲ್ಲು ಮುಂತಾದೆಡೆ ಇವರು ನಿರ್ಮಿಸಿರುವ ದೇವಾಲಯಗಳು ಚೀನಿ ಪ್ರವಾಸಿಗ ಹ್ಯೂಯೆನ್‌ತ್ಸಾಂಗ್, ಅರಬ್ ಇತಿಹಾಸಕಾರ ತಬರಿ ಅವರ ಬರಹಗಳೂ ಕೂಡ ಇವರ ಚರಿತ್ರೆಗೆ ಮುಖ್ಯ ಆಧಾರಗಳಾಗಿವೆ.

### ರಾಜವಂಶದ ಹೆಸರು

ಶಾಸನಗಳಲ್ಲಿ ಬಳಕೆಯಾಗಿರುವ 'ಚಲ್ಕ್ಯ', 'ಚಲಿಕ್ಯ', 'ಚಲುಕ್ಯ', ಪದವನ್ನು ಜೇಮ್ಸ್ ಬರ್ಜೆಸ್ (೧೮೭೪) ಹಾಗೂ ಹೆನ್ರಿಕಜಿನ್ಸ್ (೧೯೨೬) ಎಂಬ ವಿದ್ವಾಂಸರು 'ಚಾಲುಕ್ಯ' ಎಂದು ಬಳಸಿದಾಗ, ಉಳಿದವರೂ ಕೂಡ ಹಾಗೆಯೇ ಬಳಸುತ್ತಾ ಬಂದರು. ಬಾದಾಮಿ ಅರಸರಿಗೆ ಸಂಬಂಧಿಸಿದಂತೆ ಆದಿಯ 'ಆಕಾರ' ರೂಪ 'ಚಾಲುಕ್ಯ'ವು ತೀರಾ ಅಪರೂಪ. ಆದ್ದರಿಂದ ಚಲುಕ್ಯ ಎಂಬುದು ಈ ರಾಜವಂಶದ ಸರಿಯಾದ ಹೆಸರೇ ಹೊರತು ಚಾಲುಕ್ಯ ಎಂದಲ್ಲ ಎಂದು ಹೇಳಲಾಗಿದೆ.

### ಮೂಲ

ಬಾದಾಮಿ ಚಾಲುಕ್ಯರ ಮೂಲದ ಬಗೆಗೆ ಖಚಿತವಾಗಿ ಏನನ್ನು ಹೇಳಲು ಸಾಧ್ಯವಿಲ್ಲ. ಈ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ವಿದ್ಯಾಪತಿ ಬಿಲ್ಹಣನು, ಹತ್ತನೇ ಶತಮಾನದ ಶಾಸನಗಳು ಮತ್ತು ಇತರ ಬರಹಗಾರರು ಈ ಪದದ ಸುತ್ತ ಕಥೆಗಳನ್ನು ಹೆಣೆದಿದ್ದಾರೆ.

ಕಲ್ಯಾಣಿ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಆಸ್ಥಾನ ಕವಿಯಾಗಿದ್ದ ವಿದ್ಯಾಪತಿ ಬಿಲ್ಹಣನು "ಸೃಷ್ಟಿಕರ್ತ ಬ್ರಹ್ಮದೇವನು ಇಂದ್ರನ ವಿನಂತಿಯ ಮೇರೆಗೆ ಧರ್ಮಸ್ಥಾಪನೆಗಾಗಿ ತನ್ನ ಬೊಗಸೆಯಿಂದ (ಚಲುಕ) ಯೋಧನೊಬ್ಬನನ್ನು ಸೃಷ್ಟಿಸಿದನೆಂದೂ, ಅವನೇ ಈ ವಂಶದ ಮೂಲ ಪುರುಷ. ಈ ವಂಶದ ಹಾರೀತ ಮತ್ತು ಮಾನವ್ಯ ಎಂಬುವರು ದುಷ್ಟರನ್ನು ಹತ್ತಿಕ್ಕಿ

ಚಾಲುಕ್ಯ ವಂಶದ ಅಭಿವೃದ್ಧಿಗೆ ಕಾರಣರಾದರು. ಇವರ ಮೂಲಸ್ಥಾನ ಅಯೋಧ್ಯೆ, ಕಾರಣಾಂತರದಿಂದ ಅವರು ದಕ್ಷಿಣ ಭಾರತಕ್ಕೆ ಬಂದು ನೆಲಸಿದರೆಂದು'' *ವಿಕ್ರಮಾಂಕದೇವ ಚರಿತೆ*ಯಲ್ಲಿ ತಿಳಿಸಿದ್ದಾನೆ.

ದ್ರೋಣನ ಚಲುಕದಿಂದ, ಅಶ್ವತ್ಥಾಮನ ಚಲುಕದಿಂದ ಚಾಲುಕ್ಯರು ಉದ್ಭವಿಸಿದರೆಂದು ಹೇಳುವ ಬೇರೆ ಶಾಸನಗಳಿವೆ. ಮತ್ತೊಂದು ಕಥೆಯ ಪ್ರಕಾರ ಇವರು ಅಯೋಧ್ಯೆಯಲ್ಲಿದ್ದವರೆಂದೂ, ದಕ್ಷಿಣಾಪಥಕ್ಕೆ ವಲಸೆ ಬಂದು ರಾಷ್ಟ್ರಕೂಟರ ದೊರೆ ಇಂದ್ರನನ್ನು ಸೋಲಿಸಿದರೆಂದೂ ತಿಳಿಯುತ್ತದೆ. ಇವೆಲ್ಲವೂ ಊಹಾಪೋಹಗಳಿಂದ ಕೂಡಿದ ಹೇಳಿಕೆಗಳೇ ಹೊರತು ಸತ್ಯಸಂಗತಿಯನ್ನು ಹೊಂದಿಲ್ಲ. ಕೆಲವು ವಿದ್ವಾಂಸರು ಚಲುಕ್ಯ ವಂಶದ ಹೆಸರಿನ ಮೂಲವನ್ನು ಕನ್ನಡದಲ್ಲಿ ಹುಡುಕುವ ಪ್ರಯತ್ನ ಮಾಡಿದ್ದಾರೆ. ಚಲುಕ್ಯರ ಭಾಷೆ ಕನ್ನಡ ಎಂಬುದನ್ನು ಅವರ ಹೆಸರುಗಳು ಸಮರ್ಥಿಸುತ್ತವೆ. 'ಪೊಲಕೇಸಿ', 'ಎರೆಯಪ್ಪ', 'ಅಂಬೇರಾ', 'ಕೊಕ್ಕುಲಿ', 'ಬುದ್ಧವರಸ' ಮೊದಲಾದ ಹೆಸರುಗಳಿಂದ ಅವರ ಭಾಷೆ ಕನ್ನಡ ಎಂಬುದನ್ನು ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ. 'ಚಲುಕಿ', 'ಚಲ್ಕಿ', 'ಸಲುಕಿ' ಇವು ಸಲ್ಕಿ ಎಂಬ ಕನ್ನಡ ಪದದ ರೂಪಗಳೆಂದೂ, 'ಸಲ್ಕಿ' ಎಂಬುದು ಒಂದು ಕೃಷಿ ಉಪಕರಣವೆಂದೂ ಸಮೀಕರಿಸಿ ಎಸ್.ಸಿ. ನಂದೀಮಠರು ಚಲುಕ್ಯರು ಬಾದಾಮಿ ಪರಿಸರದ ಕೃಷಿಕರಾಗಿರಬಹುದು ಎಂದು ಹೇಳಿದ್ದಾರೆ.

ಸಲ್ಕಿ ಎಂಬುದು ಕೃಷಿ ಉಪಕರಣವಾಗಿರದೆ ಸಲ್ಲಕಿ ಎಂಬ ವೃಕ್ಷದ ಹೆಸರು. ಸಲ್ಲಕಿ ಎಂದರೆ ಬೆಳವಲ ಮರ. ಉತ್ತರ ಕರ್ನಾಟಕದ ಐಹೊಳೆ-ಬಾದಾಮಿ ಪರಿಸರದಲ್ಲಿ ಸಾಕಷ್ಟು ಕಾಣಸಿಗುವ ಮರವಾಗಿದೆ. ಚಲುಕ್ಯರು ಕೂಡ ಕದಂಬರಂತೆ 'ಮಾನವ್ಯಗೋತ್ರ ಹಾರೀತಿ ಪುತ್ರ'ರೆಂದು ಹೇಳಿಕೊಂಡರಲ್ಲದೆ ಧರ್ಮಾಚರಣೆ-ಆಡಳಿತ ವ್ಯವಸ್ಥೆಗಳನ್ನು ಅವರಂತೆಯೇ ಮುಂದುವರಿಸಿದ್ದರು. ಈ ಮನೋಭೂಮಿಕೆಯುಳ್ಳ ಅವರು ಕದಂಬರು ಕದಂಬ ವೃಕ್ಷವನ್ನು ತಮ್ಮ ಮನೆತನದ ಅಂಕಿತನಾಮವಾಗಿ ಸ್ವೀಕರಿಸಿರುವಂತೆ ಚಲುಕ್ಯರು ಸಲ್ಲಕಿ ಮರವನ್ನು ಸ್ವೀಕರಿಸಿರಬಹುದು ಎಂದು ಇತ್ತೀಚಿನ ಸಂಶೋಧನೆಗಳು ಅಭಿಪ್ರಾಯಪಟ್ಟಿವೆ. ಮೇಲಿನ ಎರಡೂ ಅಭಿಪ್ರಾಯಗಳನ್ನು ವಿಶ್ಲೇಷಿಸಿ ನೋಡಿದಾಗ ಚಾಲುಕ್ಯರು ಕನ್ನಡ ಮೂಲದವರೆಂಬುದರ ಬಗ್ಗೆ ಸಂದೇಹವಿಲ್ಲ. ಮಂಗಳೇಶನ ಬಾದಾಮಿ ಗುಹಾಶಾಸನದಿಂದ ಆರಂಭಿಸಿ ಬಹುಪಾಲು ಅವರ ಶಾಸನಗಳು ಕನ್ನಡದಲ್ಲಿಯೇ ಇರುವುದರಿಂದ ಅವರ ಕನ್ನಡ ಮೂಲದ ಬಗೆಗೆ ಹೆಚ್ಚಿನ ಒತ್ತು ಬರುತ್ತದೆ. ಇವರು 'ವರಾಹ'ವನ್ನು ತಮ್ಮ ರಾಜಲಾಂಛನವಾಗಿರಿಸಿಕೊಂಡಿದ್ದರು.

## ರಾಜಕೀಯ ಚರಿತ್ರೆ

ಚಾಲುಕ್ಯರಾಜ ಮನೆತನದ ಚರಿತ್ರೆಯು ಜಯಸಿಂಹ (ಕ್ರಿ.ಶ. ೫೦೦-೫೨೦)ನಿಂದ ಪ್ರಾರಂಭವಾಗುತ್ತದೆ. ಮಹಾಕೂಟ ಸ್ತಂಭಶಾಸನವು ಇವನನ್ನು ಕುಬೇರನಿಗೆ ಹೋಲಿಸಿದೆ. ಐಹೊಳೆಯ ಪ್ರಶಸ್ತಿಯು ಜಯಸಿಂಹನನ್ನು ಮಹಾಯೋಧನೆಂದೂ ಚಂಚಲೆಯಾದ ರಾಜಲಕ್ಷ್ಮಿಯನ್ನು ನಿಗ್ರಹಿಸಿದವನೆಂದೂ ಹೇಳಿದೆ. ರಣರಾಗನು (ಕ್ರಿ.ಶ. ೫೨೦-೫೪೦) ಈತನ

ಮಗ. ಇವನು ತಂದೆಯಂತೆ ಯೋಧನೂ, ಸದ್ಗುಣಿಯೂ ಆಗಿದ್ದನೆಂದು ಮಹಾಕೂಟ ಸ್ತಂಭ ಶಾಸನವು ಹೊಗಳಿದೆ. ಐಹೊಳೆಯ ಶಾಸನವು ಇವನನ್ನು ದಿವ್ಯಶಕ್ತಿ ಸಮನ್ವಯಿತ, ಜಗದೇಕನಾಥ ಎಂಬ ಅನೇಕ ವಿಶೇಷಣಗಳಿಂದ ಬಣ್ಣಿಸಿದೆ. ಇಬ್ಬರೂ ಪ್ರಾಯಶಃ ಕದಂಬ ಸೈನ್ಯಾಧಿಕಾರಿಗಳಾಗಿ ಐಹೊಳೆಯಲ್ಲಿ ಆಡಳಿತವನ್ನು ಮಾಡಿರಬಹುದು.

**ಒಂದನೆ ಪುಲಿಕೇಶಿ (ಕ್ರಿ.ಶ ೫೪೦-೫೬೬)**

ಚಾಲುಕ್ಯ ಸಾಮ್ರಾಜ್ಯದ ನಿಜವಾದ ಸಂಸ್ಥಾಪಕ ಅರಸು ಮೊದಲನೇ ಪುಲಕೇಶಿ. ಯುದ್ಧತಂತ್ರದಲ್ಲಿ ನಿಪುಣನಾಗಿದ್ದ ಇವನು ಆಯಕಟ್ಟಿನ ಸ್ಥಳವಾದ ವಾತಾಪಿ (ಬಾದಾಮಿ) ಯನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು, ರಾಜ್ಯದ ಸುಭದ್ರತೆಗಾಗಿ ಬಲಾಢ್ಯ ಕೋಟೆಯನ್ನು ಕಟ್ಟಿಸಿದನು. ಕ್ರಿ.ಶ.೫೪೩ರಲ್ಲಿ ಕಟ್ಟಿಸಿದ ಈ ಕೋಟೆ ದಕ್ಷಿಣ ಭಾರತದ ಪ್ರಾಚೀನ ಕೋಟೆಗಳಲ್ಲಿ ಒಂದಾಗಿದೆ. ಬಾದಾಮಿಯಲ್ಲಿರುವ ಕ್ರಿ.ಶ. ೫೪೩ ರ ಶಾಸನ ಇವನನ್ನು 'ಚಲಿಕ್ಯವಲ್ಲಭೇಶ್ವರ' ಎಂದು ಕರೆದಿದೆ. ಬಂಡೆಗಳನ್ನು ಕೊರೆದು ದೇವಾಲಯ ನಿರ್ಮಿಸುವ ಕಾರ್ಯವನ್ನು ಪ್ರಾರಂಭಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಇವನಿಗೆ ಸತ್ಯಾಶ್ರಯ, ರಣವಿಕ್ರಮ, ಶ್ರೀಪೃಥ್ವಿವಲ್ಲಭ ಎಂಬ ಬಿರುದುಗಳಿದ್ದವು. ಈತನು ಅಶ್ವಮೇಧಯಾಗವನ್ನು ಮಾಡಿದನು. ನಿಜವಾಗಿಯೂ ಇವನೇ ಕದಂಬರನ್ನು ಸೋಲಿಸಿ ಈ ರಾಜವಂಶದ ನಿಜಸ್ಥಾಪಕ ನೆನಿಸಿಕೊಂಡಿದ್ದಾನೆ. ಸೇಂದ್ರಕ ವಂಶದ ಶ್ರೀವಲ್ಲಭ ಭಾನುಶಕ್ತಿ ಇವನ ಸಾಮಂತನಾಗಿದ್ದನು. ಬಪ್ಪುರ ವಂಶದ ದುರ್ಲಭದೇವಿಯೂ ಮತ್ತು ಇಂದೂಕಾಂತಿಯೂ ಅವನ ಇಬ್ಬರು ರಾಣಿಯರು.

**ಒಂದನೆ ಕೀರ್ತಿವರ್ಮ (ಕ್ರಿ.ಶ ೫೬೭-೫೯೮)**

ಒಂದನೆ ಪುಲಿಕೇಶಿಯು ರಾಜ್ಯದ ಬುನಾದಿಯನ್ನು ಭದ್ರಪಡಿಸಿದರೆ, ಅದನ್ನು ವಿಸ್ತರಿಸಿ ವಾತಾಪಿಯನ್ನು ವಾಸ್ತು ಮತ್ತು ಶಿಲ್ಪಗಳಿಂದ ಸಿಂಗರಿಸಿದ ಕೀರ್ತಿಯು ಕೀರ್ತಿವರ್ಮನಿಗೆ ಸಲ್ಲುತ್ತದೆ. ಐಹೊಳೆ ಶಾಸನವು ಈತನನ್ನು 'ವಾತಾಪ್ಯಃ ಪ್ರಥಮವಿಧಾತಾ' ಎಂದು ವರ್ಣಿಸುತ್ತದೆ. ನಳರು, ಮೌರ್ಯರು ಮತ್ತು ಕದಂಬರನ್ನು ಸೋಲಿಸಿ ಅವರ ರಾಜ್ಯಗಳನ್ನು ಸೇರಿಸಿಕೊಂಡನು. ಕದಂಬರಿಂದ ಉತ್ತರ ಕರ್ನಾಟಕದ ಭಾಗವನ್ನು, ಮೌರ್ಯರಿಂದ ಕೊಂಕಣ ರಾಜ್ಯವನ್ನು, ನಳರಿಂದ ಪೂರ್ವದ ನಳವಾಡಿ (ಕರ್ನೂಲರು-ಬಳ್ಳಾರಿ) ಪ್ರದೇಶವನ್ನು ವಶಪಡಿಸಿ ಕೊಂಡು ರಾಜ್ಯವನ್ನು ಎಲ್ಲಾ ದಿಕ್ಕುಗಳಿಗೆ ವಿಸ್ತರಿಸಿದನು. ರಾಜ್ಯವಿಸ್ತರಣೆಯ ಜೊತೆಗೆ ವಾತಾಪಿ ಯನ್ನು ಗುಹಾಲಯಗಳಿಂದ ಅಲಂಕರಿಸುವ ಕಲಾತ್ಮಕ ಚಟುವಟಿಕೆಗಳಲ್ಲಿ ತೊಡಗಿದನು. ಬಾದಾಮಿಯ ಅತ್ಯಂತ ಭವ್ಯ ಹಾಗೂ ಸುಂದರವಾದ ವೈಷ್ಣವ ಗುಹಾಲಯದ ನಿರ್ಮಾಣ ಈತನ ಕಾಲದಲ್ಲಿ ಆರಂಭವಾಯಿತು. ಶ್ರೀವಲ್ಲಭ ಸೇನಾ ನಂದರಾಜನು ತನ್ನ ಮಗಳನ್ನು ಕೀರ್ತಿವರ್ಮನಿಗೆ ವಿವಾಹ ಮಾಡಿಕೊಟ್ಟನು. ಇವನೂ ಕೂಡ ಯಜ್ಞ-ಯಾಗಾದಿಗಳನ್ನು ಆಚರಿಸಿ ಕ್ರಿ.ಶ. ೫೯೭ ರಲ್ಲಿ ಮರಣ ಹೊಂದಿದನು.

**ಮಂಗಳೇಶ (ಕ್ರಿ.ಶ ೫೯೮-೬೧೮)**

ಕೀರ್ತಿವರ್ಮನ ಪುತ್ರರಾದ ಎರಡನೆ ಪುಲಿಕೇಶಿ, ವಿಷ್ಣುವರ್ಧನ, ಧಾರಾಶ್ರಯ ಜಯಸಿಂಹ, ಬುದ್ದವಾರಸ ಇನ್ನೂ ಪ್ರಾಪ್ತವಯಸ್ಸಿಗೆ ಬಂದಿಲ್ಲದೆ ಇದ್ದುದರಿಂದ ಆತನ ತಮ್ಮನಾದ ಮಂಗಳೇಶ ರಾಜ್ಯದ ಆಡಳಿತದ ಹೊಣೆಯನ್ನು ವಹಿಸಿಕೊಂಡನು. ತುಂಬಾ ಆಶೋತ್ತರಗಳನ್ನು ಹೊಂದಿದ್ದ ಇವನು ಅಧಿಕಾರ ವಹಿಸಿಕೊಂಡ ಕೆಲವೇ ವರ್ಷಗಳಲ್ಲಿ ಉತ್ತರದ ದಂಡಯಾತ್ರೆ ಕೈಗೊಂಡನು. ಶಂಕರಗಣ ಮತ್ತು ಬುಧವರ್ಮ ಎಂಬ ಕಲಚೂರಿ ರಾಜರನ್ನು ಸೋಲಿಸಿದನು. ಈ ಯುದ್ಧಗಳಲ್ಲಿ ಅಪಾರ ದ್ರವ್ಯರಾಶಿಯನ್ನು ಸ್ವಾದೀನಪಡಿಸಿ ಕೊಂಡು ಮಕುಟೇಶ್ವರ ದೇವರಿಗೆ ಅರ್ಪಿಸಿ ಮಹಾಕೂಟದಲ್ಲಿ ಧರ್ಮ ಸ್ತಂಭವನ್ನು ಸ್ಥಾಪಿಸಿ ದನು. ಉರುರಣ ಪರಾಕ್ರಮ, ಪರಮ ಭಾಗವತ ಎಂಬ ಬಿರುದಾಂಕಿತನಾದ ಮಂಗಳೇಶನು ಅಣ್ಣನಿಗೆ ಪುಣ್ಯ ಲಭಿಸಲಿ ಎಂದು ಬಾದಾಮಿಯಲ್ಲಿ ಭವ್ಯವಾದ ವಿಷ್ಣುಗೃಹವನ್ನು (ಕ್ರಿ.ಶ. ೫೭೮) ಕೀರ್ತಿವರ್ಮನ ಕಾಲದಲ್ಲಿಯೇ ನಿರ್ಮಿಸಲು ಆರಂಭಿಸಿದರೂ ಅವನ ಮರಣಾನಂತರ ಪೂರ್ಣಗೊಳಿಸಿದನು. ಇವನು ಐಹೊಳೆಯ ರಾವಳಫಡಿ ಗುಹಾಲಯವನ್ನು ನಿರ್ಮಿಸಿದನು. ದೃಢ ನಿರ್ಧಾರ, ಬಲಸತ್ವ, ಧೈರ್ಯ, ಪೌರುಷ, ತ್ಯಾಗ ಜೊತೆಗೆ ಮಾಧುರ್ಯ ಮತ್ತು ಗಾಂಭೀರ್ಯಗಳನ್ನು ಹೊಂದಿದ್ದನೆಂದು ವರ್ಣಿಸಲಾಗಿದೆ. ಇಷ್ಟೆಲ್ಲಾ ಗುಣಗಳನ್ನು ಹೊಂದಿದ್ದ ಮಂಗಳೇಶನು ತನ್ನ ಅಣ್ಣನ ಮರಣಾನಂತರ ಅಧಿಕಾರ ಮತ್ತನಾದನು. ಅಧಿಕಾರ ದಾಹವು ಮಂಗಳೇಶನ ವ್ಯಕ್ತಿತ್ವಕ್ಕೆ ಮಸಿ ಬಳಿಯಿತು. ತನ್ನ ಅಣ್ಣನ ಮಗನಾದ ಪುಲಿಕೇಶಿಯು ಪ್ರಾಪ್ತ ವಯಸ್ಕನಾದರೂ ಮಂಗಳೇಶನು ಅವನಿಗೆ ರಾಜ್ಯವನ್ನು ಬಿಟ್ಟುಕೊಡಲಿಲ್ಲ. ತನ್ನ ಮಗನನ್ನೇ ಮುಂದಿನ ದೊರೆಯನ್ನಾಗಿ ಮಾಡಬೇಕೆಂದು ಆಶಿಸಿದ್ದನು. ಇದನ್ನು ತಿಳಿದ ಪುಲಿಕೇಶಿಯು ದಂಗೆಯೇಳಬೇಕಾಯಿತು. ಇದಕ್ಕಾಗಿ ಅವನು ರಾಜ್ಯ ಬಿಟ್ಟುಹೋಗಿ ತನ್ನ ಬೆಂಬಲಿಗರನ್ನು ಒಟ್ಟುಗೂಡಿಸಿಕೊಂಡು ಕೊನೆಗೆ ಚಿಕ್ಕಪ್ಪನ ಮೇಲೆ ಎರಗಿದನು. ಬಾಣರ ನೆರವನ್ನು ಪಡೆದಿದ್ದ ಪುಲಿಕೇಶಿಗೂ ಮತ್ತು ಮಂಗಳೇಶನಿಗೂ ನಾಡನೂರು ಗ್ರಾಮದ ಎಳ್ಪಟ್ಟು ಸಿಂಭಿಗೆ ಎಂಬ ರಣರಂಗದಲ್ಲಿ ಯುದ್ಧವಾಗಿ ಪುಲಿಕೇಶಿಯು ಮಂಗಳೇಶನನ್ನು ಕೊಂದು ತನ್ನ ಹಕ್ಕಿನ ಸಿಂಹಾಸನವನ್ನು ಕ್ರಿ.ಶ. ೬೧೦ ರಲ್ಲಿ ದಕ್ಕಿಸಿಕೊಂಡನು.

**ಇಮ್ಮಡಿ ಪುಲಿಕೇಶಿ (ಕ್ರಿ.ಶ ೬೧೦-೬೪೨)**

ಬಾದಾಮಿ ಚಾಲುಕ್ಯರ ಪ್ರಸಿದ್ಧ ದೊರೆ ಎರಡನೇ ಪುಲಿಕೇಶಿ. ಸಾಮ್ರಾಜ್ಯ ನಿರ್ಮಾಣದಲ್ಲಿ ಯಶಸ್ಸು ಸಾಧಿಸಿದ್ದ. ಇವನು ಅಸಾಧಾರಣ ಧೈರ್ಯಶಾಲಿ, ರಾಜಕೀಯ ಚತುರ, ದೂರದೃಷ್ಟಿ ಉಳ್ಳವನೂ ಆಗಿದ್ದನು. ಮಹಾಪರಾಕ್ರಮಿ ಕೀರ್ತಿವರ್ಮನ ಹಿರಿಯ ಮಗನಾದ ಇವನು ಸಿಂಹಾಸನವನ್ನು ದಕ್ಕಿಸಿಕೊಳ್ಳಲು ತನ್ನ ಚಿಕ್ಕಪ್ಪನಾದ ಮಂಗಳೇಶನೊಡನೆ ಹೋರಾಡ ಬೇಕಾಯಿತು. ಕೊನೆಗೆ ಯಶಸ್ಸು ಪಡೆದ ಈತನ ಆಳ್ವಿಕೆ ಕ್ರಿ.ಶ ೬೧೦ ರಲ್ಲಿ ಆರಂಭವಾಯಿತು. ಪಟ್ಟಾಭಿಷಿಕ್ತನಾದ ತರುವಾಯದಲ್ಲೇ ಅವನು ರಾಜ್ಯದ ಒಳಗೂ ಹಾಗೂ ಹೊರಗೂ ಅವನು ದಂಗೆಗಳನ್ನು ಎದುರಿಸಬೇಕಾಯಿತು. ಆರಂಭದಲ್ಲಿದ್ದ ಗೊಂದಲ ಮತ್ತು ಅವ್ಯವಸ್ಥೆಗಳ

ಪ್ರಯೋಜನವನ್ನು ಪಡೆದ ಇಬ್ಬರು ನಾಯಕರಾದ ಅಪ್ಪಾಯಿಕ ಮತ್ತು ಗೋವಿಂದ ಇತರರ ಜೊತೆ ಸೇರಿ ದಂಗೆ ಎದ್ದರು. ಇವರು ತಮ್ಮ ಗಜ ಸೈನ್ಯದೊಂದಿಗೆ ಭೀಮಾನದಿಯ ದಡದಿಂದ ಉತ್ತರಕ್ಕೆ ನುಗ್ಗಿದರು. ಆದರೆ ಪುಲಿಕೇಶಿಯ ಬಲದೆದುರು ಅವರು ನಿಲ್ಲಲು ಸಾಧ್ಯವಾಗಲಿಲ್ಲ. ಅಪ್ಪಾಯಿಕನು ಹೆದರಿ ಪಲಾಯನ ಮಾಡಿದನು, ಗೋವಿಂದ ಸೋತು ಶರಣಾದನು. ಹೀಗೆ ಹಠಾತ್ತನೆ ಸಂಭವಿಸಿದ ದಂಗೆಗಳು ಪುಲಿಕೇಶಿಗೆ ರಾಜ್ಯದಲ್ಲಿ ಶಾಂತಿ ಮತ್ತು ಸುವ್ಯವಸ್ಥೆಯನ್ನು ರೂಪಿಸಲು ಪ್ರಬಲಸೈನ್ಯದ ಅವಶ್ಯಕತೆಯನ್ನು ಮನಗಾಣಿಸಿತು. ಆದುದರಿಂದ ಪುಲಿಕೇಶಿಯು ಸೈನ್ಯವನ್ನು ಸಂಘಟಿಸಿ ವಿಸ್ತೃತಗೊಳಿಸಿ ಸಾಮಂತ, ಮಾಂಡಲಿಕರ ದಂಗೆಯನ್ನು ಹತ್ತಿಕ್ಕಲು ಹಾಗೂ ರಾಜ್ಯವನ್ನು ವಿಸ್ತರಿಸಲು ಚೈತ್ರ ಯಾತ್ರೆಯನ್ನು ಕೈಗೊಂಡನು. 'ಐಹೊಳೆಯ ಪ್ರಶಸ್ತಿ ಶಾಸನ'ವು ಇಮ್ಮಡಿ ಪುಲಿಕೇಶಿಯ ಪರಾಕ್ರಮ ಸಾಧನೆಗಳನ್ನು ಸುದೀರ್ಘವಾಗಿ ಬಿಂಬಿಸಿದೆ.

### ದಿಗ್ವಿಜಯಗಳು: ಮೊದಲ ಹಂತ

ಚತುರ್ದಿಶೆಗಳಲ್ಲಿ ಜಯ ಸಾಧಿಸಲು ಪಣತೊಟ್ಟ ಪುಲಿಕೇಶಿಯ ಮೊದಲ ಬಲಿ ಕದಂಬರು. ಇಮ್ಮಡಿ ಪುಲಿಕೇಶಿಯ ಪೂರ್ವಜರು ಕದಂಬರನ್ನು ಹತ್ತಿಕ್ಕಿದರೂ ಅವರು ಪೂರ್ಣವಾಗಿ ಸೋಲೊಪ್ಪಿರಲಿಲ್ಲ. ಅವರಿನ್ನೂ ಸ್ವತಂತ್ರರಾಜ್ಯದ ಕನಸನ್ನೇ ಕಾಣುತ್ತಿದ್ದರು. ಪುಲಿಕೇಶಿ ಅವರ ಬನವಾಸಿ ಮತ್ತು ಇತರ ಕೋಟೆಗಳನ್ನು ಗೆದ್ದುಕೊಂಡನು. ತುಳುನಾಡಿನ ಆಳೂಪರ ಕಡೆಗೆ ನಡೆದು ಅವರನ್ನು ಸೋಲಿಸಿದನು. ಗಂಗರು ಸಹ ಶರಣಾಗತರಾದರು. ಅಲ್ಲಿಂದ ಮುಂದೆ ಮೌರ್ಯವಂಶದ ಕೊಂಕಣ ರಾಜರನ್ನು ಪರಾಭವಗೊಳಿಸಿ ಪಶ್ಚಿಮ ಸಮುದ್ರದ ಸಿರಿ ಎನಿಸಿದ್ದ ಘುರಾಪುರಿಯನ್ನು ನೌಕಾದಳದಿಂದ ಧ್ವಂಸಗೊಳಿಸಿದನು. (ಮುಂಬೈ ಬಳಿಯ ಎಲಿಫೆಂಟಾ) ಹೀಗೆ ಪಶ್ಚಿಮದ ಯಶಸ್ಸಿನ ವಿಜಯ ಯಾತ್ರೆ ಉತ್ತರ ದಿಕ್ಕಿನತ್ತ ಹೊರಟಿತು. ಈತನ ಪ್ರತಾಪವನ್ನರಿತ ಲಾಟ, ಮಾಳವ ಗೂರ್ಜರರು ಶರಣಾಗತರಾದರು.

### ಪುಲಿಕೇಶಿ ಮತ್ತು ಹರ್ಷವರ್ಧನ

ಪುಲಿಕೇಶಿಯ ಸಮಕಾಲೀನ ದೊರೆಯಾಗಿದ್ದ ಸಕಲ ಉತ್ತರಪಥೇಶ್ವರನೆನಿಸಿದ್ದ ಕನೂಜಿನ ದೊರೆ ಹರ್ಷವರ್ಧನನ ರಾಜ್ಯದಾಹ ಅವನನ್ನು ದಕ್ಷಿಣ ಭಾರತದ ಮೇಲೆ ಯುದ್ಧ ಮಾಡುವಂತೆ ಪ್ರೇರೇಪಿಸಿತು. ಈ ಬೆಳವಣಿಗೆ ಸ್ವಾಭಾವಿಕವಾಗಿ ಪುಲಿಕೇಶಿಯನ್ನು ಯುದ್ಧ ಸನ್ನದ್ಧನನ್ನಾಗಿಸಿತು. ಇಬ್ಬರೂ ಪರಸ್ಪರ ನರ್ಮದಾ ನದಿಯ ತೀರದಲ್ಲಿ ಹೋರಾಡಿದರು. ಐಹೊಳೆ ಶಾಸನವು ಪುಲಿಕೇಶಿ ಹರ್ಷನ ಸೈನ್ಯವನ್ನು ವಿಂಧ್ಯ ಪರ್ವತದ ಉತ್ತರದಲ್ಲಿ ಸಂಧಿಸಿ ಅದು ಹಿಮ್ಮೆಟ್ಟುವಂತೆ ಮಾಡಿದನೆಂದು ತಿಳಿಸುತ್ತದೆ. ಈ ವಿಷಯವನ್ನು ಚೀನಾ ದೇಶದ ಯಾತ್ರಿಕ ಹ್ಯೂಯೆನ್‌ತ್ಸಾಂಗ್‌ನು "ಹಿರಿಯ ದೊರೆ ಶಿಲಾದಿತ್ಯನು ಈ ಸಮಯದಲ್ಲಿ ಪೂರ್ವ ಮತ್ತು ಪಶ್ಚಿಮ ಭಾರತದ ಮೇಲೆ ದಂಡೆತ್ತಿ ಹೋದ ದೂರದ ಮತ್ತು ಸಮೀಪದ ರಾಜ್ಯಗಳು ಅವನಿಗೆ ವಿಧೇಯವಾಗಿದ್ದವು. ಆದರೆ ಮೊ-ಹ-ಲ-ಚವು (ಮಹಾರಾಷ್ಟ್ರ) ಅವನಿಗೆ ಅಧೀನ ವಾಗಲು ನಿರಾಕರಿಸಿತು" ಎಂದು ತಿಳಿಸಿದ್ದಾನೆ. ಬಾಣನ *ಹರ್ಷಚರಿತೆ*ಯು ರಾಜನು ಐದು

ಖಂಡಗಳಿಂದ ಸೇನೆಯನ್ನು ಸಂಗ್ರಹಿಸಿಕೊಂಡು ಎಲ್ಲಾ ದೇಶಗಳ ಅತ್ಯುತ್ತಮ ನಾಯಕರನ್ನು ಕರೆಸಿ, ತಾನೇ ಸೇನೆಯ ಮುಖ್ಯಸ್ಥನಾಗಿ ಈ ಜನರನ್ನು ದಂಡಿಸಿ ಸೋಲಿಸಲು ಹೊರಟನು. ಆದರೆ ಅದು ನಿಷ್ಫಲವಾಯಿತು ಎಂದು ತಿಳಿಸುತ್ತದೆ. ಈ ವಿಜಯದಿಂದ ಪುಲಿಕೇಶಿಯು 'ಪರಮೇಶ್ವರ' ಎಂಬ ಬಿರುದನ್ನು ಗಳಿಸಿದನು. ಪುಲಿಕೇಶಿಯ ಈ ವಿಜಯದಿಂದ ವಿಂಧ್ಯಾ ಪರ್ವತ ಮತ್ತು ನರ್ಮದಾ ನದಿ ಅವನ ಸಾಮ್ರಾಜ್ಯದ ಉತ್ತರದ ಎಲ್ಲೆ ಆಯಿತು. ಇದರೊಂದಿಗೆ ಪುಲಿಕೇಶಿಯ ಯುದ್ಧ ಸಾಹಸಗಳ ಮೊದಲನೆ ಹಂತವು ಮುಕ್ತಾಯವಾಯಿತು. ಇವನು ೯೯,೦೦೦ ಹಳ್ಳಿಗಳುಳ್ಳ ಮಹಾರಾಷ್ಟ್ರಕ್ಕೆ ಅಧಿಪತಿಯಾದನು.

**ಎರಡನೆ ಹಂತ**

ಪುಲಿಕೇಶಿಯು ತನ್ನ ಎರಡನೆ ಹಂತದ ದಿಗ್ವಿಜಯದಲ್ಲಿ ತನ್ನ ರಾಜ್ಯದ ಪೂರ್ವ ಮತ್ತು ದಕ್ಷಿಣ ಭಾಗದ ಪ್ರಬಲ ರಾಜರುಗಳನ್ನು ಸದೆ ಬಡಿದು ಅಜೇಯನೆನಿಸಿದನು. ಪೂರ್ವದಲ್ಲಿ ಅವನು ಪಾಂಡು ವಂಶೀಯರ ಕೋಸಲ, ಗಂಗರಾಜರ ಕಳಿಂಗ ರಾಜ್ಯಗಳನ್ನು ಗೆದ್ದನು. ಅವನ ವಿಜಯಯಾತ್ರೆ ಪಿಷ್ಟಪುರದವರೆಗೂ ಮುಂದುವರಿದು ಆ ದುರ್ಗವನ್ನು ನಾಶಪಡಿಸಿ ದನು. ವೆಂಗಿ ಪ್ರಾಂತ್ಯದ ಭಾಗವಾದ ಕುಣಾಲ ಪ್ರದೇಶವನ್ನು ವಶಪಡಿಸಿಕೊಂಡನು.

**ಚಾಲುಕ್ಯ-ಪಲ್ಲವರ ಮೊದಲನೆ ಘರ್ಷಣೆ**

ಪುಲಿಕೇಶಿಯ ಕಾಲದಲ್ಲಿ ಆರಂಭವಾದ ಚಾಲುಕ್ಯ-ಪಲ್ಲವರ ಘರ್ಷಣೆ ಅನೇಕ ವರ್ಷಗಳ ಕಾಲ ಮುಂದುವರಿಯಿತು. ಪೂರ್ವ ದಂಡಯಾತ್ರೆಗಳಿಂದ ಉಲ್ಲಸಿತನಾಗಿದ್ದ ಪುಲಿಕೇಶಿಯು ತನ್ನ ಸೇನೆ 'ಕರ್ನಾಟ ಬಲ'ವನ್ನು ದಕ್ಷಿಣದತ್ತ ತಿರುಗಿಸಿದನು. ಆಗ ದಕ್ಷಿಣದಲ್ಲಿ ಕಾಂಚಿ ಪುರವನ್ನು ಕೇಂದ್ರವಾಗಿಟ್ಟುಕೊಂಡು ಪಲ್ಲವರ ಮಹೇಂದ್ರವರ್ಮ ಆಳ್ವಿಕೆ ಮಾಡುತ್ತಿದ್ದನು. ಪುಲಿಕೇಶಿಯ ಸೈನ್ಯ ಪಲ್ಲವರ ರಾಜ್ಯದ ಮೇಲೆ ಧಾಳಿ ಮಾಡಿತು. ಭೀಕರ ಯುದ್ಧ 'ಪಳ್ಳಲೂರು' ಬಳಿ ನಡೆಯಿತು. ಅಪಮಾನಕರವಾಗಿ ಸೋತ ಪಲ್ಲವ ಮಹೇಂದ್ರವರ್ಮ ಕಾಂಚಿ ಕೋಟೆಯ ಹಿಂಭಾಗದಲ್ಲಿ ಅಡಗಿಕೊಂಡ. ಕೆಲಕಾಲದಲ್ಲಿಯೇ ಆ ನೋವಿನಿಂದ ಅವನು ಮರಣ ಹೊಂದಿದನು. ಪಲ್ಲವರ ವಿರೋಧಿಗಳಾಗಿದ್ದ ಚೋಳರು, ಪಾಂಡ್ಯರು ಮತ್ತು ಕೇರಳದ ಅರಸರೊಂದಿಗೆ ಸ್ನೇಹದೊಂದಿಗೆ ವರ್ತಿಸಿದ ಪುಲಿಕೇಶಿ ತನ್ನ ರಾಜಕೀಯ ಚತುರತೆಯನ್ನು ಮೆರೆದ.

ದೀರ್ಘಕಾಲದ ಯುದ್ಧಗಳಿಂದ ಆಯಾಸಗೊಂಡಿದ್ದ ಇಮ್ಮಡಿ ಪುಲಿಕೇಶಿಯು ಸಂಭ್ರಮ ಸಂತೋಷಗಳಿಂದ ತನ್ನ ರಾಜಧಾನಿಯನ್ನು ಪ್ರವೇಶಿಸಿದನು. ವಿಸ್ತಾರವಾಗಿದ್ದ ಸಾಮ್ರಾಜ್ಯದಲ್ಲಿ ಸ್ಥಿರವಾದ ದಕ್ಷ ಆಡಳಿತವನ್ನು ರೂಪಿಸಬೇಕಾಗಿತ್ತು. ಅವನ ಸಹೋದರರಲ್ಲಿ ಒಬ್ಬನಾದ ಧಾರಾಶ್ರಯ ಜಯಸಿಂಹನನ್ನು ನಾಸಿಕ್ ಪ್ರಾಂತ್ಯದ ಆಡಳಿತಾಧಿಕಾರಿಯನ್ನಾಗಿಯೂ ಮತ್ತು ಇನ್ನೊಬ್ಬ ತಮ್ಮ ಕುಬ್ಜ ವಿಷ್ಣುವರ್ಧನನ್ನು ವೆಂಗಿ ಪ್ರಾಂತ್ಯದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿದನು. ಇವನೇ ಮುಂದೆ ವೆಂಗಿ ಚಾಲುಕ್ಯ ವಂಶದ ಮೂಲಪುರುಷನಾದನು.

ಪುಲಿಕೇಶಿಯ ನೇರ ಆಳ್ವಿಕೆಗೆ ಒಳಪಟ್ಟು ಸತ್ಯಾಶ್ರಯ ಧ್ರುವರಾಜನು ರೇವತಿ ದ್ವೀಪದ ಅಧಿಕಾರಿಯಾದನು. ಹೀಗೆ ಮಾಡಿದ ಎಲ್ಲಾ ಸುವ್ಯವಸ್ಥಿತ ಕ್ರಮಗಳಿಂದ ಚಾಲುಕ್ಯರಾಜ್ಯದ ಕೀರ್ತಿಯು ತುತ್ತತುದಿಯನ್ನು ಮುಟ್ಟಿತು. ಅವನ ರಾಜ್ಯವು ಉತ್ತರದಲ್ಲಿ ನರ್ಮದಾ ನದಿ ಯಿಂದ ಆರಂಭವಾಗಿ ದಕ್ಷಿಣದಲ್ಲಿ ಕಾವೇರಿ ನದಿಯವರೆಗೂ ವ್ಯಾಪಿಸಿತ್ತು. ಇವನು ಪರ್ಷಿಯಾ ದೇಶದ ದೊರೆ ಎರಡನೆಯ ಖುಸ್ರುವಿನ ಆಸ್ಥಾನಕ್ಕೆ ರಾಯಭಾರಿಯನ್ನು ಕಳುಹಿಸಿದನೆಂದೂ, ಅವನೂ ಇದಕ್ಕೆ ಪ್ರತಿಯಾಗಿ ರಾಯಭಾರಿಯನ್ನು ಪುಲಿಕೇಶಿಯ ಆಸ್ಥಾನಕ್ಕೆ ಕಳುಹಿಸಿದನೆಂದೂ ಹೇಳಲಾಗಿದೆ. ಚೀನಿ ಯಾತ್ರಿಕ ಹ್ಯೂಯೆನ್‌ತ್ಸಾಂಗ್‌ನು ಈ ಕಾಲದಲ್ಲಿ ಚಾಲುಕ್ಯ ರಾಜ್ಯವನ್ನು ಸಂದರ್ಶಿಸಿ ಸೊಗಸಾಗಿ ವರ್ಣಿಸಿದ್ದಾನೆ- "ನಗರದ ಸುತ್ತಳತೆಯು ೩೦ ಕಿ.ಮೀ ಇದ್ದಿತು. ಮಣ್ಣು ಸಮೃದ್ಧವಾಗಿದೆ, ಫಲವತ್ತಾಗಿದೆ. ವಿಪುಲವಾಗಿ ಧಾನ್ಯಗಳನ್ನು ಇಲ್ಲಿ ಬೆಳೆಯಲಾಗುತ್ತದೆ. ಜನರು ಎತ್ತರವಾಗಿದ್ದಾರೆ. ದಾರ್ಢ್ಯವುಳ್ಳವರು, ಮೂಢ ನಂಬಿಕೆಗಳನ್ನುಳ್ಳವರು".

## ಚಾಲುಕ್ಯ-ಪಲ್ಲವರ ಎರಡನೆಯ ಘರ್ಷಣೆ

ಚಾಲುಕ್ಯ ಪಲ್ಲವರ ವಂಶಪಾರಂಪರಿಕ ಮೊದಲ ಹೋರಾಟದಲ್ಲಿ ಪುಲಿಕೇಶಿ ವಿಜಯ ಗಳಿಸಿದ್ದರೂ ಅದು ಬಹುಕಾಲ ಉಳಿಯಲಿಲ್ಲ. ಪಲ್ಲವ ಮಹೇಂದ್ರವರ್ಮನ ಮಗ ಮೊದಲನೆ ನರಸಿಂಹವರ್ಮ ಸಿಂಹಾಸನವನ್ನೇರಿದ ದಿನದಿಂದಲೇ ತನ್ನ ತಂದೆ ಅನುಭವಿಸಿದ ಸೋಲಿನ ಸೇಡನ್ನು ತೀರಿಸಿಕೊಳ್ಳಲು ತವಕಿಸುತ್ತಿದ್ದನು. ಪಲ್ಲವರನ್ನು ಸಂಪೂರ್ಣವಾಗಿ ಗೆಲ್ಲುವ ಉದ್ದೇಶದಿಂದ ಪುಲಿಕೇಶಿಯು ಅವರ ಮೇಲೆ ದಂಡೆತ್ತಿ ಬಂದನು. ಸೇಡಿನ ದಳ್ಳುರಿ ಯಲ್ಲಿ ಕುದಿಯುತ್ತಿದ್ದ ಪಲ್ಲವರ ಸೇನೆಯ ಮುಂದೆ ಚಾಲುಕ್ಯರ ಸೈನ್ಯವು ಪೇರಿಯಾಲ, ಮಣಿಮಂಗಲ, ಸುರಮಾರಗಳಲ್ಲಿ ನಡೆದ ಕದನಗಳಲ್ಲಿ ಪರಾಭವಗೊಂಡಿತು. ಈ ಅಪಜಯವು ಎಷ್ಟೊಂದು ನಿರ್ಣಾಯಕವಾಗಿತ್ತೆಂದರೆ ಪಲ್ಲವ ಸೈನ್ಯವು ರಾಜಧಾನಿ ಬಾದಾಮಿಗೆ ನುಗ್ಗಿ ಈ ಘಟನೆಯ ಜ್ಞಾಪಕಾರ್ಥಕವಾಗಿ ವಿಜಯಸ್ತಂಭವನ್ನು ನೆಡುವವರೆಗೂ ಹೋಯಿತು. ಮೊದಲನೇ ನರಸಿಂಹವರ್ಮ ಕ್ರಿ.ಶ. ೬೪೨ ರಲ್ಲಿ 'ವಾತಾಪಿಕೊಂಡ' ಎಂಬ ಬಿರುದನ್ನು ಧರಿಸಿಕೊಂಡನು. ಸುಂದರವಾಗಿದ್ದ ವಾತಾಪಿ ನಗರವನ್ನು ಲೂಟಿ ಮಾಡಿದ ನರಸಿಂಹವರ್ಮನು ಬಾದಾಮಿಯ ಬಂಡೆಯ ಮೇಲೆ ಶಾಸನವನ್ನು ಕೆತ್ತಿಸಿದನು. ಈ ಯುದ್ಧಾನಂತರ ಪುಲಿಕೇಶಿಯ ಹೆಸರು ಎಲ್ಲಿಯೂ ಕೇಳಿ ಬರುವುದಿಲ್ಲ. ಪ್ರಾಯಶಃ ಅವನು ಯುದ್ಧದಲ್ಲಿ ಮರಣ ಹೊಂದಿರ ಬಹುದೆಂದು ಹೇಳಬಹುದು.

ಪಲ್ಲವ ನರಸಿಂಹವರ್ಮನು ಕಂಚಿಗೆ ಹಿಂತಿರುಗುವುದಕ್ಕೆ ಮೊದಲು ತನ್ನ ಸೈನ್ಯದ ಒಂದು ಭಾಗವನ್ನು ಬಾದಾಮಿಯಲ್ಲಿ ಇರಿಸಿದನು. ಮುಂದಿನ ಸುಮಾರು ಹದಿಮೂರು ವರ್ಷಗಳ ವರೆಗೆ ಬಾದಾಮಿಯ ಮೇಲೆ ಚಾಲುಕ್ಯರಿಗೆ ಯಾವುದೇ ಪ್ರಭುತ್ವ ಇರಲಿಲ್ಲ. ಇದು ಚಾಲುಕ್ಯರ ಇತಿಹಾಸದಲ್ಲಿ ಕತ್ತಲೆ ಕಾಲವಾಗಿದೆ. ಹೀಗೆ ಕ್ರಿ.ಶ ೬೪೩-೬೫೫ ರವರೆಗಿನ ಕಾಲ ಚಾಲುಕ್ಯ

ಸಾಮ್ರಾಜ್ಯದ ಗ್ರಹಣದ ದಿನಗಳಾಗಿದ್ದವು. ಪಲ್ಲವರನ್ನು ಹೊಡೆದಟ್ಟಿ ರಾಜ್ಯವನ್ನು ಪುನರ್ ಸ್ಥಾಪನೆ ಮಾಡಿದವನು ಪುಲಿಕೇಶಿಯ ಮಕ್ಕಳಲ್ಲಿ ಒಬ್ಬನಾದ ಒಂದನೇ ವಿಕ್ರಮಾದಿತ್ಯ.

**ಒಂದನೆ ವಿಕ್ರಮಾದಿತ್ಯ (ಕ್ರಿ.ಶ. ೬೫೫-೬೮೧)**

ಕುಸಿದುಹೋಗಿದ್ದ ವಂಶದ ಘನತೆ ಗೌರವಗಳನ್ನು ಪುನಃ ಸ್ಥಾಪಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಕ್ರಿ.ಶ ೬೫೫ ರಲ್ಲಿ ತನ್ನ ರಾಜ್ಯವನ್ನು ಪಲ್ಲವರಿಂದ ಮುಕ್ತಗೊಳಿಸಿ ಬಾದಾಮಿಯಲ್ಲಿ ತನ್ನ ಆಳ್ವಿಕೆಯನ್ನು ಆರಂಭಿಸಿದನು. ನಿಸ್ತೇಜವಾಗಿದ್ದ ಸಾಮ್ರಾಜ್ಯಕ್ಕೆ ಜೀವಕಳೆ ತಂದನು. ಈ ಸಾಹಸದಲ್ಲಿ 'ಚಿತ್ರಕಂಠ' ಎಂಬ ಕುದುರೆ ಹಾಗೂ 'ಖಡ್ಗ' ಆತನಿಗೆ ನೆರವಾದವು. ಪಲ್ಲವ ನರಸಿಂಹವರ್ಮ, ಆತನ ಮಗ ಇಮ್ಮಡಿ ಮಹೇಂದ್ರವರ್ಮ ಹಾಗೂ ಆತನ ಮಗನಾದ ಮೊದಲನೆ ಪರಮೇಶ್ವರವರ್ಮ ಹೀಗೆ ಮೂರು ತಲೆಮಾರಿನ ಪಲ್ಲವರನ್ನು ವಿಕ್ರಮಾದಿತ್ಯನು ಸೋಲಿಸಿದನು. ಪಲ್ಲವರ ಪರಮೇಶ್ವರ ವರ್ಮನನ್ನು ಸೋಲಿಸಿ ಕಂಚಿಯನ್ನು ಗೆದ್ದುಕೊಂಡು ತನ್ನ ತಂದೆಯ ಸೋಲಿನ ಸೇಡನ್ನು ತೀರಿಸಿಕೊಂಡನು. ತನ್ನ ತಂದೆ, ತಾತಂದಿರು ಪರಮಭಾಗವತರೆಂದು ಹೆಸರಾದಂತೆ ವಿಕ್ರಮಾದಿತ್ಯನು 'ಪರಮಮಾಹೇಶ್ವರ'ನೆಂದು ಖ್ಯಾತನಾದನು. ಈತನ ನಂತರ ಬಂದ ಚಾಲುಕ್ಯ ಅರಸರು ಶೈವಧರ್ಮಕ್ಕೆ ಹೆಚ್ಚಿನ ಒಲವು ತೋರಿದ್ದರಿಂದ ಬಾದಾಮಿ ಪರಿಸರವು ಶೈವ ಕೇಂದ್ರವೆನಿಸಿತು.

ವಿಕ್ರಮಾದಿತ್ಯನ ನಂತರ ಕ್ರಮವಾಗಿ ವಿನಯಾದಿತ್ಯ, ವಿಜಯಾದಿತ್ಯರು ರಾಜ್ಯಭಾರ ಮಾಡಿದರು. ಅನಂತರ ಬಂದವನೆ ಎರಡನೆ ವಿಕ್ರಮಾದಿತ್ಯ, ಕ್ರಿ.ಶ. ೭೩೩ ರಲ್ಲಿ ರಾಜ್ಯ ಸೂತ್ರಾಧಿಕಾರ ಪಡೆದ ಇವನು ಕ್ರಿ.ಶ. ೭೪೪ ರವರೆಗೂ ಅಧಿಕಾರದಲ್ಲಿದ್ದನು. ಚಾಲುಕ್ಯರಿಗೆ ತೊಂದರೆ ಕೊಡುತ್ತಿದ್ದ ಪಲ್ಲವರನ್ನು ಸಂಪೂರ್ಣವಾಗಿ ನಿರ್ಮೂಲ ಮಾಡಲು ತೀರ್ಮಾನಿಸಿದ. ಇವನು ಪಲ್ಲವರಾಜ ನಂದಿವರ್ಮನನ್ನು ಸಂಪೂರ್ಣವಾಗಿ ಸೋಲಿಸಿ ಅವನ ರಾಜಧಾನಿ ಕಂಚಿಯನ್ನು ಆಕ್ರಮಿಸಿಕೊಂಡನು. ಅವನು ಕಂಚಿಯನ್ನು ವಶಪಡಿಸಿಕೊಂಡರೂ ಅದನ್ನು ನಾಶಮಾಡದೆ ಅಲ್ಲಿಯ ರಾಜಸಿಂಹೇಶ್ವರ ದೇವಾಲಯಕ್ಕೆ ಸುವರ್ಣರಾಶಿಯನ್ನು ಬಿಟ್ಟುಕೊಟ್ಟು ತನ್ನ ಔದಾರ್ಯವನ್ನು ತೋರಿದ. ಈ ವಿಜಯದ ನೆನಪಿಗಾಗಿ ಅಲ್ಲಿನ ದೇವಾಲಯದಲ್ಲಿ ಕನ್ನಡ ಭಾಷೆಯಲ್ಲಿ ಶಾಸನವನ್ನು ಹಾಕಿಸಿದನು. ಇವನು ಹೈಹಯ ವಂಶದ ರಾಜಕುಮಾರಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿಯರನ್ನು ವಿವಾಹವಾಗಿದ್ದನು. ತಮ್ಮ ಪತಿಯು ಕಂಚಿಯನ್ನು ಮೂರುಬಾರಿ ಗೆದ್ದ ಸವಿನೆನಪಿಗಾಗಿ ಇವರು ಪಟ್ಟದಕಲ್ಲಿನಲ್ಲಿ ಕ್ರಮವಾಗಿ ಲೋಕೇಶ್ವರ (ವಿರೂಪಾಕ್ಷ) ಮತ್ತು ತ್ರೈಲೋಕೇಶ್ವರ (ಮಲ್ಲಿಕಾರ್ಜುನ) ದೇವಾಲಯಗಳನ್ನು ಕಟ್ಟಿಸಿದರು. ಸ್ಥಪತಿಗಳಾದ ಸರ್ವಸಿದ್ಧಿ ಆಚಾರಿ ಮತ್ತು ಗುಂಡ ಅನಿವಾರಿತಾಚಾರಿಗೆ ಪರ್ಜರೆಪು ಬಿರುದು ನೀಡಿ ಸನ್ಮಾನಿಸಲಾಯಿತು. ಪಟ್ಟದಕಲ್ಲಿನ ಪಾಪನಾಥ ಗುಡಿ ಐಹೊಳೆಯ ಪ್ರಸಿದ್ಧ ದುರ್ಗಾ ಗುಡಿ ಇವನ ಕಾಲದಲ್ಲಿ ನಿರ್ಮಿತವಾಯಿತು. ಹೀಗೆ ಚಾಲುಕ್ಯರ ಕಲೆ ಉಚ್ಛ್ರಾಯಸ್ಥಿತಿಯನ್ನು ಮುಟ್ಟಿತು.

ಇಮ್ಮಡಿ ವಿಕ್ರಮಾದಿತ್ಯನ ನಂತರ ಇಮ್ಮಡಿ ಕೀರ್ತಿವರ್ಮನು ಕ್ರಿ.ಶ. ೭೪೪ ರಲ್ಲಿ ರಾಜಸೂತ್ರಗಳನ್ನು ಕೈಗೆತ್ತಿಕೊಂಡನು. ಆದರೆ ಇವನು ಕ್ರಿ.ಶ. ೭೫೭ ರಲ್ಲಿ ರಾಷ್ಟ್ರಕೂಟ ದಂತಿದುರ್ಗನಿಂದ ಪರಾಭವಗೊಂಡನು. ಇಮ್ಮಡಿ ಕೀರ್ತಿವರ್ಮನೆ ಚಾಲುಕ್ಯ ವಂಶದ ಕೊನೆಯ ಅರಸ. ಈತನೊಂದಿಗೆ ಎರಡು ಶತಮಾನಗಳಿಗಿಂತ ಹೆಚ್ಚುಕಾಲ ವೈಭವದಿಂದ ರಾಜ್ಯವಾಳಿದ ಚಾಲುಕ್ಯರು ಅಸ್ತಂಗತರಾದರು.

## ಸಾಂಸ್ಕೃತಿಕ ಕೊಡುಗೆಗಳು

ಕರ್ನಾಟಕದ ಚರಿತ್ರೆಯಲ್ಲಿ ಬಾದಾಮಿ ಚಾಲುಕ್ಯರ ಆಳ್ವಿಕೆ ಅತ್ಯಂತ ಶ್ರೇಷ್ಠವೂ, ವೈಭವ ಯುಕ್ತವೂ ಆದ ಒಂದು ಯುಗ. ಈ ಯುಗವು ಸೈನಿಕ ಕ್ಷೇತ್ರದಲ್ಲಿ ಹೇಗೋ ಕಲೆ ಮತ್ತು ಸಾಹಿತ್ಯರಂಗಗಳಲ್ಲೂ ಹಾಗೆಯೇ ಗಮನಾರ್ಹವಾದುದು.

### ಸಾಹಿತ್ಯ

ಚಾಲುಕ್ಯರು ಸಂಸ್ಕೃತ ಕವಿಗಳಿಗೆ ಉದಾರ ಆಶ್ರಯ ಕೊಟ್ಟರು. ಸಂಸ್ಕೃತ ವಿದ್ಯಾವಂತಿಕೆ ಅಭಿವೃದ್ಧಿ ಹೊಂದುವುದಕ್ಕೆ ಬೇಕಾದ ಅನುಕೂಲ ವಾತಾವರಣವನ್ನು ಕಲ್ಪಿಸಿದರು. ಸಂಸ್ಕೃತ ಸಾಹಿತ್ಯ ಸೃಷ್ಟಿಯನ್ನು ಉತ್ತೇಜನಗೊಳಿಸಿದರು. ಚಾಲುಕ್ಯ ವಂಶದ ಮೊಟ್ಟಮೊದಲ ರಾಜ ಒಂದನೇ ಪುಲಿಕೇಶಿಯು ಮನುಸ್ಮೃತಿ, ಪುರಾಣಗಳು, ರಾಮಾಯಣ, ಮಹಾಭಾರತಗಳಲ್ಲಿ ಪರಿಣಿತನು ಎಂದು ಶಾಸನಗಳಲ್ಲಿ ವರ್ಣಿತನಾಗಿದ್ದಾನೆ. ಎರಡನೇ ಪುಲಿಕೇಶಿಯ ದಂಡನಾಯಕ ರವಿಕೀರ್ತಿಯು ಜೈನ ಕವಿಯಾಗಿದ್ದು ಸಂಸ್ಕೃತದಲ್ಲಿ 'ಐಹೊಳೆ ಪ್ರಶಸ್ತಿ' ಶಾಸನವನ್ನು ರಚಿಸಿದ್ದಾನೆ. ಆ ಶಾಸನದಲ್ಲಿ ರವಿಕೀರ್ತಿಯು ಪದವಿನ್ಯಾಸದ ಹೃದಯಂಗಮತೆ, ಭಾವನಾ ಸಮೃದ್ಧಿ, ಛಂದೋರೂಪಗಳ ವೈವಿಧ್ಯಗಳಿಂದ ತಾನು ಶ್ರೇಷ್ಠಕವಿಗಳಾದ ಕಾಳಿದಾಸ ಮತ್ತು ಭಾರವಿಗೆ ಸರಿಸಮಾನನೆಂದು ಹೇಳಿಕೊಂಡಿದ್ದಾನೆ. ಇದನ್ನು ಗಮನಿಸಿದರೆ ರವಿಕೀರ್ತಿ ಸಂಸ್ಕೃತದಲ್ಲಿ ಒಳ್ಳೆಯ ಕವಿಯೇ ಆಗಿದ್ದಿರಬೇಕೆಂದು ತೋರುತ್ತದೆ. ಈ ಕಾಲದ ಅತ್ಯಂತ ಗಮನಾರ್ಹವಾದ ಸಂಸ್ಕೃತದ ಸಾಹಿತ್ಯ ಕೃತಿ, ಚಂದ್ರಾದಿತ್ಯರಾಜನ ಪತ್ನಿಯೂ ಎರಡನೆ ಪುಲಿಕೇಶಿಯ ಸೊಸೆಯೂ ಆದ ರಾಣಿ ವಿಜಯಾ ಅಥವಾ ಬಿಜ್ಜಾ ಅಥವಾ ವಿಜ್ಜಿಕಾ ಎಂಬ ಕವಯತ್ರಿ ಬರೆದ ಕೌಮುದಿ ಮಹೋತ್ಸವ ಎಂಬ ನಾಟಕ. ಕವಿ ರಾಜಶೇಖರನು ಇವಳ ಕಾವ್ಯಶಕ್ತಿಯನ್ನು "ಸರಸ್ವತಿ ಎಂದು ಪ್ರಸಿದ್ಧಳಾದ ಕರ್ನಾಟಕದ ವಿಜಯಾಂಕ ಕಾಳಿದಾಸನ ನಂತರ ವೈದರ್ಭಿ ಶೈಲಿಗೆ ತವರುಮನೆಯಾಗಿದ್ದಾಳೆ" ಎಂದು ಮುಕ್ತಕಂಠದಿಂದ ಹೊಗಳಿದ್ದಾನೆ. ಈ ವಂಶದ ಮನೆಯ ಮಾತಾದ ಕನ್ನಡವು ಆ ಕಾಲದಲ್ಲಿ ಪ್ರಮುಖ ಸ್ಥಾನವನ್ನು ಪಡೆಯಿತು. ಕನ್ನಡವನ್ನು ಅಧಿಕೃತ ಭಾಷೆಯನ್ನಾಗಿ ಬಳಸಿದ ಪ್ರಾಚೀನ ರಾಜವಂಶ ಇದು. ಇವರ ಶಾಸನಗಳು ಕನ್ನಡದಲ್ಲಿಯೂ ರಚಿತವಾದವು. ಬಾದಾಮಿಯಲ್ಲಿರುವ ವೈಷ್ಣವ ಗುಹೆಯಲ್ಲಿ ಒಂದು ಕನ್ನಡ ಶಾಸನವಿದೆ. ಅದು ಮಂಗಳೇಶನ ಕಾಲದಲ್ಲಿ ರಚಿತವಾದುದು. ೭ ಅಥವಾ ೮ನೇ ಶತಮಾನದ್ದೆಂದು ಹೇಳಬಹುದಾದ ಕಪ್ಪೆ ಅರಭಟ್ಟನ ಶಾಸನವನ್ನು ಕನ್ನಡದ ತ್ರಿಪದಿಯಲ್ಲಿ ರಚಿಸಲಾಗಿದೆ.

ಇದು ಕನ್ನಡದ ಮೊಟ್ಟ ಮೊದಲ ತ್ರಿಪದಿ. ನೃಪತುಂಗನ ಕಾಲಕ್ಕಿಂತ ಹಿಂದಿನ ಕನ್ನಡ ಸಾಹಿತ್ಯದ ಸ್ವರೂಪವನ್ನು ತಿಳಿಯಲು ಇದು ಸಹಕಾರಿಯಾಗಿದೆ. *ಕರ್ಣಾಟೇಶ್ವರ ಕಥಾ* ಎಂಬ ಕನ್ನಡ ಕಾವ್ಯವು ಇಮ್ಮಡಿ ಪುಲಿಕೇಶಿಯನ್ನು ಕುರಿತು ರಚಿತವಾಗಿರಬೇಕು ಎಂದು ಎಂ. ಚಿದಾನಂದ ಮೂರ್ತಿಯವರು ಹೇಳಿದ್ದಾರೆ. ಹೀಗೆ ಚಾಲುಕ್ಯರ ಕಾಲದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡೂ ಪರಸ್ಪರ ಸಹಕರಿಸುತ್ತ ಬೆಳೆದವು. ಹಾಗೆಯೇ ಈ ಕಾಲದ ಶಾಸನಗಳು ಎರಡೂ ಭಾಷೆಗಳಲ್ಲಿ ರಚಿತವಾದವು. ವಾಡಿಕೆಯಾಗಿ ಬಳಸಲ್ಪಟ್ಟ ಭಾಷೆ ಸಂಸ್ಕೃತವಾದರೂ ಅದು ಕನ್ನಡ ಲಿಪಿಯಲ್ಲಿರುತ್ತಿತ್ತು. ಆದುದರಿಂದ ಎರಡೂ ಭಾಷೆಗಳೂ ಆಡಳಿತ ಭಾಷೆಯ ಸ್ಥಾನಮಾನ ಪಡೆದುಕೊಂಡಿದ್ದವೆನ್ನಬಹುದು.

## ಧರ್ಮ

ಬಾದಾಮಿ ಚಾಲುಕ್ಯ ವಂಶದ ಆರಂಭಿಕ ಅರಸರು ವೈದಿಕ ಮತಾವಲಂಬಿಗಳು. ಅವರು ವಿಷ್ಣು ಮತ್ತು ಶಿವನ ಮಹಾಭಕ್ತರು ತ್ರಿಮೂರ್ತಿಗಳ ಪೂಜಾ ಪಂಥ ರೂಢಿಯಲ್ಲಿತ್ತು. 'ವರಾಹ ಲಾಂಛನ'ವನ್ನು ತಮ್ಮ ಮುದ್ರೆಗಳ ಮೇಲೆ ಹಾಕಿಸಿದ್ದರು. ಇವರ ಕುಲದೇವತೆ ವಿಷ್ಣು. ಇವರ ಅನೇಕ ಶಾಸನಗಳು ವಿಷ್ಣುಸ್ತುತಿಯಿಂದಲೇ ಆರಂಭವಾಗುತ್ತವೆ. ಅವರ ಪರಮಭಾಗವತ, ಶ್ರೀವಲ್ಲಭ, ಪೃಥ್ವೀವಲ್ಲಭ ಮುಂತಾದ ಬಿರುದುಗಳು ಅವರು ವಿಷ್ಣು ಭಕ್ತರು ಎಂಬುದನ್ನು ಸ್ಪಷ್ಟಪಡಿಸುತ್ತವೆ. ಬಾದಾಮಿಯ ೩ನೇ ಗುಹೆಯಲ್ಲಿನ ಸರ್ಪಶಯನ ವಾಗಿರುವ ವಿಷ್ಣುವಿನ ಪಾದದೆಡೆಯಲ್ಲಿ ಕುಳಿತ ಲಕ್ಷ್ಮಿ, ವರಾಹ ಮುಂತಾದ ವಿಗ್ರಹಗಳು ಆ ಕಾಲದ ವೈಷ್ಣವ ಮತದ ಜನಪ್ರಿಯತೆಯನ್ನು ತಿಳಿಸುತ್ತವೆ. ಆರಂಭಿಕ ರಾಜರು ವೈಷ್ಣವ ಮತಾವಲಂಬಿಗಳಾಗಿದ್ದರೂ ಅನಂತರ ಬಂದವರು ಶಿವಭಕ್ತರಾದರು. ಬಾದಾಮಿಯ ಮೊದಲನೆ ಗುಹೆಯಲ್ಲಿನ ನಟರಾಜ, ಹರಿಹರ, ಅದೇ ಕಾಲಕ್ಕೆ ಸೇರಿದ ಮಹಾಕೂಟ ದೇವಾಲಯಗಳು ಶೈವಮತದವು. 'ಪರಮ ಮಾಹೇಶ್ವರ' ಎಂದು ಕರೆಯಲ್ಪಟ್ಟಿರುವ ಚಾಲುಕ್ಯರ ಮೊದಲನೇ ವಿಕ್ರಮಾದಿತ್ಯನು ಶಿವಾರಾಧಕನಾಗಿದ್ದನು. ದೊರೆಗಳು ಭವ್ಯವಾದ ಶಿವದೇಗುಲಗಳನ್ನು ಕಟ್ಟಿಸಿ ನಗರಗಳನ್ನು ಸುಂದರವಾಗುವಂತೆ ಮಾಡುತ್ತಿದ್ದರು. ವೇದಗಳಲ್ಲಿ ಪ್ರತಿಪಾದಿತವಾಗಿರುವ ಪೂಜಾವಿಧಿಗಳು ಜೊತೆಯಲ್ಲಿಯೇ ರೂಢಿಯಲ್ಲಿದ್ದವು. ಅಶ್ವಮೇಧ, ವಾಜಪೇಯ, ಅಗ್ನಿಷ್ಟೋಮ ಮುಂತಾದ ಅನೇಕ ಯಾಗಗಳನ್ನು ಚಾಲುಕ್ಯ ಅರಸರು ಮಾಡಿದರು. ಇದೇ ಕಾಲದಲ್ಲಿಯೆ ಜೈನಮತವೂ ಏಳಿಗೆಯಲ್ಲಿತ್ತು. ಐಹೊಳೆ ಶಾಸನ ಕರ್ತೃವಾದ ರವಿಕೀರ್ತಿಯು ಜೈನ ಮತಾವಲಂಬಿಯಾಗಿದ್ದು ಎರಡನೆ ಪುಲಿಕೇಶಿಯ ಅಪಾರ ಅನುಗ್ರಹಕ್ಕೆ ಪಾತ್ರನಾಗಿದ್ದನು. ಅವನ ಮೇಗುತಿ ಜಿನಾಲಯವನ್ನು ಕಟ್ಟಿಸಿದನು. ವಿನಯಾದಿತ್ಯ, ವಿಜಯಾದಿತ್ಯ, ವಿಕ್ರಮಾದಿತ್ಯರು ಜೈನ ಗುರುಗಳಿಗೆ ಹೇರಳವಾಗಿ ದಾನ ನೀಡಿದುದಲ್ಲದೆ ಜೈನ ಬಸದಿ ಕಟ್ಟಲೂ ಸಹಾಯ ಮಾಡಿದರು. ಶ್ರೀವರ್ಧದೇವ ಮತ್ತು ಪೂಜ್ಯಪಾದರು ಆ ಕಾಲದ ಪ್ರಖ್ಯಾತ ಜಿನಾಚಾರ್ಯರು. ಬಾದಾಮಿಯಲ್ಲಿನ ಜೈನ ಗುಹೆಯೊಂದರ ಮತ್ತು ಐಹೊಳೆಯಲ್ಲಿನ ತೀರ್ಥಂಕರರ ವಿಗ್ರಹಗಳು ಆ ಕಾಲದಲ್ಲಿದ್ದ ಅವರ ಮತಸಹಿಷ್ಣುತೆಯನ್ನು

ಮತ್ತು ಜೈನಮತವು ಇತರರಿಂದ ಪಡೆಯುತ್ತಿದ್ದ ಗೌರವವನ್ನು ಸೂಚಿಸುತ್ತವೆ. ಬೌದ್ಧ ಮತವು ಕ್ಷೀಣ ದಿಶೆಯಲ್ಲಿದ್ದರೂ ಪೂರ್ತಿ ನಶಿಸಿಹೋಗಿರಲಿಲ್ಲ. ಹ್ಯೂಯೆನ್‌ತ್ಸಾಂಗನು "ಬನವಾಸಿಯಲ್ಲಿ ನೂರಾರು ಬೌದ್ಧ ವಿಹಾರಗಳು, ಸ್ತೂಪಗಳು, ಸಾವಿರಾರು ಭಿಕ್ಷು ಭಿಕ್ಷುಣಿಯರು" ಇದ್ದರೆಂದು ತಿಳಿಸುತ್ತಾನೆ. ಹೀಗೆ ಸರ್ವಧರ್ಮ ಸಹಿಷ್ಣುತೆ ಎಲ್ಲ ಚಾಲುಕ್ಯ ದೊರೆಗಳಲ್ಲೂ ಇತ್ತು. ಈ ರೀತಿಯ ಸಮತಾ ಭಾವನೆ ಜೈನ ಮತ್ತು ಬ್ರಾಹ್ಮಣ ದೇವಾಲಯಗಳೆರಡರ ನಿರ್ಮಾಣಕ್ಕೂ ಕಾರಣವಾಯಿತು.

## ಕಲೆ ಮತ್ತು ವಾಸ್ತುಶಿಲ್ಪ

ಕ್ರಿ.ಶ. ೫೪೦ ರಲ್ಲಿ ಬಾದಾಮಿಯಲ್ಲಿ ಚಾಲುಕ್ಯ ರಾಜ್ಯ ಸ್ಥಾಪನೆಗೊಂಡು ಉತ್ತರದ ನರ್ಮದಾ ನದಿಯಿಂದ ಹಿಡಿದು ದಕ್ಷಿಣದ ಕಾವೇರಿಯವರೆಗಿನ ಪ್ರದೇಶವು ಒಂದೇ ಹಿತಕರ ಆಳ್ವಿಕೆಗೆ ಒಳಪಟ್ಟು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ಥಿರತೆ ಉಂಟಾದದ್ದು ಈ ದಖ್ಖನ್ ಪ್ರದೇಶದಲ್ಲಿ; ಬಹುದೊಡ್ಡ ಸಂಖ್ಯೆಯಲ್ಲಿ ದೇವಾಲಯಗಳು, ಬಸದಿಗಳು ಮತ್ತು ಚೈತ್ಯಾಲಯಗಳು ನಿರ್ಮಾಣಗೊಳ್ಳುವುದಕ್ಕೆ ಕಾರಣವಾಯಿತು. ಮೊದಲನೆ ಪುಲಿಕೇಶಿಯಿಂದ ಬಾದಾಮಿಯಲ್ಲಿ ದುರ್ಗಮವಾದ ಕೋಟೆಯ ಕಟ್ಟುವಿಕೆಯಿಂದ ಆರಂಭಗೊಂಡ ಈ ನಿರ್ಮಾಣ ಕಾರ್ಯ ಸತತವಾಗಿ ಎರಡು ಶತಮಾನಗಳವರೆಗೆ ಮುಂದುವರಿಯಿತು. ಚಾಲುಕ್ಯ ಅರಸರ ಸೌಂದರ್ಯ ಪ್ರಜ್ಞೆ ಮತ್ತು ಅವರು ಸ್ಥಪತಿಗಳಿಗೆ ಕೊಟ್ಟ ಪ್ರೋತ್ಸಾಹ, ಇವುಗಳ ಫಲವಾಗಿ ವಾಸ್ತುಶೈಲಿಯು ಹಲವು ರೀತಿಯಲ್ಲಿ ಅಭಿವೃದ್ಧಿಗೊಂಡಿತು. ಅವುಗಳನ್ನು ಕುರಿತು ಈಗ ವಿವರವಾಗಿ ಪರಿಶೀಲಿಸೋಣ.

ಬಾದಾಮಿ ಚಾಲುಕ್ಯರ ರಾಜಕೀಯ ಚರಿತ್ರೆಯನ್ನು ಆರಂಭದಿಂದ ತಾತ್ಕಾಲಿಕ ಪತನದವರೆಗೆ (ಕ್ರಿ.ಶ. ೫೦೦ ರಿಂದ ಕ್ರಿ.ಶ. ೬೪೨) ಪುನರುತ್ಥಾನದಿಂದ ಅಂತ್ಯದವರೆಗೆ (ಕ್ರಿ.ಶ. ೬೫೫ ರಿಂದ ಕ್ರಿ.ಶ. ೭೫೭) ಎಂದು ಎರಡು ಭಾಗ ಮಾಡಿದಂತೆ, ಇವರ ಕಾಲದ ವಾಸ್ತುಶಿಲ್ಪ ಬೆಳವಣಿಗೆಯನ್ನು ಕೂಡಾ ನಾವು ಎರಡು ಭಾಗ ಮಾಡಿ ಅಧ್ಯಯನ ಮಾಡಬಹುದು. ಅವುಗಳೆಂದರೆ ಗುಹಾಂತರ ದೇವಾಲಯಗಳು ಮತ್ತು ರಾಚನಿಕ (ಕಟ್ಟಿದ) ದೇವಾಲಯಗಳು. ಇಂತಹ ದೇವಾಲಯಗಳನ್ನು ಕರ್ನಾಟಕದ ಮಹಾಕೂಟ, ಬಾದಾಮಿ, ಐಹೊಳೆ, ಪಟ್ಟದ ಕಲ್ಲು, ಸಿದ್ದನಕೊಳ್ಳ, ಜಾಲಿಹಾಳ, ಹುನಗುಂದ, ಬನಶಂಕರಿ ಮತ್ತು ಆಂಧ್ರಪ್ರದೇಶದ ಆಲಂಪುರ, ಕೊಡವೇಲಿ, ಮಹಾನಂದಿ, ಪಾಣ್ಯಂ, ಪಾಪನಾಶನಂ ಮೊದಲಾದ ಕಡೆಗಳಲ್ಲಿ ಕಾಣಬಹುದು. ಈ ದೇವಾಲಯಗಳ ಮೂಲಕ ಬಾದಾಮಿ ಚಾಲುಕ್ಯರು ದಕ್ಷಿಣ ಭಾರತದ ವಾಸ್ತುಶಿಲ್ಪ ಶೈಲಿಯ ಬೆಳವಣಿಗೆಗೆ ಮಹತ್ತರ ಕೊಡುಗೆ ನೀಡಿದ್ದಾರೆ.

### ಗುಹಾಂತರ ದೇವಾಲಯಗಳು (ಮೊದಲನೇ ಹಂತ)

ಮೊದಲನೆಯ ಹಂತದ ವಾಸ್ತುನಿರ್ಮಾಣಗಳು ಹೆಚ್ಚಾಗಿ ನಡೆದದ್ದು ರಾಜರ ನೆಲೆವೀಡಾದ ಬಾದಾಮಿಯಲ್ಲಿ ಮತ್ತು ಶ್ರೀಮಂತ ವ್ಯಾಪಾರಿಗಳ ಊರಾದ ಐಹೊಳೆಯಲ್ಲಿ. ಬಂಡೆ

ಯೊಂದನ್ನು ಕೊರೆದು ನಿರ್ಮಿಸಲಾದ ವಾಸ್ತುರಚನೆಯೇ ಗುಹಾಲಯ. ಕಲ್ಲಿನ ಬೇಡವಾದ ಭಾಗವನ್ನು ಕೊರೆದು ತೆಗೆದು, ಬೇಕೆನಿಸಿದ ಭಾಗಗಳನ್ನು ಉಳಿಸಿಕೊಂಡು ಗುಹಾ ದೇವಾಲಯಗಳನ್ನು ಸೃಷ್ಟಿಸಲಾಗುತ್ತದೆ. ಇದು ವ್ಯವಕಲನ ಕ್ರಿಯೆ. ಇವುಗಳನ್ನು ಮೇಣಬಸ್ತಿ ಅಥವಾ ಮೇಣದ ಬಸದಿಗಳೆಂದೇ ಕರೆಯಲಾಗುತ್ತದೆ. ಬಾದಾಮಿ ಮತ್ತು ಐಹೊಳೆಯ ಕಲ್ಬೆಟ್ಟಗಳಲ್ಲಿ ಚಾಲುಕ್ಯರ ಕಾಲದ ಒಟ್ಟು ಒಂಭತ್ತು ಗುಹಾಲಯಗಳು ನಿರ್ಮಾಣಗೊಂಡಿವೆ. ಅವುಗಳಲ್ಲಿ ನಾಲ್ಕು ಬಾದಾಮಿಯಲ್ಲೂ ಉಳಿದವು ಐಹೊಳೆಯಲ್ಲೂ ಇವೆ. ಬಾದಾಮಿಯ ನಾಲ್ಕು ಗುಹಾಲಯಗಳು ಉತ್ತರಾಭಿಮುಖವಾಗಿವೆ. ಈ ಗುಹಾಲಯಗಳಿರುವ ಗುಡ್ಡದ ಬುಡದಲ್ಲಿ ವಿಶಾಲವಾದ ಅಗಸ್ತ್ಯ ತೀರ್ಥವಿದೆ. ಹೀಗೆ ಜಲಾಶಯ ಇಲ್ಲವೇ ನದಿತೀರದಲ್ಲಿ ದೇವಾಲಯ ನಿರ್ಮಿಸುವುದು ಚಾಲುಕ್ಯರ ವಾಸ್ತು ವಿಶೇಷತೆ ಎನಿಸಿದೆ.

ಈ ಗುಹಾದೇವಾಲಯಗಳಲ್ಲಿ ಪ್ರಸಿದ್ಧವಾದ ಮಹಾ ವಿಷ್ಣು ಗುಹೆಯನ್ನು ಕೀರ್ತಿವರ್ಮನ ಆಳ್ವಿಕೆಯಲ್ಲಿ ಮಂಗಳೇಶನು ಕ್ರಿ.ಶ. ೫೭೮ ರಲ್ಲಿ ಕೊರೆಯಿಸಿದನು. ಮಂಗಳೇಶನ ಕನ್ನಡದ ಶಾಸನದಲ್ಲಿ ಇದನ್ನು 'ಕಲ್ಮನೆ' ಎಂದು ಕರೆಯಲಾಗಿದೆ. ಬಾದಾಮಿಯಲ್ಲಿರುವ ನಾಲ್ಕು 'ಕಲ್ಮನೆಗಳಲ್ಲಿ' ಒಂದನೆಯದು ಶಿವಾಲಯ, ಎರಡು ಮತ್ತು ಮೂರನೆಯದು ವಿಷ್ಣುಗೃಹ, ನಾಲ್ಕನೆಯದು ಜಿನಾಲಯ. ಈ ಗುಹಾಲಯಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ವಾಸ್ತು ವಿಭಾಗಗಳೆಂದರೆ ಗರ್ಭಗೃಹ, ಮಹಾಮಂಟಪ ಮತ್ತು ಮೊಗಸಾಲೆ. ಇವುಗಳಲ್ಲಿ ಗರ್ಭಗೃಹವು ಸಭಾಮಂಟಪಕ್ಕಿಂತ ಎತ್ತರದಲ್ಲಿರುವುದು ವಿಶೇಷ ಲಕ್ಷಣವಾಗಿದೆ. ಈ ಗುಹಾಲಯಗಳ ಒಳಭಾಗದ ಛಾವಣಿ ಮತ್ತು ಸ್ತಂಭಗಳು ಉಬ್ಬುಗೆತ್ತನೆಯ ಶಿಲ್ಪಗಳಿಂದ ಕಂಗೊಳಿಸುತ್ತಿವೆ. ಅರ್ಧನಾರೀಶ್ವರ, ಹರಿಹರ, ಮಹಿಷಮರ್ದಿನಿ, ನರಸಿಂಹ, ವರಾಹ, ತ್ರಿವಿಕ್ರಮ, ಅನಂತ ಶಾಯಿ, ಪರವಾಸುದೇವ ಮುಂತಾದ ಪೂರ್ಣಗಾತ್ರದ ಪ್ರತಿಮೆಗಳಿವೆ. ಒಂದನೇ ಗುಹೆಯ ಹೊರಭಾಗದಲ್ಲಿರುವ ಹದಿನೆಂಟು ಕೈಗಳ ನಟರಾಜನ ಉಬ್ಬುಶಿಲ್ಪ ತನ್ನ ಕೈಗಳ ಸಹಜ ಲಾಸ್ಯದಿಂದ ನೋಡುಗರನ್ನು ದಂಗು ಬಡಿಸುತ್ತದೆ. ಇವೆಲ್ಲವೂ ಬಿರುಸು ಮರಳುಗಲ್ಲಿನ ರಚನೆಗಳು. ಐಹೊಳೆಯಲ್ಲಿ 'ರಾವಳಪಹಡಿ' ಮತ್ತು ಜೈನ ಗುಹೆಗಳನ್ನು ಕೊರೆದಿದ್ದಾರೆ. ರಾವಳಪಹಡಿಯ ಶೈವ ಗುಹಾಲಯ, ಇಲ್ಲಿರುವ ಸಪ್ತಮಾತೃಕೆಯರ ಶಿಲ್ಪ ನಯನ ಮನೋಹರವಾದುದು.

### ರಾಚನಿಕ ದೇವಾಲಯಗಳು (ಎರಡನೆಯ ಹಂತ)

ರಾಚನಿಕ ಕಟ್ಟಡಗಳಲ್ಲಿ ಬೇಕಾದ ಭಾಗಗಳನ್ನು ತಂದು ಜೋಡಿಸಲಾಗುತ್ತದೆ. ಇದು ಸಂಕಲನ ಕ್ರಿಯೆ. ಇಂತಹ ರಚಿತ ಕಟ್ಟಡಗಳ ನಿರ್ಮಾಣ ಕಾರ್ಯವು ತಳಪಾಯದಿಂದ ಆರಂಭವಾಗಿ ಶಿಖರದಂಚಿನವರೆಗೆ ಏರುತ್ತಾ ಸಾಗುತ್ತದೆ. ಇಟ್ಟಿಗೆಯ ಕಟ್ಟಡಗಳಿಗಿಂತ ಕಲ್ಲಿನ ಕಟ್ಟಡಗಳು ಬಹುಕಾಲ ಬಾಳುವಂತಹವೆಂದು ಮನಗಂಡು ಚಾಲುಕ್ಯರು ಇಟ್ಟಿಗೆಯ ಕಟ್ಟಡಗಳಿಗೆ ಬದಲಾಗಿ ಕಲ್ಲುಗಳಿಂದ ದೇವಾಲಯದ ಕಟ್ಟಡಗಳನ್ನು ಕಟ್ಟಲು ಆರಂಭಿಸಿದರು. ಬಾದಾಮಿ ಪರಿಸರದಲ್ಲಿ ಹೇರಳವಾಗಿ ಚಾಚಿಕೊಂಡ ಕಲ್ಲಿನ ಬೆಟ್ಟಗಳು: ಸ್ತಪತಿ,

ರೂವಾರಿಗಳಿಗೆ ಪ್ರೇರಣೆ ನೀಡಿರಬೇಕು. ಇವರ ಕಾಲದಲ್ಲಿ ಐಹೊಳೆಯಲ್ಲಿ ಸುಮಾರು ೧೫೦, ಪಟ್ಟದಕಲ್ಲಿನಲ್ಲಿ ೧೨, ಬಾದಾಮಿಯಲ್ಲಿ ೨೦, ನಾಗರಾಳಿನಲ್ಲಿ ಒಂದು, ಮಹಾಕೂಟದಲ್ಲಿ ೧೦ಕ್ಕೂ ಹೆಚ್ಚು ದೇಗುಲಗಳಿವೆ.

### ಐಹೊಳೆಯ ದೇವಾಲಯಗಳು

ಚಾಲುಕ್ಯರ ಕಾಲದಲ್ಲಿ ರಾಚನಿಕ ದೇವಾಲಯಗಳ ಚಟುವಟಿಕೆಗಳು ಶ್ರೀಮಂತ ವ್ಯಾಪಾರಿಗಳ ಊರಾದ ಐಹೊಳೆಯಲ್ಲಿ ಮೊಟ್ಟ ಮೊದಲ ಬಾರಿಗೆ ಆರಂಭವಾದವು. ಆದ್ದರಿಂದ ವಿದ್ವಾಂಸರು ಇದನ್ನು "ಭಾರತೀಯ ದೇವಾಲಯದ ವಾಸ್ತುಶಿಲ್ಪದ ತೊಟ್ಟಿಲು" ಎಂದು ಕರೆಯುವರು. ಐಹೊಳೆಯ ಮಧ್ಯದಲ್ಲಿರುವ ಕೊಂತಿಗುಡಿಗಳನ್ನು ಚಾಲುಕ್ಯ ಕಾಲದ ಮೊದಲ ವಾಸ್ತುಕೃತಿಯೆನ್ನಬಹುದು. ತಲವಿನ್ಯಾಸದಲ್ಲಿ ಇದು ಕೇವಲ ಒಂದು ದೊಡ್ಡ ಹಜಾರ ಅದಕ್ಕೆ ಹೊಂದಿಕೊಂಡಂತೆ ಗರ್ಭಗುಡಿಯೂ ಇದೆ. ಆದರೆ ಇಲ್ಲಿನ ಲಾಡ್‌ಖಾನ್ ದೇವಾಲಯ ಅತ್ಯಂತ ಪ್ರಾಚೀನವಾದುದೆಂದು ಪರ್ಸಿಬ್ರೌನ್ ಅಭಿಪ್ರಾಯಪಟ್ಟಿದ್ದಾರೆ. ಇದರ ಮೇಲೆ ಗೋಪುರದಂತಹ ಸಣ್ಣ ಕೊಠಡಿಯನ್ನಿಡಲಾಗಿದೆ. ದೇಗುಲದ ವಿಕಾಸದ ಹಂತದಲ್ಲಿ ಮುಂದಿನ ಮುಖ್ಯ ದೇಗುಲವೇ ದುರ್ಗಾಗುಡಿ. ಬೌದ್ಧ ಚೈತ್ಯಾಲಯದ ವಿನ್ಯಾಸವನ್ನನುಸರಿಸಿ ಇದನ್ನು ಕಟ್ಟಲಾಗಿದೆ. ದೇವಾಲಯದ ಹಿಂಭಾಗ ಗಜಪ್ರಷ್ಠಾಕಾರವಾಗಿದೆ. ಇಲ್ಲಿನ ದೇವಾಲಯಗಳಲ್ಲಿ ಪ್ರಬುದ್ಧತೆ ಪಡೆದಿರುವ ಗುಡಿಯೆಂದರೆ ಮೇಗುತಿ ಜಿನಾಲಯ. ಇದನ್ನು ರವಿಕೀರ್ತಿಯು ಕ್ರಿ.ಶ. ೬೩೪ ರಲ್ಲಿ ನಿರ್ಮಿಸಿದನು. ಇದರಲ್ಲಿ ಗರ್ಭಗೃಹ, ಪ್ರದಕ್ಷಿಣ ಪಥಗಳೊಂದಿಗೆ ಅಂತರಾಳ, ಅರ್ಧಮಂಟಪ ಮತ್ತು ಮುಖಮಂಟಪಗಳಿವೆ. ಕಾಲಾನಂತರದಲ್ಲಿ ಮೇಗುತಿಯ ಮಾಳಿಗೆಯ ಮೇಲೆ ಮತ್ತೊಂದು ಗರ್ಭಗೃಹ ಮತ್ತು ಮುಖ ಮಂಟಪವನ್ನು ನಿರ್ಮಿಸಲಾಗಿದೆ. ಇದು ಮುಂದೆ ಅಂತಸ್ತುಗಳುಳ್ಳ ಬಸದಿಗಳ ನಿರ್ಮಾಣಕ್ಕೆ ಸ್ಫೂರ್ತಿ ನೀಡಿತು. ಹೀಗೆ ಐಹೊಳೆಯಲ್ಲಿ ಕಂಡುಬರುವಷ್ಟು ವಿಭಿನ್ನ ಶೈಲಿ ಮತ್ತು ವಿಭಿನ್ನ ತಲವಿನ್ಯಾಸ ಹೊಂದಿದ ಚಾಲುಕ್ಯ ದೇವಾಲಯಗಳು ಮತ್ತೆಲ್ಲೂ ಕಂಡುಬರುವುದಿಲ್ಲ. ವೈವಿಧ್ಯತೆಯೇ ಐಹೊಳೆಯ ದೇವಾಲಯಗಳ ಲಕ್ಷಣ.

### ಬಾದಾಮಿಯ ದೇವಾಲಯಗಳು

ದೇವಾಲಯ ಕಟ್ಟಲು ಚಾಲುಕ್ಯರು ಆಯ್ಕೆ ಮಾಡಿಕೊಂಡ ಸ್ಥಳಗಳಲ್ಲಿ ಎತ್ತರವಾದ ಗುಡ್ಡದ ತುದಿಯೂ ಒಂದು. ಬಾದಾಮಿಯಲ್ಲಿ ಮೇಲಣ ಶಿವಾಲಯ, ಕೆಳಗಣ ಶಿವಾಲಯ ಮತ್ತು ಮಾಲೆಗಿತ್ತಿ ಶಿವಾಲಯಗಳನ್ನು ಎತ್ತರವಾದ ಸ್ಥಳದಲ್ಲಿ ಕಟ್ಟಲಾಗಿದೆ. ಬೃಹತ್ ಬಂಡೆಯ ನೆತ್ತಿಯ ಮೇಲೆ ಮಾಲೆಗತ್ತಿ ಶಿವಾಲಯವು ನಿರ್ಮಿತವಾಗಿದ್ದು ನಿಸರ್ಗದ ಚೆಲುವನ್ನು ಹೆಚ್ಚಿಸಿದೆ. ಇಲ್ಲಿನ ಜಂಬುಲಿಂಗೇಶ್ವರ ದೇವಾಲಯವನ್ನು ಕ್ರಿ.ಶ. ೬೯೯ ರಲ್ಲಿ ವಿಜಯಾದಿತ್ಯನ ತಾಯಿ ವಿನಯವತಿಯು ನಿರ್ಮಿಸಿದಳು. ಬ್ರಹ್ಮ-ವಿಷ್ಣು-ಮಹೇಶ್ವರರನ್ನು ಇದರಲ್ಲಿ ಪ್ರತಿಷ್ಠಾಪನೆ ಮಾಡಲಾಗಿದೆ. ಇದು ತ್ರಿಕೂಟ ದೇವಾಲಯವಾಗಿದ್ದು ಮೂರು

ಗರ್ಭಗೃಹಗಳನ್ನೊಳಗೊಂಡಿದೆ. ಅನಂತರದ ತ್ರಿಕೂಟ ದೇವಾಲಯಗಳಿಗೆ ಇದು ಮಾದರಿಯಾಯಿತು. ಇದು ಚಾಲುಕ್ಯರ ಕಾಲದ ಏಕಮಾತ್ರ ತ್ರಿಕೂಟಾಲಯವಾಗಿದೆ.

**ಪಟ್ಟದಕಲ್ಲಿನ ದೇವಾಲಯಗಳು**

ಪಟ್ಟದಕಲ್ಲಿನಲ್ಲಿ ಪ್ರಬುದ್ಧಾವಸ್ಥೆಯ ದೇವಾಲಯಗಳನ್ನು ಕಾಣಬಹುದು. ಇಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ, ಪಾಪನಾಥ, ಗಳಗನಾಥ ಮೊದಲಾದವು ಪ್ರಖ್ಯಾತವಾಗಿವೆ. ಇವುಗಳನ್ನು 'ನಾಗರ' ಅಥವಾ 'ದ್ರಾವಿಡ' ಶೈಲಿಯಲ್ಲಿ ಕಟ್ಟಲಾಗಿದೆ. ಇವುಗಳಲ್ಲಿ ಅತ್ಯಂತ ಪ್ರಮುಖವಾದ ದೇವಾಲಯ ಎಂದರೆ ವಿರೂಪಾಕ್ಷ ದೇವಾಲಯ. ಕ್ರಿ.ಶ. ೭೪೦ ರಲ್ಲಿ ಇಮ್ಮಡಿ ವಿಕ್ರಮಾದಿತ್ಯನು ಪಲ್ಲವರನ್ನು ಗೆದ್ದು ಹಿಂತಿರುಗುವಾಗ ಪಟ್ಟದಕಲ್ಲಿಗೆ ಕಂಚಿಯಿಂದ ಹಲವು ದ್ರಾವಿಡಶೈಲಿಯ ನಿಷ್ಣಾತ ಸ್ಥಪತಿ ರೂವಾರಿಗಳನ್ನು ಬರಮಾಡಿಕೊಂಡನು. ಅವರಲ್ಲಿ ಸರ್ವಸಿದ್ಧಿ ಆಚಾರಿ ಎಂಬ ಪಲ್ಲವ ಸ್ಥಪತಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವನ್ನು ಕಟ್ಟಿದನು. ಇವನ ಜೊತೆಗೆ ಗುಂಡ ಅನಿವಾರಿತಾಚಾರಿ ಎಂಬುವನೂ ಕೂಡ ಈ ದೇವಾಲಯದ ಸ್ಥಪತಿಯಾಗಿದ್ದನು. ಇದು ಗರ್ಭಗೃಹ, ಪ್ರದಕ್ಷಿಣಪಥವನ್ನು ಒಳಗೊಂಡಿದ್ದು ದೇಗುಲದ ಮುಂದೆ ಸುಂದರವಾದ ನಂದಿ ಮಂಟಪವಿದೆ. ಮಲ್ಲಿಕಾರ್ಜುನ ದೇವಾಲಯವನ್ನು ತ್ರೈಲೋಕ್ಯಮಹಾದೇವಿಯು ತನ್ನ ಗಂಡ ಎರಡನೆ ವಿಕ್ರಮಾದಿತ್ಯನು ಕಂಚಿಯನ್ನು ಮೂರು ಬಾರಿ ಗೆದ್ದುದರ ನೆನಪಿಗಾಗಿ ನಿರ್ಮಿಸಿದಳು. ಪಟ್ಟದಕಲ್ಲಿನಲ್ಲಿರುವ ದೇವಾಲಯಗಳ ವಿಮಾನಗಳು ದ್ರಾವಿಡ ಮತ್ತು ನಾಗರ ಶೈಲಿಗಳೆರಡರಲ್ಲೂ ನಿರ್ಮಿತವಾಗಿವೆ. ಸಂಗಮೇಶ್ವರ, ವಿರೂಪಾಕ್ಷ, ಮಲ್ಲಿಕಾರ್ಜುನ, ಜೈನ ನಾರಾಯಣ, ಚಂದ್ರಶೇಖರ ದ್ರಾವಿಡ ಶೈಲಿಯಾದರೆ, ಪಾಪನಾಥ, ಜಂಭುಲಿಂಗ, ಕಾಡಸಿದ್ದೇಶ್ವರ, ಗಳಗನಾಥ ನಾಗರಶೈಲಿ ದೇವಾಲಯಗಳು. ಹೀಗೆ ಪಟ್ಟದಕಲ್ಲು 'ದೇವಾಲಯಗಳ ಪ್ರಯೋಗಶಾಲೆ' ಎನಿಸಿಕೊಂಡಿದೆ.

ಒಟ್ಟಾರೆ ಹೇಳುವುದಾದರೆ ಕರ್ನಾಟಕದ ಚರಿತ್ರೆಯಲ್ಲಿ ಚಾಲುಕ್ಯರ ಹಿರಿಮೆ ಹಿರಿದಾದುದು. ರಾಜಕೀಯವಾಗಿ ಅದು ಪ್ರಭಾವಶಾಲಿಯಾದುದು. ಸಾಂಸ್ಕೃತಿಕವಾಗಿ ಅದು ಸಾರವತ್ತಾದುದು, ಸುಂದರವಾದುದು.

## ೪.೫ ಮಾನ್ಯಖೇಟದ ರಾಷ್ಟ್ರಕೂಟರು

ಕರ್ನಾಟಕವನ್ನಾಳಿದ ಬಹುದೊಡ್ಡ ರಾಜವಂಶಗಳಲ್ಲಿ ರಾಷ್ಟ್ರಕೂಟ ಮನೆತನವೂ ಒಂದಾಗಿದೆ. ಬಾದಾಮಿಯ ಚಾಲುಕ್ಯರಿಗೂ ಮತ್ತು ಕಲ್ಯಾಣದ ಚಾಲುಕ್ಯರಿಗೂ ಮಧ್ಯೆ ಸುಮಾರು ೨೨೫ ವರ್ಷಗಳಷ್ಟು ಸುದೀರ್ಘಕಾಲ ಇಡೀ ಕರ್ನಾಟಕಕ್ಕೆ ಸಾರ್ವಭೌಮರಾಗಿ ಆಡಳಿತ ನಡೆಸಿದರು. ರಾಜಕೀಯ ರಂಗದಲ್ಲಿ ಅಪರಿಮಿತ ಶಕ್ತಿಯ ದೃಷ್ಟಿಯಿಂದ ಈ ವಂಶ ಸ್ಮರಣೀಯವಾಗಿದೆ. ಇವರಲ್ಲಿ ಕೆಲವರು ಉತ್ತರ ಭಾರತಕ್ಕೂ ದಂಡೆತ್ತಿ ಹೋಗಿ ಕನ್ನಡಿಗ ರಾಜಮನೆತನಗಳಿಗೆ ಕೀರ್ತಿಕಲಶವನ್ನಿಟ್ಟಂತೆ ಯಶಸ್ಸನ್ನು ಸಂಪಾದಿಸಿದರು.

ರಾಷ್ಟ್ರಕೂಟರ ಇತಿಹಾಸ ರಚನೆಗೆ ಶಾಸನಗಳೇ ಮುಖ್ಯ ಆಧಾರಗಳಾದರೂ ಕನ್ನಡ ಕೃತಿಗಳಾದ *ಕವಿರಾಜಮಾರ್ಗ* ಪಂಪನ *ವಿಕ್ರಮಾರ್ಜುನ ವಿಜಯ* ಮತ್ತು ರಾಜಶೇಖರ, ಸೋಮದೇವ, ಮೇರುತುಂಗ, ಜಿನಸೇನ, ಗುಣಭದ್ರ ಮುಂತಾದ ವಿದ್ವಾಂಸರ ಸಂಸ್ಕೃತ ಬರಹಗಳೂ, ಅರಬ್ ಪ್ರವಾಸಿಗರಾದ ಸುಲೇಮಾನ್, ಇಬ್ನ್‌ಹೌಕಲ್, ಅಲ್‌ಮಸೂದಿ ಮತ್ತು ಅಲ್ ಇಸ್ತಾಖ್ರಿ ಮುಂತಾದವರ ಕಥನಗಳೂ ಪೂರಕ ಸಾಧನಗಳಾಗಿವೆ.

### ಮೂಲ

‘ರಾಷ್ಟ್ರಕೂಟ’ ಎಂಬ ಪದದ ಅರ್ಥವನ್ನು ಅವರ ಮೂಲವನ್ನು ಕುರಿತು ನಡೆದಿರುವ ಸಂಶೋಧನೆಗಳು ಇತಿಹಾಸದ ವಿದ್ಯಾರ್ಥಿಯನ್ನು ಗೊಂದಲಕ್ಕೀಡುಮಾಡಿವೆ. ಮೊದಲು ಅಧಿಕೃತ ಹುದ್ದೆಯ ಹೆಸರಾಗಿದ್ದು ಕ್ರಮೇಣ ‘ರಾಷ್ಟ್ರಕೂಟ’ ಎನ್ನುವುದು ವಂಶದ ಹೆಸರಾಗಿ ಹರಳುಗಟ್ಟಿತು ಎಂದು ಸೂಚಿಸಲಾಗಿದೆ. ಮೌರ್ಯರ ಶಾಸನಗಳಲ್ಲಿ ‘ರಾಷ್ಟ್ರೀಕ’ ಅಥವಾ ‘ರಥಿಕಾ’ ಎಂಬ ಅಧಿಕಾರಗಳ ಉಲ್ಲೇಖವಿದೆ. ಹಾಗೆಯೆ ಆಂಧ್ರಪ್ರದೇಶದ ಪ್ರಾಚೀನ ಶಾಸನಗಳಲ್ಲಿ ಕಂಡುಬರುವ ಪ್ರಾದೇಶಿಕ ಕಛೇರಿ ಎಂಬ ಅರ್ಥದ ರಟ್ಟಗುಡಿ ಎಂಬ ಪದವು ರಾಷ್ಟ್ರಕೂಟ ಎಂಬುದಕ್ಕೆ ಸಮಾನಾರ್ಥಕವಾದುದು ಎಂದು ಹೇಳಲಾಗಿದೆ. ಕರ್ನಾಟಕವನ್ನಾಳಿದ ರಾಷ್ಟ್ರಕೂಟರು ತಮ್ಮನ್ನು ಶಾಸನಗಳಲ್ಲಿ ‘ಲಟ್ಟಲೂರು ಪುರವರಾಧೀಶ್ವರ’ರೆಂದು ಕರೆದುಕೊಂಡಿದ್ದಾರೆ. ಆದ್ದರಿಂದ ಲಟ್ಟಲೂರು ರಾಷ್ಟ್ರಕೂಟರ ಮೂಲಸ್ಥಾನವಾಗಿತ್ತು. ಇದು ಈಗಿನ ಮಹಾರಾಷ್ಟ್ರದ ಉಸ್ಮನಾಬಾದ್ ಜಿಲ್ಲೆಯಲ್ಲಿರುವ ‘ಲಾಟೂರು’ ಆಗಿದೆ. ಇವರ ಮೊದಲ ರಾಜಧಾನಿ ‘ಮಯೂರ ಖಂಡಿ’ (ನಾಸಿಕ್‌ನಲ್ಲಿರುವ ಈಗಿನ ಮೋರ್‌ಖಂಡಿ) ನಂತರ ‘ಅಚಲಾಪುರ’ಕ್ಕೆ ಸ್ಥಳಾಂತರಗೊಂಡರು (ವಿದರ್ಭದಲ್ಲಿನ ಈಗಿನ ಎಲಿಚಪುರ) ದಂತಿದುರ್ಗನು ಎಲ್ಲೋರವನ್ನು ತನ್ನ ರಾಜಕೀಯ ಕೇಂದ್ರವನ್ನಾಗಿ ಮಾಡಿಕೊಂಡನು. ನೃಪತುಂಗನ ಆಡಳಿತದಲ್ಲಿ ‘ಮಾನ್ಯಖೇಟ’ ರಾಷ್ಟ್ರಕೂಟರ ರಾಜಧಾನಿಯಾಯಿತು. ಅಧಿಕಾರ ದೊರತೊಡನೆ ಇತರ ರಾಜವಂಶಗಳಂತೆ ರಾಷ್ಟ್ರಕೂಟರೂ ಕೂಡ ಪೌರಾಣಿಕ ಲೇಪನವನ್ನು ತಮ್ಮ ಮೂಲದ ಬಗೆಗೆ ಹೇಳಿಕೊಳ್ಳತೊಡಗಿದರು. ಅದರಂತೆ ಅವರು ತಮ್ಮ ವಂಶವು ಯದುವಿನಿಂದ ಬಂದುದು, ವಂಶದ ಮೂಲಪುರುಷ ಬ್ರಹ್ಮ ಎಂದು ಹೇಳಿದರು. ಶಾಸನಗಳು ತುಂಗ ಮತ್ತು

ರಟ್ಟ ಎಂಬ ಇಬ್ಬರು ರಾಜರ ವಿಷಯವಾಗಿ ಹೇಳುತ್ತವೆ. ಅಲ್ಲದೆ ಸಾತ್ಯಕಿಯನ್ನು ವಂಶದ ಮೂಲಪುರುಷರೆಂದೂ ಸಾರುತ್ತವೆ. ಆದರೆ ಇಂತಹ ಹೇಳಿಕೆಗಳು ಕುಟುಂಬದ ವಂಶಾವಳಿಗೆ ಪ್ರಾಚೀನತೆಯನ್ನು ಕೊಟ್ಟು ಅವರ ಅಧಿಕಾರವನ್ನು ಸಮರ್ಥಿಸುತ್ತಾವಾದರೂ ಅವುಗಳನ್ನು ಐತಿಹಾಸಿಕವಗಿ ಧೃಡಪಡಿಸಲು ಸಾಧ್ಯವಿಲ್ಲ.

ಯಾರೂ ನಿರಾಕರಿಸಲಾರದ ಆಧಾರವೊಂದರ ಪ್ರಕಾರ ರಾಷ್ಟ್ರಕೂಟರು ಕನ್ನಡ ಮೂಲದವರೆಂದು ಹೇಳಲಾಗಿದೆ. ರಾಷ್ಟ್ರಕೂಟರ ಕಾಲದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳಿಗೆ ದೊರಕಿದ ಪ್ರೋತ್ಸಾಹ ಹಾಗೂ ಆ ಕಾಲದ ಶಾಸನಗಳ ಭಾಷೆ ಮತ್ತು ಲಿಪಿ, ಕನ್ನಡ ಕಾವ್ಯ ಮೀಮಾಂಸೆಯನ್ನು ಕುರಿತ ಅತ್ಯಂತ ಪ್ರಾಚೀನ ಕೃತಿಯಾದ *ಕವಿರಾಜಮಾರ್ಗ*ದ ರಚನೆ, ಅವರ ಹೆಸರುಗಳು, ಸಾಂಸ್ಕೃತಿಕ ಪರಂಪರೆ, ಮೊದಲಾದವು ಅವರು ಕನ್ನಡಿಗರೆಂಬುದನ್ನು ಸಮರ್ಥಿಸುತ್ತವೆ. 'ಗರುಡ' ಇವರ ರಾಜಲಾಂಛನವಾಗಿತ್ತು.

## ರಾಜಕೀಯ ಚರಿತ್ರೆ

### ದಂತಿದುರ್ಗ

ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಾಪಕನಾದ ದಂತಿದುರ್ಗನ ವಂಶಾವಳಿಯನ್ನು ಎಲ್ಲೋರ ಶಾಸನವು ತಿಳಿಸುತ್ತದೆ. ಎರಡನೇ ಇಂದ್ರನ ಮಗನಾದ ದಂತಿದುರ್ಗನು ಅಪಾರ ಆಶೋತ್ತರಗಳನ್ನು ಹೊಂದಿದ್ದವನು. ಅವನು ಚಾಲುಕ್ಯರ ಕೈಕೆಳಗೆ ಸಾಮಂತ ಸ್ಥಾನಮಾನವನ್ನು ಹೊಂದಿದ್ದನು. ಚಾಲುಕ್ಯ ದೊರೆ ಇಮ್ಮಡಿ ವಿಕ್ರಮಾದಿತ್ಯನಿಗೆ ಅನೇಕ ಯುದ್ಧಗಳಲ್ಲಿ ನೆರವು ನೀಡಿ ಬೆಳಕಿಗೆ ಬಂದನು. ಅವನ ಕಂಚಿ ದಂಡಯಾತ್ರೆಯ ಸಂದರ್ಭದಲ್ಲಿ ಸಹಕರಿಸಿದ್ದನು. ಸಮರ್ಥನಾದ ಇಮ್ಮಡಿ ವಿಕ್ರಮಾದಿತ್ಯನು ಗತಿಸಿದ ನಂತರ ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯದ ವೈಭವ ಕುಗ್ಗತೊಡಗಿದಾಗ ದಂತಿದುರ್ಗನ ಏಳಿಗೆಗೆ ರಾಜಕೀಯ ಪರಿಸರ ಅನುಕೂಲಕರವಾಗಿ ಪರಿಣಮಿಸಿತು. ಇವನು ಚಾಲುಕ್ಯ ಪ್ರಭುತ್ವವನ್ನು ನಿರಾಕರಿಸಿ ಪಲ್ಲವರೊಂದಿಗೆ ವೈವಾಹಿಕ ಸಂಬಂಧವನ್ನು ಬೆಸೆಯಲು ಆರಂಭಿಸಿದ್ದು ಇವನಿಗೆ ತನ್ನದೇ ಆದ ರಾಜಕೀಯ ಸ್ಥಾನಮಾನ ಬೆಳೆಸಿಕೊಳ್ಳಲು ಇದ್ದ ಬಯಕೆಯನ್ನು ಸೂಚಿಸುತ್ತದೆ. ಗುಜರಾತಿನ ಚಾಲುಕ್ಯರನ್ನು ಪರಾಭವಗೊಳಿಸಿ ಮಾಳವವನ್ನು ಗೆದ್ದುಕೊಂಡನು. ರಾಜಕೀಯ ಮಹತ್ವಾಕಾಂಕ್ಷಿಯಾದ ದಂತಿದುರ್ಗ ಇಮ್ಮಡಿ ಕೀರ್ತಿವರ್ಮನ ಮೇಲೆ ಧಾಳಿಮಾಡಿ ಜಯ ಪಡೆದು ಚಾಲುಕ್ಯ ಸಾಮ್ರಾಜ್ಯದ ಬಹುಭಾಗವನ್ನು ಆಕ್ರಮಿಸಿ ಸ್ವತಂತ್ರ ರಾಜ್ಯಕ್ಕೆ ಭದ್ರವಾದ ಅಡಿಪಾಯ ಹಾಕಿದನು. ಈ ಗೆಲುವನ್ನು ದೀರ್ಘಕಾಲ ಅನುಭವಿಸುವ ಅದೃಷ್ಟ ಇವನ ಪಾಲಿಗಿರಲಿಲ್ಲ. ಇವನ ಬದುಕು ಕ್ರಿ.ಶ. ೭೫೬ ರಲ್ಲಿ ಕೊನೆಗೊಂಡಿತು. ದಂತಿದುರ್ಗನೊಬ್ಬ ಧೈರ್ಯಶಾಲಿಯಾದ ಯಶಸ್ವೀ ರಾಜ್ಯಸ್ಥಾಪಕ. ಇವನು ಖಡ್ಗಾವಲೋಕ, ಸಮಧಿಗತ ಪಂಚಮಹಾಶಬ್ದ ಮತ್ತು ಮಹಾಸಾಮಂತಾಧಿಪತಿ ಎಂಬ ಬಿರುದುಗಳನ್ನು ಚಾಲುಕ್ಯರ ಸಾಮಂತನಾಗಿದ್ದಾಗಲೇ ಪಡೆದಿದ್ದ. ಸ್ವತಂತ್ರಗೊಂಡ ನಂತರ ಚಕ್ರವರ್ತಿಯ ಬಿರುದುಗಳಾದ

‘ಮಹಾರಾಜಾಧಿರಾಜ’, ‘ರಾಜಪರಮೇಶ್ವರ ಪರಮ ಭಟ್ಟಾರಕ’ ಎಂಬ ಬಿರುದುಗಳನ್ನು ಧರಿಸಿ ತನ್ನನ್ನು ‘ಸಹಸ್ರತುಂಗ’ ಎಂದು ಕರೆದುಕೊಂಡನು.

**ಒಂದನೆ ಕೃಷ್ಣ (ಕ್ರಿ.ಶ. ೭೫೭-೭೭೪)**

ಪುತ್ರ ಸಂತಾನವಿಲ್ಲದ ದಂತಿದುರ್ಗನ ನಂತರ ಅವನ ಚಿಕ್ಕಪ್ಪ ಒಂದನೆ ಕೃಷ್ಣನು ಅಧಿಕಾರಕ್ಕೆ ಬಂದನು. ಇದೇ ಸಮಯದಲ್ಲಿ ಇವನ ಸಂಬಂಧಿ ಕರ್ಕ ಎಂಬುವನು ದಂಗೆ ಎದ್ದಾಗ ಅದನ್ನು ಅಡಗಿಸಿ ಅವನ ಪ್ರದೇಶಕ್ಕೆ ತನ್ನ ಅಧಿಕಾರಿಗಳನ್ನು ನೇಮಕ ಮಾಡಿದನು. ದಂತಿದುರ್ಗನಿಂದ ಪರಾಭವಗೊಂಡಿದ್ದ ಚಾಲುಕ್ಯ ಎರಡನೆ ಕೀರ್ತಿವರ್ಮನು ಚೇತರಿಸಿ ಕೊಳ್ಳುತ್ತಿದ್ದನು. ಅಪಾಯವನ್ನರಿತ ಒಂದನೆ ಕೃಷ್ಣ ಅವರ ಮೇಲೆ ಭಾರೀ ಆಕ್ರಮಣ ಮಾಡಿ ಚಾಲುಕ್ಯ ದಂಡನಾಯಕ ರಾಹಪ್ಪನೆಂಬುವನನ್ನು ಸೋಲಿಸಿ ಅವನಿಂದ ಪಾಲಿಧ್ವಜವನ್ನು ಕಿತ್ತುಕೊಂಡನು. ವೆಂಗಿ ಚಾಲುಕ್ಯರು, ತಲಕಾಡಿನ ಗಂಗರು, ಕೊಂಕಣದ ಮೌರ್ಯರನ್ನು ಪರಾಭವಗೊಳಿಸಿ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದನು. ಸಿಂಹಾಸನವನ್ನೇರಿದಾಗಲೇ ಕೃಷ್ಣನಿಗೆ ಸಾಕಷ್ಟು ವಯಸ್ಸಾಗಿತ್ತು. ಆದರೂ ದಂತಿದುರ್ಗನ ಕಾರ್ಯವನ್ನು ಯಶಸ್ವಿಯಾಗಿ ಮುಂದುವರೆಸಲು ಸಮರ್ಥನಾದನು. ಶುಭತುಂಗ, ಅಕಾಲವರ್ಷ ಎಂಬ ಬಿರುದು ಧರಿಸಿದ್ದ ಇವನು ಎಲ್ಲೋರಾದಲ್ಲಿನ ಕೈಲಾಸನಾಥ ದೇವಾಲಯವನ್ನು ನಿರ್ಮಿಸಿದನು. ಇದನ್ನು ಅಖಂಡ ಬಂಡೆಯನ್ನು ಕೊರೆದು ರಚಿಸಲಾಗಿದೆ. ಇದರ ನಿರ್ಮಾಣ ಕಾರ್ಯ ಕ್ರಿ.ಶ. ೭೬೦ ರಲ್ಲಿ ಆರಂಭವಾಗಿ ಅನೇಕ ವರ್ಷಗಳವರೆಗೆ ಮುಂದುವರಿಯಿತು. ವಿನ್ಸೆಂಟ್‌ಸ್ಮಿತ್‌ರು ಅದನ್ನು ‘ಭಾರತದ ಅತ್ಯಪೂರ್ವ ವಾಸ್ತುಶಿಲ್ಪ ರಚನೆ’ ಎಂದು ಹೊಗಳಿದ್ದಾರೆ.

**ಧ್ರುವ (ಕ್ರಿ.ಶ. ೭೮೭-೭೯೩)**

ಕೃಷ್ಣನ ನಂತರ ಸುಮಾರು ಕ್ರಿ.ಶ. ೭೭೪ ರಲ್ಲಿ ಅವನ ಹಿರಿಯ ಮಗ ಎರಡನೆ ಗೋವಿಂದನಿಗೆ ಪಟ್ಟವಾಯಿತು. ಅವನ ಕಾಲದಲ್ಲಿ ಅವನ ಸೋದರ ಧ್ರುವನು ನಾಸಿಕ್ ಪ್ರದೇಶದಲ್ಲಿ ಮಾಂಡಲಿಕನಾಗಿದ್ದನು. ಎರಡನೆ ಗೋವಿಂದನು ತನ್ನ ಕರ್ತವ್ಯಗಳನ್ನು ಮರೆತು ವಿಷಯ ಸುಖಗಳಲ್ಲಿ ಮಗ್ನನಾದಂತೆ ತೋರುತ್ತದೆ. ರಾಜ್ಯದ ಆಡಳಿತ ಹೊಣೆಯನ್ನೆಲ್ಲಾ ತನ್ನ ತಮ್ಮ ಧ್ರುವನ ಮೇಲೆ ಹೊರಿಸಿ ಈತ ವಿಲಾಸಿ ಜೀವನಕ್ಕೆ ಮಾರುಹೋದನು. ಅಣ್ಣನ ಈ ಕರ್ತವ್ಯ ವಿಮುಖತೆಯನ್ನು ಕಂಡ ಧ್ರುವ ರಾಜ್ಯದ ಆಡಳಿತವನ್ನು ತಾನೇ ದಕ್ಷತೆಯಿಂದ ನಿರ್ವಹಿಸತೊಡಗಿದುದಲ್ಲದೆ ಕ್ರಮೇಣ ಪ್ರಬಲನೂ ಆದನು. ಗೋವಿಂದನಿಗೆ ಈ ಸುಳುಹು ಗೊತ್ತಾದಾಗ ಧ್ರುವನನ್ನು ರಾಜ್ಯಾಧಿಕಾರದಿಂದ ತೆಗೆದುಹಾಕಿದನು. ಈ ಅಂತರ್ಯುದ್ಧದ ಲಾಭ ಪಡೆದುಕೊಳ್ಳಲು ನೆರೆಹೊರೆಯ ರಾಜರು ಹವಣಿಸತೊಡಗಿದಾಗ ಧ್ರುವನು ಅದಕ್ಕೆ ಅವಕಾಶ ನೀಡದೆ ಗೋವಿಂದನನ್ನು ಯುದ್ಧದಲ್ಲಿ ಸೋಲಿಸಿ ಅವನನ್ನು ಸಿಂಹಾಸನದಿಂದ ಪದಚ್ಯುತಗೊಳಿಸಿ ಕ್ರಿ.ಶ ೭೮೦ ರಲ್ಲಿ ತಾನೇ ರಾಜನಾಗುವುದರಲ್ಲಿ ಯಶಸ್ವಿಯಾದನು.

ಯಶಸ್ವೀ ಕ್ಷಿಪ್ರಕ್ರಾಂತಿಯಿಂದ ಅಧಿಕಾರ ಪಡೆದುಕೊಂಡ ಧ್ರುವನ ಆಳ್ವಿಕೆ ಅಲ್ಪ ಕಾಲವಾದರೂ ಕಣ್ಣುಕೋರೈಸುವಷ್ಟು ಉಜ್ವಲವಾದ ರಾಜ್ಯ ವಿಸ್ತರಣ ಹಂತವನ್ನು ಕಂಡಿತು.

ಇವರ ಅತ್ಯಂತ ರೋಮಾಂಚನಕಾರಿ ಗೆಲುವುಗಳು ಉತ್ತರ ಭಾರತದಲ್ಲಿ ಸಂಭವಿಸಿದ್ದು ಮಹತ್ವಪೂರ್ಣವಾದ ಸಂಗತಿಯಾಗಿದೆ. ಆ ಸಮಯದಲ್ಲಿ ಉತ್ತರ ಭಾರತದಲ್ಲಿ ರಾಜಕೀಯ ಪರಿಸ್ಥಿತಿ ಶಿಥಿಲವಾಗಿ ಕನೂಜ್ ನಗರ ರಾಜಕೀಯ ಚಟುವಟಿಕೆಗಳ ತಾಣವಾಗಿತ್ತು. ಇದನ್ನು ಆಕ್ರಮಿಸಲು ಉತ್ತರ ಭಾರತದಲ್ಲಿ ಪೈಪೋಟಿ ನಡೆದಿತ್ತು. ಆಗ ಇಂದ್ರಾಯುಧನು ಕನೂಜಿನ ದೊರೆಯಾಗಿದ್ದನು. ಗುರ್ಜರ ಪ್ರತಿಹಾರದ ಅರಸ ವತ್ಸರಾಜ ಇಂದ್ರಾಯುಧನನ್ನು ಸೋಲಿಸಿ ಕನೂಜನ್ನು ಆಕ್ರಮಿಸಿಕೊಂಡನು. ಇದನ್ನು ಸಹಿಸದ ಬಂಗಾಳದ ಪಾಲವಂಶದ ಧರ್ಮ ಪಾಲನು ವತ್ಸರಾಜನ ವಿರುದ್ಧ ಯುದ್ಧ ಆರಂಭಿಸಿ ಪರಾಭವಗೊಂಡನು. ಇದರಿಂದ ಧೃತಿಗೆಡದ ಧರ್ಮಪಾಲ ಮತ್ತೊಮ್ಮೆ ಬೃಹತ್ತಾದ ಸೈನ್ಯದ ನೆರವಿನಿಂದ ವತ್ಸರಾಜನ ವಿರುದ್ಧ ಯುದ್ಧ ಘೋಷಿಸಿದನು. ಇದೇ ಸಂದರ್ಭದಲ್ಲಿ ಧ್ರುವನು ಉತ್ತರ ಭಾರತವನ್ನು ಪ್ರವೇಶಿಸಿ ದನು. ರಾಷ್ಟ್ರಕೂಟ ಧ್ರುವನು ತನ್ನ ಇಬ್ಬರು ಮಕ್ಕಳಾದ ಗೋವಿಂದ ಮತ್ತು ಇಂದ್ರರೊಂದಿಗೆ ಕೂಡಿಕೊಂಡು ನರ್ಮದಾ ನದಿಯನ್ನು ದಾಟಿ ಕನೂಜಿನ ಕಡೆಗೆ ನುಗ್ಗಿದನು. ರಾಷ್ಟ್ರಕೂಟ ಸೈನ್ಯವನ್ನು ತಡೆಯಲು ವತ್ಸರಾಜನು ಪ್ರಯತ್ನಿಸಿ ವಿಫಲನಾದನು. ಝೂನ್ಸಿಯ ಬಳಿ ನಡೆದ ಯುದ್ಧದಲ್ಲಿ ವತ್ಸರಾಜ ಪರಾಭವಗೊಂಡನು. ವತ್ಸರಾಜನೊಡನೆ ಕಾದಾಡುವಾಗಲೇ ಒಲಿಯದಿದ್ದ ಅದೃಷ್ಟಲಕ್ಷ್ಮಿ ಧ್ರುವನನ್ನು ತಡೆಯಲು ಹೊರಟಾಗ ಧರ್ಮಪಾಲನಿಗೆ ದಕ್ಕಲಿಲ್ಲ. ಧರ್ಮಪಾಲನು ಸೋತು ಹೋದನು. ಗಂಗಾ-ಯಮುನಾ ಬಯಲಿನಲ್ಲಿ ಧ್ರುವನು ಪಡೆದ ಈ ಮಹತ್ತರವಾದ ಜಯವು ಅವನನ್ನು ತಾತ್ವಿಕವಾಗಿ ಉತ್ತರ ಭಾರತದ ನಿರ್ವಿವಾದಿತ ಪ್ರಭುವನ್ನಾಗಿ ಮಾಡಿತು. ಆದರೆ ಅವನು ಕನೂಜನ್ನು ವಶಪಡಿಸಿಕೊಳ್ಳಲೇ ಇಲ್ಲ. ಆ ಉದ್ದೇಶವೂ ಆತನಿಗೆ ಇರಲಿಲ್ಲ. ಆತನು ಯಾವಾಗ ಏನನ್ನು ಗೆಲ್ಲಬೇಕು ಎಂಬುದನ್ನು ಅರಿತಿದ್ದನು. ಈ ತ್ರಿಕೋಣ ಘರ್ಷಣೆಯಲ್ಲಿ ಯಶಸ್ವಿಯಾಗಿ ಅಪಾರ ಸಂಪತ್ತನ್ನು ಪಡೆದು ತನ್ನ ರಾಜ್ಯಕ್ಕೆ ಹಿಂತಿರುಗಿದನು. ಮರಳಿ ಬರುವಾಗ ಧ್ರುವನು ವೆಂಗಿ ಚಾಲುಕ್ಯ ವಿಷ್ಣು ವರ್ಧನನ್ನು ಸೋಲಿಸಿ ಅವನ ಮಗಳಾದ ಶೀಲಭಟ್ಟಾರಿಕೆಯನ್ನು ವಿವಾಹವಾದನು. ದಕ್ಷಿಣ ಭಾರತದಲ್ಲಿ ಗಂಗರಸನಾದ ಶಿವಮಾರನನ್ನು ಸೋಲಿಸಿದ್ದಲ್ಲದೆ ಅವನನ್ನು ಬಂಧಿಸಿ ಸೆರೆಮನೆ ಯಲ್ಲಿಟ್ಟನು. ಪಲ್ಲವರಾಜನಾದ ಒಂದನೆ ನಂದಿವರ್ಮನನ್ನು ಸೋಲಿಸಿ ಅವನಿಂದ ಅಪಾರ ಆನೆಗಳನ್ನು ಪಡೆದನು.

"ಧ್ರುವನ ಆಳ್ವಿಕೆಯ ಕೊನೆಗಾಲಕ್ಕೆ ರಾಷ್ಟ್ರಕೂಟರ ಅಧಿಕಾರ ಅತ್ಯುಚ್ಚ ಸ್ಥಿತಿಯಲ್ಲಿತ್ತು. ರಾಷ್ಟ್ರಕೂಟರ ಶಕ್ತಿಯನ್ನು ಎದುರಿಸಬಲ್ಲ ಶಕ್ತಿಯೇ ಆಗ ಭಾರತದಲ್ಲಿ ಇರಲಿಲ್ಲ" ಎಂದು ಆಲ್ಟೇಕರ್ ಹೇಳಿದ್ದಾರೆ. "ಇವನು ಯುದ್ಧವೀರ ಯಶಸ್ವಿಯೂ ಹೌದು ದಕ್ಷಿಣದಲ್ಲಿ ವಿಜಯ ಸಾಧಿಸುವುದಕ್ಕೂ ಮೊದಲು ಅವನು ಉತ್ತರದಲ್ಲಿ ಸಾಧಿಸಿ ಕೀರ್ತಿಧ್ವಜ ಹಾರಿಸಿದನೆಂದು" ಪಿ.ಬಿ. ದೇಸಾಯಿ ಹೇಳುತ್ತಾರೆ. ಕ್ರಿ.ಶ. ೭೯೩ ರಲ್ಲಿ ತನ್ನ ಇಹಲೋಕ ಯಾತ್ರೆ ಮುಗಿಸಿದ ಧ್ರುವನ ೧೩ ವರ್ಷದ ಅಲ್ಪಕಾಲದ ಆಳ್ವಿಕೆಯಲ್ಲಿ ಈತ ಕೈಗೊಂಡ ದಿಗ್ವಿಜಯಗಳ ಸಂಖ್ಯೆ ಮತ್ತು ಅದನ್ನು ನಿರ್ವಹಿಸಿದ ರೀತಿ ಆಶ್ಚರ್ಯಕರ. ಕಲಿವಲ್ಲಭ, ಧಾರಾವರ್ಷ, ಶ್ರೀವಲ್ಲಭ

ಮುಂತಾದ ಬಿರುದುಗಳನ್ನು ಧರಿಸಿದ್ದ ಈತನ ಕಾಲದಲ್ಲಿ ರಾಷ್ಟ್ರಕೂಟರು ಅಖಿಲ ಭಾರತದ ಪ್ರಬಲ ಶಕ್ತಿಗಳಾದರು.

### ಮೂರನೆ ಗೋವಿಂದ (ಕ್ರಿ.ಶ. ೭೯೩-೮೧೪)

ರಾಷ್ಟ್ರಕೂಟ ದೊರೆ ಧ್ರುವನು ತಾನು ಬದುಕಿರುವಾಗಲೇ ತನ್ನ ಹಿರಿಯ ಪುತ್ರ ಕರ್ಕನನ್ನು ಕಳೆದುಕೊಂಡಿದ್ದರಿಂದ ಮೂರನೆಯ ಪುತ್ರನಾದ ಮೂರನೆ ಗೋವಿಂದನನ್ನು ತನ್ನ ಉತ್ತರಾಧಿಕಾರಿಯೆಂದು ನಿರ್ಣಯಿಸಿ ಘೋಷಿಸಿದ್ದನು. ಅವನ ಎರಡನೆ ಪುತ್ರ ಸ್ತಂಭನು ಗಂಗವಾಡಿಯ ರಾಜ್ಯಪಾಲನಾಗಿದ್ದನು. ಧ್ರುವನ ಮರಣಾನಂತರ ಸಿಂಹಾಸನವನ್ನೇರಿದ ಮೂರನೆ ಗೋವಿಂದನು ತನ್ನ ಅಣ್ಣ ಸ್ತಂಭನ ಅಸಮಾಧಾನಕ್ಕೆ ತುತ್ತಾಗಬೇಕಾಯಿತು. ಸ್ತಂಭನು ಗೋವಿಂದನ ಹಕ್ಕುದಾರಿಕೆಯನ್ನು ಪ್ರತಿಭಟಿಸಿದನು. ೧೨ ಮಂದಿ ರಾಜರ ಒಕ್ಕೂಟ ರಚಿಸಿಕೊಂಡ ಸ್ತಂಭನ ಪರವಾಗಿ ಅನೇಕ ಉನ್ನತ ಅಧಿಕಾರಿಗಳೂ ಇದ್ದರೆಂದು ಸಂಜನ್ ಫಲಕಗಳು ಸೂಚಿಸುತ್ತವೆ. ಆದುದರಿಂದ ಈ ಬಿಕ್ಕಟ್ಟನ್ನು ಗೋವಿಂದನು ರಾಜಕಾರಣ ಕೌಶಲ ದಿಂದ ಬಿಡಿಸಲು ಪ್ರಯತ್ನಿಸಿದನು. ಅವಿಧೇಯನಾದ ಸ್ತಂಭನಿಗೆದುರಾಗಿ ಗಂಗರಾಜ ಶಿವಮಾರನನ್ನು ನಿಲ್ಲಿಸಲು ಅವನನ್ನು ಮೂರನೆ ಗೋವಿಂದನು ಸೆರೆಮನೆಯಿಂದ ಬಿಡುಗಡೆ ಮಾಡಿದನು. ಆದರೆ ಇದನ್ನು ದುರುಪಯೋಗಪಡಿಸಿಕೊಂಡ ಗಂಗರಾಜನು ಗೋವಿಂದನಿಗೆ ಕೃತಜ್ಞನಾಗಿರುವುದಕ್ಕೆ ಬದಲಾಗಿ ಸಾಹಸದ ದಾರಿ ಹಿಡಿದು ಸ್ತಂಭನ ಪರವಾಗಿ ನಿಂತನು. ಜೊತೆಗೆ ಪಲ್ಲವ ರಾಜನೂ ಕೂಡ ಸೇರಿದನು. ಹೀಗೆ ತನ್ನೆದುರು ನಿಂತಿದ್ದ ಅಗಾಧ ಒಕ್ಕೂಟ ವನ್ನು ಲೆಕ್ಕಿಸದೆ ಎದುರಿಸಲು ಸಿದ್ಧನಾದನು. ನೇಸರಿಕಾ ದಾನ ಶಾಸನವು ಗೋವಿಂದನ ವಿರುದ್ಧ ಸೆಣಸಲು ನಿಂತ ಹನ್ನೆರಡು ಜನ ರಾಜರನ್ನು ಹೆಸರಿಸುತ್ತದೆ. ಅವರುಗಳೆಂದರೆ ಪಾಂಡ್ಯ, ಪಲ್ಲವ, ಚೋಳ, ಗಂಗ, ಕೇರಳ, ಆಂಧ್ರ, ವೆಂಗಿ ಚಾಲುಕ್ಯ, ಮೌರ್ಯ, ಗುರ್ಜರ, ಕೋಸಲ, ಅವಂತಿ ಮತ್ತು ಸಿಂಹಳ ರಾಜ. ಯುದ್ಧದಲ್ಲಿ ಭವ್ಯವಾದ ವಿಜಯವನ್ನು ಮೂರನೆ ಗೋವಿಂದನು ಪಡೆದನು. ಯುದ್ಧಾನಂತರ ಸ್ತಂಭನಿಗೆ ಕ್ಷಮೆ ನೀಡಿದ ಗೋವಿಂದ ತನಗೆ ದ್ರೋಹ ಮಾಡಿದ ಶಿವಮಾರನನ್ನು ಕಾರಾಗೃಹದಲ್ಲಿಟ್ಟನು.

ತನ್ನ ಮೇಲೆ ಸ್ತಂಭನನ್ನು ಎತ್ತಿ ಕಟ್ಟುವ ಕೆಲಸ ಮಾಡಿದ್ದ ಪಲ್ಲವರನ್ನು ಸದೆಬಡಿಯಲು ನಿರ್ಧರಿಸಿ ಕಂಚಿಯ ಕಡೆಗೆ ಹೊರಟನು. ಅವರನ್ನು ಸೋಲಿಸಿ ಆ ವಿಜಯಯಾತ್ರೆಯಿಂದ ಹಿಂತಿರುಗುವಾಗ ರಾಮೇಶ್ವರ ತೀರ್ಥವನ್ನು ಸಂದರ್ಶಿಸಿದನು. ಹೀಗೆ ದಕ್ಷಿಣದ ರಾಜರೆಲ್ಲಾ ತನ್ನ ವಶವರ್ತಿಗಳಾದುದರಿಂದ ದಿಗ್ವಿಜಯಪ್ರಿಯನಾದ ಗೋವಿಂದನ ದೃಷ್ಟಿ ಉತ್ತರ ಭಾರತದ ಕಡೆಗೆ ತಿರುಗಿತು. ಅಲ್ಲಿಗೆ ಹೋಗುವ ಮೊದಲು ವೆಂಗಿಯನ್ನು ಮುತ್ತಿ ಅಲ್ಲಿನ ಚಾಲುಕ್ಯ ದೊರೆಯಾದ ವಿಜಯಾದಿತ್ಯನನ್ನು ಸೋಲಿಸಿದನು.

ಉತ್ತರ ಭಾರತದಲ್ಲಿ ಈ ವೇಳೆಗೆ ಅನೇಕ ರಾಜಕೀಯ ಬದಲಾವಣೆಗಳಾಗಿದ್ದವು. ರಾಷ್ಟ್ರಕೂಟ ಧ್ರುವನು ವತ್ಸರಾಜನನ್ನು ಸೋಲಿಸಿ ದಕ್ಷಿಣಕ್ಕೆ ಹಿಂತಿರುಗಿದ ಮೇಲೆ ಧರ್ಮ ಪಾಲನು ಕನೂಜನ್ನು ಆಕ್ರಮಿಸಿಕೊಂಡಿದ್ದನು. ವತ್ಸರಾಜನ ಮಗ ನಾಗಭಟ್ಟನು ತನ್ನ ಆಡಳಿತಾ

ವಧಿಯಲ್ಲಿ ಕನೂಜನ್ನು ಮುತ್ತಿ ಅಲ್ಲಿದ್ದ ಧರ್ಮಪಾಲನ ಪ್ರತಿನಿಧಿ ಚಕ್ರಾಯುಧ ನನ್ನು ಸೋಲಿಸಿದ್ದೇ ಅಲ್ಲದೆ ಅವನ ನೆರವಿಗೆ ಬಂದ ಧರ್ಮಪಾಲನನ್ನು ಕೂಡ ಸೋಲಿಸಿದನು. ಹೀಗೆ ಕನೂಜ್ ಮತ್ತೊಮ್ಮೆ ರಾಜಕೀಯ ಚಟುವಟಿಕೆಯ ಕೇಂದ್ರವಾಗಿತ್ತು. ಈ ವೇಳೆಯಲ್ಲಿ ಮೂರನೆ ಗೋವಿಂದನು ತನ್ನ ತಂದೆಯ ಉತ್ತರ ಭಾರತದ ದಿಗ್ವಿಜಯಗಳನ್ನು ನೆನೆದು ತಾನೂ ಕೂಡ ಅದನ್ನು ಸಾಧಿಸಲು ಹೊರಟನು. ಆಲ್ಟೇಕರ್ ಹೇಳಿದಂತೆ "ಗೋವಿಂದನ ಉತ್ತರದ ದಂಡಯಾತ್ರೆ ದಿಟ್ಟತನದಿಂದ ಯೋಜಿತವಾಗಿ ಜಾಣ್ಮೆಯಿಂದ ನಿರ್ವಾಹ ಗೊಂಡಿತ್ತು." ಗೋವಿಂದನು ತನ್ನ ದಳಪತಿಗಳನ್ನು ವೆಂಗಿ, ಕೋಸಲ, ಮಾಳವ ರಾಜರ ವಿರುದ್ಧವೂ, ತನ್ನ ಸಹೋದರ ಇಂದ್ರನನ್ನು ಗುರ್ಜರ ಪ್ರತಿಹಾರರ ವಿರುದ್ಧ ಕಳುಹಿಸಿ; ಸ್ವತಃ ತಾನು ನಾಗಭಟ್ಟನ ವಿರುದ್ಧ ಸೆಣಸಲು ಕನೂಜಿನ ಕಡೆಗೆ ಹೊರಟನು. ಗೋವಿಂದನ ಸೇನೆ ಹೋದಡೆಯಲ್ಲೆಲ್ಲಾ ಜಯಭೇರಿಯನ್ನು ಬಾರಿಸಿತು. ಇಂದ್ರನು ಗೂರ್ಜರರನ್ನು ಸೋಲಿಸುತ್ತಿದ್ದಂತೆಯೇ ಗೋವಿಂದನು ನಾಗಭಟ್ಟನನ್ನು ಸೋಲಿಸಿ ಹಿಮಾಲಯದವರೆಗೂ ನುಗ್ಗಿದನು. ಸೋತ ನಾಗಭಟ್ಟನು ರಜಪುಟಾಣದ ಮರಳುಗಾಡಿಗೆ ಹೋಗಿ ತಲೆಮರೆಸಿ ಕೊಂಡನು. ಧರ್ಮಪಾಲನು ಶರಣಾಗತನಾಗಿ ರಾಷ್ಟ್ರಕೂಟ ಪ್ರಭುತ್ವವನ್ನು ಒಪ್ಪಿಕೊಂಡನು. ರಾಷ್ಟ್ರಕೂಟರ ಸಂಜನ್ ಫಲಕಗಳು "ಉತ್ಸಾಹದಿಂದ ಗೋವಿಂದನ ಕುದುರೆಗಳು ಹಿಮಾಲಯದ ನದೀ ಪ್ರವಾಹಗಳ ತಣ್ಣನೆಯ ನೀರನ್ನು ಪಾನ ಮಾಡಿದವು, ಅವನ ಯುದ್ಧ ಮದಗಜಗಳು ಗಂಗಾ ನದಿಯ ಪವಿತ್ರ ತೀರ್ಥವನ್ನು ಸೇವಿಸಿದವು" ಎಂದು ಹೇಳುತ್ತವೆ. ಹೀಗೆ ಗಂಗಾ-ಯಮುನಾ ಬಯಲಿನ ಮೇಲೆ ಪ್ರಭುತ್ವ ಸ್ಥಾಪಿಸುವ ಮೇಲಾಟದಲ್ಲಿ ತಂದೆ ಧ್ರುವನಂತೆಯೇ ಮೂರನೆ ಗೋವಿಂದನು ಸಹ ಯಶಸ್ವಿಯಾಗಿ ಮುನ್ನುಗ್ಗಿ ರಾಷ್ಟ್ರಕೂಟರ ಶಕ್ತಿಯನ್ನು ಪ್ರದರ್ಶಿಸಿದನು.

ಉತ್ತರ ಭಾರತದಲ್ಲಿ ತನ್ನ ಶಕ್ತಿ ಪ್ರದರ್ಶಿಸಿದ ಮೂರನೆ ಗೋವಿಂದನು ತನ್ನ ರಾಜಧಾನಿಗೆ ಹಿಂತಿರುಗಿ ನಂತರ ಪಶ್ಚಿಮದ ಕಡೆಗೆ ಹೊರಟನು. ಅಲ್ಲಿ ಶ್ರೀಭವನದ ರಾಜಶರ್ಮ ಎಂಬುವನ ಆತಿಥ್ಯವನ್ನು ಪಡೆದು ಮಳೆಗಾಲದಿಂದಾಗಿ ಅಲ್ಲಿಯೇ ನಿಂತನು. ಅಲ್ಲಿರುವಾಗಲೇ ಅವನಿಗೆ ಅಮೋಘವರ್ಷನೆಂಬ ಹೆಸರಿನಲ್ಲಿ ಉತ್ತರಾಧಿಕಾರಿಯಾಗಲಿದ್ದ ಪುತ್ರನು ಜನಿಸಿದನು. ಅವನು ಉತ್ತರ ಭಾರತದ ದಿಗ್ವಿಜಯ ಯಾತ್ರೆಯಲ್ಲಿ ತೊಡಗಿದ್ದಾಗ ದಕ್ಷಿಣದಲ್ಲಿ ಮತ್ತೊಮ್ಮೆ ಗಂಗ, ಪಲ್ಲವ, ಪಾಂಡ್ಯ, ಕೇರಳ ರಾಜರು ಒಕ್ಕೂಟ ರಚಿಸಿಕೊಂಡು ಯುದ್ಧಕ್ಕೆ ಸಿದ್ಧರಾಗಿ ದ್ದರು. ಮೂರನೆ ಗೋವಿಂದನು ಮತ್ತೊಮ್ಮೆ ಈ ಒಕ್ಕೂಟವನ್ನು ಸದೆಬಡಿದನು. ಇದಾದ ನಂತರ ಗೋವಿಂದನು ಮತ್ತಾವ ಯುದ್ಧಗಳನ್ನೂ ಕೈಗೊಳ್ಳಲಿಲ್ಲ. ತನ್ನ ಸಾವು ಸಮೀಪಿಸುತ್ತಿದೆ ಎಂದು ಮನಗಂಡ ಅವನು ಬಾಲಕ ಅಮೋಘವರ್ಷನನ್ನು ಉತ್ತರಾಧಿಕಾರಿಯನ್ನಾಗಿ ಮಾಡಿ ತನ್ನ ಸೋದರಳಿಯ ಕರ್ಕ ಸುವರ್ಣ ವರ್ಷನನ್ನು ರಾಜಪ್ರತಿನಿಧಿಯಾಗಿ ಅಮೋಘವರ್ಷನು ವಯಸ್ಸಿಗೆ ಬರುವವರೆಗೂ ನೋಡಿಕೊಳ್ಳುವಂತೆ ನಿಯಮಿಸಿದನು.

ರಾಷ್ಟ್ರಕೂಟ ವಂಶದಲ್ಲಿ ಅತ್ಯಂತ ದಕ್ಷನೂ, ಶೂರನೂ ಆದ ಮೂರನೆ ಗೋವಿಂದ ಜಗತ್ತುಂಗ, ಜಗರುದ್ರ, ಪ್ರಭೂತವರ್ಷ, ಕೀರ್ತಿನಾರಾಯಣ ಎಂಬ ಆಡಂಬರದ ಬಿರುದುಗಳನ್ನು ಧರಿಸಿದ್ದನು. ಅವನ ಕ್ರೀಡಾಸಕ್ತಿ, ಧೈರ್ಯ, ಪರಾಕ್ರಮ, ಸಂಘಟಿಸುವ ಶಕ್ತಿ, ಔದಾರ್ಯ, ರಾಜಕೀಯ ಮುತ್ಸದ್ಧಿತನ ಸಮಕಾಲೀನ ದಾಖಲೆಗಳಲ್ಲಿ ವ್ಯಕ್ತವಾಗಿವೆ. ಆಲ್ಟೇಕರ್ ಹೇಳುವಂತೆ "ಮುಂದೆ ಇನ್ನೆಂದೂ ರಾಷ್ಟ್ರಕೂಟರ ಘನತೆಯು ಈಗ ಏರಿದಷ್ಟು ಉನ್ನತ ಮಟ್ಟಕ್ಕೆ ಏರಲಿಲ್ಲ".

## ಅಮೋಘವರ್ಷ ನೃಪತುಂಗ (ಕ್ರಿ.ಶ. ೮೧೪-೮೭೮)

ಮೂರನೆ ಗೋವಿಂದನ ಬಿರುಸಿನ ರಾಜಕೀಯ ಚಟುವಟಿಕೆಯ ತುಂಬಿದ ಜೀವನವು ಕ್ರಿ.ಶ. ೮೧೪ ರಲ್ಲಿ ಕೊನೆಗೊಂಡಾಗ ಅದೇ ವರ್ಷ ಬಾಲಕ ಅಮೋಘವರ್ಷನು ಪಟ್ಟಕ್ಕೆ ಬಂದನು. ಆಗಿನ್ನೂ ಅವನಿಗೆ ಹದಿನಾಲ್ಕು ವರ್ಷ. ರಾಷ್ಟ್ರಕೂಟ ವಂಶದಲ್ಲೇ ಅತಿ ದೀರ್ಘ ಆಳ್ವಿಕೆ ನಡೆಸಿದ ಈತನ ಮೂಲ ಹೆಸರು ಶರ್ವ. ಆದರೂ ಇವನು ಹೆಚ್ಚು ಪ್ರಖ್ಯಾತನಾಗಿರುವುದು 'ಅಮೋಘವರ್ಷ' ಮತ್ತು 'ನೃಪತುಂಗ'ನೆಂದೇ.

ಮೂರನೇ ಗೋವಿಂದನು ತನ್ನ ಮರಣಕ್ಕೆ ಮೊದಲು ತನ್ನ ಬಾಲಕ ಮಗನ ರಕ್ಷಣೆಗಾಗಿ ತನ್ನ ಸೋದರ ಇಂದ್ರನ ಮಗ ಕರ್ಕ ಸುವರ್ಣವರ್ಷನನ್ನು ನೇಮಿಸಿದ್ದನು. ಕರ್ಕ ಸುವರ್ಣವರ್ಷನನ್ನು ರೀಜೆಂಟ್ ಆಗಿ ನೇಮಿಸಿದ್ದು ಕಿರಿಯ ರಾಜನ ಸಿಂಹಾಸನಾರೋಹಣಕ್ಕೆ ಹಾದಿಯನ್ನು ಸುಗಮಗೊಳಿಸಿತಾದರೂ ರಾಜಕೀಯ ಸಂಕಷ್ಟಗಳಿಂದ ಬಿಡುಗಡೆಯ ಭರವಸೆ ಕೊಡಲಿಲ್ಲ. ಸಿಂಹಾಸನದ ಮೇಲೆ ಬಾಲಕನನ್ನು ಪ್ರತಿಷ್ಠಾಪಿಸಿದ್ದುದು ಅವನ ಬಂಧುಗಳಲ್ಲಿ ಅಶೋತ್ತರಗಳನ್ನು ಚಿಗುರಿಸಿತು. ಕೆಲವು ಮಂತ್ರಿಗಳು ಅವಿಧೇಯತೆ ವ್ಯಕ್ತಪಡಿಸುವ ಮಟ್ಟಕ್ಕೆ ಹೋದರು. ರಾಷ್ಟ್ರಕೂಟ ಸಾಮಂತ ಅರಸರು ಮತ್ತು ನಾಯಕರು ಅವರ ದಾಸ್ಯದಿಂದ ಬಿಡುಗಡೆ ಹೊಂದಲು ಕಾತರರಾದರು. ಬದ್ಧದ್ವೇಷಿಗಳಾಗಿದ್ದ ಗಂಗರು ಈಗ ಮತ್ತೊಮ್ಮೆ ಘರ್ಜಿಸಲಾರಂಭಿಸಿದರು. ವೆಂಗಿ ಚಾಲುಕ್ಯರು ಸೇಡು ತೀರಿಸಿಕೊಳ್ಳಲು ನಿರ್ಧರಿಸಿದರು. ಹೀಗೆ ಕ್ರಿ.ಶ ೮೧೬ ರಿಂದ ೮೨೧ ರ ನಡುವೆ ರಾಷ್ಟ್ರಕೂಟರ ಹೊಸ ದೊರೆಯು ವ್ಯಾಪಕ ಪ್ರತಿರೋಧವನ್ನು ಎದುರಿಸಬೇಕಾಯಿತು. ಈ ಪ್ರತಿರೋಧದ ಅವಧಿಯಲ್ಲಿ ರಾಜಕುಮಾರ ಅಮೋಘವರ್ಷನನ್ನು ರಾಜಧಾನಿಯಿಂದಾಚೆಗೆ ಕರೆದೊಯ್ದು ರಹಸ್ಯ ಸ್ಥಳವೊಂದರಲ್ಲಿ ಅಡಗಿಸಿ ಅವನನ್ನು ಬೆಳೆಸಲಾಯಿತು. ಕರ್ಕ ಆಡಳಿತದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿ ದಂಗೆಗಳನ್ನು ಅಡಗಿಸಿ ಸಿಂಹಾಸನವು ತನ್ನ ಪಾಲಿತ ಬಾಲಕನಿಗೆ ನಿಷ್ಕಂಟಕವಾಗಿ ದೊರಕುವಂತೆ ಮಾಡಿದನು. ಕ್ರಿ.ಶ. ೮೨೧ ರಲ್ಲಿ ಅಮೋಘವರ್ಷನು ಆಡಳಿತ ಸೂತ್ರಗಳನ್ನು ನೇರವಾಗಿ ಕೈಗೆತ್ತಿಕೊಂಡು ರಾಜ್ಯಭಾರ ಆರಂಭಿಸಿದನು.

### ನೃಪತುಂಗ ಮತ್ತು ವೆಂಗಿಯ ಚಾಲುಕ್ಯರು

ವೆಂಗಿಯ ವಿಜಯಾದಿತ್ಯನು ಭೀಮಸಳುಕಿಯನ್ನು ಪದಚ್ಯುತಗೊಳಿಸಿ ತನ್ನ ಅಧಿಕಾರವನ್ನು

ಮರಳಿ ಪಡೆದಿದ್ದನು. ಎರಡನೆ ವಿಜಯಾದಿತ್ಯನು ರಾಷ್ಟ್ರಕೂಟರ ವಿರುದ್ಧ ನಿರಂತರವಾಗಿ ೧೨ ವರ್ಷಗಳ ಕಾಲ ಹೋರಾಟ ನಡೆಸಿದ್ದನು. ನಂತರ ಅವನ ಮೊಮ್ಮಗ ಗಂಗ ವಿಜಯಾದಿತ್ಯ ಕ್ರಿ.ಶ. ೮೪೪ ರಲ್ಲಿ ಅಧಿಕಾರಕ್ಕೆ ಬಂದು ಯುದ್ಧವನ್ನು ಮುಂದುವರಿಸಿದನು. ರಾಷ್ಟ್ರಕೂಟ ಸೈನ್ಯ ವಿಂಗವಳ್ಳಿ ಕದನದಲ್ಲಿ ಚಾಲುಕ್ಯರನ್ನು ಪರಾಭವಗೊಳಿಸಿತು. ಅಮೋಘ ವರ್ಷ ವೆಂಗಿರಾಜ್ಯವನ್ನಾಕ್ರಮಿಸಿದನು. ನಂತರ ಅಮೋಘವರ್ಷನು ಚಾಲುಕ್ಯರೊಂದಿಗೆ ದ್ವೇಷ ಬೆಳಸದೆ ಅನುನಯದ ನೀತಿಯನ್ನು ಅನುಸರಿಸಿ ರಾಷ್ಟ್ರಕೂಟ ರಾಜಕುಮಾರಿ ಶೀಲ ಮಹಾದೇವಿಯನ್ನು ಚಾಲುಕ್ಯ ಯುವರಾಜ ವಿಷ್ಣುವರ್ಧನನಿಗೆ ವಿವಾಹ ಮಾಡಿ ಕೊಟ್ಟನು.

### ನೃಪತುಂಗ ಮತ್ತು ಗಂಗರು

ಗಂಗರ ದೊರೆ ಎರಡನೆ ಶಿವಮಾರ ಅಮೋಘವರ್ಷನ ವಿರುದ್ಧ ಬಂಡೆದ್ದು ಕ್ರಿ.ಶ. ೮೧೬ ರ ಕಾಗೆಮೊಗೆಯೂರ ಯುದ್ಧದಲ್ಲಿ ಮಡಿದನು. ಇವನ ನಂತರ ಅಧಿಕಾರಕ್ಕೆ ಬಂದ ಗಂಗರಸ ರಾಚಮಲ್ಲನು ಯುದ್ಧ ಮುಂದುವರೆಸಿ ರಾಷ್ಟ್ರಕೂಟ ಸೇನಾನಿ ಬಂಕೇಶನನ್ನು ರಾಜರಮಡು ಯುದ್ಧದಲ್ಲಿ ಸೋಲಿಸಿ ಗಂಗರಾಜ್ಯದ ದಕ್ಷಿಣ ಪ್ರಾಂತ್ಯಗಳನ್ನು ಗೆದ್ದನು. ಉತ್ತರಭಾಗ ಇನ್ನೂ ರಾಷ್ಟ್ರಕೂಟರ ಬಂಕೇಶನ ಅಧೀನದಲ್ಲಿತ್ತು. ರಾಜಮಲ್ಲನು ಉತ್ತರ ಭಾಗವನ್ನು ಪೂರ್ಣವಾಗಿ ಗೆಲ್ಲಲು ಪ್ರಯತ್ನಿಸಿ ವಿಫಲನಾಗಿದ್ದನು. ರಾಚಮಲ್ಲನ ನಂತರ ಗಂಗ ಸಾಮ್ರಾಜ್ಯಕ್ಕೆ ಎರೆಯಂಗ ನೀತಿಮಾರ್ಗ ದೊರೆಯಾದನು. ಗುಜರಾತಿನಲ್ಲಿ ಉಂಟಾದ ದಂಗೆಯನ್ನು ಅಡಗಿಸಲು ಬಂಕೇಶನು ಹೋದಾಗ ಈ ಅವಕಾಶವನ್ನುಪಯೋಗಿಸಿಕೊಂಡು ಗಂಗವಾಡಿಯ ಉತ್ತರಭಾಗವನ್ನು ನೀತಿಮಾರ್ಗ ಆಕ್ರಮಿಸಿದನು. ಇದನ್ನು ಸಹಿಸದ ಅಮೋಘವರ್ಷ ಗಂಗರ ಮೇಲೆ ವೆಂಗಿ ಚಾಲುಕ್ಯರ ವಿಜಯಾದಿತ್ಯನ ನೆರವಿನೊಂದಿಗೆ ಯುದ್ಧ ಘೋಷಿಸಿದನು. ನೀತಿಮಾರ್ಗ ಪರಾಭವಗೊಂಡು ರಾಷ್ಟ್ರಕೂಟರೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡಿದ್ದೇ ಅಲ್ಲದೆ ವೈವಾಹಿಕ ಸಂಬಂಧವನ್ನೂ ಕೂಡ ಬೆಳಸಿದನು. ಅಮೋಘ ವರ್ಷನ ಮಗಳಾದ ಚಂದ್ರೋಬಲಬ್ಬೆಯನ್ನು ನೀತಿಮಾರ್ಗನು ತನ್ನ ಮಗನಾದ ಬೂತುಗನಿಗೆ ಮದುವೆ ಮಾಡಿಕೊಂಡನು. ಹೀಗೆ ಅಮೋಘವರ್ಷನು ದಿಗ್ವಿಜಯಗಳನ್ನು ಪ್ರಧಾನವಾಗಿಟ್ಟು ಕೊಳ್ಳದೆ ಶಾಂತಿಸಾಧಕವಾದ ಇತರ ಅಂಶಗಳಿಗೆ ವಿಶೇಷ ಗಮನವನ್ನು ಕೊಟ್ಟನು.

ಪಲ್ಲವ ನಂದಿವರ್ಮನ ಕೋರಿಕೆಯ ಪ್ರಕಾರ ಅಮೋಘವರ್ಷ ನೃಪತುಂಗನು ಅವರಿಗೆ ಕಿರುಕುಳ ನೀಡುತ್ತಿದ್ದ ಪಾಂಡ್ಯರ ವಿರುದ್ಧ ಯುದ್ಧ ಮಾಡಿ ಪರಾಭವಗೊಳಿಸಿದನು. ಕೊನೆಗೆ ತನ್ನ ಮಗಳು ಶಂಖಳನ್ನು ನಂದಿವರ್ಮನಿಗೆ ವಿವಾಹ ಮಾಡಿಕೊಟ್ಟು ಮೈತ್ರಿಯನ್ನು ಬಲಪಡಿಸಿ ಕೊಂಡನು.

ಸದಾ ಕತ್ತಿಯನ್ನು ಝಳಪಿಸುತ್ತಿದ್ದ ಅವನ ಪೂರ್ವಜರಿಗೆ ಹೋಲಿಸಿದರೆ ಅಮೋಘ ವರ್ಷನು ಶಾಂತಿಪ್ರಿಯನಾದ ಅರಸನೆಂದೇ ಹೇಳಬೇಕು. ದಖನ್ನಿನಲ್ಲಿ ರಾಷ್ಟ್ರಕೂಟ ಪ್ರಾಬಲ್ಯ ವನ್ನು ಕಾಪಾಡಿಕೊಳ್ಳಲು ಅವನು ಯುದ್ಧಕ್ಕಿಂತ ಮಿಗಿಲಾಗಿ ಮುತ್ಸದ್ಧಿತನವನ್ನು ಆರಿಸಿ ಕೊಂಡಿದ್ದನು. ರಾಜಕೀಯ ಲಾಭಕ್ಕಾಗಿ ವೈವಾಹಿಕ ಬಾಂಧವ್ಯವನ್ನು ಬೆಳಸಿದನು. ತನ್ನ ಪ್ರಜೆಗಳ

ದುಃಖ ಕಷ್ಟಗಳಿಗೆ ಅಪಾರವಾದ ಕರುಣೆ ತೋರಿಸುತ್ತಿದ್ದನು. ರಾಜ್ಯಕ್ಕೆ ಬಂದೊದಗಿದ್ದ ಉಗ್ರ ಕ್ಷಾಮವನ್ನು ತಡೆಗಟ್ಟಲು ತನ್ನ ಒಂದು ಕೈಬೆರಳನ್ನೇ ಬಲಿಕೊಟ್ಟನೆಂದು ಸಂಜನ್ ಫಲಕಗಳು ಹೇಳುತ್ತವೆ. ಇಂತಹ ಸಾತ್ವಿಕಗುಣ ಹೊಂದಿದ್ದ ಅಮೋಘವರ್ಷ ಕೊನೆಯ ದಿನಗಳಲ್ಲಿ ತನ್ನ ಮಗ ಇಮ್ಮಡಿ ಕೃಷ್ಣನ ದಂಗೆಯನ್ನು ಎದುರಿಸಬೇಕಾಯಿತು. ಅವನು ಬಂಡೆದ್ದು ತಲಕಾಡಿಗೆ ಪಲಾಯನ ಮಾಡಿದನು. ಅವನನ್ನು ಹಿಡಿದು ತರಲು ಬಂಕೇಶನನ್ನು ಕಳುಹಿಸ ಲಾಯಿತು. ಬಂಕೇಶನು ತಲಕಾಡನ್ನು ಮುತ್ತಿ ಕೃಷ್ಣನನ್ನು ಸೆರೆಹಿಡಿದು ನೃಪತುಂಗನಿಗೆ ಒಪ್ಪಿಸಿದನು. ಇದರಿಂದ ಸಂತೋಷಗೊಂಡ ಚಕ್ರವರ್ತಿ ಬನವಾಸಿ ಪ್ರದೇಶದ ಆಡಳಿತವನ್ನು ಬಂಕೇಶನಿಗೆ ಒಪ್ಪಿಸಿ 'ಬಂಕಾಪುರ' ಎಂಬ ನಗರವನ್ನು ಅವನ ಹೆಸರಿನಲ್ಲಿ ಕಟ್ಟಿಸಿದನು.

ಅರಬ್ ದೇಶದ ಪ್ರವಾಸಿಗ ಸುಲೈಮಾನ್ ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಭೇಟಿನೀಡಿ ಪ್ರಪಂಚದ ನಾಲ್ಕು ಚಕ್ರವರ್ತಿಗಳಲ್ಲಿ ಅಮೋಘವರ್ಷನೂ ಒಬ್ಬ ಎಂದು ಹೇಳಿದ್ದಾನೆ (ಕಾನ್‌ಸ್ಟಾಂಟಿನೋಪಲ್ ಚಕ್ರವರ್ತಿ, ಬಾಗ್ದಾದ್‌ನ ಖಲೀಫ, ಚೀಣಾದ ಚಕ್ರವರ್ತಿ). ಅರಬ್ ವರ್ತಕರು ಯಾವ ತೊಂದರೆಯೂ ಇಲ್ಲದಂತೆ ವ್ಯಾಪಾರ ನಡೆಸಲು ಮತ್ತು ಇಲ್ಲಿ ನೆಲೆಸಲು ಅಮೋಘವರ್ಷನು ಅನುಮತಿ ಕೊಟ್ಟಿದ್ದನು. ನೃಪತುಂಗನ ಆಳ್ವಿಕೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಸಾಹಿತ್ಯಾಭಿವೃದ್ಧಿಗೆ ಕಾರಣವಾಯಿತು. ಇವನ ಆಳ್ವಿಕೆಯಲ್ಲಿ ಕನ್ನಡದ ಮೊದಲ ಉಪಲಬ್ಧ ಗ್ರಂಥ *ಕವಿರಾಜಮಾರ್ಗ* ರಚಿತವಾಯಿತು. ಇದರ ಕರ್ತೃ ಶ್ರೀವಿಜಯನೆಂದು ಹೇಳಲಾಗಿದೆ. ನೃಪತುಂಗ ಸಂಸ್ಕೃತದಲ್ಲಿ *ಪ್ರಶ್ನೋತ್ತರ ರತ್ನಾವಳಿ* ಎಂಬ ಗ್ರಂಥವನ್ನೂ ರಚಿಸಿದ್ದಾನೆ. ಜಿನಸೇನ, ಮಹಾವೀರಾಚಾರ್ಯ, ಶಾಕಟಾಯನ ಮೊದಲಾದ ವಿದ್ವಾಂಸರು ಇವನ ಆಸ್ಥಾನದಲ್ಲಿದ್ದರು. ಇವನ ಆಳ್ವಿಕೆಯಲ್ಲಿ 'ಮಾನ್ಯಖೇಟ'ವು ಸುಪ್ರಸಿದ್ಧ ರಾಜಧಾನಿ ಯಾಯಿತು. ಇವನು 'ನೃಪತುಂಗ', 'ವೀರನಾರಾಯಣ', 'ಅತಿಶಯಧವಳ', 'ರಟ್ಟ ಮಾರ್ತಾಂಡ' ಮೊದಲಾದ ಬಿರುದುಗಳನ್ನು ಧರಿಸಿದ್ದನು.

ಅಮೋಘವರ್ಷ ನೃಪತುಂಗನ ನಂತರ ಅವನ ಮಗನಾದ ಎರಡನೆ ಕೃಷ್ಣನು ರಾಜ್ಯವಾಳಿ ದನು. ನಂತರ ಮೂರನೆ ಇಂದ್ರ, ನಾಲ್ಕನೆ ಗೋವಿಂದ, ಮೂರನೆ ಅಮೋಘ ವರ್ಷ, ಮೂರನೆ ಕೃಷ್ಣ ಕ್ರಮವಾಗಿ ಆಳ್ವಿಕೆ ನಡೆಸಿದರು. ರಾಷ್ಟ್ರಕೂಟ ವಂಶದಲ್ಲಿ ಮೂರನೆ ಕೃಷ್ಣ ಬಹುದೊಡ್ಡ ಕೊನೆಯ ದೊರೆ. ನರ್ಮದಾ ನದಿಯಿಂದ ದಕ್ಷಿಣಕ್ಕಿರುವ ಭಾಗವೆಲ್ಲಾ ಕೃಷ್ಣನ ಅಧಿಪತ್ಯಕ್ಕೆ ಒಳಪಟ್ಟಿತ್ತು. ಯುದ್ಧದಲ್ಲಿ ಪರಾಕ್ರಮಿಯಾಗಿದ್ದಂತೆ ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರೇಮಿಯೂ ಆಗಿದ್ದನು. ಕನ್ನಡ ಕವಿ ಪೊನ್ನನಿಗೆ ಆಶ್ರಯಕೊಟ್ಟು ಆತನನ್ನು 'ಕವಿಚಕ್ರವರ್ತಿ' ಎಂಬ ಬಿರುದಿನಿಂದ ಗೌರವಿಸಿದನು. ಇವನ ನಂತರ ರಾಷ್ಟ್ರಕೂಟ ಸಾಮ್ರಾಜ್ಯ ಇಳಿಮುಖವಾಗ ತೊಡಗಿತು. ಕೃಷ್ಣನ ನಂತರ ಅವನ ಸೋದರರಲ್ಲಿ ಒಬ್ಬನಾದ ಖೊಟ್ಟಿಗನು (ಕ್ರಿ.ಶ. ೯೬೭-೯೭೨) ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಪರಮಾರ ದೊರೆ ಸಿಯಕ ಹರ್ಷನು ರಾಷ್ಟ್ರಕೂಟ ಗಡಿಗಳನ್ನು ದಾಟಿ ಮಾಳಖೇಡವನ್ನು ಲೂಟಿ ಹೊಡೆದನು. ಆದರೆ ಗಂಗರಾಜರು ರಾಷ್ಟ್ರಕೂಟರ ಸಹಾಯಕ್ಕೆ ಬಂದು ಪರಿಸ್ಥಿತಿಯನ್ನು ಸುಧಾರಿಸಿದರು. ಇದು ರಾಷ್ಟ್ರಕೂಟ

ಶಕ್ತಿಯು ಕ್ಷೀಣಿಸಿದ್ದುದಕ್ಕೆ ಸ್ಪಷ್ಟ ಕುರುಹಾಗಿದೆ. ಖೊಟ್ಟಿಗನ ಮರಣಾನಂತರ ಎರಡನೆ ಕರ್ಕನು (ಕ್ರಿ.ಶ. ೯೭೨-೯೭೩) ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಪರಿಸ್ಥಿತಿ ಸುಧಾರಿಸುವುದಕ್ಕೆ ಬದಲಾಗಿ ಬಿಗಡಾಯಿಸಿತು, ಒಮ್ಮೆ ಅತ್ಯಂತ ಬಲಶಾಲಿಗಳಾಗಿದ್ದ ರಾಷ್ಟ್ರಕೂಟರನ್ನು ಇಂದು ಪ್ರತಿಯೊಬ್ಬರೂ ಪ್ರತಿಭಟಿಸುವವರೇ ಆದರು. ಅವರಲ್ಲಿ ಬಹಳ ದಿಟ್ಟನೂ, ಪರಾಕ್ರಮಿಯೂ ಆದವನು ಚಾಲುಕ್ಯವಂಶದ ರಾಜ ಎರಡನೆಯ ತೈಲ. ಸ್ಥಳೀಯ ಸಾಮಂತನಾಗಿದ್ದವನು ರಾಷ್ಟ್ರಕೂಟ ಶಕ್ತಿಗೆ ಸವಾಲಾಗಿ ಬೆಳೆದನು. ತರ್ದವಾಡಿಯಲ್ಲಿ ಆಳುತ್ತಿದ್ದ ಇವನು ಕರ್ಕನನ್ನು ಯುದ್ಧದಲ್ಲಿ ಸೋಲಿಸಿ ಚಾಲುಕ್ಯರ ಸಾಮ್ರಾಜ್ಯವನ್ನು ಪುನರ್ ಸ್ಥಾಪಿಸಿದನು. ಕರ್ಕನು ಸೋಲಿನ ಅವಮಾನವನ್ನು ಸಹಿಸಲಾರದೆ ಶಿವಮೊಗ್ಗದ ಬಳಿಯ ಒಂದು ಹಳ್ಳಿಯಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದು ಕ್ರಿ.ಶ. ೯೯೧ ರಲ್ಲಿ ಮೃತನಾದನು. ಹೀಗೆ ಉಜ್ವಲಮಾನವಾಗಿ ಕರ್ನಾಟಕವನ್ನಾಳಿದ ರಾಷ್ಟ್ರಕೂಟರು ಇತಿಹಾಸದಿಂದ ಕಣ್ಮರೆಯಾದರು.

## ಸಾಂಸ್ಕೃತಿಕ ಕೊಡುಗೆಗಳು

ರಾಜ್ಯ ವಿಸ್ತರಣೆಯಂತೆಯೇ ರಾಜ್ಯವ್ಯವಸ್ಥೆಯಲ್ಲಿಯೂ ಮತ್ತು ಸಾಂಸ್ಕೃತಿಕವಾದ ಸಾಧನೆಯಲ್ಲಿಯೂ ಇವರು ಕೈಗೊಂಡ ಮಾರ್ಗ ವಿಶಿಷ್ಟವಾದುದು. ಅವರ ಪರಮತ ಸಹಿಷ್ಣುತೆ ಅವರ ವಿಶಾಲವಾದ ಮನೋಧರ್ಮಕ್ಕೂ ಸಂಸ್ಕೃತಿಯ ಸಜ್ಜನಿಕೆಗೂ ಸಾಕ್ಷಿಯಾಗಿದೆ. ಸಾಹಿತ್ಯಕ್ಕೆ ಇವರ ಕಾಲದಲ್ಲಿ ಲಭಿಸಿದ ಪ್ರೋತ್ಸಾಹ ಅನ್ಯಾದೃಶ್ಯವಾದುದು.

### ಸಾಹಿತ್ಯಕ ಚಟುವಟಿಕೆಗಳು

ಇವರ ವೈಭವಪೂರ್ಣ ಆಳ್ವಿಕೆಯಲ್ಲಿ ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಸಾಹಿತ್ಯ ಕ್ರಿಯೆ ಏಕರೀತಿಯಾಗಿ ಅರಳಿತು. ಆ ಕಾಲದ ಪ್ರೌಢ ವ್ಯಾಸಂಗ ಕ್ರಮ ಎಷ್ಟು ವಿಶಾಲವಾಗಿತ್ತೆಂದರೆ, ಅದರಲ್ಲಿ ವೇದ, ವ್ಯಾಕರಣ, ಜ್ಯೋತಿಷ್ಯ, ಸಾಹಿತ್ಯ, ಮೀಮಾಂಸೆ, ಧರ್ಮಶಾಸ್ತ್ರ, ಪುರಾಣ ನ್ಯಾಯ ಮತ್ತು ಸ್ಮೃತಿ ಇವೆಲ್ಲಾ ಸೇರುತ್ತಿದ್ದವು. ತ್ರಿವಿಕ್ರಮ ಆ ಕಾಲದ ಪ್ರಥಮ ಗಣ್ಯಕವಿಯಾಗಿದ್ದು *ನಳಚಂಪೂ* ಕೃತಿ ರಚಿಸಿದ್ದಾನೆ. ಇದು ಸಂಸ್ಕೃತ ಸಾಹಿತ್ಯದ ಪ್ರಥಮ ಚಂಪೂ ಕಾವ್ಯವಾಗಿದೆ. ಇದೇ ಕವಿಯ ಮತ್ತೊಂದು ಪರಿಷ್ಕೃತ ಕಾವ್ಯರಚನೆ *ಮದಾಲಸಾ ಚಂಪೂ*. ಮೊದಲನೆ ಅಮೋಘವರ್ಷನು ಸ್ವಯಂ ಉತ್ತಮ ವರ್ಗದ ಕವಿಯಾಗಿದ್ದು ಸಂಸ್ಕೃತದಲ್ಲಿ *ಪ್ರಶ್ನೋತ್ತರ ರತ್ನಮಾಲಿಕಾ* ಎಂಬ ಚಿಕ್ಕ ಮಧುರ ವೈರಾಗ್ಯಗೀತೆಯನ್ನು ರಚಿಸಿದ್ದಾನೆ. ಇವನ ಆಶ್ರಯದಲ್ಲಿ ರಚಿತವಾದ ಮತ್ತೊಂದು ಕೃತಿ ಎಂದರೆ ಮಹಾವೀರಾ ಚಾರ್ಯನ *ಗಣಿತಸಾರ ಸಂಗ್ರಹ* ಹಾಗೂ ಶಾಕಟಾಯನನ *ಅಮೋಘವೃತ್ತಿ* ಮೂರನೆ ಕೃಷ್ಣನ ಆಸ್ಥಾನದಲ್ಲಿದ್ದ ಹಲಾಯುಧ ಎಂಬ ಕವಿಯು *ಹಲಾಯುಧ ಕೋಶ* ಎಂಬ ನಿಘಂಟು *ಕವಿರಹಸ್ಯ* ಮತ್ತು *ಮೃತಸಂಜೀವಿನಿ* ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಜೈನ ವಿದ್ವಾಂಸನಾದ ವೀರಸೇನನು ಜೈನರ ಆದಿಗ್ರಂಥ *ಷಟ್ ಖಂಡಾಗಮ* ವನ್ನು ಕುರಿತು ಟೀಕೆಯನ್ನು *ಧವಲಾ* ಎಂದು ಬರೆದನು.

ವೀರಸೇನನ ಶಿಷ್ಯ ಜಿನಸೇನನು *ಜಯಧವಲಾ* ವನ್ನು ಬರೆದನು. ಇದೇ ಅಲ್ಲದೆ ಅವನು *ಆದಿಪುರಾಣ, ಪಾರ್ಶ್ವಾಭ್ಯುದಯ* ಎಂಬ ಕೃತಿಗಳನ್ನು ಕೂಡ ರಚಿಸಿದ್ದಾನೆ. ಗುಣಭದ್ರನು ಜಿನಸೇನನ ಆದಿಪುರಾಣವನ್ನು ಪೂರ್ತಿಮಾಡಲು *ಉತ್ತರ ಪುರಾಣ* ಎಂಬ ಕೃತಿ ರಚನೆ ಮಾಡಿದನು. ಸೋಮದೇವಸೂರಿಯ *ನೀತಿವಾಕ್ಯಾಮೃತ* ವೂ ಕೂಡ ಇವರ ಕಾಲದಲ್ಲೆ ರಚನೆಯಾಗಿದ್ದು ರಾಜನೀತಿಯನ್ನು ಕುರಿತಂತಿದೆ. ಇದು ಕೌಟಿಲ್ಯನ *ಅರ್ಥಶಾಸ್ತ್ರ* ದ ಮಾದರಿಯಲ್ಲಿದೆ. ಅಸಗನು ಬರೆದಿರುವ *ವರ್ಧಮಾನ ಪುರಾಣ*ವೂ ಕೂಡ ಈ ಕಾಲದಲ್ಲೇ ಬರೆಯಲಾದ ಕೃತಿ. ಜೈನ ತತ್ವಜ್ಞಾನದಲ್ಲಿ ವಿದ್ಯಾನಂದನು ಅಗ್ರಸ್ಥಾನ ಪಡೆದಿದ್ದಾನೆ. ಅವನು ಸಮಂತಭದ್ರನ *ಆಪ್ತಮೀಮಾಂಸ* ಎಂಬ ಗ್ರಂಥದ ಮೇಲೆ ಭವ್ಯಭಾಷ್ಯವನ್ನು *ಆಪ್ತಪರೀಕ್ಷಾ* ಎಂಬ ಕೃತಿಯನ್ನು ರಚಿಸಿದ್ದಾನೆ.

ರಾಷ್ಟ್ರಕೂಟರ ಕಾಲದ ಶಾಸನ ಸಾಹಿತ್ಯವನ್ನು ಅವಲೋಕಿಸಿದರೆ ಅದು ಒಂದು ಕಲೆಯಾಗಿತ್ತೆಂದು ನಮಗೆ ಕಂಡುಬರುತ್ತದೆ. ಅಲ್ಲಿ ಬರುವ ಕಾರ್ಯ ಮಹೋನ್ನತಿಯನ್ನು ಉಳ್ಳುದಲ್ಲದಿದ್ದರೂ ಆಗಿನ ಕಾಲದ ಭಾಷೆಯ ಸ್ವರೂಪವನ್ನು ಅವು ಪ್ರಕಾಶಪಡಿಸುತ್ತವೆ. ಈ ಶಾಸನ ಕವಿಗಳು ಸಾಮಾನ್ಯವಾಗಿ ಕನ್ನಡ ಮತ್ತು ಸಂಸ್ಕೃತ ಎರಡರಲ್ಲೂ ಪರಿಣಿತರು. ಆ ಕಾಲದ ಶಾಸನ ಕವಿಗಳಲ್ಲಿ ರುದ್ರಭಟ್ಟ, ವತ್ಸರಾಜ, ರವಿನಾಗಭಟ್ಟ, ಕವಿರಾಜರಾಜ, ಸಾಮಿಯಣ್ಣ ಪ್ರಮುಖರು.

**ಕನ್ನಡ ಸಾಹಿತ್ಯ**

ಗ್ರಂಥಸ್ಥ ಸಾಹಿತ್ಯದತ್ತ ದೃಷ್ಟಿ ಹೊರಳಿಸಿದರೆ ಕನ್ನಡ ಸಾಹಿತ್ಯದ ಸದ್ಯ ದೊರೆತ ಕೃತಿಗಳಲ್ಲಿ ಆದ್ಯಕೃತಿ ಎಂದರೆ *ಕವಿರಾಜಮಾರ್ಗ*. ಇದನ್ನು ಶ್ರೀವಿಜಯನೆಂಬ ಕವಿ ಬರೆದನೆಂದು ಹೇಳಲಾಗಿದೆ. ಇದೊಂದು ಲಕ್ಷಣಗ್ರಂಥ. ಕನ್ನಡನಾಡು, ನುಡಿ, ಜನರನ್ನು ಕುರಿತಾದ ವರ್ಣನೆ ಇದರಲ್ಲಿದೆ. ಇದು ದಂಡಿಯ *ಕಾವ್ಯದರ್ಶನ* ದ ಮಾದರಿಯಲ್ಲಿ ರಚಿತವಾಗಿದೆ. ಇದರಲ್ಲಿ "ಕರ್ನಾಟಕ ಕಾವೇರಿಯಿಂದ ಗೋದಾವರಿಯವರೆಗೆ ಹರಡಿತ್ತೆಂದು" ತಿಳಿಸಲಾಗಿದೆ. ಕವಿರಾಜ ಮಾರ್ಗವು ಕವಿಗಳಿಗೆ ಬೇಕಾದ ವ್ಯಾಕರಣ, ಛಂದಸ್ಸು ಪ್ರಾಸ, ಭಾಷಾಶೈಲಿ ಮತ್ತು ಅಲಂಕಾರ ಇತ್ಯಾದಿಗಳನ್ನು ನಿರೂಪಿಸುವ ಒಂದು ಕೈಪಿಡಿಯಾಗಿದೆ.

ಪಂಪನ ಅತಿ ಹತ್ತಿರದ ಸಮಕಾಲೀನನಾದ ಪೊನ್ನ ಮೂರನೆ ಕೃಷ್ಣನ ಆಸ್ಥಾನದಲ್ಲಿದ್ದನು ಅವನಿಗೆ 'ಉಭಯಕವಿ ಚಕ್ರವರ್ತಿ' ಎಂಬ ಬಿರುದೂ ಇತ್ತು. ಇವನು *ಶಾಂತಿಪುರಾಣ* ಮತ್ತು *ಭುವನೈಕ ರಾಮಾಭ್ಯುದಯ* ಎಂಬ ಕೃತಿಗಳನ್ನು, *ಜಿನಾಕ್ಷರ ಮಾಲೆ* ಎಂಬ ಚಿಕ್ಕ ಕೃತಿಯನ್ನು ರಚಿಸಿದ್ದಾನೆ. ಇವನ ಶಾಂತಿಪುರಾಣವು ೧೬ನೇ ತೀರ್ಥಂಕರನಾದ ಶಾಂತಿನಾಥನನ್ನು ಕುರಿತಾದದ್ದು. ಇದಕ್ಕೆ *ಪುರಾಣನಾಮ ಚೂಡಾಮಣಿ* ಎಂಬ ಪರ್ಯಾಯ ನಾಮವುಂಟು. ಇವರ ಕಾಲದ ಅತ್ಯಂತ ಸಂಪನ್ನವಾದ ಗದ್ಯಕೃತಿ *ವಡ್ಡಾರಾಧನೆ*, ಇದರ ಕರ್ತೃ ಶಿವಕೋಟಿ. ಇದರಲ್ಲಿ ೧೯ ಕತೆಗಳಿದ್ದು ನಮ್ಮ ಗದ್ಯ ಸಾಹಿತ್ಯದಲ್ಲಿ ಇದು ಎಲ್ಲಕ್ಕಿಂತ ದೊಡ್ಡದು. ಹೀಗೆ ಕನ್ನಡ

ಸಾಹಿತ್ಯಕ್ಕೆ ರಾಜಮಾರ್ಗವೊಂದನ್ನು ರಚಿಸುವಲ್ಲಿ ಕಾರಣರಾದ ರಾಷ್ಟ್ರಕೂಟರು ಆ ಮಾರ್ಗದಲ್ಲಿಯೇ ನಡೆದು ಮಹಾಕವಿಯಾದ ಪೊನ್ನನಿಗೆ 'ಕವಿಚಕ್ರವರ್ತಿಯ' ಪಟ್ಟಕಟ್ಟಿ ಕಾವ್ಯ ಸಾಮ್ರಾಜ್ಯವನ್ನು ಕಟ್ಟಿದ ಹೆಮ್ಮೆಯನ್ನು ಮೆರೆದಿದ್ದಾರೆ.

### ಧರ್ಮ

ಪ್ರಾಚೀನಕಾಲದ ಮೂಲಭೂತ ಧಾರ್ಮಿಕ ನಂಬಿಕೆ ಮತ್ತು ಅನುಸರಣೆಗಳು ಈ ಕಾಲದಲ್ಲೂ ಅವಿಚ್ಛಿನ್ನವಾಗಿ ಮುಂದುವರಿದವು. ಧಾರ್ಮಿಕ ಜೀವನದ ಎರಡು ಗಮನಾರ್ಹ ವೈಶಿಷ್ಟ್ಯಗಳಾಗಿದ್ದ ಅನ್ಯಧರ್ಮ ಸಹಿಷ್ಣುತೆ ಮತ್ತು ಮೂರ್ತಿಪೂಜೆಗಳು ಎಲ್ಲ ವಿಧದಿಂದ ಮುಂದುವರಿದವು. ಶಿವ ಮತ್ತು ವಿಷ್ಣುವನ್ನು ಆರಾಧಿಸುತ್ತಿದ್ದರು. ಶಾಸನಗಳಲ್ಲಿ ಶಿವ ಮತ್ತು ವಿಷ್ಣುವಿನ ಸ್ತುತಿಯೂ ಕಂಡುಬರುತ್ತದೆ. ಅವರ ಮುದ್ರೆಗಳಲ್ಲಿ ವಿಷ್ಣುವಿನ ವಾಹನವಾದ ಗರುಡ ಅಥವಾ ಯೋಗಮುದ್ರೆಯಲ್ಲಿರುವ ಶಿವ ಚಿತ್ರವಿರುತ್ತದೆ.

ಅಮೋಘವರ್ಷ ನೃಪತುಂಗನ ಆಳ್ವಿಕೆಯಲ್ಲಿ ಜೈನಧರ್ಮಕ್ಕೆ ಪ್ರಮುಖವಾದ ರಾಜಾಶ್ರಯ ದೊರೆಯಿತು. ಆದುದರಿಂದ ಹಿಂದೂ ಧರ್ಮದ ಪುನರುಜ್ಜೀವನ ಜೈನಧರ್ಮದ ಅಭ್ಯುದಯಕ್ಕೆ ದಕ್ಕೆಯನ್ನುಂಟು ಮಾಡಲಿಲ್ಲ. ಕೆಲವು ರಾಷ್ಟ್ರಕೂಟ ಅಧಿಕಾರಿಗಳು ಜೈನರಾಗಿದ್ದರು. ಉದಾಹರಣೆಗೆ ಬನವಾಸಿಯ ಸಾಮಂತನಾಗಿದ್ದ ಬಂಕೇಶ ಮತ್ತು ಆತನ ಮಗ ಲೋಕಾದಿತ್ಯ. ಜೈನ ಸನ್ಯಾಸಿಗಳು ತತ್ವಜ್ಞಾನಿಗಳು ಮತ್ತು ಅವರ ಕೃತಿಗಳು ಜನರ ಮನಸ್ಸಿನ ಮೇಲೆ ಪ್ರಭಾವ ಬೀರಿದವು. ಸಮಂತ ಭದ್ರದೇವ, ಆಕಳಂಕದೇವ, ವಿದ್ಯಾನಂದ, ಜಿನಸೇನ, ಗುಣಚಂದ್ರ, ಪೊನ್ನ, ಪಂಪ ಇವರು ದಕ್ಷಿಣ ಭಾರತದಲ್ಲಿ ಜೈನಧರ್ಮದ ಪ್ರಭಾವವು ಪ್ರಬಲಗೊಳ್ಳಲು ಕಾರಣರಾದರು. ಇದರ ಪರಿಣಾಮವಾಗಿ ಜೈನಧರ್ಮ ಜನಪ್ರಿಯಗೊಂಡಿತು. ಅಮೋಘವರ್ಷನು ಜೈನಧರ್ಮದ ನಿಷ್ಠಾವಂತ ಅನುಯಾಯಿಯಾಗಿದ್ದರೂ ಹಿಂದೂ ದೇವತೆಯಾದ ಮಹಾಲಕ್ಷ್ಮಿಯ ಆರಾಧಕನಾಗಿದ್ದು ತನ್ನ ರಾಜ್ಯದಲ್ಲಿ ತೋರಿದ್ದ ಸಾಂಕ್ರಾಮಿಕ ರೋಗವನ್ನು ನಿವಾರಿಸುವ ನಂಬಿಕೆಯಿಂದ ಪ್ರಚೋದಿತನಾಗಿ ಬಂದು ಕೈಬೆರಳನ್ನೇ ಕತ್ತರಿಸಿ ಆಕೆಗೆ ಬಲಿಯಾಗಿ ಅರ್ಪಿಸಿದ್ದನು. ಹೀಗೆ ವಿವಿಧ ನಂಬಿಕೆಗಳ ಸಹಯೋಗದ ಫಲವಾಗಿ ಹೊಂದಿಕೆ ಮತ್ತು ಸಾಮರಸ್ಯಗಳು ಬೆಳೆಯಲು ಅವಕಾಶವುಂಟಾಯಿತು. ಹಿಂದೂ ಮತ್ತು ಜೈನ ದೇವತೆಗಳೆರಡನ್ನು ಉಳ್ಳ ಸಂಕೀರ್ಣ ಪದ್ಧತಿಯ ದೇವಾಲಯಗಳು ಆಗ ಅಸ್ತಿತ್ವದಲ್ಲಿದ್ದವು. ಇವರು ಇಸ್ಲಾಂ ಧರ್ಮಕ್ಕೂ ಪ್ರೋತ್ಸಾಹ ನೀಡಿದರು. ಅವರು ಅರಬ್ಬರಿಗೆ ಪಶ್ಚಿಮ ಕರಾವಳಿಯಲ್ಲಿ ಬಂದಿಳಿಯಲು ಅವಕಾಶ ಮಾಡಿಕೊಟ್ಟಿದ್ದಲ್ಲದೆ ಪ್ರಾರ್ಥನಾ ಮಂದಿರಗಳನ್ನು ಕಟ್ಟಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದರು. ೯ನೆ ಶತಮಾನಕ್ಕೆ ಸೇರಿದ ಸುಲೇಮಾನನೆಂಬ ಮುಸ್ಲಿಂ ವ್ಯಾಪಾರಿ ಅವರ ಉದಾರತೆ ಮತ್ತು ಸಹನೆಗಳನ್ನು ಮುಕ್ತ ಕಂಠದಿಂದ ಪ್ರಶಂಸಿಸಿದ್ದಾನೆ. ಬೌದ್ಧಧರ್ಮಾವಲಂಬಿಗಳ ಬಗ್ಗೆ ರಾಷ್ಟ್ರಕೂಟರು ಸಹನೆ ಮತ್ತು ಸಹಕಾರ ಮನೋಭಾವನೆಯಿಂದ ವರ್ತಿಸುತ್ತಿದ್ದರು. ಸೋಲಾಪುರ ಜಿಲ್ಲೆಯ ಕಂಪಿಲ ಮತ್ತು ಧಾರವಾಡ ಜಿಲ್ಲೆಯ ಡಂಬಳದಲ್ಲಿ ಬೌದ್ಧಸನ್ಯಾಸಿ ಮಠಗಳಿದ್ದವು ಎಂದು ಹೇಳಲಾಗಿದೆ.

## ಕಲೆ ಮತ್ತು ವಾಸ್ತುಶಿಲ್ಪ

ರಾಷ್ಟ್ರಕೂಟರು ರಾಜಕೀಯವಾಗಿ ಬಾದಾಮಿ ಚಾಲುಕ್ಯರಿಗೆ ಉತ್ತರಾಧಿಕಾರಿಗಳಾದಂತೆ, ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳ ಕಲಾಕೃತಿಗಳಲ್ಲಿ ಪ್ರತಿಬಿಂಬಿತವಾಗಿರುವ ಚಾಲುಕ್ಯರ ಕಲಾಸಂಪ್ರದಾಯಗಳಿಗೆ ಬಹುಮಟ್ಟಿಗೆ ಉತ್ತರಾಧಿಕಾರಿಗಳಾದರು. ಪರಂಪರಾನುಗತವಾಗಿ ಬಂದ ಈ ಕಲಾಸಂಪತ್ತನ್ನು ಅವರು ಇನ್ನೂ ಹೆಚ್ಚು ನವೀನವೂ, ಉತ್ತಮವೂ ಆದ ರೀತಿಯಲ್ಲಿ ಶ್ರೇಷ್ಠತೆಯನ್ನು, ಸೊಬಗನ್ನು ಹೊಂದುವಂತೆ ಅಭಿವೃದ್ಧಿಗೊಳಿಸಿದರು. ಎಲ್ಲೋರ, ಎಲಿಫೆಂಟಾ, ಜೋಗೇಶ್ವರಿ, ಮಂಡಪೇಶ್ವರ, ಶಿರುವಾಳ ಮುಂತಾದ ಕಡೆಗಳಲ್ಲಿ ಅವರ ಚಿರಸ್ಮರಣೀಯವಾದ ಭವ್ಯರಚನೆಗಳನ್ನು ಕಾಣಬಹುದು.

ರಾಷ್ಟ್ರಕೂಟರ ಕಲಾ ಚಟುವಟಿಕೆಯ ತಾಣವಾದ ಎಲ್ಲೋರಾದಲ್ಲಿ ಬೌದ್ಧ, ಹಿಂದೂ, ಜೈನ ಧರ್ಮಗಳಿಗೆ ಸೇರಿದ ೩೪ ಗುಹೆಗಳನ್ನು ಅಲ್ಲಿನ ಗುಡ್ಡದ ಒಂದೇ ಮುಖದಲ್ಲಿ ಕೊರೆಯಲಾಗಿದೆ. ಇವೆಲ್ಲಾ ಕ್ರಿ.ಶ. ನಾಲ್ಕನೆಯ ಶತಮಾನದಿಂದ ೯ನೆ ಶತಮಾನದ ಮಧ್ಯದಲ್ಲಿ ನಿರ್ಮಾಣವಾದವು. ದಕ್ಷಿಣದ ೧೨ ಗುಹೆಗಳು ಬೌದ್ಧಧರ್ಮಕ್ಕೂ, ಉತ್ತರದ ೫ ಗುಹೆಗಳು ಜೈನಧರ್ಮಕ್ಕೂ, ಮಧ್ಯದಲ್ಲಿನ ೧೭ ಗುಹೆಗಳು ಹಿಂದೂ ಧರ್ಮಕ್ಕೂ ಸೇರುತ್ತವೆ.

ಎಲ್ಲೋರಾದ ಕೈಲಾಸನಾಥ ದೇವಾಲಯವು ಬಹುಶಃ ಭಾರತದ ಗುಹಾ ವಾಸ್ತುಶಿಲ್ಪದ ಅತ್ಯಂತ ಪ್ರಶಸ್ತವಾದ ಉದಾಹರಣೆ. ಈ ಗುಹಾಲಯವನ್ನು ಒಂದನೆ ಕೃಷ್ಣನ ಕಾಲದಲ್ಲಿ ನಿರ್ಮಿಸಲಾಯಿತು. ೨೭೬ ಅಡಿ ಉದ್ದ, ೧೫೪ ಅಡಿ ಅಗಲದಷ್ಟು ವಿಸ್ತಾರವಾದ ಈ ದೇವಾಲಯದ ಹಿಂಭಾಗದಲ್ಲಿ ೧೦೭ ಅಡಿ ವಿಸ್ತಾರವಾದ ಹಳ್ಳವಿದೆ. ಈ ದೇವಾಲಯದ ಮುಖ್ಯ ಭಾಗಗಳೆಂದರೆ ಗರ್ಭಗುಡಿ, ಪಶ್ಚಿಮದ ಪ್ರವೇಶದ್ವಾರ, ನಂದಿಮಂಟಪ ಮತ್ತು ಚತುಶ್ಶಾಲೆಯ ಸುತ್ತಲೂ ಮೇಲ್ಛಾವಣಿ ಇರುವ ಹಾದಿ. ಈ ದೇವಾಲಯದ ಕೆಲವು ಮೂರ್ತಿಶಿಲ್ಪಗಳು ಅತ್ಯಂತ ಆಕರ್ಷಣೀಯವಾಗಿವೆ. ರಾವಣನು ಕೈಲಾಸ ಪರ್ವತವನ್ನು ಎತ್ತುವ ವಿಷಯವು ಶಿಲ್ಪಿಗಳಿಗೆ ಅಚ್ಚುಮೆಚ್ಚಿನ ವಸ್ತು. ಅದು ಸಹಜವಾಗಿ ಎಲ್ಲೋರಾದಲ್ಲಿ ಅನೇಕ ಕಡೆ ಕಂಡುಬರುತ್ತದೆ. ಕೈಲಾಸ ದೇವಾಲಯದಲ್ಲಿನ ಗಜಾಸುರನನ್ನು ಸಂಹರಿಸುವ ಶಿವ, ತ್ರಿಪುರಾಂತಕ ಶಿವ, ಲಲಿತಭಂಗಿಯಲ್ಲಿ ನರ್ತಿಸುತ್ತಿರುವ ಶಿವ, ಗಿರಿಜಾಕಲ್ಯಾಣ ಇವು ಅಲ್ಲಿನ ಪ್ರಭಾವಯುಕ್ತವಾದ ಇನ್ನಿತರೆ ಮೂರ್ತಿಶಿಲ್ಪಗಳು, ಪರ್ಸಿಬ್ರೌನ್ ಅವರ ಹೇಳಿಕೆಯಂತೆ "ಎಲ್ಲೋರಾದ ಕೈಲಾಸೇಶ್ವರ ದೇವಾಲಯ ಭಾರತದ ಕಲಾವೈಭವದ ಒಂದು ಉತ್ತಮ ಉದಾಹರಣೆ" ಅಲ್ಲದೆ ಬಂಡೆಗಳಲ್ಲಿ ಕೊರೆದು ನಿರ್ಮಿಸಿದ ವಾಸ್ತುಶಿಲ್ಪಗಳಲ್ಲಿ ಅಸಾಮಾನ್ಯ.

ಎಲ್ಲೋರಾದಲ್ಲಿನ ಇತರ ವಾಸ್ತುಶಿಲ್ಪಗಳೆಂದರೆ ಎರಡು ಅಂತಸ್ತಿನಲ್ಲಿರುವ ದಶಾವತಾರ ದೇವಾಲಯ ರಾವಣಕಾಖಾಯ್, ರಾಮೇಶ್ವರ ಮತ್ತು ಧುಮರ್‌ಲೇನಾ. ಇವುಗಳಲ್ಲಿ ದಶಾವತಾರ ಗುಹೆ ದೊಡ್ಡದು ಶೈವ ಮತ್ತು ವೈಷ್ಣವಕ್ಕೆ ಸಂಬಂಧಿಸಿದ ಮೂರ್ತಿ ಶಿಲ್ಪಗಳನ್ನು ಸುತ್ತಲಿನ ಗೋಡೆಗಳ ಮೇಲೆ ಕೆತ್ತಿದ್ದಾರೆ. ಇವುಗಳಲ್ಲಿ ಹಿರಣ್ಯಕಶಿಪುವಿನ ಮೂರ್ತಿ ಅದ್ವಿತೀಯ, ಜೈನ ಧರ್ಮಕ್ಕೆ ಸೇರಿದ ಐದು ಗುಹಾಲಯಗಳು ಎಲ್ಲೋರಾದಲ್ಲಿವೆ.

ಇವುಗಳಲ್ಲಿ ಛೋಟಾ ಕೈಲಾಸ, ಇಂದ್ರಸಭಾ ಮತ್ತು ಜಗನಾಥಸಭಾ ಎಂದು ಕರೆಯಲಾಗುವ ದೇವಾಲಯಗಳು ೯ನೇ ಶತಮಾನಕ್ಕೆ ಸೇರಿದವುಗಳು.

ಮುಂಬಯಿ ಬಳಿಯಲ್ಲಿ ಇರುವ ಎಲಿಫೆಂಟಾ ದ್ವೀಪದಲ್ಲಿ ರಾಷ್ಟ್ರಕೂಟರ ಕಲೆಯು ಪರಾಕಾಷ್ಠತೆಯ ತುತ್ತತುದಿಯನ್ನು ಮುಟ್ಟಿತು. ಇದನ್ನು ಸ್ಥಳೀಯರು ಘರ್‌ಪುರಿ ಎಂದು ಕರೆಯುತ್ತಾರೆ. ಅಲ್ಲಿದ್ದ ಏಕಶಿಲಾ ಆನೆಯಿಂದಾಗಿ ಪೋರ್ಚುಗೀಸರು ಈ ದ್ವೀಪವನ್ನು 'ಎಲಿಫೆಂಟಾ' ಎಂದು ಕರೆದರು. ಅಲ್ಲಿರುವ ಅರ್ಧನಾರೀಶ್ವರ, ನಟರಾಜನ ಶಿಲ್ಪಗಳು ಭಗ್ನವಾಗಿದ್ದರೂ ಭವ್ಯವಾಗಿವೆ. ಅರ್ಧನಾರೀಶ್ವರನ ಪುರುಷಾರ್ಧ ಭಾಗದ ಎರಡು ಕೈಗಳಲ್ಲಿ ಒಂದರಲ್ಲಿ ಸರ್ಪವಿದೆ. ಮತ್ತೊಂದು ಕೈ ನಂದಿಯ ತಲೆ ಮೇಲಿದೆ. ಸ್ತ್ರೀಭಾಗದ ಎರಡು ಕೈಗಳಲ್ಲಿ ಒಂದರಲ್ಲಿ ದರ್ಪಣವನ್ನಿಡಿದಿದ್ದಾಳೆ. ಮತ್ತೊಂದರಲ್ಲಿ ನಿರಿಗೆಯಿರುವ ವಸ್ತ್ರವಿದೆ. ಸಮಗ್ರ ವಿನ್ಯಾಸವು ಅಸದೃಶವಾಗಿದೆ. ಇಲ್ಲಿನ ಮಹೇಶಮೂರ್ತಿ ಅಥವಾ ತ್ರಿಮೂರ್ತಿ ಶಿಲ್ಪವು ಬೃಹದಾಕಾರವುಳ್ಳದ್ದಾಗಿದೆ. ಈ ಶಿಲ್ಪ ಮೂರು ಮುಖಗಳನ್ನೊಳಗೊಂಡಿದ್ದು ೨೩ ಅಡಿ ಎತ್ತರ, ೧೯ ೧/೨ ಅಡಿ ಅಗಲವಿದೆ. ಮಹದೇವನ ಮುಖ ಮಧ್ಯದಲ್ಲಿದ್ದು, ಭೈರವನ ಮುಖ ಬಲಭಾಗದಲ್ಲಿಯೂ ವಾಮದೇವನ ಸೌಮ್ಯಮುಖ ಎಡಭಾಗದಲ್ಲಿದೆ. ಈ ಮಹೇಶ ಮೂರ್ತಿಯ ಪಕ್ಕದಲ್ಲಿ ಗಿರಿಜಾಕಲ್ಯಾಣವನ್ನು ನಿರೂಪಿಸುವ ಭವ್ಯವಾದ ಇನ್ನೊಂದು ಭಿತ್ತಿ ಶಿಲ್ಪವಿದೆ. ಶಿವಮೊಗ್ಗ ಜಿಲ್ಲೆಯ ಮಾವಳ್ಳಿ, ಗುಲ್ಬರ್ಗ ಜಿಲ್ಲೆಯ ಶಿರವಾಳವೂ ಕೂಡ ರಾಷ್ಟ್ರಕೂಟರ ಕಾಲದ ಕಲಾಕೇಂದ್ರಗಳಾಗಿವೆ. ಶಿರವಾಳದಲ್ಲಿ ಮೂರನೆ ಕೃಷ್ಣನ ಕಾಲದ ೨೦ಕ್ಕೂ ಹೆಚ್ಚು ದೇವಾಲಯಗಳು ಪತ್ತೆಯಾಗಿವೆ. ಈ ಧಾರವಾಡ ಜಿಲ್ಲೆಯ ಕೊಣ್ಣೂರಿನ ಪರಮೇಶ್ವರ ಮತ್ತು ಸವಡಿಯ ಬ್ರಹ್ಮೇಶ್ವರ ದೇವಾಲಯಗಳು ಈ ಕಾಲದಲ್ಲಿ ನಿರ್ಮಾಣ ವಾದವು. ಪರಮೇಶ್ವರ ದೇವಾಲಯವನ್ನು ಬಂಕೇಶನು ನಿರ್ಮಿಸಿದನು. ಆದರೆ ಅವರ ರಾಜಧಾನಿ ಮಳಖೇಡದಲ್ಲಿ ಶ್ರೇಷ್ಠವಾದ ಕಲಾಕೃತಿ ಯಾವುದೂ ಇಲ್ಲ, ಅದು ಪೂರ್ತಿ ಹಾಳಾಗಿದೆ.

## ೪.೬ ಕಲ್ಯಾಣದ ಚಾಲುಕ್ಯರು

ರಾಷ್ಟ್ರಕೂಟರ ಪತನದ ನಂತರ ಚಾಲುಕ್ಯರು ಪುನಃ ರಾಜಕೀಯ ರಂಗವನ್ನು ಪ್ರವೇಶಿಸಿದರು. ಸುಮಾರು ಎರಡುನೂರು ವರ್ಷಗಳ ಕಾಲ ರಾಷ್ಟ್ರಕೂಟರ ಸಾಮಂತರಾಗಿದ್ದ ಇವರು 'ಕಲ್ಯಾಣ'ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಈ ವಂಶದ ಸ್ಥಾಪಕನಾದ ಎರಡನೆ ತೈಲನು ಕ್ರಿ.ಶ. ೯೭೩ ರಲ್ಲಿ ಪಟ್ಟಕ್ಕೆ ಬಂದ ವಿಷಯ ಆರನೇ ವಿಕ್ರಮಾದಿತ್ಯನ ಗದಗ ಶಾಸನದಿಂದ ತಿಳಿಯುತ್ತದೆ. ಇವರು ತಮ್ಮ ಆಡಳಿತದ ಉದ್ದಕ್ಕೂ ಚೋಳರ ವಿರುದ್ಧ ದಕ್ಷಿಣ ಭಾರತದ ಪ್ರಭುತ್ವಕ್ಕಾಗಿ ಹೋರಾಡಬೇಕಾಯಿತು. ಈ ವಂಶದ ದೊರೆಗಳು ಸಾಮ್ರಾಜ್ಯ ವಿಸ್ತರಣಾಕಾಂಕ್ಷಿಗಳೇ ಅಲ್ಲದೆ ಕಲೆ, ಸಾಹಿತ್ಯಕ್ಕೆ ವಿಶೇಷವಾದ ಪ್ರೋತ್ಸಾಹ ನೀಡಿದರು. ಧಾರ್ಮಿಕ ಜಾಗೃತಿ ಇವರ ಕಾಲದಲ್ಲಿ ಉಂಟಾದದ್ದು ವಿಶೇಷ. ಕಾಯಕಕ್ಕೆ ಆದ್ಯತೆ ನೀಡಿದ 'ವೀರಶೈವ ಧರ್ಮ' ತಲೆಎತ್ತಿ ಜಾತೀಯತೆಯನ್ನು ತಿರಸ್ಕರಿಸಿ ಸಮಾಜದಲ್ಲಿನ ಮೌಢ್ಯತೆ, ಕಂದಾಚಾರಗಳ ವಿರುದ್ಧದ ಆಶಾಕಿರಣವಾಯಿತು. ಉನ್ನತ ಗುಣಮಟ್ಟದ ಅನೇಕ ಕೃತಿಗಳು ಇವರ ಕಾಲದಲ್ಲಿ ರಚನೆಯಾದವು. ಹೀಗೆ ಕರ್ನಾಟಕವು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಸರ್ವತೋಮುಖ ಪ್ರಗತಿಯನ್ನು ಸಾಧಿಸಿತು.

### ಆಧಾರಗಳು

ಈ ವಂಶದ ಬಗೆಗಿನ ಇತಿಹಾಸ ರಚಿಸಲು ನೂರಾರು ಶಾಸನಗಳು ನಮಗೆ ಲಭ್ಯವಾಗಿವೆ. ಇದರಲ್ಲಿ ಆರನೇ ವಿಕ್ರಮಾದಿತ್ಯನ ಕಾಲದ ಶಾಸನಗಳೇ ಸಾಕಷ್ಟು ಸಂಖ್ಯೆಯಲ್ಲಿವೆ. ಶಾಸನಗಳೇ ಅಲ್ಲದೆ ಸಾಹಿತ್ಯ ಕೃತಿಗಳಾದ ರನ್ನನ *ಗದಾಯುದ್ಧ* ವು ಕಲ್ಯಾಣ ಚಾಲುಕ್ಯರ ಮೂಲ, ಸತ್ಯಾಶ್ರಯನ ಸಾಧನೆಗಳನ್ನು ಕುರಿತಂತೆ ವಿವರ ನೀಡುತ್ತದೆ. ಬಿಲ್ಹಣನ *ವಿಕ್ರಮಾಂಕ ದೇವಚರಿತ* ಹಾಗೂ ಮೂರನೆ ಸೋಮೇಶ್ವರನ *ವಿಕ್ರಮಾಂಕಾಭ್ಯುದಯಂ* ಆರನೆ ವಿಕ್ರಮಾದಿತ್ಯನ ಬಗ್ಗೆ ವಿವರ ನೀಡುವ ಮುಖ್ಯ ಕೃತಿಗಳಾಗಿವೆ. ಮೂರನೆಯ ಸೋಮೇಶ್ವರನ *ಮಾನಸೋಲ್ಲಾಸ* ಆ ಕಾಲದ ಸಾಂಸ್ಕೃತಿಕ ಚರಿತ್ರೆಯ ಅಭ್ಯಾಸಕ್ಕೆ ನೆರವಾಗುವ ವಿಶ್ವಕೋಶ. ವಚನಕಾರರಿಂದ ರಚಿತವಾದ ವಚನಸಾಹಿತ್ಯವು ಸಾಮೂಹಿಕ ಮತ್ತು ಧಾರ್ಮಿಕ ಚರಿತ್ರೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ.

### ಇಮ್ಮಡಿ ತೈಲಪ (ಕ್ರಿ.ಶ. ೯೭೩-೯೯೭)

ತೈಲಪನು ಆರಂಭದಲ್ಲಿ ರಾಷ್ಟ್ರಕೂಟರ ಮಾಂಡಲಿಕನಾಗಿ ಇಂದಿನ ಬಿಜಾಪುರ ಜಿಲ್ಲೆಯ ತರ್ದವಾಡಿ ಪ್ರಾಂತ್ಯದಲ್ಲಿ ಆಳ್ವಿಕೆ ನಡೆಸುತ್ತಿದ್ದನು. ತೈಲ ಎಂಬುದು ತ್ರೈಲೋಕ್ಯ ಮಲ್ಲ ಎಂಬುದರ ರೂಪ. 'ಅಹವಮಲ್ಲ' ಎಂಬ ಬಿರುದೂ ಈತನಿಗೆ ಇತ್ತು. ಮೂರನೆ ಕೃಷ್ಣನ ಸಾಮಂತನಾಗಿ ಅವನ ಮೆಚ್ಚುಗೆಯನ್ನು ಗಳಿಸಿದ್ದ ತೈಲಪನು ನಂತರದ ರಾಷ್ಟ್ರಕೂಟರ ದುರ್ಬಲತೆಯನ್ನು ಉಪಯೋಗಿಸಿಕೊಳ್ಳಲು ಸಿದ್ಧನಾದನು. ಧಾರಾದ ಪರಮಾರ ಹರ್ಷ ಸೀಯುಕನು ರಾಷ್ಟ್ರಕೂಟರ ರಾಜಧಾನಿ ಮಳಖೇಡವನ್ನು ಮುತ್ತಿ ಇಮ್ಮಡಿ ಕರ್ಕನನ್ನು

ಸೋಲಿಸಿದನು. ಈ ಅವಕಾಶವನ್ನು ಉಪಯೋಗಿಸಿಕೊಂಡು ತೈಲಪನು ಕರ್ಕನನ್ನು ಸೋಲಿಸಿ ರಾಷ್ಟ್ರಕೂಟ ಸಾಮ್ರಾಜ್ಯವನ್ನು ವಶಪಡಿಸಿಕೊಂಡನು. ನೀಲಕಂಠಶಾಸ್ತ್ರಿಯವರ ಪ್ರಕಾರ "ರಾಷ್ಟ್ರಕೂಟ ಸಾಮ್ರಾಜ್ಯ, ಅವರ ಗೆಳೆಯರು ಮತ್ತು ಅವರ ವೈರಿಗಳು ಎಲ್ಲಕ್ಕೂ ವಾರಸುದಾರನಾದನು."

ಮಳಖೇಡವನ್ನು ವಶಪಡಿಸಿಕೊಂಡ ತೈಲಪ ಮುಂದೆ ಭಾರಿ ವಿರೋಧವನ್ನು ಎದುರಿಸ ಬೇಕಾಗಿ ಬಂದಿತು. ಗಂಗರ ಪಾಂಚಾಲದೇವ ವಿರೋಧ ಮಾಡಿದಾಗ ಅವನನ್ನು ಕೊಂದು 'ಪಾಂಚಾಲಮರ್ದನ ಪಂಚಾನನ' ಎಂಬ ಬಿರುದು ಧರಿಸಿಕೊಂಡನು. ನಾಲ್ಕನೆಯ ಇಂದ್ರನನ್ನು ರಾಷ್ಟ್ರಕೂಟ ಸಿಂಹಾಸನಕ್ಕೆ ತರುವ ಗಂಗ ಮಾರಸಿಂಹನ ಎಲ್ಲ ಪ್ರಯತ್ನವನ್ನು ವಿಫಲ ಗೊಳಿಸಿದನು. ರಾಷ್ಟ್ರಕೂಟ ಸಾಮಂತರಾಗಿದ್ದ ಸವದತ್ತಿಯ ರಟ್ಟರು, ಬಿಜಾಪುರದ ಸಿಂಧರು, ಉತ್ತರ ಕೊಂಕಣದ ಶಿಲಾಹರರು ಮತ್ತು ಸೇವುಣರು ತೈಲಪನ ಸಾರ್ವಭೌಮತ್ವವನ್ನು ಒಪ್ಪಿಕೊಂಡರು. ಗುಜರಾತ್ ಪ್ರದೇಶವನ್ನು ಹೊರತುಪಡಿಸಿ ಉಳಿದೆಲ್ಲಾ ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ತೈಲಪ ಒಡೆಯನಾದನು.

ಮೇರುತುಂಗನ *ಪ್ರಬಂಧ ಚಿಂತಾಮಣಿಯ* ಪ್ರಕಾರ ರಾಷ್ಟ್ರಕೂಟ ರಾಜ್ಯವನ್ನು ಗೆದ್ದು ಕೊಂಡ ನಂತರ ತೈಲಪನು ಮಾಳವದ ಅರಸ ಸೀಯಕ ಹರ್ಷನ ಉತ್ತರಾಧಿಕಾರಿ ಪರಮಾರ ಮುಂಜನಿಂದ ೧೫ ಬಾರಿ ಸೋಲನಪ್ಪಿದ್ದನು. ಆದರೆ ೧೬ನೇ ಸಲ ಮುಂಜನು ಚಾಲುಕ್ಯ ರಾಜ್ಯದ ಮೇಲೆ ಧಾಳಿ ಮಾಡಿದಾಗ ತೈಲಪನು ಯಾದವ ಭಿಲ್ಲಮನ ನೆರವು ಪಡೆದು ಕ್ರಿ.ಶ. ೯೯೬ ರಲ್ಲಿ ಮುಂಜನನ್ನು ಸೋಲಿಸಿ ಸೆರೆಹಿಡಿದನು. ನಂತರ ಅವನನ್ನು ಕೊಲ್ಲಲಾಯಿತು. ಮುಂದೆ ತೈಲಪನು ಚೋಳರ ಮೊದಲನೆ ರಾಜರಾಜನನ್ನು ಸೋಲಿಸಿ ಅವನಿಂದ ೧೫೦ ಯುದ್ಧದ ಆನೆಗಳನ್ನು ವಶಪಡಿಸಿಕೊಂಡನೆಂದು ಕೋಗಾಲಿ ಶಾಸನ ತಿಳಿಸುತ್ತದೆ. ಗೂರ್ಜರ ರನ್ನು ಸೋಲಿಸಿ 'ಗೂರ್ಜರ ಭಯಜ್ವರ' ಎಂಬ ಬಿರುದು ಧರಿಸಿದನು. ಸುಮಾರು ೨೪ ವರ್ಷ ರಾಜ್ಯವಾಳಿದ ಈತನಿಗೆ ಸತ್ಯಾಶ್ರಯ, ದಶವರ್ಮ ಎಂಬಿಬ್ಬರು ಪುತ್ರರಿದ್ದರು. ಇವನ ರಾಣಿ ಚಾಕವ್ವೆ, ಇವನ ಮರಣಾನಂತರ ಸತ್ಯಾಶ್ರಯನು ಪಟ್ಟಕ್ಕೆ ಬಂದನು. ಇವನ ನಂತರ ಐದನೆಯ ವಿಕ್ರಮಾದಿತ್ಯ, ಅಯ್ಯಣ ಇಮ್ಮಡಿ ಜಯಸಿಂಹ, ಮೊದಲನೆ ಸೋಮೇಶ್ವರ ಕ್ರಮವಾಗಿ ರಾಜ್ಯಭಾರ ಮಾಡಿದರು. ನಂತರ ಬಂದವನೆ ಆರನೆ ವಿಕ್ರಮಾದಿತ್ಯ. ಇವನು ಕಲ್ಯಾಣದ ಚಾಲುಕ್ಯರಲ್ಲೇ ಪ್ರಸಿದ್ಧ ಅರಸ.

## ಆರನೆ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೬)

ಕರ್ನಾಟಕದ ಅರಸರಲ್ಲಿ ರಾಷ್ಟ್ರಮಟ್ಟದ ಗೌರವಗಳಿಸಿದ ಚಕ್ರವರ್ತಿಗಳಲ್ಲಿ ವಿಕ್ರಮಾ ದಿತ್ಯನಿಗೆ ಅಗ್ರಸ್ಥಾನ ಸಲ್ಲುತ್ತದೆ. ಅತ್ಯಧಿಕ ಶಾಸನ ಬರೆಯಿಸಿ, ಯುದ್ಧಕಾರ್ಯ ಕೈಗೊಂಡು ಮತ್ತು ಬಹುಕಾಲ ಸಮರ್ಥ ಆಡಳಿತ ನಡೆಸಿದ ಈತ ಪ್ರಖ್ಯಾತ ಚಕ್ರವರ್ತಿಗಳ ಸಾಲಿನಲ್ಲಿ ನಿಲ್ಲುವ ವ್ಯಕ್ತಿಯಾಗಿದ್ದಾನೆ. ಇಂತಹ ವ್ಯಕ್ತಿಯ ಜೀವನೇತಿಹಾಸವನ್ನು ತಿಳಿಯಲು ಸಾಕಷ್ಟು ಸಂಖ್ಯೆ ಶಾಸನಗಳು. ಕವಿ ಬಿಲ್ಹಣನ *ವಿಕ್ರಮಾಂಕದೇವ ಚರಿತ* ಮೂರನೇ ಸೋಮೇಶ್ವರನ

*ವಿಕ್ರಮಾಂಕಾಭ್ಯುದಯಂ* ಎಂಬ ಕಾವ್ಯಗಳು ಪ್ರಮುಖ ಆಧಾರಗಳಾಗಿವೆ. ಮೊದಲನೆ ಸೋಮೇಶ್ವರ ಮತ್ತು ಬಾಚಲಾದೇವಿಯರ ಎರಡನೆಯ ಪುತ್ರನಾಗಿ ವಿಕ್ರಮಾದಿತ್ಯನು ಜನಿಸಿದನು. ಇವನ ಬಾಲ್ಯಜೀವವನ್ನು ಕುರಿತಂತೆ ಬಿಲ್ಹಣನು "ಶಸ್ತ್ರಪ್ರವೀಣನಾದ ಈತನು ಶಾಸ್ತ್ರ ಕಾವ್ಯಪ್ರವೀಣನೂ, ವಾಗ್ಮಿಯೂ ಆಗಿದ್ದನೆಂದು" ಎಂದು ವರ್ಣಿಸಿದ್ದಾನೆ. ಚಿಕ್ಕ ವಯಸ್ಸಿನಲ್ಲಿಯೇ ಶೌರ್ಯಾದಿ ಗುಣಗಳಿಗೆ ಹೆಸರಾಗಿದ್ದ ಇವನನ್ನು ಮೆಚ್ಚಿ ಆತನ ತಂದೆ ಮೊದಲನೆ ಸೋಮೇಶ್ವರನು ಅವನಿಗೆ ಯುವರಾಜ ಪಟ್ಟಕಟ್ಟಲು ನಿರ್ಧರಿಸಿದಾಗ ನಯವಾಗಿ ಅದನ್ನು ನಿರಾಕರಿಸಿ ತನ್ನ ಅಣ್ಣ ಎರಡನೆ ಸೋಮೇಶ್ವರನಿಗೆ ಆ ಹುದ್ದೆ ಲಭಿಸುವಂತೆ ಮಾಡಿದನು. ಆದುದರಿಂದ ಅವನನ್ನು ದೊರೆಯು ನೊಳಂಬವಾಡಿ ೩೨,೦೦೦, ಬನವಾಸಿ ೧೨,೦೦೦ ವಿಭಾಗಗಳಾಗಿಸಿ ರಾಜ್ಯಪಾಲನನ್ನಾಗಿ ಮಾಡಿದನು. ಈ ಹುದ್ದೆಯ ಬಲದಿಂದ ಅವನು ತನ್ನ ತಂದೆಗೆ ಅನೇಕ ಕದನಗಳಲ್ಲಿ ನೆರವಾಗಿ ರಾಜ್ಯ ವಿಸ್ತಾರಕ್ಕೆ ಕಾರಣನಾದನು. ತಂದೆ ಅಹವಮಲ್ಲ ಸೋಮೇಶ್ವರನ ಆಜ್ಞೆಯ ಮೇರೆಗೆ ವಿಕ್ರಮಾದಿತ್ಯ ದಂಡಯಾತ್ರೆ ಕೈಗೊಂಡು ಶತ್ರುಗಳ ಮೇಲೆ ವಿಜಯ ಸಾಧಿಸಿ ಕೃಷ್ಣಾನದಿಯ ದಂಡೆಯ ಮೇಲೆ ಬೀಡು ಬಿಟ್ಟಿರುತ್ತಾನೆ. ಅಲ್ಲಿಗೆ ಕಲ್ಯಾಣ ನಗರದಿಂದ ಬಂದ ದೂತರು ಅಹವಮಲ್ಲ ಸೋಮೇಶ್ವರನು ಕುರುವತ್ತಿಯ ಸಮೀಪ ತುಂಗಭದ್ರಾ ನದಿಯಲ್ಲಿ ಜಲಸಮಾಧಿಯ ಮೂಲಕ ನಿಧನ ಹೊಂದಿದನೆಂದು ತಿಳಿಸಿದರು. ಈ ವಿಷಯ ಕೇಳಿದ ವಿಕ್ರಮಾದಿತ್ಯನು ಸ್ವರ್ಗಸ್ಥ ತಂದೆಗೆ ಮಾಡಬೇಕಾದ ವಿಧಿಕರ್ಮಗಳನ್ನು ಮಾಡಿ ಮುಗಿಸಿ ಚಕ್ರವರ್ತಿಯಾಗಿದ್ದ ತನ್ನ ಅಣ್ಣನನ್ನು ನೋಡಲು ಕಲ್ಯಾಣ ನಗರಕ್ಕೆ ಬಂದನು. ಮುಂದೆ ಬಿಲ್ಹಣನು ಅಣ್ಣ-ತಮ್ಮಂದಿರಿಬ್ಬರ ಮಧ್ಯೆ ವೈರತ್ವ ಬೆಳೆಯಿತು ಎಂದು ಹೇಳಿದ್ದಾನೆ. ಎರಡನೆ ಸೋಮೇಶ್ವರ ತನ್ನ ತಮ್ಮನ ಚಲನ-ವಲನಗಳನ್ನು ಸಂಶಯದಿಂದ ಕಾಣತೊಡಗಿದನು. ಅವನ ಶೌರ್ಯ ಗುಣಗಳನ್ನು ನೋಡಿ ಸಹಿಸಲಿಕ್ಕಾಗಲಿಲ್ಲ. ಅವನನ್ನು ನಿರ್ನಾಮ ಮಾಡಲು ಯೋಚಿಸಿದ. ಈ ಅಪಾಯದ ಮುನ್ಸೂಚನೆಯನ್ನು ಅರಿತ ಅವನು ತನ್ನ ಕಿರಿಯ ಸೋದರ ಜಯಸಿಂಹನನ್ನು ಕರೆದುಕೊಂಡು ಕಲ್ಯಾಣ ನಗರವನ್ನು ಬಿಟ್ಟುಹೋಗುತ್ತಾನೆ. ಈ ಸುದ್ದಿ ಸೋಮೇಶ್ವರನಿಗೆ ಗೊತ್ತಾಗಿ ಇವರನ್ನು ಸೆರೆಹಿಡಿಯಲು ಸಾಕಷ್ಟು ಸೈನ್ಯವನ್ನು ಕಳುಹಿಸುತ್ತಾನೆ. ವಿಕ್ರಮಾದಿತ್ಯನ ಬಲದ ಮುಂದೆ ನಿಲ್ಲಲಾಗದ ಸೇನೆ ಹಿಂತಿರುಗಿತು. ಅಣ್ಣ-ತಮ್ಮಂದಿರ ಜಗಳದ ವಿಷಯ ತಿಳಿದು ಅಳೂಪ ದೊರೆ, ಕದಂಬ ಜಯಕೇಶಿ, ಬನವಾಸಿ ಕದಂಬರು, ಉಚ್ಚಂಗಿ ಪಾಂಡ್ಯರು ವಿಕ್ರಮಾದಿತ್ಯನ ಮೇಲೆರಗಿದಾಗ ಆತನು ಅವರನ್ನು ಸದೆಬಡಿದನು. ನಂತರ ವಿಕ್ರಮಾದಿತ್ಯ ವೀರರಾಜೇಂದ್ರ ಚೋಳನ ಮಗಳನ್ನು ಮದುವೆಯಾಗಿ ಚೋಳರ ಸಂಬಂಧವನ್ನು ಬೆಳೆಸಿಕೊಂಡನು. ಕಾಲಾನಂತರದಲ್ಲಿ ಚೋಳಪಟ್ಟಕ್ಕೆ ಬಂದಿದ್ದ ವಿಕ್ರಮಾದಿತ್ಯನ ಅಳಿಯ ಅಧಿರಾಜೇಂದ್ರನನ್ನು ಕೊಂದು ವೆಂಗಿಯ ರಾಜಿಗನು ಚೋಳ ಸಿಂಹಾಸನವನ್ನು ಆಕ್ರಮಿಸುತ್ತಾನೆ. ಇತ್ತ ಅಣ್ಣ ಸೋಮೇಶ್ವರನು ರಾಜಿಗನೊಡನೆ ಒಪ್ಪಂದ ಮಾಡಿಕೊಂಡು ವಿಕ್ರಮಾದಿತ್ಯನ ಮೇಲೆ ಯುದ್ಧಕ್ಕೆ ಬರುತ್ತಾನೆ. ಈ ಕಡೆಯಿಂದ ಸೋಮೇಶ್ವರನ ಸೈನ್ಯ ಆ ಕಡೆಯಿಂದ ರಾಜಿಗನ ಸೈನ್ಯಗಳು ವಿಕ್ರಮಾದಿತ್ಯನನ್ನು ಸುತ್ತುವರಿದವು. ಮಧ್ಯದಲ್ಲಿ ಸಿಕ್ಕುಹಾಕಿಕೊಂಡ ವಿಕ್ರಮಾದಿತ್ಯ ಅಣ್ಣನ

ಈ ದ್ರೋಹದಿಂದ ದುಃಖಿತನಾಗಿ ಎರಡೂ ಕಡೆಯ ಸೈನ್ಯದ ವಿರುದ್ಧ ಹೋರಾಡಿದನು. ರಾಜಿಗನು ಸೋತು ಪಲಾಯನ ಮಾಡಿದನು. ಸೋಮೇಶ್ವರನನ್ನು ಸೆರೆಹಿಡಿದು ಕಾರಾಗೃಹಕ್ಕೆ ತಳ್ಳಿ, ಕ್ರಿ.ಶ. ೧೦೭೬ ಫೆಬ್ರವರಿ ೨೬ರಂದು ಸಿಂಹಾಸನಾರೂಢನಾದನು. ತಾನು ಪಟ್ಟಾಭಿಷಿಕ್ತನಾದ ನೆನಪಿಗೆ ತನ್ನ ಹೆಸರಲ್ಲಿ 'ಚಾಲುಕ್ಯ ವಿಕ್ರಮ ಶಕೆ' ಎಂಬ ಕಾಲಗಣನೆಯನ್ನು ಆರಂಭಿಸಿದನು. ಹೀಗೆ ಅಣ್ಣ-ತಮ್ಮಂದಿರೊಡನೆ ಸ್ನೇಹ ವೈರಗಳ ಮಧ್ಯೆ ವಿಕ್ರಮಾದಿತ್ಯನು ತನ್ನದೇ ಆದ ವ್ಯಕ್ತಿತ್ವ ರೂಪಿಸಿಕೊಂಡು ಅನ್ಯರಾಜರೊಂದಿಗೆ ಅನೇಕ ಯುದ್ಧಗಳನ್ನು ಕೈಗೊಂಡನು.

### ದಿಗ್ವಿಜಯಗಳು

ಸ್ವಭಾವತಃ ವೀರನಾಗಿದ್ದ ವಿಕ್ರಮಾದಿತ್ಯ ಶಸ್ತ್ರವಿದ್ಯೆಯಲ್ಲಿಯೂ ಪಾರಂಗತನಾಗಿದ್ದನು. ಚಿಕ್ಕವನಾಗಿದ್ದಾಗಲೇ ಇವನು ಅನೇಕ ಯುದ್ಧಗಳಲ್ಲಿ ಪಾಲ್ಗೊಂಡಿದ್ದನು.

**ಚಾಲುಕ್ಯ-ಚೋಳರು :** ಚಾಲುಕ್ಯರಿಗೂ ಚೋಳರಿಗೂ ವಂಶ ಪಾರಂಪರ್ಯವಾಗಿ ಯುದ್ಧ ನಡೆದುಕೊಂಡೇ ಬಂದಿದೆ. ಆರನೆ ವಿಕ್ರಮಾದಿತ್ಯನು ಸಿಂಹಾಸನಕ್ಕೆ ಬರುವ ಮೊದಲೇ ಚೋಳರ ರಾಜಾಧಿರಾಜ ರಾಜೇಂದ್ರದೇವ, ವೀರರಾಜೇಂದ್ರರನ್ನು ಸೋಲಿಸಿ ತನ್ನ ಶೌರ್ಯವನ್ನು ಪ್ರದರ್ಶಿಸಿದ್ದನು. ವಿಕ್ರಮಾದಿತ್ಯನ ಶತ್ರುವಾದ ಕುಲೋತ್ತುಂಗನು ಸಿಲೋನಿನ ವಿಜಯ ಬಾಹುವಿನೊಂದಿಗೆ ಯುದ್ಧ ಮಾಡುತ್ತಿದ್ದನು. ವಿಜಯಬಾಹು ಯಶಸ್ವಿಯಾಗಿ ಕುಲೋತ್ತುಂಗನನ್ನು ಸೋಲಿಸಿದ್ದನು. ಈ ಅವಕಾಶವನ್ನು ಉಪಯೋಗಿಸಿಕೊಂಡ ವಿಕ್ರಮಾದಿತ್ಯ ಸಿಲೋನಿನ ವಿಜಯಬಾಹುವಿನ ಆಸ್ಥಾನಕ್ಕೆ ತನ್ನ ರಾಯಭಾರಿಯನ್ನು ಕಳುಹಿಸಿಕೊಟ್ಟು ಸ್ನೇಹ ಸಂಪಾದಿಸಿದನು. ಈ ಕುಲೋತ್ತುಂಗನೂ ಕೂಡ ವಿಕ್ರಮಾದಿತ್ಯನಷ್ಟೇ ಸಬಲನಾಗಿದ್ದನು. ಇಬ್ಬರು ಕಾದಾಡಿದರೂ ನಿಶ್ಚಿತ ಜಯಪಡೆಯುವಲ್ಲಿ ವಿಫಲರಾದರು. ಆದರೆ ವೆಂಗಿಯು ಚೋಳರಾಜರ ಮೇಲೆ ಅವಲಂಬಿಸಿದ್ದುದರಿಂದ ಚೋಳರಾಜನು ತನ್ನ ಮಕ್ಕಳನ್ನು ವೆಂಗಿರಾಜ್ಯಕ್ಕೆ ರಾಯಭಾರಿಗಳನ್ನಾಗಿ ಮಾಡಿದನು.

**ಜಯಸಿಂಹನ ಬಂಡಾಯ :** ಸಿಂಹಾಸನಕ್ಕೆ ಬಂದ ನಂತರ ವಿಕ್ರಮಾದಿತ್ಯ ತನ್ನ ಸೋದರ ಜಯಸಿಂಹನಿಗೆ ಬೆಳವೊಲ, ಪುಲಿಗೆರೆ, ಕೋಗಳಿ, ಕುಂದೂರು, ಬನವಾಸಿ ಪ್ರಾಂತ್ಯಗಳನ್ನು ಬಿಟ್ಟುಕೊಟ್ಟಿದ್ದನು. ಕಾಲ ಕಳೆದ ಹಾಗೆ ಜಯಸಿಂಹನು ಜನರನ್ನು ಹಿಂಸಿಸತೊಡಗಿ ಅಪಾರ ಧನ ಸಂಗ್ರಹಿಸಿ ಚಾಲುಕ್ಯರ ಶತ್ರುಗಳಾದ ಚೋಳರ ಸಹವಾಸ ಮಾಡಿದ್ದನು. ವಿಕ್ರಮಾದಿತ್ಯ ಜಾಣತನದಿಂದ ತನ್ನ ಸೋದರನಿಗೆ ಈ ಬಗೆಯ ವಿದ್ರೋಹಕಾರಿ ಚಟುವಟಿಕೆಗಳನ್ನು ಕೈಬಿಡುವಂತೆ ಬುದ್ಧಿವಾದ ಹೇಳಿದನು. ಕೊನೆಗೆ ಯುದ್ಧ ಅನಿವಾರ್ಯವಾಯಿತು. ಸೋತ ಜಯಸಿಂಹನನ್ನು ಅಧಿಕಾರದಿಂದ ತೆಗೆದುಹಾಕಲಾಯಿತು.

**ಪರಮಾರರ ದಮನ :** ವಿಕ್ರಮಾದಿತ್ಯನು ಪರಮಾರ ಉದಯಾದಿತ್ಯನ ಎದುರಾಗಿ ಮೂರು ಬಾರಿ ದಂಡಯಾತ್ರೆ ಕೈಗೊಂಡು ಅಂತಿಮವಾಗಿ ಅವನನ್ನು ಸೋಲಿಸಿದನು. ಕ್ರಿ.ಶ. ೧೦೮೮ ರಲ್ಲಿ ಪರಮಾರ ಉದಯಾದಿತ್ಯನನ್ನು ಸೋಲಿಸಿ ಧಾರಾ ನಗರವನ್ನು ನಾಶಪಡಿಸಿದನು.

ಉದಯಾದಿತ್ಯನ ಮತ್ತೊಬ್ಬ ಮಗ ಜಗದೇವನು ವಿಕ್ರಮಾದಿತ್ಯನನ್ನು ಬೆಂಬಲಿಸಿದನು. ಇವರಿಬ್ಬರ ನಡುವೆ ಪ್ರೀತಿ ವಿಶ್ವಾಸಗಳು ಬೆಳೆದವು. ಇದರ ಫಲವಾಗಿ ಚಾಲುಕ್ಯ ಸಾಮ್ರಾಜ್ಯವು ಮಾಳವದವರೆಗೆ ವಿಸ್ತರಿಸಿತು. ಗೊಗ್ಗಿ ಮತ್ತು ಪೈವೆಯ ನಾಗವರ್ಮ ವಿಕ್ರಮಾದಿತ್ಯನ ವಿರುದ್ಧ ಬಂಡಾಯವೆದ್ದರು. ಆ ಬಂಡಾಯವನ್ನು ಅಡಗಿಸಿದ ಮೇಲೆ ಶಿಲಾಹಾರ ಒಂದನೆ ಭೋಜ, ಗುರ್ಜರ ಸಿಂದೂರಾಜ, ಇರಿಪುರಿಯರಾಜ ಮತ್ತು ಕಾಲಚೂರಿ ರಾಜರನ್ನು ಹತ್ತಿಕ್ಕಿದನು.

**ಚಾಲುಕ್ಯ-ಹೊಯ್ಸಳ ಘರ್ಷಣೆ :** ಹೊಯ್ಸಳ ವಂಶದ ವಿನಯಾದಿತ್ಯ ಮತ್ತು ಎರೆಯಂಗ ವಿಕ್ರಮಾದಿತ್ಯನಿಗೆ ನಿಷ್ಠೆಯುಳ್ಳವರಾಗಿದ್ದರು. ಹೀಗಾಗಿ ಅವನು ಅವರಿಗೆ ಹೆಚ್ಚಿನ ಸ್ಥಾನಮಾನ ವನ್ನು ನೀಡಿದ್ದನು. ಆದರೆ ಎರೆಯಂಗನ ಮಕ್ಕಳಾದ ಬಲ್ಲಾಳ ಮತ್ತು ವಿಷ್ಣುವರ್ಧನ ಇದನ್ನು ದುರುಪಯೋಗಪಡಿಸಿಕೊಂಡಾಗ ಚಾಲುಕ್ಯ ಹೊಯ್ಸಳರ ಸಂಬಂಧ ಹದಗೆಡುತ್ತದೆ. ಸ್ವತಂತ್ರನಾಗುವ ಕನಸನ್ನು ಕಾಣುತ್ತಿದ್ದ ವಿಷ್ಣುವರ್ಧನನು ಚಾಲುಕ್ಯರ ಸಾಮಂತರಾದ ಹಾನಗಲ್ಲಿನ ಕದಂಬರು, ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿ ಅವರ ಮೇಲೆ ತನ್ನ ಪರಮಾಧಿಕಾರವನ್ನು ಸ್ಥಾಪಿಸಿದರು. ಆರಂಭದಲ್ಲಿ ಇದನ್ನು ನಿರ್ಲಕ್ಷಿಸಿ ಚಾಲುಕ್ಯರು ಅವರ ಉಪಟಳ ಹೆಚ್ಚಾದಾಗ ಸಾಮ್ರಾಟ ವಿಕ್ರಮಾದಿತ್ಯ ಸಿಂಧ ವಂಶದ ಮಹಾಮಂಡಳೇಶ್ವರ ಅಚುಗಿಯ ನೇತೃತ್ವದಲ್ಲಿ ೧೨ ಜನ ಸಾಮಂತರ ಸೇನೆಯನ್ನು ಕಳುಹಿಸಿದನು. ಈ ಸೈನ್ಯ ಕಣ್ಣೇಗಾಲದಲ್ಲಿ ಬೀಡುಬಿಟ್ಟಿತ್ತು. ಇದನ್ನು ಎದುರಿಸಲು ವಿಷ್ಣುವರ್ಧನ ತನ್ನ ಮಹಾಪ್ರಧಾನ ದಂಡನಾಯಕ ಗಂಗರಾಜನನ್ನು ಕಳುಹಿಸುತ್ತಾನೆ. ಕ್ರಿ.ಶ. ೧೧೧೮ ರಲ್ಲಿ ನಡೆದ ಯುದ್ಧದಲ್ಲಿ ಚಾಲುಕ್ಯಸೇನೆ ಸೋತು ಪಲಾಯನಗೊಳ್ಳುತ್ತದೆ. ಇದರಿಂದ ಕೋಪಗೊಂಡ ವಿಕ್ರಮಾದಿತ್ಯ ಪ್ರಚಂಡ ದಂಡಿನೊಂದಿಗೆ ನುಗ್ಗಿ ಬಂದು ಹೊಯ್ಸಳರನ್ನು ಹಲಸೂರು ಮತ್ತು ಹೊಸವೀಡು ಯುದ್ಧಗಳಲ್ಲಿ ಸೋಲಿಸಿದನು. ಸೋತ ವಿಷ್ಣುವರ್ಧನ ಚಾಲುಕ್ಯರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ಮಹಾಮಂಡಲೇಶ್ವರನಾಗಿ ಮುಂದುವರಿದನು.

ವಿಕ್ರಮಾದಿತ್ಯನು ಕಲೆ ಮತ್ತು ಸಾಹಿತ್ಯದ ಪೋಷಕನಾಗಿದ್ದು ವಿಜ್ಞಾನೇಶ್ವರ ಎಂಬ ಖ್ಯಾತ ಕವಿ ಹಿಂದೂ ಕಾನೂನು ಗ್ರಂಥವೆನಿಸಿದ *ಮಿತಾಕ್ಷರ ಸಂಹಿತೆ* ಕೃತಿ ರಚಿಸಿದ್ದಾನೆ. ಮತ್ತೊಬ್ಬ ಆಸ್ಥಾನ ಕವಿ ಬಿಲ್ಹಣನು *ವಿಕ್ರಮಾಂಕದೇವ ಚರಿತೆ* ಎಂಬ ಕೃತಿಯನ್ನು ರಚಿಸಿದ್ದಾನೆ. ಇವನ ಸೇನಾನಿ ಮಹಾದೇವ ದಂಡನಾಯಕ ಇಟಗಿಯ ಖ್ಯಾತ ಮಹಾದೇವ ದೇವಾಲಯವನ್ನು ನಿರ್ಮಿಸಿದನು. ವಿಕ್ರಮನ ರಾಜ್ಯ 'ರಾಮರಾಜ್ಯ' ಎಂದು ಬಿಲ್ಹಣ ಹೇಳಿದರೆ, "ಭೂತಕಾಲ ದಲ್ಲಿ ಕಲ್ಯಾಣದಂತ ರಾಜಧಾನಿ ಹಿಂದಿಲ್ಲ ಮುಂದಿರದು. ವಿಕ್ರಮಾರ್ಕನಂಥ ಅರಸನನ್ನು ಕಂಡಿಲ್ಲ ಕೇಳಿಲ್ಲ" ಎಂದು ವಿಜ್ಞಾನೇಶ್ವರ ಹೇಳಿದ್ದಾನೆ. ವಿಕ್ರಮಾದಿತ್ಯನ ಪ್ರಧಾನರಾಣಿ 'ಚಂದಲಾದೇವಿ' ಇವಳು ನೃತ್ಯ ಸಂಗೀತಾದಿ ಕಲೆಗಳಲ್ಲಿ ಪರಿಣಿತಳಾಗಿದ್ದು, ಅಭಿನವ ಸರಸ್ವತಿ ಎನಿಸಿದ್ದಳು. ಈಕೆ ಶಿಲಾಹಾರ ಮನೆತನದ ರಾಜಕುಮಾರಿ. ಅವನ ಇತರ ರಾಣಿಯರೆಂದರೆ ಕೇತಲದೇವಿ, ಪದ್ಮಲದೇವಿ, ಸಾವಳದೇವಿ, ಪಟ್ಟಮಹಾದೇವಿ, ಮೈಳಲಮಹಾದೇವಿ, ಜಕ್ಕಲ ದೇವಿ, ಮಾಳರಿಲದೇವಿ, ಭಾಗಲಮಹಾದೇವಿ, ಮಲಯವತಿದೇವಿ. ಇವನು ವಿಕ್ರಮಪುರ

ವೆಂಬ ನಗರವನ್ನು ಸ್ಥಾಪಿಸಿ ಅಲ್ಲಿ ಒಂದು ದೇವಾಲಯವನ್ನು ಕಟ್ಟಿಸಿದನು. ಶೌರ್ಯದಲ್ಲಿ ನಾರಾಯಣನಾಗಿದ್ದು ವಿವಾಹದ ವಿಷಯದಲ್ಲಿ ಶ್ರೀಕೃಷ್ಣನಾಗಿದ್ದ ಆರನೆ ವಿಕ್ರಮಾದಿತ್ಯ ಚಾಲುಕ್ಯ ರಾಜಮನೆತನದಲ್ಲಿ ಮಹಿಮಾನ್ವಿತ ಚಕ್ರವರ್ತಿ. ಐವತ್ತು ವರ್ಷಗಳ ಸಂತೃಪ್ತಿಯ ಆಳ್ವಿಕೆಯ ನಂತರ ಕ್ರಿ.ಶ. ೧೧೨೭ ರಲ್ಲಿ ಕಾಲವಾದನು.

ವಿಕ್ರಮಾದಿತ್ಯನ ನಂತರ ಅವನ ಮಗ ಮೂರನೆ ಸೋಮೇಶ್ವರ ದೊರೆಯಾದನು. ಇವನು ಸರ್ವಜ್ಞನೆಂದೇ ಹೆಸರುವಾಸಿಯಾಗಿದ್ದು *ಮಾನಸೋಲ್ಲಾಸ* ಅಥವಾ *ಅಭಿಲಷಿತಾರ್ಥ ಚಿಂತಾಮಣಿ* ಎಂಬ ಕೃತಿ ರಚಿಸಿದನು. ಇವನ ನಂತರ ಬಂದ ಜಗದೇಕಮಲ್ಲನ ಆಳ್ವಿಕೆಯಲ್ಲಿ ಹಲವಾರು ದಂಗೆಗಳು ಸಂಭವಿಸಿ ಆಡಳಿತದ ಸ್ಥಿರತೆಯನ್ನು ಅಲುಗಾಡಿಸಿದವು. ಇಲ್ಲಿಂದ ಮುಂದೆ ಚಾಲುಕ್ಯರು ಅವನತಿಯನ್ನು ಕಾಣತೊಡಗಿದರು. ಕಲಚೂರಿ ಬಿಜ್ಜಳ ಪ್ರಬಲನಾಗಿ ಕಲ್ಯಾಣವನ್ನು ಆಕ್ರಮಿಸಿದನು. ನಾಲ್ಕನೆ ಸೋಮೇಶ್ವರ ಕ್ರಿ.ಶ. ೧೧೮೪ ರಿಂದ ೧೧೨೦ ರವರೆಗೆ ಆಳಿದ ಅವನು ಕಲಚೂರಿಗಳನ್ನು ಓಡಿಸಿ ಪುನಃ ಚಾಲುಕ್ಯರಾಜ್ಯ ಸ್ಥಾಪನೆ ಮಾಡಿದರೂ ಅದು ಬಹುಕಾಲ ಉಳಿಯಲಿಲ್ಲ. ಸೇವುಣರು ಉತ್ತರ ಕರ್ನಾಟಕವನ್ನು ಆಕ್ರಮಿಸಿದರು. ಹೊಯ್ಸಳರು ದಕ್ಷಿಣ ಕರ್ನಾಟಕವನ್ನು ತಮ್ಮದಾಗಿಸಿಕೊಂಡರು. ಈ ಬೆಳವಣಿಗೆಯೊಂದಿಗೆ ಚಾಲುಕ್ಯ ಸಾಮ್ರಾಜ್ಯ ಸಂಪೂರ್ಣ ನಶಿಸಿಹೋಯಿತು.

## ಸಾಂಸ್ಕೃತಿಕ ಕೊಡುಗೆಗಳು

### ಸಾಹಿತ್ಯ

ಕಲ್ಯಾಣದ ಚಾಲುಕ್ಯ ದೊರೆಗಳು ಸಂಸ್ಕೃತ ಲೇಖಕರಿಗೆ ಕೊಡುತ್ತಿದ್ದ ಆಶ್ರಯವು ಕರ್ನಾಟಕದ ಚರಿತ್ರೆಯಲ್ಲೇ ಅಭೂತಪೂರ್ವವಾದುದು. ಸಮಗ್ರ ಭಾರತ ಖ್ಯಾತಿ ಪಡೆದು ಪ್ರಕಾಶಮಾನರಾಗಿದ್ದ ವಾದಿರಾಜ, ಬಿಲ್ಹಣ, ವಿಜ್ಞಾನೇಶ್ವರ ಮುಂತಾದವರು ಚಾಲುಕ್ಯರ ಆಸ್ಥಾನವನ್ನು ಅಲಂಕರಿಸಿದುದು ಸಂಸ್ಕೃತ ಸಾಹಿತ್ಯದ ಬೇರೆ ಬೇರೆ ಶಾಖೆಗಳಿಗೆ ಗಣನೀಯ ವಾದ ಸೇವೆ ಲಭ್ಯವಾಯಿತು. ಎರಡನೆ ಜಯಸಿಂಹನ ಆಸ್ಥಾನದಲ್ಲಿದ್ದ ಜೈನನಾದ ವಾದಿ ರಾಜನು ಜೈನ ಸಂಸ್ಕೃತ ಲೇಖಕರ ತಾರಮಂಡಲದಲ್ಲಿ ಪ್ರಥಮ ಗಣ್ಯತಾರೆಯಾಗಿದ್ದನು. ಇವನು *ನ್ಯಾಯ ವಿನಿಶ್ಚಯ ಟೀಕಾ* ಎಂಬ ಮೇರುಗ್ರಂಥವೇ ಅಲ್ಲದೆ *ಪಾರ್ಶ್ವನಾಥಚರಿತ*, *ಯಶೋಧರಚರಿತ* ಎಂಬೆರಡು ಅಲಂಕಾರಿಕ ಕಾವ್ಯಗಳನ್ನು ರಚಿಸಿದ್ದಾನೆ. ಜೈನರಲ್ಲಿ ಅತ್ಯಂತ ಜನಪ್ರಿಯವಾಗಿರುವ ಏಕೀಭಾವ ಸ್ತೋತ್ರವೂ ಇವನ ಲೇಖನಿಯಿಂದಲೇ ಹೊರಹೊಮ್ಮಿದೆ. *ವಿಕ್ರಮಾಂಕದೇವಚರಿತ* ಎಂಬ ಕೃತಿಯಿಂದ ಆರನೆ ವಿಕ್ರಮಾದಿತ್ಯನನ್ನು ಅಮರನನ್ನಾಗಿಸಿದ ಕೀರ್ತಿ ಕಾಶ್ಮೀರದ ಕವಿ ಬಿಲ್ಹಣನಿಗೆ ಸಲ್ಲುತ್ತದೆ. ಅವನು ಆರನೆ ವಿಕ್ರಮಾದಿತ್ಯನ ಆಸ್ಥಾನ ದಲ್ಲಿದ್ದುಕೊಂಡು ಬಾಣನು ಹರ್ಷನಿಗೆ ತನ್ನ ಗದ್ಯಕಾವ್ಯದಿಂದ ಮಾಡಿದ ಉಪಕಾರವನ್ನೇ ಬಿಲ್ಹಣನು ಆರನೆ ವಿಕ್ರಮಾದಿತ್ಯನಿಗೆ ತನ್ನ ಪದ್ಯಕಾವ್ಯದಿಂದ ಮಾಡಿದ್ದಾನೆ. ಚಾರಿತ್ರಿಕ ಕೊರತೆಯುಳ್ಳ ಸಂಸ್ಕೃತ ಸಾಹಿತ್ಯದಲ್ಲಿ ಚಾರಿತ್ರಿಕ ವ್ಯಕ್ತಿಯೊಬ್ಬನನ್ನು ನಾಯಕನನ್ನಾಗಿ ಉಳ್ಳ

*ವಿಕ್ರಮಾಂಕದೇವ ಚರಿತ* ವು ಗಣನೀಯ ಕೃತಿಗಳಲ್ಲಿ ಒಂದಾಗಿದೆ. ಭಾರತೀಯರ ಅನೇಕ ತಲೆಮಾರು ಜೀವನವನ್ನು ರೂಪಿಸಿದ ವಿಜ್ಞಾನೇಶ್ವರನ *ಮಿತಾಕ್ಷರ* ಎಂಬ ಕೃತಿ ಆರನೆ ವಿಕ್ರಮಾದಿತ್ಯನ ಆಶ್ರಯದಲ್ಲಿಯೇ ರಚಿತವಾಯಿತು. ಇದು ಪ್ರಾಚೀನವಾದ *ಯಾಜ್ಞವಲ್ಕ್ಯ ಸ್ಮೃತಿ* ಗೆ ವ್ಯಾಖ್ಯಾನವಾಗಿದೆ. *ಮಿತಾಕ್ಷರ*ವುಧರ್ಮಶಾಸ್ತ್ರ ಸಾಹಿತ್ಯದಲ್ಲಿ ವಿಶೇಷ ಸ್ಥಾನ ಪಡೆದಿದೆ. ಇದು ಹಿಂದೂ ಕಾನೂನು ಸಂಹಿತೆಯಾಗಿದೆ. ವಿಕ್ರಮಾದಿತ್ಯನ ಮಗನಾದ ಮೂರನೆ ಸೋಮೇಶ್ವರನು ಸಂಸ್ಕೃತ ಸಾಹಿತ್ಯದಲ್ಲೇ ಪ್ರಥಮವಾಗಿ ತನ್ನ ಕಾಲದಲ್ಲಿದ್ದ ಎಲ್ಲ ವಿಧವಾದ ವಿಜ್ಞಾನ ಮತ್ತು ಕಲೆಗಳ ವಿಷಯವನ್ನೊಳಗೊಂಡ ವ್ಯಾಪಕವಾದ ಒಂದು ವಿಶ್ವಕೋಶವನ್ನು ರಚಿಸುವ ಸಾಹಸಕ್ಕೆ ಕೈಹಾಕಿ *ಅಭಿಲಷಿತಾರ್ಥ ಚಿಂತಾಮಣಿ*(ಬಯಸಿದುದನ್ನೆಲ್ಲಾ ಕೊಡುವ ಮಣಿ) ಅಥವಾ *ಮಾನಸೋಲ್ಲಾಸ* (ಮನಸ್ಸಿಗೆ ಉತ್ಸಾಹ ನೀಡುವುದು) ಎಂಬ ಕೃತಿಯನ್ನು ರಚಿಸಿದನು. ಇದು ಭಾರತೀಯ ಸಾಂಸ್ಕೃತಿಕ ಕ್ಷೇತ್ರದಲ್ಲಿ ದ್ರಾವಿಡ ಪ್ರಭಾವಕ್ಕೆ ಯೋಗ್ಯ ಸ್ಥಾನವನ್ನು ಕೊಟ್ಟಿರುವ ಸಂಸ್ಕೃತ ಸಾಹಿತ್ಯದ ಮೊಟ್ಟಮೊದಲ ಕೃತಿ ಮೂರನೆ ಸೋಮೇಶ್ವರನ ಆಸ್ಥಾನದಲ್ಲಿದ್ದ ಜೈನಕವಿ ಪಾರ್ಶ್ವದೇವನು *ಸಂಗೀತ ಸಮಯ ಸಾರ* ಎಂಬ ಗ್ರಂಥವನ್ನು ರಚಿಸಿದನು. ಚಾಲುಕ್ಯ ದೊರೆ ಎರಡನೆ ಜಗದೇಕಮಲ್ಲನ ಲೇಖನಿಯಿಂದ ಸಂಗೀತ ಕ್ಷೇತ್ರದಲ್ಲಿ ಪ್ರಮಾಣೀಭೂತವಾದ *ಸಂಗೀತ ಚೂಡಾಮಣಿ* ಎಂಬ ಕೃತಿ ಉದಯಿಸಿತು.

**ಕನ್ನಡ ಸಾಹಿತ್ಯ**

ಇವರು ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸುವ ವೇಳೆಗಾಗಲೇ ಕನ್ನಡ ಸಾಹಿತ್ಯ ಸಾಕಷ್ಟು ಪ್ರಗತಿ ಹೊಂದಿತ್ತು. ಅನೇಕ ಕವಿಗಳು ಗದ್ಯ ಮತ್ತು ಪದ್ಯ ರೂಪವಾದ ಅನೇಕ ಕೃತಿಗಳನ್ನು ರಚಿಸಿದ್ದರು. ಇದಲ್ಲದೆ ಗದ್ಯಪದ್ಯಗಳ ಸಂಮಿಶ್ರಣ ರೂಪವಾದ ಚಂಪೂ ಶೈಲಿಯಲ್ಲಿಯೂ ಕೃತಿಗಳು ರಚನೆಯಾಗಿದ್ದವು. ಚಂಪೂ ಶೈಲಿಯ ಕವಿಗಳಲ್ಲಿ ಒಂದನೆ ಗುಣವರ್ಮ, ಪಂಪ, ಪೊನ್ನರನ್ನು ಹೆಸರಿಸಬಹುದು. ನಂತರದ ಕವಿಗಳ ಮೇಲೆ ಪಂಪ ಬೀರಿದ ಪ್ರಭಾವ ಅಪಾರ. ಪಂಪನಿಂದ (ಕ್ರಿ.ಶ. ೯೫೦) ಬಸವನ (ಕ್ರಿ.ಶ. ೧೨ನೆ ಶತಮಾನ)ವರೆಗಿನ ಕನ್ನಡ ಸಾಹಿತ್ಯದ ಕಾಲವನ್ನು 'ಪಂಪಯುಗ' ಎಂದು ಕರೆಯಲಾಗಿದೆ. ಈ ಯುಗದಲ್ಲಿದ್ದುಕೊಂಡು ಕೃತಿ ರಚನೆಗೈದ ಚಾಲುಕ್ಯರ ಕಾಲದ ಮೊದಲ ಕವಿ ರನ್ನ. ಇವನು ಕ್ರಿ.ಶ. ೯೪೯ ರಲ್ಲಿ ಮುಧೋಳ ದಲ್ಲಿ ಜಿನವಲ್ಲಭನಿಗೆ ನಾಲ್ಕನೆಯ ಪುತ್ರನಾಗಿ ಜನಿಸಿದನು. ವೃತ್ತಿಯಲ್ಲಿ ಬಳೆಗಾರನಾಗಿದ್ದ ಈತನ ವಿದ್ಯಾಭ್ಯಾಸ ಅಜಿತಸೇನಾಚಾರ್ಯರ ಬಳಿ ನಡೆಯಿತು. ಆರಂಭದಲ್ಲಿ ಸಾಮಂತರ, ಮುಂದೆ ಮಂಡಲೇಶ್ವರರ ಕೊನೆಯಲ್ಲಿ ಚಕ್ರವರ್ತಿಯ ಆಶ್ರಯವನ್ನು ಪಡೆದುಕೊಂಡು 'ಕವಿಚಕ್ರವರ್ತಿ' ಎಂಬ ಬಿರುದನ್ನು ಗಳಿಸಿಕೊಂಡನು. ಈತನಿಂದ ರಚಿತವಾದ ಕೃತಿಗಳೆಂದರೆ *ಅಜಿತಪುರಾಣ, ಗದಾಯುದ್ಧ, ಚಕ್ರೇಶ್ವರ ಚರಿತ, ಪರಶುರಾಮ ಚರಿತ.* ಇವುಗಳಲ್ಲಿ ಕೊನೆಯ ಎರಡು ಗ್ರಂಥಗಳು ದೊರೆತಿಲ್ಲ. ಇವನು *ಅಜಿತಪುರಾಣ*ವನ್ನು ಅತ್ತಿಮಬ್ಬೆಗಾಗಿ ಎರಡನೇ ತೈಲಪನ ಆಶ್ರಯದಲ್ಲಿದ್ದುಕೊಂಡು ಕ್ರಿ.ಶ. ೯೯೩ ರಲ್ಲಿ ರಚಿಸಿದ. *ಗದಾಯುದ್ಧ* ಅಥವಾ *ಸಾಹಸಭೀಮ ವಿಜಯ* ವು ಅವನ ಎರಡನೆಯ ಅತ್ಯುತ್ತಮ ಕೃತಿ. ಇದೊಂದು

ವೀರಕಾವ್ಯವಾಗಿದ್ದು ಶೌರ್ಯವು ಸಾಮಾಜಿಕ ಮೌಲ್ಯವಾಗಿದ್ದ ಕಾಲ ಮತ್ತು ದೇಶಗಳಲ್ಲಿ ರಚಿತವಾಗಿದೆ. ಸಿಂಹಾವಲೋಕನ ಕ್ರಮದಲ್ಲಿ ನಿರೂಪಿತವಾಗಿರುವ ಈ ಕೃತಿ ಕುರುಕ್ಷೇತ್ರದ ಯುದ್ಧದ ಕೊನೆಯ ದಿನಕ್ಕೆ ಸಂಬಂಧಿಸಿದುದಾಗಿದೆ. ಈ ಕಾವ್ಯದ ನಾಯಕನಾದ ಭೀಮನನ್ನು ಚಾಲುಕ್ಯರ ಸತ್ಯಾಶ್ರಯ ಇರಿವಬೆಡಂಗನೊಂದಿಗೆ ಸಮೀಕರಿಸಿದ್ದಾನೆ. ರನ್ನನ ಸಮಕಾಲೀನನಾದ ಮೊದಲನೆ ನಾಗವರ್ಮ ಬಾಣಭಟ್ಟನ *ಕಾದಂಬರಿ* ಯನ್ನು ಕನ್ನಡೀಕರಿಸಿ *ಕರ್ನಾಟಕದ ಕಾದಂಬರಿ* ಎಂಬ ಕೃತಿಯನ್ನು ಮತ್ತು ಕನ್ನಡದ ಛಂದಸ್ಸನ್ನು ತಿಳಿಸುವ ಮೊದಲ ಗ್ರಂಥವಾದ *ಛಂದೋಂಬುದಿ* ಎಂಬ ಕೃತಿಯನ್ನು ರಚಿಸಿದ್ದಾನೆ. ಹನ್ನೊಂದನೆ ಶತಮಾನದಲ್ಲಿ ಸಾಹಿತ್ಯದ ಒಲವು ಶಾಸ್ತ್ರಕೃತಿಗಳ ಕಡೆಗೆ ತಿರುಗಿತು. ಅತ್ಯಂತ ಪ್ರತಿಭಾಶಾಲಿ ಶಾಸ್ತ್ರ ಕೃತಿಕಾರನೆನಿಸಿದ ಶ್ರೀಧರಾಚಾರ್ಯ ಮೊದಲನೆ ಸೋಮೇಶ್ವರನ ಆಸ್ಥಾನದಲ್ಲಿದ್ದು ಜ್ಯೋತಿಷ್ಯ ವಿಷಯದ ಕನ್ನಡದ ಮೊದಲ ಕೃತಿಯಾದ *ಜಾತಕತಿಲಕ* ವನ್ನು ಬರೆದನು. ಚಾಲುಕ್ಯ ರಾಜಕುಮಾರ ಕೀರ್ತಿವರ್ಮನು ದನಕರುಗಳ ಖಾಯಿಲೆಗೆ ಸಂಬಂಧಿಸಿದ *ಗೋವೈದ್ಯ* ಎಂಬ ವೈದ್ಯಗ್ರಂಥವನ್ನು ರಚಿಸಿದನು. ಎರಡನೆ ಜಯಸಿಂಹನ ಆಸ್ಥಾನದಲ್ಲಿದ್ದ ಎರಡನೆ ಚಾವುಂಡರಾಯ *ಲೋಕೋಪಕಾರ,* ಚಂದ್ರರಾಜನ ಕಾಮಶಾಸ್ತ್ರಕ್ಕೆ ಸಂಬಂಧಿಸಿದ *ಮದನತಿಲಕ* ಮುಂತಾದ ಕೃತಿಗಳು ರಚನೆಯಾಗಿವೆ. ಸಾಹಿತ್ಯ ಮೌಲ್ಯವಿರುವ ಕೃತಿಗಳಲ್ಲಿ ದುರ್ಗಸಿಂಹನ *ಪಂಚತಂತ್ರ,* ಶಾಂತಿನಾಥನ *ಸುಕುಮಾರ ಚರಿತೆ,* ನಾಗವರ್ಮಾಚಾರ್ಯನ *ಚಂದ್ರಚೂಡಾಮಣಿ ಶತಕ* ಸೇರಿವೆ. ಇದು ಕನ್ನಡ ಶತಕಸಾಹಿತ್ಯದಲ್ಲಿ ಮೊದಲನೆಯದಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಕನ್ನಡ ಭಾಷೆಯು ಸ್ಥಿತ್ಯಂತರ ಪಡೆದು ಹಳೆಗನ್ನಡ ನಡುಗನ್ನಡವಾಗಿ ವಿಕಾಸಹೊಂದಿತು. ಸಾಮಾಜಿಕ, ಧಾರ್ಮಿಕವಾಗಿ ಸಾಹಿತ್ಯ ಮತ್ತು ಭಾಷೆಗಳ ದೃಷ್ಟಿಯಿಂದ ಈ ಶತಮಾನ ಮುಖ್ಯವಾಗಿದೆ. ಈ ಶತಮಾನದಲ್ಲಿ ವೀರಶೈವ ಶರಣರು ತಮ್ಮ ಆಲೋಚನೆ ಅನುಭವ ಗಳನ್ನು ವಚನರೂಪದಲ್ಲೇ ಅಭಿವ್ಯಕ್ತ ಮಾಡಿದರು. ದೇವರದಾಸಿಮಯ್ಯ, ಬಸವೇಶ್ವರ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ದರಾಮ, ಚನ್ನಬಸವಣ್ಣ, ಮಡಿವಾಳ ಮಾಚಯ್ಯ ಮುಂತಾದವರು ತಮ್ಮ ವಚನಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಈ ಆಂದೋಲನವು ಕನ್ನಡಿಗರಿಗೆ ಕನ್ನಡ ಭಾಷೆಗೆ ಹೊಸಜೀವನವನ್ನು ತಂದುಕೊಟ್ಟಿತು. ಜೊತೆಗೆ ಇದೇ ಅವಧಿಯಲ್ಲಿ ನಯಸೇನ *ಧರ್ಮಾಮೃತ* ವನ್ನು ಎರಡನೆ ನಾಗವರ್ಮನು *ಕಾವ್ಯಾವ ಲೋಕನ* ವನ್ನು ಬ್ರಹ್ಮಶಿವನು *ಸಮಯ ಪರೀಕ್ಷೆ* ಎಂಬ ಕೃತಿಗಳನ್ನು ರಚಿಸಿದರು. ಹೀಗೆ ಚಾಲುಕ್ಯರ ಆಳ್ವಿಕೆಯ ಕಾಲವು ಸಾಹಿತ್ಯಕ್ಷೇತ್ರದಲ್ಲಿ ವಸ್ತು ವೈವಿಧ್ಯದ ದೃಷ್ಟಿಯಿಂದ ಸಾರ್ಥಕ ವಾದ ಯುಗವೆನಿಸಿಕೊಳ್ಳುತ್ತದೆ.

### ಕಲೆ ಮತ್ತು ವಾಸ್ತುಶಿಲ್ಪ

ಕಲ್ಯಾಣಿ ಚಾಲುಕ್ಯರು ವೈಶಿಷ್ಟ್ಯಪೂರ್ಣ ಕಲಾಶೈಲಿಯನ್ನು ಅಭಿವೃದ್ಧಿಪಡಿಸಿದರು. ಮೊದಲಿಗಿಂತ ಹೆಚ್ಚು ಅಲಂಕೃತವಾದ ದೇವಾಲಯಗಳು ನಿರ್ಮಿತವಾದವು. ಹಿಂದಿನವರ ಅನುಭವದ ಮೇಲೆ ಅಂದಿನ ಶಿಲ್ಪಿಗಳು ಮುಂದುವರಿಯುತ್ತಿದ್ದುದು ಒಂದು ಕಾರಣವಾದರೆ,

ಇನ್ನೊಂದು ಮುಖ್ಯವಾದ ಕಾರಣ ಕಲ್ಲಿನಲ್ಲಾದ ಬದಲಾವಣೆ. ಹಿಂದಿನಂತೆ ಹಳದಿ ಮಿಶ್ರಿತವಾದ ಕೆಂಪು ಮರಳುಗಲ್ಲಿನ ಒರಟು ಮಾಧ್ಯಮವನ್ನು ಬಿಟ್ಟು ಕೆತ್ತನೆಯ ಕೆಲಸಕ್ಕೆ ಹೆಚ್ಚು ಅನುಕೂಲವಾಗುವ 'ಕ್ಲೋರೈಟಿಕ್ ಷಿಸ್ಟ್' ಎಂಬ ಹಸಿರುಗಪ್ಪೆ ಇಲ್ಲವೆ ಬೂದು ಬಣ್ಣದ ಕಲ್ಲನ್ನು ಇವರು ಆರಿಸಿಕೊಂಡರು. ಆದ್ದರಿಂದ ಶಿಲ್ಪದ ಮತ್ತು ಇತರ ಕೆತ್ತನೆಯ ಕೆಲಸದ ಅಲಂಕಾರ ದೇವಾಲಯಗಳಲ್ಲಿ ಹೆಚ್ಚಿತು. ಆದರೆ ಭಾರ ತಾಳಿಕೆಯ ಶಕ್ತಿ ಈ ಕಲ್ಲುಗಳಿಗೆ ಕಡಿಮೆಯಾದುದರಿಂದ ದೊಡ್ಡ ದೇಗುಲಗಳು ನಿರ್ಮಾಣವಾಗಲಿಲ್ಲ.

**ದೇವಾಲಯದ ವೈಶಿಷ್ಟ್ಯಗಳು**

೧. ಚಾಲುಕ್ಯ ದೇವಾಲಯಗಳ ವಿನ್ಯಾಸ ನೇರ ರೇಖೆಗಳಲ್ಲಿ ಹಾಗೂ ಸಮಕೋನಗಳಲ್ಲಿ ಇದ್ದು ಅವು ಆಯತಾಕಾರದಲ್ಲಿವೆ.

೨. ಹೆಚ್ಚಿನ ದೇವಾಲಯಗಳಲ್ಲಿ ಗರ್ಭಗೃಹದ ಸುತ್ತಲೂ ಪ್ರದಕ್ಷಿಣ ಪಥವಿರುವುದಿಲ್ಲ.

೩. ದೇವಾಲಯಕ್ಕೆ ಪ್ರವೇಶವು ಮುಂಭಾಗದಲ್ಲಿರದೆ ಎಡ ಮತ್ತು ಬಲ ಬದಿಗಳಲ್ಲಿರುತ್ತದೆ.

೪. ದೇವಾಲಯದ ದ್ವಾರಗಳು ಹೆಚ್ಚು ಅಲಂಕೃತವಾಗಿರುವುದಲ್ಲದೆ ಗೋಡೆಗಂಬ, ಕೆತ್ತನೆಯ ಲಲಾಟ, ಕಪೋತವನ್ನು ಹೊಂದಿರುತ್ತವೆ.

೫. ಗರ್ಭಗೃಹದ ಇಕ್ಕೆಲಗಳಲ್ಲಿ ಅಲಂಕಾರಿಕ ಜಾಲಂಧ್ರಗಳಿದ್ದು ಅದರಿಂದ ಬೆಳಕು ಒಳ ಹೋಗುತ್ತದೆ.

೬. ಅದರ ಕಂಬಗಳು ತಿರುಗಣಿಯಲ್ಲಿ ಮಾಡಲ್ಪಟ್ಟಿವೆ.

೭. ದೇವಾಲಯದ ಸಮಗ್ರ ರಚನೆಯು ಗರ್ಭಗೃಹ, ಅಂತರಾಳ, ನವರಂಗ ಅದರ ಮುಂದೆ ಭಿತ್ತರಹಿತವಾದ ತೆರೆದ ಮುಖಮಂಟಪವಿದೆ. ಈ ಮಂಟಪದ ಒಳಅಂಚಿನಲ್ಲಿ ಸುತ್ತಲೂ ಕಕ್ಷಾಸನಗಳು ಇರುತ್ತವೆ.

೮. ದೇಗುಲಗಳ ಹೊರಮೈಯನ್ನು ಅಧಿಷ್ಠಾನ, ಭಿತ್ತಿ, ಕಪೋತ, ಹಾರಗಳೆಂದು ವಿಂಗಡಿಸಲಾಗಿದ್ದು ಭಿತ್ತಿಯಲ್ಲಿ ಅರೆಗಂಬಗಳಿಂದಾದ ದೇವಕೋಷ್ಠಗಳು, ಅರೆಗಂಬಗಳ ಮೇಲೆ ಶಿಖರಾಕೃತಿ ಕಡೆಯುವುದು ಈ ಚಾಲುಕ್ಯ ಶೈಲಿಯ ವೈಶಿಷ್ಟ್ಯವಾಗಿದೆ.

ಉತ್ತರ ಕರ್ನಾಟಕದಲ್ಲಿ ನಾಲ್ಕುನೂರಕ್ಕೂ ಹೆಚ್ಚು ಚಾಲುಕ್ಯರ ಕಾಲದ ದೇಗುಲಗಳು ಕಾಣಸಿಗುತ್ತವೆ. ಅವುಗಳು ಬಳ್ಳಾರಿ, ಧಾರವಾಡ ಮತ್ತು ಹೈದರಾಬಾದ್ ಕರ್ನಾಟಕ ಜಿಲ್ಲೆಗಳಲ್ಲಿವೆ. ಲಕ್ಕುಂಡಿ, ಹಾವೇರಿ, ಹಾನಗಲ್ಲು, ಇಟಗಿ, ಬಳ್ಳಿಗಾವೆ, ಗದಗ, ಡಂಬಳ, ಕುರುವತ್ತಿ, ಕುಕನೂರು, ಹರಳಳ್ಳಿ, ಬನವಾಸಿ, ಜಲಸಂಗ್ವಿ ಮುಂತಾದ ಸ್ಥಳಗಳು ಚಾಲುಕ್ಯರ ಸ್ಮಾರಕಗಳ ಕೇಂದ್ರಗಳಾಗಿವೆ.

ಕಲ್ಯಾಣಿ ಚಾಲುಕ್ಯರ ಆರಂಭಿಕ ದೇವಾಲಯವೆಂದರೆ ಗದುಗಿನ ಬಳಿಯ ಕುಕ್ಕನೂರಿನ ಕಲ್ಲೇಶ್ವರ ದೇವಾಲಯ. ಮರಳುಗಲ್ಲಿನಿಂದ ನಿರ್ಮಿಸಿರುವ ಈ ದೇವಾಲಯ ನಂದಿಮಂಟಪ, ನಾಲ್ಕು ಕಂಬಗಳುಳ್ಳ ನವರಂಗ, ಸುಖನಾಸಿ, ಗರ್ಭಗೃಹವನ್ನೊಳಗೊಂಡಿದೆ. ೬೭ ಅಡಿ ಉದ್ದ, ೩೭ ಅಡಿ ಅಗಲದ ಈ ದೇವಾಲಯದ ಶಿಖರ ೩೭ ಅಡಿ ಎತ್ತರವಾಗಿದ್ದು

ಸಪ್ರಮಾಣದ ರಚನೆಯಾಗಿದೆ. ಈ ಶೈಲಿಯು ರೂಪುಗೊಂಡ ಮುಂದಿನ ಹಂತವನ್ನು ಗದುಗಿಗೆ ಏಳು ಮೈಲಿ ದೂರದಲ್ಲಿನ ಲಕ್ಕುಂಡಿಯ ಜೈನ ದೇವಾಲಯದಲ್ಲಿ ಗುರುತಿಸಬಹುದು. ಬಳಪದ ಕಲ್ಲಿನಿಂದ ನಿರ್ಮಿಸಿರುವ ಈ ದೇವಾಲಯ ಶ್ರೀಮಂತ ಶಿಲ್ಪಗಳಿಂದ ಕೂಡಿ ಹೆಚ್ಚು ಅಲಂಕಾರವಾಗಿದೆ. ಹಾವೇರಿ ತಾಲ್ಲೂಕು ಚೌಡದಾನಪುರದ ಮುಕ್ತೇಶ್ವರ ದೇವಾಲಯವು ಚಾಲುಕ್ಯರ ಒಂದು ಹೊಸ ಲಕ್ಷಣವಾದ ಅಗಲವಾದ ಹೊರಚಾಚಿದ ವಕ್ರದ್ವಯಗಳುಳ್ಳ ಇಳಿಮಾಡು ಅಥವಾ ಛಜ್ಜಾವನ್ನು ಹೊಂದಿದೆ. ಇದರ ಗೋಪುರ ಚಾಲುಕ್ಯ ಶೈಲಿಯ ಪರಿಪೂರ್ಣವಾದ ಗೋಪುರವಾಗಿದೆ.

ಚಾಲುಕ್ಯರ ವಾಸ್ತುಶಿಲ್ಪ ಶೈಲಿಯು ೧೨ನೆಯ ಶತಮಾನದ ವೇಳೆಗೆ ಪರಿಪಕ್ವವಾಗಿ ತನ್ನ ಔನ್ನತ್ಯವನ್ನು ಪಡೆಯಿತು. ಈ ಮಾದರಿಯ ರಚನೆಗಳಲ್ಲಿ ಅತ್ಯಂತ ಸುಂದರವಾದ ದೇವಾಲಯ ಗಳೆಂದರೆ ಲಕ್ಕುಂಡಿಯ ಕಾಶಿವಿಶ್ವೇಶ್ವರ. ಕುರುವತ್ತಿಯ (ಬಳ್ಳಾರಿ ಜಿಲ್ಲೆ) ಮಲ್ಲಿಕಾರ್ಜುನ, ಇಟಗಿ (ಕೊಪ್ಪಳ ಜಿಲ್ಲೆ)ಯ ಮಹಾದೇವ ದೇವಾಲಯ. 'ಲಕ್ಕುಂಡಿಯನ್ನು ಐಹೊಳೆ ಯಂತೆಯೇ ದೇವಾಲಯುಗಳ ಕೇಂದ್ರ' ಎಂದು ಕರೆಯಬಹುದು. ಹಾಳುಬಿದ್ದ ದೇವಾಲಯ ಗಳು ಈ ಊರಿನಲ್ಲಿ ಎಲ್ಲಿ ನೋಡಿದರೂ ಕಾಣಸಿಗುತ್ತವೆ. ಕಾಶಿವಿಶ್ವೇಶ್ವರ ದ್ವಿಕೂಟಾಚಲ ವಾಗಿದ್ದು ಇದರ ಶಿಖರ ಹೆಚ್ಚು ಅಲಂಕೃತವಾಗಿದೆ. ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮಂಟಪಗಳಿಂದ ಕೂಡಿ ಚೊಕ್ಕವಾಗಿದೆ. ನವರಂಗದ ಕಂಬಗಳನ್ನು ಸುಂದರವಾಗಿ ಕಡೆಯಲಾಗಿದ್ದು, ಅವುಗಳ ಮೇಲೆ ಮದನಿಕಾ ವಿಗ್ರಹಗಳಿವೆ. ಚಾಲುಕ್ಯ ದೇವಾಲಯಗಳಲ್ಲಿ ಅತ್ಯಂತ ಶ್ರೇಷ್ಠವಾದ ಕಲಾಕೃತಿ ಇಟಗಿಯ ಮಹಾದೇವ ದೇವಾಲಯ. ಇದನ್ನು ಆರನೆ ವಿಕ್ರಮಾದಿತ್ಯನ ದಂಡನಾಯಕ ಮಹಾದೇವ ಎಂಬುವನು ಕ್ರಿ.ಶ. ೧೧೧೨ ರಲ್ಲಿ ನಿರ್ಮಿಸಿದನು. ಪೂರ್ವಾಭಿಮುಖವಾಗಿರುವ ಈ ದೇಗುಲ ಗರ್ಭಗೃಹ, ಅಂತರಾಳ, ಎಡಬಲಗಳಲ್ಲಿ ದ್ವಾರವಿರುವ ನವರಂಗ, ತೆರೆದ ಮಂಟಪಗಳನ್ನೊಳ ಗೊಂಡಿದೆ. ಇದರಲ್ಲಿ ೬೮ ಕಂಬಗಳಿದ್ದು, ೨೬ ದೊಡ್ಡ ಕಂಬಗಳು ನೆಲದ ಮೇಲೆ ನಿಂತು ಛಾವಣಿಗೆ ಆಧಾರವನ್ನೊದಗಿಸುತ್ತವೆ. ಈ ದೇಗುಲದ ಶಾಸನವು ಇದನ್ನು 'ದೇವಾಲಯ ಚಕ್ರವರ್ತಿ' ಎಂದು ವರ್ಣಿಸಿದೆ. ಹೆನ್ರಿ ಕಸಿನ್ಸ್‌ರವರು "ಹಳೇಬೀಡಿನ ದೇಗುಲವನ್ನು ಬಿಟ್ಟರೆ ಕರ್ನಾಟಕದಲ್ಲಿ ಇದೇ ಅತ್ಯಂತ ಸುಂದರವಾದುದು" ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯ ಸತ್ಯವೆನ್ನುವಂತಹ ಉತ್ಕೃಷ್ಟ ಕಲಾಕೃತಿ ಈ ದೇವಾಲಯವೆಂಬುದರಲ್ಲಿ ಸಂದೇಹವಿಲ್ಲ.

ಹಾವೇರಿಯ ಸಿದ್ದೇಶ್ವರ, ಹಾನಗಲ್ಲಿನ ತಾರಕೇಶ್ವರ, ಬಂಕಾಪುರದ ೬೦ (ಅರವತ್ತು) ಕಂಬದ ದೇವಾಲಯ, ಗದಗಿನ ತ್ರಿಕೂಟೇಶ್ವರ ಮತ್ತು ಸರಸ್ವತಿ ದೇವಾಲಯ, ಡಂಬಳದ ದೊಡ್ಡಬಸಪ್ಪ ದೇವಾಲಯ, ಗುಲ್ಬರ್ಗ ಜಿಲ್ಲೆಯ ಶಿರವಾಳದ ಪಂಚಕೂಟ ಶಿವಾಲಯ, ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯಗಳನ್ನು ಕಲ್ಯಾಣಿ ಚಾಲುಕ್ಯರ ಕಾಲದ ದೇವಾಲಯ ಗಳೆಂದು ಗುರುತಿಸಲಾಗಿದೆ. ಹೀಗೆ ಚಾಲುಕ್ಯರು ಕರ್ನಾಟಕದ ಕಲಾ ಪರಂಪರೆಗೆ ಅದ್ಭುತ ಕೊಡುಗೆಗಳಿಂದ ವೈಭವಪೂರ್ಣ ಬಳುವಳಿಯನ್ನು ನಮಗೆ ಬಿಟ್ಟುಹೋಗಿದ್ದಾರೆ.

## ೪.೭ ದ್ವಾರಸಮುದ್ರದ ಹೊಯ್ಸಳರು

ಗಂಗರ ಪತನಾನಂತರ ಹೊಯ್ಸಳರು ಚಾಲುಕ್ಯರ ಮಾಂಡಲಿಕರಾಗಿ ೧೧ನೆಯ ಶತಮಾನದ ಆರಂಭದಲ್ಲಿ ಕಾಣಿಸಿಕೊಂಡರು. ೧೨ ನೆಯ ಶತಮಾನದಲ್ಲಿ ಪರಮಾಧಿಕಾರಿಗಳಾಗಿ ತುಂಗಭದ್ರೆಯ ಉತ್ತರದವರೆಗೂ ಅಧಿಕಾರ ಹೊಂದಿದ್ದರು. ಹದಿನಾಲ್ಕನೆಯ ಶತಮಾನದ ಪೂರ್ವಾರ್ಧದಲ್ಲಿ ಇವರ ಆಳ್ವಿಕೆ ಅಂತ್ಯವಾಯಿತು. ಇವರ ಕಾಲದಲ್ಲಿ ಧಾರ್ಮಿಕ ವೈಶಾಲ್ಯ, ಸಾಹಿತ್ಯದ ಬಹುಮುಖ ಬೆಳವಣಿಗೆ, ಆರ್ಥಿಕ ಸಂತೃಪ್ತಿ, ಕಲೆಯ ಆಕರ್ಷಕ ವಿಕಾಸ, ಸಾಮಾಜಿಕವಾಗಿ ಪರಸ್ಪರ ವಿಶ್ವಾಸ ಮತ್ತು ತ್ಯಾಗ ಇವುಗಳನ್ನು ಪೂರ್ಣ ಪ್ರಮಾಣದಲ್ಲಿ ಕಾಣಬಹುದು. ಇವೆಲ್ಲವೂ ಹದವಾಗಿ ಬೆರೆತು ಜನಸಾಮಾನ್ಯರ ಬದುಕು ಹಸನಾಯಿತು. ಪ್ರಭುಶಕ್ತಿಯನ್ನು ವಿನೀತವಾಗಿ ಬೆಳೆಸಿಕೊಂಡ ಜನತೆ, ಜನತೆಗಾಗಿ ದುಡಿಯುವ ಪ್ರಭುಗಳು ಆ ಕಾಲದ ವಿಶಿಷ್ಟ ಸಾಮಾಜಿಕ ಅಂಶಗಳಾಗಿವೆ.

ಶಾಸನಗಳೇ ಹೊಯ್ಸಳರ ಇತಿಹಾಸ ರಚನೆಗೆ ಗಣ್ಯ ಆಧಾರಗಳು. *ಗದ್ಯಕರ್ಣಾಮೃತ* ದಂತಹ ಸಂಸ್ಕೃತ ಕೃತಿ, *ಜಾತಕ ತಿಲಕ* ದಂತಹ ಕನ್ನಡ ಕೃತಿ ಕೂಡ ಮಾಹಿತಿ ಒದಗಿಸಿ ಕೊಡುತ್ತದೆ. ಇಸಾಮಿ, ಫೆರಿಸ್ತಾ ಮುಂತಾದ ಇಸ್ಲಾಂ ಲೇಖಕರೂ, ಇಬ್ನಬತೂತನಂತಹ ಪ್ರವಾಸಿಗನೂ ಅಮೂಲ್ಯ ಮಾಹಿತಿ ಒದಗಿಸುತ್ತಾನೆ.

### ಮೂಲ

ಹೊಯ್ಸಳರ ಮೂಲದ ಬಗ್ಗೆ ಸಾಕಷ್ಟು ಗೊಂದಲಗಳಿವೆ. ಅವರ ಮೂಲವನ್ನು ಕುರಿತಂತೆ ಸಾಂಪ್ರದಾಯಿಕ ವಿಷಯ ಕಥೆಗಳು ಶಾಸನಗಳಲ್ಲಿ ವಿವರಿತವಾಗಿವೆ. ಅವರು 'ಸಸಕಪುರ' ಅಥವಾ 'ಸೊಸೆವೂರ'ನ್ನು ತಮ್ಮ ಮೂಲ ಸ್ಥಳವೆಂದು ಹೇಳಿಕೊಂಡಿದ್ದಾರೆ. ಈ ವಂಶದ ಮೂಲಪುರುಷ ಮತ್ತು ಸಾಮ್ರಾಜ್ಯ ಸ್ಥಾಪಕ 'ಸಳ'. ಈತನನ್ನು 'ಯದುವಂಶದ ಆಭರಣ' ವೆಂದು ವರ್ಣಿಸಲಾಗಿದೆ. ಯದುವಂಶೋಜ್ವಲ ತಿಲಕನಾದ ಸಳನು ಶಶಕಪುರದ ತನ್ನ ಮನೆ ದೇವರಾದ ವಾಸಂತಿಕಾ ದೇವಾಲಯಕ್ಕೆ ಪೂಜೆಗೆ ಹೋಗುತ್ತಿದ್ದನು. ಹೀಗೆ ಒಂದು ದಿನ ದೇವಿಯನ್ನು ಗಂಧ, ಪುಷ್ಪ ಪರಿಮಳಗಳಿಂದ ಅರ್ಚಿಸಿದ ನಂತರ ತನ್ನ ಗುರು ವರ್ಧಮಾನ ಸುದತ್ತಾಚಾರ್ಯರ ಬಳಿ ಧರ್ಮೋಪದೇಶ ಕೇಳಲು ಹೋಗಿದ್ದನು. ಪ್ರವಚನ ಕೇಳುತ್ತಿದ್ದಾಗ ಒಂದು ಹುಲಿ ಕಾಡಿನಿಂದ ಅಲ್ಲಿಗೆ ಬಂದಿತು. ಅಪಾಯದ ಮುನ್ಸೂಚನೆಯನ್ನು ಅರಿತ ಆ ಮುನಿ ಸಳನಿಗೆ ತನ್ನ ಕುಂಚವನ್ನು ಕೊಟ್ಟು 'ಪೊಯ್‌ಸಳ' ಎಂದು (ಹೊಡೆಸಳ) ಹೇಳಿದನು. ಹುಲಿಯು ಸಂಹಾರವಾಯಿತು. ಆ ಮುನಿದೇವಿ ಪದ್ಮಾವತಿಯ ಕೃಪೆ ಪಡೆದು ಸಳನಿಗೆ ರಾಜ್ಯಪ್ರಾಪ್ತಿ ಮಾಡಿಕೊಟ್ಟನಂತೆ. ಈ ಸನ್ನಿವೇಶದಿಂದ ಪ್ರೇರಿತನಾದ ಸಳ ಹುಲಿಯನ್ನು ಸಂಹರಿಸುತ್ತಿರುವ ವೀರನ ಚಿತ್ರವನ್ನೇ ತನ್ನ ಲಾಂಛನವಾಗಿ ಸ್ವೀಕಾರ ಮಾಡಿಕೊಂಡನು. ಈ ಕಥೆ ವಿಷ್ಣುವರ್ಧನನ ಕ್ರಿ.ಶ. ೧೧೧೭ ರ ಬೇಲೂರು ಶಾಸನದಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೧೩೦ ರ ಶಾಸನವೊಂದರಲ್ಲಿ ಸಳ ಕಾಡಿನಲ್ಲಿ ಹೋಗುತ್ತಿದ್ದಾಗ ಹುಲಿಯನ್ನು ಕಂಡು

ದಿಗಿಲುಗೊಂಡ ಒಬ್ಬ ಸನ್ಯಾಸಿ 'ಪೊಯ್‌ಸಳ' ಎಂದು ಕೂಗಿಕೊಂಡನಂತೆ. ಆ ಮೇರೆಗೆ ಸಳ ಹುಲಿಯನ್ನು ಕೊಂದ. 'ಹುಲಿ' ಆತನ ರಾಜಲಾಂಛನವಾಯಿತು. ಹೊಯ್ಸಳ ಎಂಬುದು ಆತ ಸ್ಥಾಪಿಸಿದ ರಾಜಸಂತತಿಯ ಹೆಸರಾಯಿತು. ಆತನ ಸಾಹಸವನ್ನು ಮೆಚ್ಚಿ "ನೀನು ಪ್ರಸಿದ್ಧ ವ್ಯಕ್ತಿ ಆಗುತ್ತೀಯಾ, ಒಂದು ರಾಜ್ಯಸಂತತಿಯ ಸ್ಥಾಪಕನಾಗುತ್ತೀಯಾ ಮತ್ತು ಕೃಷ್ಣನಷ್ಟೇ ಹೆಸರು ಗಳಿಸುತ್ತೀಯಾ" ಎಂದು ಆಗಮಗಳಲ್ಲಿ ಪರಿಣಿತನಾದ ಮುನಿ ತನ್ನ ತಪಃಶಕ್ತಿಯಿಂದ ಭವಿಷ್ಯ ನುಡಿದ. ಮುನಿಯ ಆಶೀರ್ವಾದದಿಂದ ಸಳನು ಇಮ್ಮಡಿ ವೈಭವವನ್ನು ಗಳಿಸಿದ.

ಶಾಸನಗಳಲ್ಲಿ ಹೊಯ್ಸಳರು ತಮ್ಮ ಮೂಲವನ್ನು ಯದುವಂಶಕ್ಕೆ ಕೊಡೊಯ್ಯುತ್ತಾರೆ. ತಮ್ಮನ್ನು ಅವರು ಯದುವಂಶ ತಿಲಕ, ಯಾದವ ಕುಲಾಂಬರ ದ್ಯುಮಣಿ ಮತ್ತು ದ್ವಾರಾವತಿ ಪುರವರಾಧೀಶ್ವರ ಎಂದು ಕರೆದುಕೊಂಡಿದ್ದಾರೆ. ಡೆರೆಟ್‌ರವರು ಹೊಯ್ಸಳರು ಪಶ್ಚಿಮ ಘಟ್ಟಗಳಲ್ಲಿ ನೆಲೆಸಿದ್ದ ಪರ್ವತ ನಾಯಕರ ಕುಟುಂಬ ಎಂದು ಹೇಳುತ್ತಾರೆ. ಇವುಗಳೆಲ್ಲಾ ಹೊಯ್ಸಳರ ಮೂಲವನ್ನು ಕುರಿತ ಅಭಿಪ್ರಾಯಗಳು. ಇವೆಲ್ಲವೂ ಸಮಾನವಾಗಿ ಒಪ್ಪುವುದು ಈ ವಂಶದ ಮೂಲ ಪುರುಷ ಸಳ ಎನ್ನುವುದನ್ನು ಬಹುತೇಕ ವಿದ್ವಾಂಸರು ಹೊಯ್ಸಳರು ಪಶ್ಚಿಮ ಘಟ್ಟಗಳಲ್ಲಿ ವಾಸಮಾಡುತ್ತಿದ್ದ ಸ್ಥಳೀಯ ಜನರು ಎಂದು ಒಪ್ಪುತ್ತಾರೆ. ಈ ವಂಶದ ಮೂಲವನ್ನು ಕುರಿತ ಪೌರಾಣಿಕ ನಿರೂಪಣೆ, ಆತನ ಅಪ್ರತಿಮ ಪರಾಕ್ರಮ, ಋಷಿಯ ಮಧ್ಯಪ್ರದೇಶ ಅಥವಾ ದೈವ ಸಂಕಲ್ಪ - ಇದು ಯಾವುದೇ ಆಳುವ ಮನೆತನವನ್ನು ಪ್ರಮಾಣಯುತವೂ ಶಾಸನಬದ್ಧವೂ ಆಗುವಂತೆ ಮಾಡುವ ಸಹಜ ಪ್ರಯತ್ನವಾಗಿದೆ.

## ರಾಜಕೀಯ ಚರಿತ್ರೆ

ಹೊಯ್ಸಳ ರಾಜವಂಶದಲ್ಲಿ ಪ್ರಾರಂಭಕಾಲದ ಅಸ್ಪಷ್ಟತೆಯ ಮಬ್ಬಿನಿಂದ ಸ್ಪಷ್ಟವಾಗಿ ಮೂಡಿಬರುವ ಮೊದಲನೆಯ ವ್ಯಕ್ತಿ ನೃಪಕಾಮ. ಅವನು ಬಹು ಸಮರ್ಥನಾಗಿದ್ದ ಆಶೋತ್ತರಗಳಿದ್ದ ನಾಯಕ, ನೃಪಕಾಮ ಮತ್ತು ಸಳ ಇವು ಒಂದೇ ವ್ಯಕ್ತಿಯ ಎರಡು ಹೆಸರುಗಳೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ನೃಪಕಾಮನು 'ರಾಚಮಲ್ಲ ಪೆರ್ಮಾಡಿ' ಎಂಬ ಬಿರುದನ್ನು ಧರಿಸಿದ್ದನು. ಗಂಗರ ಈ ಬಿರುದನ್ನು ಈತ ಧರಿಸಲು ಆ ರಾಜರೊಡನೆ ಸಂಬಂಧವನ್ನು ಬೆಳೆಸಿದ್ದೇ ಕಾರಣವೆಂದೇ ಬಿ.ಎಲ್. ರೈಸ್‌ರವರು ಹೇಳುತ್ತಾರೆ. ಗಂಗರ ಆಶ್ರಿತನಾಗಿದ್ದ ನೃಪಕಾಮನು ಕ್ರಿ.ಶ. ೧೦೦೪ ರಲ್ಲಿ ಚೋಳರು ಗಂಗವಾಡಿಯನ್ನು ವಶಪಡಿಸಿಕೊಂಡು ಗಂಗವಂಶ ಅವನತಿಗೆ ಬಂದಂತೆಲ್ಲಾ ಅವರ ಉತ್ತರಾಧಿಕಾರಿಗಳು ತಾವೆಂದು ಹೊಯ್ಸಳರು ಹೇಳಿಕೊಳ್ಳಲಾರಂಭಿಸಿದರು. ಹೀಗೆ ಹೊಯ್ಸಳ ವಂಶದ ಮೊದಲನೇ ಅಧಿಕೃತ ವ್ಯಕ್ತಿಯಾಗಿದ್ದ ನೃಪಕಾಮನು ಸಾಮ್ರಾಜ್ಯದ ಆಸ್ತಿಭಾರವನ್ನು ಹಾಕಿದನು. ಇವನು ಜೈನ ಧರ್ಮವನ್ನು ಅನುಸರಿಸಿದ್ದನು.

ನೃಪಕಾಮನ ನಂತರ ಅವನ ಮಗ ವಿನಯಾದಿತ್ಯ ರಾಜನಾದನು. ಚೋಳರಿಗೂ ಕಲ್ಯಾಣದ ಚಾಲುಕ್ಯರಿಗೂ ನಡೆಯುತ್ತಿದ್ದ ಸ್ಪರ್ಧೆಯಲ್ಲಿ ಈತ ಚಾಲುಕ್ಯರ ಪಕ್ಷ ವಹಿಸಿದನು. ಆರನೆ ವಿಕ್ರಮಾದಿತ್ಯನ ಸ್ನೇಹದ ನೆರಳಿನಲ್ಲಿ ತನ್ನ ರಾಜ್ಯವನ್ನು ಭದ್ರಪಡಿಸಿಕೊಂಡನು. ಈ

ಕಾಲದಲ್ಲಿಯೇ ಇವರ ರಾಜಧಾನಿ ಸೊಸೆವೂರಿನಿಂದ 'ವೇಲಾಪುರಿ' ಅಥವಾ 'ಬೇಲೂರಿ'ಗೆ ಬದಲಾಯಿತು. ಇವನು ಹೊಯ್ಸಳ ವಂಶದ ಶಕ್ತಿಯನ್ನು ಹೆಚ್ಚಿಸಿದ ಸಫಲ ಮತ್ತು ಪ್ರತಿಭಾನ್ವಿತ ದೊರೆ. ಇವನ ಮಗ ಎರೆಯಂಗನು ತನಗಿಂತ ಮೊದಲೇ ಮರಣ ಹೊಂದಿದ್ದು ದರಿಂದ ವಿನಯಾದಿತ್ಯನ ನಂತರ ಎರೆಯಂಗನ ಮಗ ಮೊದಲನೇ ಬಲ್ಲಾಳ ಸಿಂಹಾಸನಕ್ಕೆ ಬಂದನು. ಕೆಲ ವಿದ್ವಾಂಸರು ಎರೆಯಂಗನು ತನ್ನ ೬೦ನೇ ವಯಸ್ಸಿನಲ್ಲಿ ಸಿಂಹಾಸನಕ್ಕೆ ಬಂದು ಕ್ರಿ.ಶ. ೧೧೦೨ ರವರೆಗೂ ಆಳಿದನೆಂದು ಹೇಳುತ್ತಾರೆ. ಅವನು ಸ್ವತಂತ್ರವಾಗಿ ಆಳಿದುದೇ ನಿಜವಾದರೆ ಇತಿಹಾಸಕಾರರಿಗೆ ಅವನ ಬಗೆಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲವೆಂದೇ ಹೇಳ ಬೇಕಾಗುತ್ತದೆ. ಎರೆಯಂಗನಿಗೆ ಮೂರು ಜನ ಪುತ್ರರು ಅವರೆಂದರೆ ಒಂದನೆ ಬಲ್ಲಾಳ, ಬಿಟ್ಟಿಗ (ವಿಷ್ಣುವರ್ಧನ) ಮತ್ತು ಉದಯಾದಿತ್ಯ ಇವರಲ್ಲಿ ಒಂದನೆ ಬಲ್ಲಾಳನು ಕ್ರಿ.ಶ. ೧೧೦೨ ರಲ್ಲಿ ಸಿಂಹಾಸನಕ್ಕೆ ಬಂದನು.

ಒಂದನೆ ಬಲ್ಲಾಳನ ಕಾಲದಲ್ಲಿ ಹೊಯ್ಸಳ ಚಾಲುಕ್ಯ ಮನೆತನದ ನಡುವೆ ಹಗೆತನ ಪ್ರಾರಂಭವಾಯಿತು. ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯ ಇವನ ಉಪಟಳವನ್ನು ಹತ್ತಿಕ್ಕಲು ಬಲವಾದ ಸೈನ್ಯವನ್ನು ಸಿಂಧ ವಂಶದ ಅಚುಗಿಯ ನೇತೃತ್ವದಲ್ಲಿ ಕಳುಹಿಸಿದನು. ಕ್ರಿ.ಶ. ೧೧೦೪ ರಲ್ಲಿ ಸೋತ ಬಲ್ಲಾಳ ಚಾಲುಕ್ಯರ ಅಧಿಪತ್ಯವನ್ನು ಒಪ್ಪಿಕೊಂಡನು. ಬಲ್ಲಾಳ ಸ್ವತಃ ಪರಾಕ್ರಮಿಯಾಗಿದುದರ ಜೊತೆಗೆ ವಿಷ್ಣುವರ್ಧನನಂತಹ ತಮ್ಮನ ನಿಷ್ಠಾವಂತ ಸೇವೆಯ ಅವಕಾಶವನ್ನು ಪಡೆದುಕೊಂಡಿದ್ದನು. 'ಶೈವ ಶಿರೋಮಣಿ'ಯಾದ ಬಲ್ಲಾಳನು ಸಂತಾನ ರಹಿತವಾಗಿ ಮರಣ ಹೊಂದಿದ ಮೇಲೆ ಆತನ ಸಹೋದರ ವಿಷ್ಣುವರ್ಧನ ಸಿಂಹಾಸನಕ್ಕೆ ಬಂದನು.

## ವಿಷ್ಣುವರ್ಧನ (ಕ್ರಿ.ಶ. ೧೧೦೮-೧೧೪೨)

ಹೊಯ್ಸಳ ವಂಶದ ಶ್ರೇಷ್ಠ ದೊರೆಯಾದ ವಿಷ್ಣುವರ್ಧನ ಬಾಲ್ಯದಲ್ಲಿಯೇ ಅಣ್ಣ ಬಲ್ಲಾಳನೊಂದಿಗೆ ದಿಗ್ವಿಜಯಗಳಲ್ಲಿ ಭಾಗವಹಿಸಿ ಅನುಭವಶಾಲಿಯಾಗಿದ್ದನು. ನೂತನ ಪ್ರಗತಿಪರ ನೀತಿಗೆ ಅನುಸಾರವಾಗಿ ತನ್ನ ರಾಜ್ಯವನ್ನು ಎಲ್ಲ ದಿಕ್ಕುಗಳಲ್ಲೂ ವಿಸ್ತರಿಸುವ ಬಯಕೆ ಹೊಂದಿದ್ದ ಈ ವ್ಯಕ್ತಿ ತನ್ನ ರಾಜ್ಯವನ್ನು ಪರಾಧೀನತೆಯಿಂದ ಮುಕ್ತಗೊಳಿಸಿ ಸ್ವತಂತ್ರ ರಾಜರೆಂಬ ನೆಲೆಯನ್ನು ಅದಕ್ಕೆ ಒದಗಿಸುವ ಗುರಿಯನ್ನು ಇಟ್ಟುಕೊಂಡಿದ್ದನು. ಡೆರೆಟ್ ಹೇಳುವಂತೆ "ವಿಷ್ಣುವರ್ಧನನು ಏನನ್ನೇ ಸಾಧಿಸಲು ಅಸಮರ್ಥನಾಗಿರಬಹುದು. ಆದರೆ ಅವನು ಚಾಲುಕ್ಯ ವಿಕ್ರಮಾದಿತ್ಯನು ವ್ಯವಹರಿಸಬೇಕಾದ ಅತ್ಯಂತ ದುಸ್ಸಾಧ್ಯವಾದ ಸಾಮಂತ ನಾಗಿ ಉಳಿದನು". ಎಸ್.ಕೆ. ಅಯ್ಯಂಗಾರ್ ಅವನನ್ನು "ನಿಜವಾಗಿ ಹೊಯ್ಸಳ ಸಾಮ್ರಾಜ್ಯದ ಸ್ಥಾಪಕ" ಎಂದು ಹೇಳುತ್ತಾರೆ.

ಸಾಮ್ರಾಜ್ಯ ಇನ್ನೂ ಉದಯೋನ್ಮುಖವಾಗುತ್ತಿದ್ದ ಕಾಲದಲ್ಲಿ ಬಿಟ್ಟಿದೇವ (ವಿಷ್ಣು ವರ್ಧನ)ನಂತಹ ಶೂರನೂ, ಸುಸಂಸ್ಕೃತನೂ ರಾಜನಾಗಿ ಬಂದುದು ಈ ವಂಶದ ಅದೃಷ್ಟವೆನ್ನ ಬಹುದು. ಅಧಿಕಾರ ವಹಿಸಿಕೊಂಡ ತಕ್ಷಣವೇ ತನ್ನ ಮುಂದೆ ಎರಡು ಬಗೆಯ ಕಾರ್ಯ

ಕ್ರಮಗಳನ್ನು ಹಾಕಿಕೊಂಡಂತೆ ತೋರುತ್ತದೆ. ಒಂದು ರಾಜ್ಯವನ್ನು ವಿಸ್ತರಿಸುವುದು; ಇನ್ನೊಂದು ವಿಸ್ತರಿಸಿದ ರಾಜ್ಯ ಸುಭಿಕ್ಷವೂ, ಸುಸಂಸ್ಕೃತವಾಗುವಂತೆ ಏರ್ಪಡಿಸುವುದು. ಇವೆರಡನ್ನೂ ಕೈಗೂಡಿಸಲು ಅವನು ಶಕ್ತಿಮೀರಿ ಪ್ರಯತ್ನಿಸಿದನು. ತನ್ನ ಸಂಪನ್ಮೂಲಗಳನ್ನು ಜಾಗರೂಕತೆಯಿಂದ ರೂಢಿಸಿಕೊಂಡ ನಂತರ ಅವನು ತನ್ನ ಚೈತ್ರಯಾತ್ರೆಯನ್ನು ಆರಂಭಿಸಿದನು.

**ದಿಗ್ವಿಜಯಗಳು**

ಕುಲೋತ್ತುಂಗ ಚೋಳನು ವೆಂಗಿಯ ವ್ಯವಹಾರಗಳಲ್ಲಿ ಮುಳುಗಿಹೋಗಿದ್ದ ಸಮಯವನ್ನರಿತ ವಿಷ್ಣುವರ್ದನ ಗಂಗವಾಡಿಯನ್ನು ಚೋಳರಿಂದ ಮುಕ್ತಗೊಳಿಸಲು ಸಂಕಲ್ಪ ತೊಟ್ಟನು. ಗಂಗವಾಡಿಯ ದಕ್ಷಿಣದ ಭೂಭಾಗಗಳಾದ ತಲಕಾಡು ಮತ್ತು ಕೋಲಾರ ಚೋಳರ ಅಧೀನದಲ್ಲಿದ್ದವು. ಚೋಳರ ಸಾಮಂತನೂ ತಗಡೂರಿನ ಮುಖ್ಯಸ್ಥನೂ ಆದ ಅದಿಯಮನು ತಲಕಾಡಿನ ಮುಖ್ಯಸ್ಥನಾಗಿದ್ದನು. ವಿಷ್ಣುವರ್ಧನ ತನ್ನ ದಂಡನಾಯಕ ಗಂಗರಾಜನ ಅಧೀನದಲ್ಲಿ ಸೈನ್ಯವನ್ನು ಕೊಟ್ಟು ತಲಕಾಡಿನ ಕಡೆಗೆ ಕಳುಹಿಸಿದನು. ಕಾವೇರಿ ತೀರದಲ್ಲಿ ಹೊಯ್ಸಳ ಸೇನೆಯನ್ನು ಎದುರಿಸಿದ ಅದಿಯಮ ಅವರ ಉಗ್ರವಾದ ದಾಳಿಯ ಮುಂದೆ ನಿಲ್ಲಲಾಗಲಿಲ್ಲ. ಚೋಳ ಸೈನ್ಯ ಕಂಗೆಟ್ಟು ದಿಕ್ಕಾಪಾಲಾಗಿ ಓಡಿತು. ಯುದ್ಧದಲ್ಲಿ ಅದಿಯಮ ಸತ್ತನು. ಚೋಳದಂಡನಾಯಕರುಗಳಾದ ದಾಮೋಧರ ಕಂಚಿಗೆ ಓಡಿಹೋದನು. ನರಸಿಂಗವರ್ಮ ಸೆರೆ ಸಿಕ್ಕಿದನು. ಹೀಗೆ ತಲಕಾಡು ಕ್ರಿ.ಶ. ೧೧೧೭ ರಲ್ಲಿ ಹೊಯ್ಸಳರ ಮಡಿಲಿಗೆ ಬಿತ್ತು. ತಲಕಾಡು ವಿಜಯವು ಈ ಚೈತ್ರಯಾತ್ರೆಯ ಶಿಖರವಾಯಿತು. ವಿಷ್ಣುವರ್ಧನ 'ವೀರಗಂಗ', 'ತಲಕಾಡುಗೊಂಡ' ಎಂಬ ಬಿರುದುಗಳನ್ನು ಧರಿಸಿದನು. ಈ ಸಾಧನೆಯ ಸ್ಮರಣಾರ್ಥಕವಾಗಿ ಅವನು ತಲಕಾಡಿನಲ್ಲಿ ಕೀರ್ತಿನಾರಾಯಣ ದೇವಾಲಯಗಳನ್ನು ಕಟ್ಟಿಸಿದನು.

ಗಂಗವಾಡಿಯನ್ನು ಆಕ್ರಮಿಸಿದ ತರುವಾಯ ವಿಷ್ಣುವರ್ಧನ ಚೋಳರ ಸಾಮಂತರಾದ ಕೊಂಗಾಳ್ವರನ್ನು, ನಿಡುಗಲ್ಲಿನ ಚೋಳರನ್ನು ಸೋಲಿಸಿದನು. ಅವನ ಆಕ್ರಮಣವು ನೀಲಗಿರಿ ಮತ್ತು ಕೊಂಗು ಪ್ರಾಂತ್ಯದವರೆಗೆ ಮುಂದುವರೆಯಿತು. ಈ ಆಕ್ರಮಣದಿಂದ ಸೇಲಂ ಮತ್ತು ಕೊಯಮತ್ತೂರು ಪ್ರಾಂತ್ಯಗಳು ಹೊಯ್ಸಳರ ವಶವಾದವು. ಕ್ರಿ.ಶ. ೧೧೧೬ ರಲ್ಲಿ ವಿಷ್ಣುವರ್ಧನ ಕೊಂಗಾಳ್ವ ರಾಜಕುಮಾರಿ ಚಂದಲದೇವಿಯನ್ನು ಮದುವೆಯಾದನು.

ಬೆಳೆಯುತ್ತಿರುವ ವಿಷ್ಣುವರ್ಧನನ ಶಕ್ತಿ ಸಹಜವಾಗಿಯೇ ಚಾಲುಕ್ಯರನ್ನು ಕೆರಳಿಸಿತು. ಗಂಗವಾಡಿಯ ಗೆಲುವಿನಿಂದ ಉತ್ಸಾಹಭರಿತನಾಗಿದ್ದ ವಿಷ್ಣುವರ್ಧನ ಸ್ವತಂತ್ರನಾಗಲು ಹವಣಿಸಿದನು. ಅನೇಕ ವಿಜಯಗಳಿಂದ ಆತ್ಮವಿಶ್ವಾಸ ತುಂಬಿಕೊಂಡಿದ್ದ ಅವನು ಸರ್ವ ರೀತಿಯಿಂದಲೂ ಚಾಲುಕ್ಯರನ್ನು ಎದುರಿಸಲು ಸಿದ್ಧನಾದನು. ಚಾಲುಕ್ಯ ಸಾಮ್ರಾಟನಾದ ಆರನೆ ವಿಕ್ರಮಾದಿತ್ಯ ಆ ವೇಳೆಗೆ ವೃದ್ಧನಾಗಿ ಶಾಂತ ಆಳ್ವಿಕೆಯಲ್ಲಿದ್ದುದರಿಂದ ಇನ್ನೂ ಉತ್ತೇಜಿತಗೊಂಡ ಅವನು ಮೊದಲು ಚಾಲುಕ್ಯರನ್ನು ಕೆಣಕದೆ ಎಚ್ಚರಿಕೆಯಿಂದ ಅವರ ಸಾಮಂತರನ್ನು ಹತ್ತಿಕ್ಕಲು ನಿರ್ಧರಿಸಿದನು. ಮೊದಲು ಉಚ್ಚಂಗಿ ಪಾಂಡ್ಯರ ಮೇಲೆ ಯುದ್ಧ

ಘೋಷಿಸಿದನು. ದಮ್ಮ ಕದನದಲ್ಲಿ ಅವರನ್ನು ಸೋಲಿಸಿ 'ನೊಳಂಬವಾಡಿಗೊಂಡ' ಎಂಬ ಬಿರುದನ್ನು ಧರಿಸಿದನು. ಅನಂತರ ಬಳ್ಳಾರಿಯನ್ನು ಗೆದ್ದು ಬೆಳುವೊಲವನ್ನು ಮುತ್ತಿದನು. ಇವನ ಆಕ್ರಮಣಕಾರಿ ಪ್ರವೃತ್ತಿ ಆರನೇ ವಿಕ್ರಮಾದಿತ್ಯನನ್ನು ಕೆಣಕಿತು. ಅವರಿಬ್ಬರ ಸಂಬಂಧ ವಿಷಮಿಸಿತು. ಯುದ್ಧ ಅನಿವಾರ್ಯವಾಯಿತು. ಮುದುಕನಾಗಿದ್ದರೂ ವಿಕ್ರಮಾದಿತ್ಯನು ಜಗದ್ದೇವ ಹಾಗೂ ಅನೇಕ ಮಹಾಮಂಡಲೇಶ್ವರರು ಮತ್ತು ೧೨ ಜನ ಸಾಮಂತರೊಂದಿಗೆ ಹೊಯ್ಸಳರ ವಿರುದ್ಧ ಹೊರಟನು. ಎರಡೂ ಸೈನ್ಯ ಹಾಸನ ಜಿಲ್ಲೆಯ ಕಣ್ಣೇಗಾಲದ ಬಳಿ ಭೇಟಿಯಾದವು. ವಿಷ್ಣುವರ್ಧನ ಹಾಗೂ ಅವನ ದಂಡನಾಯಕ ಗಂಗರಾಜ ರಾತ್ರಿಯ ಸಮಯ ದಲ್ಲಿ ಚಾಲುಕ್ಯ ಸೇನೆಯ ಮೇಲೆ ಎರಗಿ ಅದನ್ನು ಧ್ವಂಸ ಮಾಡಿದರೆಂದು ಕ್ರಿ.ಶ. ೧೧೧೮ ರ ಶಾಸನ ತಿಳಿಸುತ್ತದೆ. ಶತ್ರುಸೇನೆ ಹೋರಾಟವನ್ನು ಮುಂದುವರಿಸಲಾರದೆ ಹಿಮ್ಮೆಟ್ಟಿತು.

ತನ್ನ ಸಾರ್ವಭೌಮನನ್ನೇ ಸೋಲಿಸಿದ ವಿಷ್ಣುವರ್ಧನನ ಮಹತ್ವಾಕಾಂಕ್ಷೆಗೆ ಅಡೆತಡೆ ಇಲ್ಲದಂತಾಯಿತು. ಅವನ ಉತ್ಸಾಹಕ್ಕೆ ಎಲ್ಲೆ ಇಲ್ಲದಂತಾಗಿ ಹಾನಗಲ್ಲಿನ ಕದಂಬರನ್ನು ಸೋಲಿಸಿದನು. ಚಾಲುಕ್ಯ ಸಾಮ್ರಾಜ್ಯದಲ್ಲಿ ಈ ರೀತಿ ತಲೆದೋರಿದ ವಾತಾವರಣದಿಂದಾಗಿ ಅವರ ಸಾಮಂತರೆಲ್ಲಾ ಸ್ವತಂತ್ರರಾಗಲು ಹವಣಿಸಿದರು. ಉಚ್ಚಂಗಿಯ ಪಾಂಡ್ಯರು ಮತ್ತು ಗೋವೆಯ ಕದಂಬರು ಸ್ವತಂತ್ರ ಘೋಷಿಸಿಕೊಂಡರು. ಚಾಲುಕ್ಯ ಸೇನಾಧಿಪತಿಯಾದ ಬೊಪ್ಪಣ ಬಂಡಾಯವೆದ್ದು ವಿಷ್ಣುವರ್ಧನನ ಪರ ವಹಿಸಿದನು. ಈ ಬೆಳವಣಿಗೆಗಳು ಆರನೆ ವಿಕ್ರಮಾದಿತ್ಯನನ್ನು ಕಠಿಣ ನಿರ್ಧಾರ ತೆಗೆದುಕೊಳ್ಳುವಂತೆ ಪ್ರೇರೇಪಿಸಿದವು. ಹೊಯ್ಸಳರನ್ನು ಶಿಕ್ಷಿಸಲು ಸಿಂಧಕುಲದ ಎರಡನೆ ಅಚುಗಿ ಮತ್ತು ಅವನ ಮಗ ಪೆರ್ಮಾಡಿಯೊಂದಿಗೆ ವಿಕ್ರಮಾದಿತ್ಯನು ಹೊಯ್ಸಳರ ಮೇಲೆ ದಂಡೆತ್ತಿ ಹೋದನು. ಹಲಸೂರು ಮತ್ತ ಹೊಸವೀಡು ಬಳಿ ನಡೆದ ನಿರ್ಣಾಯಕ ಕದನ ಹೊಯ್ಸಳರಿಗೆ ಪರಾಭವ ತಂದುಕೊಟ್ಟಿತು. ಕ್ರಿ.ಶ. ೧೧೨೨ ರಲ್ಲಿ ಪೆರ್ಮಾಡಿಯು ದೋರಸಮುದ್ರವನ್ನು ಆಕ್ರಮಿಸಿದನು. ವಿಷ್ಣುವರ್ಧನನ್ನು ಬೇಲೂರಿನ ವರೆಗೂ ಹಿಂಬಾಲಿಸಿದನು. ಈ ಸೋಲಿನ ಪರಿಣಾಮವಾಗಿ ವಿಷ್ಣುವರ್ಧನ ಮತ್ತೊಮ್ಮೆ ಚಾಲುಕ್ಯರ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳಬೇಕಾಯಿತು.

ಶಾಂತಿಪ್ರಿಯನೂ, ಸಾಹಿತ್ಯಾಸಕ್ತನೂ ಆದ ಚಾಲುಕ್ಯ ಮೂರನೆ ಸೋಮೇಶ್ವರನ ಕಾಲದಲ್ಲಿ ವಿಷ್ಣುವರ್ಧನನಿಗೆ ಸ್ವತಂತ್ರನಾಗಬೇಕೆಂಬ ಆಸೆ ಮತ್ತೆ ಚಿಗುರಿತು. ಕ್ರಿ.ಶ. ೧೧೩೬ ರಲ್ಲಿ ಕದಂಬರನ್ನು ಸೋಲಿಸಿ ಹಾನಗಲ್ಲು ಮತ್ತು ಬಂಕಾಪುರಗಳನ್ನು ವಶಪಡಿಸಿಕೊಂಡನು. ಬಂಕಾಪುರವು ಅವನ ಉಪ ರಾಜಧಾನಿಯಾಯಿತು. ಕಲಚೂರಿ ಬಿಜ್ಜಳನು ಚಾಲುಕ್ಯರನ್ನು ದಿಕ್ಕರಿಸಿ ಮೇಲೇಳುತ್ತಿದ್ದನು. ಈ ರೀತಿಯ ರಾಜಕೀಯ ಅತಂತ್ರ ಮತ್ತು ಗೊಂದಲಮಯ ಪರಿಸ್ಥಿತಿಯ ಲಾಭ ಪಡೆದುಕೊಂಡ ಗೋವೆಯ ಕದಂಬರು ಮತ್ತು ಶಿಲಾಹಾರರು ಸ್ವತಂತ್ರ ರಾದರು. ಇದರ ಪರಿಣಾಮವಾಗಿ ವಿಷ್ಣುವರ್ಧನ ಬನವಾಸಿ ಮತ್ತು ಹಾನಗಲ್ಲನ್ನು ಕಳೆದು ಕೊಂಡನು. ಎರಡನೆ ಜಗದೇಕಮಲ್ಲನ ಆಳ್ವಿಕೆಯಲ್ಲಿ ವಿಷ್ಣುವರ್ಧನ ಗಂಗವಾಡಿ, ನೊಳಂಬ ವಾಡಿ, ಬನವಾಸಿ, ಹೆದ್ದೊರೆರವರೆಗೆ ಇದ್ದ ಪ್ರದೇಶಗಳನ್ನು ಆಳುತ್ತಿದ್ದನೆಂದು ಅನಂತರದ

ಶಾಸನಗಳು ತಿಳಿಸುತ್ತವೆ. ಈ ವಿಜಯಗಳ ಸ್ಮರಣೆಗಾಗಿ ವಿಷ್ಣುವರ್ಧನ ಐದು ವಿಜಯ ನಾರಾಯಣ ದೇವಾಲಯಗಳನ್ನು ತಲಕಾಡು, ಬೇಲೂರು, ಮೇಲುಕೋಟೆ, ಗದಗ ಮತ್ತು ಬಂಕಾಪುರದಲ್ಲಿ ಕಟ್ಟಿಸಿದನು. ಹೀಗೆ ಸುಮಾರು ೩೪ ವರ್ಷಗಳ ಕಾಲ ಸೈದ್ಧಾಂತಿಕವಾಗಿ ಚಾಲುಕ್ಯರ ಅಧೀನದಲ್ಲಿದ್ದರೂ ಪ್ರಾಯೋಗಿಕವಾಗಿ ಸ್ವತಂತ್ರವಾಗಿಯೇ ರಾಜ್ಯಭಾರ ಮಾಡಿ ಕ್ರಿ.ಶ. ೧೧೪೨ ರಲ್ಲಿ ಮರಣ ಹೊಂದಿದನು. ಆದರೆ ಇತ್ತೀಚಿನ ಸಂಶೋಧನೆಗಳು ವಿಷ್ಣು ವರ್ಧನನ ಅಂತ್ಯಕಾಲದ ಬಗ್ಗೆ ಹಲವಾರು ರೀತಿಯ ಶಾಸನೋಕ್ತ ದಾಖಲೆಗಳನ್ನು ಆಧಾರ ವಾಗಿ ನೀಡುತ್ತಾ ಅವನು ಕ್ರಿ.ಶ. ೧೧೪೮ ಅಕ್ಟೋಬರ್ ೨೫ರವರೆಗೂ ಬದುಕಿದ್ದನು ಎಂದು ತಿಳಿಸಿರುವುದರಿಂದ ವಿಷ್ಣುವರ್ಧನ ಕ್ರಿ.ಶ. ೧೧೪೮ ರಲ್ಲಿ ಮರಣ ಹೊಂದಿದನೆಂದು ಹೇಳಬಹುದು.

ರಾಜ್ಯವನ್ನು ವಿಸ್ತರಿಸುವುದರಲ್ಲಿ ಈತ ಪರಾಕ್ರಮ ತೋರಿಸಿದಂತೆ ಅದನ್ನು ವ್ಯವಸ್ಥೆ ಗೊಳಿಸುವುದರಲ್ಲಿ ವಿಚಕ್ಷಣತೆಯನ್ನೂ, ವಿವೇಕವನ್ನೂ ವ್ಯಕ್ತಪಡಿಸಿದನು. ರಾಜತ್ವದ ಆದರ್ಶ ವಾದ 'ದುಷ್ಟನಿಗ್ರಹ ಶಿಷ್ಟ ಪರಿಪಾಲನೆ' ಎಂಬ ಸೂತ್ರ ಅವನ ರಾಜ್ಯಭಾರದ ಅಡಿಗಲ್ಲಾ ಯಿತು. ಸಾಹಿತ್ಯಕ್ಕೆ ಪ್ರೋತ್ಸಾಹ ಸಿಕ್ಕಿತು. ಅವನ ಆಳ್ವಿಕೆಯಲ್ಲಿ ರಾಜೇಂದ್ರ ಎಂಬ ಸುಪ್ರಸಿದ್ಧ ಜೈನ ವಿದ್ವಾಂಸನು *ಕ್ಷೇತ್ರಗಣಿತ, ಲೀಲಾವತಿ* ಮತ್ತು *ವ್ಯವಹಾರ ಗಣಿತ* ಎಂಬ ಕೃತಿಗಳನ್ನು ಕನ್ನಡದಲ್ಲಿ ರಚಿಸಿದನು. ಇವನ ಆಳ್ವಿಕೆಯಲ್ಲಿ ಶ್ರೀವೈಷ್ಣವ ಧರ್ಮ ಕರ್ನಾಟಕವನ್ನು ಪ್ರವೇಶಿಸಿ ಹೆಚ್ಚು ಪ್ರಚಾರ ಪಡೆಯಿತು. ಜೈನಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ವಿಷ್ಣುವರ್ಧನನ ಪತ್ನಿ ಶಾಂತಲಾದೇವಿ ಜೈನ ಮತಾವಲಂಬಿ ಆಗಿದ್ದಳು. ಅವಳು ನೃತ್ಯ ಮತ್ತು ಸಂಗೀತದಲ್ಲಿ ಪರಿಣಿತಳಾಗಿದ್ದಳು. ಇವನ ನಿಷ್ಠ ಸೇನಾನಿ ಗಂಗರಾಜ ಜೈನ ಮತಾವಲಂಬಿ. ಅವನು ಜೈನ ಬಸದಿಗಳನ್ನು ಕಟ್ಟಿಸಿ ಜೈನ ದೇವಾಲಯಗಳಿಗೆ ದತ್ತಿಗಳನ್ನು ಕೊಟ್ಟಿದ್ದನು. ಶ್ರವಣಬೆಳಗೊಳದ ಪ್ರಾಕಾರ, ಜಗನ್ನಾಥಪುರವೆಂಬ ಅಗ್ರಹಾರ, ಹಳೆಬೀಡಿನ ಪಾರ್ಶ್ವನಾಥ ಬಸದಿ ಇವನ ಕಾಲದಲ್ಲಿ ನಿರ್ಮಾಣವಾದವು. ವಿಷ್ಣುವರ್ಧನ ಈ ನಾಲ್ಕು ಧರ್ಮಗಳ ಪಾಲಕನಾಗಿದ್ದ ಎನ್ನುವುದನ್ನು ಅವನು ಧರಿಸಿದ್ದ 'ಚತುಸ್ಸಮಯ ಸಮುದ್ಧರಣ' ಎಂಬ ಅವನ ಬಿರುದು ಸೂಚಿಸುತ್ತದೆ. ಆದ್ದರಿಂದಲೇ ಈತನ ಆಳ್ವಿಕೆಯಲ್ಲಿ ಶೈವ, ವೈಷ್ಣವ, ಜೈನ ದೇವಾಲಯಗಳು ಯಾವ ಭೇದವೂ ಇಲ್ಲದೆ ನಿರ್ಮಿತವಾದವು. ಈ ಮಾದರಿಯಲ್ಲೇ ಈತನ ಸಾಮಂತನಾದ ಕೈದಾಳದ ಗೂಳಿಬಾಚಿದೇವನೂ ಕೂಡ ಮೂರು ಧರ್ಮಗಳಿಗೂ ಬೇಧಬಾವವಿಲ್ಲದ ಆಶ್ರಯ ನೀಡಿ ದೇವಾಲಯಗಳನ್ನು ಕಟ್ಟಿಸಿಕೊಟ್ಟನು.

ವಿಷ್ಣುವರ್ಧನ ದೊಡ್ಡ ಕಟ್ಟಡಗಳ ನಿರ್ಮಾಪಕ. ಇವನ ಕಾಲದಲ್ಲಿ ಶಿಲ್ಪ, ವಾಸ್ತುಶಿಲ್ಪ ಗಳಂತೂ ಮುಗಿಲು ಮುಟ್ಟಿದವು. ಹೊಯ್ಸಳ ಶೈಲಿ ಚಾಲುಕ್ಯ ರೀತಿಗಿಂತ ಬೇರೆಯಾಗಿ ಬೆಳೆಯಲು ಆರಂಭವಾಯಿತು. ಬೇಲೂರಿನಲ್ಲಿಯ ಕೇಶವ ದೇವಾಲಯ, ದೊಡ್ಡ ಗದ್ದವನಳ್ಳಿಯ ಮಹಾಲಕ್ಷ್ಮಿ ದೇವಾಲಯ, ಮರಳೆಯ ಕೇಶವ ಮತ್ತು ಸಿದ್ದೇಶ್ವರ ದೇವಾಲಯ, ತೊಣ್ಣೂರಿನ ವೀರನಾರಾಯಣ ದೇವಾಲಯ ಮತ್ತು ತಿರುಮಲಸಾಗರ ಎಂಬ

ದೊಡ್ಡಕೆರೆ ಇವನ ಕಾಲದಲ್ಲಿ ನಿರ್ಮಾಣಗೊಂಡವು. ತನ್ನ ರಾಜಧಾನಿಯನ್ನು ಬೇಲೂರಿನಿಂದ 'ಹಳೆಬೀಡಿ'ಗೆ ವರ್ಗಾಯಿಸಿದನು.

ಇವನ ಹಿರಿಯ ರಾಣಿ ಶಾಂತಲೆ ಪ್ರಸಿದ್ಧ ವ್ಯಕ್ತಿ. ಇವಳಲ್ಲದೆ ಈತನಿಗೆ ರಾಜಲೆ ಮತ್ತು ಲಕ್ಷ್ಮಿ ಎಂಬ ಮತ್ತಿಬ್ಬರು ರಾಣಿಯರು ಇದ್ದರು. ಲಕ್ಷ್ಮಿಯ ಮಗನಾದ ನರಸಿಂಹನು ವಿಷ್ಣುವರ್ಧನನ ವೃದ್ಧಾಪ್ಯದಲ್ಲಿ ಹುಟ್ಟಿದನು. ಅವನ ಅನೇಕ ಬಿರುದುಗಳು ಅವನೊಬ್ಬ ಅಸಮಾನ್ಯ ಯೋಧ ಎಂಬುದಕ್ಕೆ ಮತ್ತು ಅವನ ಭವ್ಯ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ. ತಲಕಾಡುಗೊಂಡ, ವೀರಗಂಗ, ಮಲೆಪರೊಳ್‌ಗಂಡ, ಗಂಡಗಿರಿನಾಥ, ಕದನಪ್ರಚಂಡ, ಚತುಸ್ಸಮಯ ಸಮುದ್ಧರಣ ಮೊದಲಾದವು ಇವನ ಬಿರುದುಗಳು.

ವಿಷ್ಣುವರ್ಧನನ ಆಳ್ವಿಕೆ ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ದಕ್ಷಿಣದಲ್ಲಿ ಚೋಳರನ್ನು ಉತ್ತರದಲ್ಲಿ ಚಾಲುಕ್ಯರನ್ನು ಎದುರಿಸಿ ಹೊಯ್ಸಳರ ಘನತೆಯನ್ನು ಎತ್ತಿಹಿಡಿದನು. ಅವಿಧೇಯವಾಗಿದ್ದ ಉಚ್ಚಂಗಿಯ ಪಾಂಡ್ಯರೊಂದಿಗೆ ಮೂರುಸಲ ಹಾನಗಲ್ಲಿನ ಕದಂಬರೊಂದಿಗೆ ನಾಲ್ಕು ಸಲ ಯುದ್ಧ ಮಾಡಿದರೂ ಯುದ್ಧೋತ್ಸಾಹ ಅವನಲ್ಲಿ ಎಂದೂ ತಗ್ಗಲಿಲ್ಲ. ತಮಿಳುನಾಡಿನಿಂದ ಕರ್ನಾಟಕಕ್ಕೆ ಆಗಮಿಸಿದ ರಾಮಾನುಜಾಚಾರ್ಯರಿಗೆ ಮತ್ತು ಅವರ ಶ್ರೀವೈಷ್ಣವ ಧರ್ಮಕ್ಕೆ ಆಶ್ರಯ ನೀಡಿ ಆ ಧರ್ಮವನ್ನು ಜನಪ್ರಿಯಗೊಳಿಸಿದ ವ್ಯಕ್ತಿ. ಇವನು ಚಾಲುಕ್ಯರನ್ನು ತನ್ನ ಸಾರ್ವಭೌಮರೆಂದು ಪರಿಗಣಿಸಿದರೂ ವಾಸ್ತವವಾಗಿ ಸ್ವತಂತ್ರವಾಗಿಯೇ ರಾಜ್ಯಭಾರ ಮಾಡಿದನು.

ವಿಷ್ಣುವರ್ಧನನ ನಂತರ ಅವನ ಮಗ ಒಂದನೆ ನರಸಿಂಹ. ಅನಂತರ ಎರಡನೆ ಬಲ್ಲಾಳ, ಎರಡನೆ ನರಸಿಂಹ, ಸೋಮೇಶ್ವರ, ಮೂರನೆ ನರಸಿಂಹ ಮತ್ತು ಮೂರನೆ ಬಲ್ಲಾಳ ಆಳ್ವಿಕೆ ಮಾಡಿದರು. ಮೂರನೆ ಬಲ್ಲಾಳನ ಕಾಲದಲ್ಲಿ ದೆಹಲಿ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕಾಫರನು ದ್ವಾರಸಮುದ್ರದ ಮೇಲೆ ಧಾಳಿ ಮಾಡಿ ಲೂಟಿಗೈದನು. ಅನಂತರ ಮಹಮ್ಮದ್ ಬಿನ್ ತುಘಲಕ್‌ನಿಂದ ನಿಯೋಜಿತವಾದ ಹೊಸದಂಡು ಹೊಯ್ಸಳ ರಾಜ್ಯವನ್ನು ಆಕ್ರಮಿಸಿ ಲೂಟಿ ಮಾಡಿತು. ಈ ಮಧ್ಯೆ ದಕ್ಷಿಣದ ಮಧುರೆಯ ನಗರದಲ್ಲಿ ಮಹಮದೀಯ ಸಂಸ್ಥಾನವೊಂದು ಅಸ್ತಿತ್ವಕ್ಕೆ ಬಂದಿತು. ಇದರ ಅಧಿಕಾರಿಯಾದ ಘಿಯಾಸುದ್ದೀನನು ಕ್ರಿ.ಶ. ೧೩೪೨ ರಲ್ಲಿ ಹೊಯ್ಸಳ ದೊರೆ ಮೂರನೆ ಬಲ್ಲಾಳನ ವಿರುದ್ಧ ಯುದ್ಧ ಸಾರಿದನು. ಆಗ ಯುದ್ಧದಲ್ಲಿ ಮೂರನೆಯ ಬಲ್ಲಾಳ ಮರಣ ಹೊಂದಿದನು. ಅಲ್ಲಿಗೆ ಹೊಯ್ಸಳರ ಆಳ್ವಿಕೆಯು ಕೊನೆಗೊಂಡಿತು.

## ಸಾಂಸ್ಕೃತಿಕ ಕೊಡುಗೆಗಳು

### ಧಾರ್ಮಿಕ ವ್ಯವಸ್ಥೆ

ಹೊಯ್ಸಳರು ಧಾರ್ಮಿಕ ಕ್ಷೇತ್ರದಲ್ಲಿ ಹೊಸ ವ್ಯವಸ್ಥೆಯೊಂದನ್ನು ಹುಟ್ಟುಹಾಕಿ ಇತರರಿಗೆ

ಮಾದರಿಯಾದರು. ಸರ್ವಧರ್ಮ ಸಮನ್ವಯ ನೀತಿಯನ್ನು ಆಡಳಿತದಲ್ಲಿ ಜಾರಿಗೊಳಿಸಿದ್ದ ಅವರ ಕಾಲದಲ್ಲಿ ಬೌದ್ಧ, ಜೈನ, ವೈಧಿಕ ಧರ್ಮಗಳು ಅಸ್ತಿತ್ವದಲ್ಲಿದ್ದವು. ಚೋಳರಾಜರ ಕಿರುಕುಳಕ್ಕೆ ಈಡಾಗಿದ್ದ ರಾಮಾನುಜಚಾರ್ಯರಿಗೆ ಆಶ್ರಯವನ್ನು ಕೊಟ್ಟು ಜೀವರಕ್ಷಣೆ ಮಾಡಿದ್ದೇ ಅಲ್ಲದೆ ಅವರ ಶ್ರೀವೈಷ್ಣವ ಧರ್ಮವನ್ನೂ ಪ್ರಚಾರ ಮಾಡಿ ಹೃದಯ ವೈಶಾಲ್ಯತೆ ಮೆರೆದರು. ಬೇಲೂರಿನ ಒಂದು ಶಾಸನವು ಅವರ ಆದರ್ಶಮಯ ಧಾರ್ಮಿಕ ಸಮಾಜದ ನಿರ್ಮಾಣವನ್ನು ತಿಳಿಸುತ್ತದೆ. ಅದೇನೆಂದರೆ "ಬೌದ್ಧರು ಯಾರನ್ನು ಬುದ್ಧ ಎಂದು ಕರೆಯುತ್ತಾರೋ ಆತನನ್ನೇ ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮ ಎಂದೂ, ಜೈನ ಶಾಸನವನ್ನು ಒಪ್ಪಿದವರು ಅರ್ಹನ್ ಎಂದೂ, ಮೀಮಾಂಸಕರು ಕರ್ಮ ಎಂದೂ, ವೈಷ್ಣವರು ಕೇಶವ ಎಂದೂ ಉಪಾಸನೆ ಮಾಡುತ್ತಾರೆ".

ಇವರ ಕಾಲದಲ್ಲಿ ಬೌದ್ಧಧರ್ಮ ಅವನತಿಯಾಗತೊಡಗಿತ್ತು. ಆದರೆ ಮಹಾಯಾನ ಬೌದ್ಧ ಧರ್ಮದಲ್ಲಿ ಕಾಣುವ 'ತಾರಾಭಗವತಿ' ಮತ್ತು 'ಮಂಜುಶ್ರೀ' ಪೂಜೆ ಕರ್ನಾಟಕದಲ್ಲಿ ಹೊಯ್ಸಳರ ಕಾಲದಲ್ಲೂ ಪ್ರಚಲಿತವಾಗಿತ್ತು. ಹೊಯ್ಸಳ ಸಾಮ್ರಾಜ್ಯದ ಕಾಲವನ್ನು 'ಜೈನ ಧರ್ಮದ ಅಸಾಧಾರಣ ಬುದ್ಧಿಶಕ್ತಿಯ ನಿರ್ಮಾಣ ಕಾಲ'ವೆಂದು ಹೇಳಬಹುದು. ಹೊಯ್ಸಳರ ಮೂಲಸ್ಥಳ ಸಸಕಪುರವು ಜೈನಧರ್ಮದ ಭದ್ರವಾದ ನೆಲೆಯಾಗಿತ್ತು. ಸುದತ್ತಾಚಾರ್ಯರು ಸಳ, ವಿನಯಾದಿತ್ಯರ ಆಡಳಿತ ಕಾಲದಲ್ಲಿ ಆ ರಾಜ್ಯದ ಭವಿತ್ಯದ ಮಾರ್ಗದರ್ಶಕರಾಗಿದ್ದರು. ಒಂದನೆ ಬಲ್ಲಾಳನ ಗುರು ಚಾರುಕೀರ್ತಿ ಮುನಿ ಎಂಬುವರು. ವಿಷ್ಣುವರ್ಧನನ ಆಳ್ವಿಕೆ ಜೈನಧರ್ಮದ ಅಭಿವೃದ್ಧಿಗೆ ಹೆಸರಾಗಿತ್ತು. ಅವನು ವೈಷ್ಣವನಾಗಿದ್ದರೂ ಇಡೀ ತನ್ನ ಕಾಲದಲ್ಲಿ ಜೈನಧರ್ಮದ ಪೋಷಕನಾಗಿ ಅದನ್ನು ಬೆಳೆಸಿದನು. ವಿಷ್ಣುವರ್ಧನನ ಪಟ್ಟಮಹಿಷಿ ಶಾಂತಲಾದೇವಿ 'ಜೈನಧರ್ಮದ ಅಮೂಲ್ಯರತ್ನ' ಎಂದು ಶಾಸನದಲ್ಲಿ ವರ್ಣಿತಳಾಗಿದ್ದಾಳೆ. ಅವಳು ಶ್ರವಣಬೆಳಗೊಳದಲ್ಲಿ 'ಸವತಿ ಗಂಧವಾರಣ ಬಸದಿ'ಯನ್ನು ನಿರ್ಮಿಸಿದಳು. ವಿಷ್ಣುವರ್ಧನನ ನೆಚ್ಚಿನ ಸೇನಾಧಿಪತಿ ಗಂಗರಾಜ ಜೈನನಾಗಿದ್ದು ಶ್ರವಣಬೆಳಗೊಳದ ಗೊಮ್ಮಟೇಶ್ವರನ ಸುತ್ತಲೂ ಪ್ರಾಕಾರವನ್ನು ಕಟ್ಟಿಸಿದ್ದೇ ಅಲ್ಲದೆ ಜಿನನಾಥಪುರದಲ್ಲಿ ಅನೇಕ ಬಸದಿಗಳನ್ನು ನಿರ್ಮಿಸಿದನು. ವಿಷ್ಣುವರ್ಧನನ ಇತರ ಸೇನಾನಿಗಳಾದ ಬೊಪ್ಪ, ಪುರಿಸ, ಮರಿಯಾನೆ ಮತ್ತು ಭರತರೂ ಜೈನಧರ್ಮೀಯರಾಗಿದ್ದರು. ರಾಜಧಾನಿ 'ದೋರಸಮುದ್ರ' ಜೈನರ ಪ್ರಬಲ ಕೇಂದ್ರವಾಯಿತು. ಹೊಯ್ಸಳರ ಸಾಮಂತರಾದ ಕೊಂಗಾಳ್ವರು, ಚಂಗಾಳ್ವರು ಪೊಂಬುರ್ಚದ ಸಾಂತರರು ಜೈನ ಧರ್ಮದ ಆಶ್ರಯದಾತರಾಗಿದ್ದರು. ಮಹಾಕವಿ ಜನ್ನನು ಮೂರನೆ ನರಸಿಂಹನ ಆಸ್ಥಾನದಲ್ಲಿದ್ದು ಹಳೆಯಬೀಡಿನ ವಿಜಯಪಾರ್ಶ್ವನಾಥ ದೇವಾಲಯದ ಮುಖ ಮಂಟಪವನ್ನು ಕಟ್ಟಿಸಿ ಅಲ್ಲಿ ಅನಂತನಾಥಪುರಾಣದ ಒಂದು ಸಾವಿರ ಪ್ರತಿಗಳನ್ನು ಬರೆಸಿ ಉದಾರ ಸಂಭಾವನೆಯೊಂದಿಗೆ ವಿದ್ವಾಂಸರಿಗೆ ಕೊಟ್ಟು, ಗೌರವಿಸಿದನು.

ಚೋಳ ದೊರೆ ಮೊದಲನೆಯ ಕುಲೋತ್ತುಂಗನಿಂದ ಕಿರುಕುಳಕ್ಕೆ ಗುರಿಯಾದ ಶ್ರೀವೈಷ್ಣವತತ್ವ ಪ್ರತಿಪಾದಕರಾದ ರಾಮಾನುಜಾಚಾರ್ಯರು ತಮಿಳುನಾಡಿನಿಂದ ಕರ್ನಾಟಕ

ಪ್ರವೇಶಿಸಿ ಹೊಯ್ಸಳ ಆಶ್ರಯ ಪಡೆದರು. ತೊಣ್ಣೂರಿನಲ್ಲಿ ವಿಷ್ಣುವರ್ಧನನ್ನು ಭೇಟಿ ಮಾಡಿದ ಮೇಲೆ ರಾಮಾನುಜರು ಯಾದವಗಿರಿ ಅಥವಾ ಮೇಲುಕೋಟೆಯಲ್ಲಿ ನೆಲೆಸಿದರು. ಅವರು ಮೇಲುಕೋಟೆಯಲ್ಲಿ ತಿರುನಾರಾಯಣ ವಿಗ್ರಹವನ್ನು, ಮಠವನ್ನು ಸ್ಥಾಪಿಸಿದರು. ಸುಮಾರು ಇಪ್ಪತ್ತು ವರ್ಷಗಳ ಕಾಲ ಇಲ್ಲಿ ನೆಲೆಸಿದ್ದ ರಾಮಾನುಜರು ಶ್ರೀ ವೈಷ್ಣವ ಧರ್ಮ ವನ್ನು ಪ್ರಚಾರ ಮಾಡಿದರು. ತೊಣ್ಣೂರು, ಸಾಲಿಗ್ರಾಮ, ಮೇಲುಕೋಟೆಗಳು ವೈಷ್ಣವರ ಪ್ರಧಾನ ಅಗ್ರಹಾರಗಳಾದವು. ಈ ಧರ್ಮದ ಪ್ರಚಾರಕ್ಕೋಸ್ಕರ ಕಡಬ, ನುಗ್ಗೇಹಳ್ಳಿ, ಮಾಯ ಸಂದ್ರ, ನೊಣವಿನಕೆರೆ, ಬಿಂಡಿಗನವಿಲೆಯಲ್ಲಿ ಶ್ರೀ ವೈಷ್ಣವ ಬ್ರಾಹ್ಮಣರ ನೆಲೆಗಳನ್ನು ಸ್ಥಾಪಿಸಿದನು. ಇವು ಶ್ರೀವೈಷ್ಣವ ಪಂಚಗ್ರಾಮಗಳೆಂದು ಖ್ಯಾತಿ ಪಡೆದಿವೆ. ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆ ಹುಬ್ಬಳ್ಳಿಯ ಹತ್ತಿರದ ಹುಲಿ ಮತ್ತು ಶ್ರೀಶೈಲ ಶೈವಧರ್ಮದ ಕೇಂದ್ರಗಳಾಗಿದ್ದವು. ಮಧ್ವಾಚಾರ್ಯರು ತಮ್ಮ ದ್ವೈತ ಸಿದ್ಧಾಂತವನ್ನು ಈ ಕಾಲದಲ್ಲಿಯೇ ಪ್ರಚುರ ಪಡಿಸಿದರು. ಬಸವೇಶ್ವರರ ನೇತೃತ್ವದಲ್ಲಿ ನಡೆದ ವೀರಶೈವ ಧಾರ್ಮಿಕ ಆಂದೋಲನ ಹೊಯ್ಸಳ ಸಾಮ್ರಾಜ್ಯದ ಮೇಲೆ ಪ್ರಭಾವ ಬೀರಿತು. ಇವರ ಮಂತ್ರಿಯಾಗಿದ್ದ ಕೆರೆಯ ಪದ್ಮರಸ ವೀರಶೈವ ಧರ್ಮಾನುಯಾಯಿಯಾಗಿದ್ದು, ವೀರಶೈವರ ಗಣ್ಯಕವಿಯಾಗಿದ್ದ ಹರಿಹರನ ಅಳಿಯ ರಾಘವಾಂಕನ ಸಮಾಧಿಯನ್ನು ಬೇಲೂರಿನಲ್ಲಿ ಕಟ್ಟಿಸಿದನು. ಶೈವ ಪಂಥಗಳಾದ ಲಕುಲೀಶ, ಪಾಶುಪತ ಸಂಪ್ರದಾಯದವರೂ ಈ ಕಾಲದಲ್ಲಿದ್ದರು. ಹೀಗೆ ಈ ಎಲ್ಲಾ ಧರ್ಮಗಳೂ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ಸಹಬಾಳ್ವೆಯನ್ನು ನಡೆಸುತ್ತಿದ್ದಂತಹ ಕಾಲ ಹೊಯ್ಸಳರ ಕಾಲವಾಗಿತ್ತು.

**ಸಾಹಿತ್ಯ**

ಹೊಯ್ಸಳರ ಕಾಲದಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲಿ ವಿಪುಲವಾದ ಸಾಹಿತ್ಯ ರಚನೆಯಾಯಿತು. ವಿದ್ವಾಂಸರಲ್ಲಿ ಕಂಡುಬರುತ್ತಿದ್ದ ಆರೋಗ್ಯಕರವಾದ ಸ್ಪರ್ಧಾ ಮನೋಭಾವದಿಂದಾಗಿ ಅಂದಿನ ಸಾಹಿತ್ಯಕ್ಷೇತ್ರವು ಸಮೃದ್ಧವಾದ ಬೆಳೆಯನ್ನು ಕೊಟ್ಟಿತು. ಆಸ್ಥಾನ ಕವಿ ಪಟ್ಟಗಳೂ ಏರ್ಪಟ್ಟವು. ಪುರುಷರು ಪರಾಕ್ರಮಿಗಳಾಗಿದ್ದಂತೆ ಸ್ತ್ರೀಯರು ಕುಶಲಕಲೆಗಳಲ್ಲಿ ಪ್ರವೀಣರಾಗಿದ್ದರು. ದೇಶಭಕ್ತಿ, ಧರ್ಮಶ್ರದ್ಧೆ, ಶುಚಿಯಾದ ಜೀವನನಿಷ್ಠೆ ಮಾನವತಾ ಪ್ರೇಮ, ಆತ್ಮಾರ್ಪಣ ಬುದ್ಧಿ ಈ ಲಕ್ಷಣಗಳು ಅಂದಿನ ಸಾಹಿತ್ಯದಲ್ಲಿ ಅದರಲ್ಲೂ ಶಾಸನ ಸಾಹಿತ್ಯದಲ್ಲಿ ಪ್ರತಿಬಿಂಬಿತವಾಗಿದೆ. ಹೀಗಾಗಿ ಇಂತಹ ಜನಜೀವನ ಅಂದಿನ ಸಾಹಿತ್ಯಕ್ಕೆ ಅತ್ಯಂತ ಸತ್ವಯುತವಾದ ಸ್ಫೂರ್ತಿಯನ್ನೊದಗಿಸಿತು. ಗುಣ, ಗಾತ್ರ, ವೈವಿಧ್ಯ ಈ ಮೂರು ದೃಷ್ಟಿಯಿಂದ ಹೊಯ್ಸಳರ ಕಾಲದ ಕನ್ನಡ ಸಾಹಿತ್ಯ ವಿಶೇಷ ಉಗಮನಾರ್ಹವಾದ ಸಿದ್ಧಿಯನ್ನು ಸೂಚಿಸುತ್ತದೆ.

'ಅಭಿನವ ಪಂಪ'ನೆಂದೇ ಪ್ರಸಿದ್ಧಿಯಾದ ನಾಗಚಂದ್ರನು ಒಂದನೆ ಬಲ್ಲಾಳನ ಆಸ್ಥಾನ ಕವಿಯಾಗಿದ್ದು *ಮಲ್ಲಿನಾಥ ಪುರಾಣ* ಮತ್ತು *ರಾಮಚಂದ್ರಚರಿತ ಪುರಾಣ (ಪಂಪ ರಾಮಾಯಣ)* ಎಂಬ ಎರಡು ಚಂಪೂಕಾವ್ಯಗಳನ್ನು ರಚಿಸಿದ್ದಾನೆ. ಇವನು ಪಂಪನಂತೆ

ತನ್ನ ಕಾವ್ಯ ಪ್ರಜ್ಞೆಯನ್ನು ಲೌಕಿಕ-ಆಗಮಿಕ ಎಂದು ವಿಭಾಗಿಸದೆ ತನ್ನ ಎರಡು ಕೃತಿಗಳಲ್ಲಿ ಒಮ್ಮುಖವಾದ ಜೈನಧರ್ಮ ಶ್ರದ್ಧೆಯನ್ನು ಪ್ರಕಟಿಸಿದ್ದಾನೆ. ಇವನ ಸಮಕಾಲೀನಳಾದ ಕಂತಿ ಎಂಬ ಕವಯತ್ರಿಯು *ಸಮಸ್ಯಾಪೂರ್ಣ* ಎಂಬ ಕೃತಿಯನ್ನು ರಚಿಸಿದಳು. ವಿಷ್ಣುವರ್ಧನನ ಆಸ್ಥಾನದಲ್ಲಿ ರಾಜಾದಿತ್ಯನೆಂಬ ಕವಿ ಇದ್ದು ಅವನು *ಕ್ಷೇತ್ರಗಣಿತ, ವ್ಯವಹಾರ ಗಣಿತ* ಮತ್ತು *ಲೀಲಾವತಿ* ಎಂಬ ಗಣಿತಶಾಸ್ತ್ರ ಕೃತಿಗಳನ್ನು ಪದ್ಯರೂಪದಲ್ಲಿ ರಚಿಸಿದನು. ಜಗದಳ ಸೋಮನಾಥನು *ಕರ್ನಾಟಕ ಕಲ್ಯಾಣಕಾರಕ* ಎಂಬ ವೈದ್ಯಗ್ರಂಥ ರಚಿಸಿದನು. ಎರಡನೇ ಬಲ್ಲಾಳನ ಆಸ್ಥಾನದಲ್ಲಿದ್ದ ಮೂವರು ಜೈನ ಕವಿಗಳ ಜೈನ ಪುರಾಣಗಳು ನಮಗೆ ಉಪಲಬ್ಧವಾಗಿವೆ. ಇವರಲ್ಲಿ ನೇಮಿಚಂದ್ರ, ಜನ್ನ ಇವರಿಬ್ಬರೂ ಸೀಮಾಪುರುಷರೆಂದು ನಂತರದ ಮಧುರನೆಂಬ ಕವಿ ಪ್ರಶಂಸಿಸಿದ್ದಾನೆ. ನೇಮಿಚಂದ್ರನು *ನೇಮಿನಾಥ ಪುರಾಣ* ವನ್ನು ಮತ್ತು *ಲೀಲಾವತಿ* ಎಂಬ ಕೃತಿಯನ್ನು ರಚಿಸಿದ್ದಾನೆ. ಕವಿ ಜನ್ನನು ಕೃತಿರತ್ನವೆನಿಸಿದ *ಯಶೋಧರ ಚರಿತೆ*ಯನ್ನು ಮತ್ತು *ಅನಂತನಾಥ ಪುರಾಣ* ವನ್ನು ಬರೆದಿದ್ದಾನೆ. *ಯಶೋಧರ ಚರಿತೆ*ಯು *ಜೀವದಯೆ ಜೈನಧರ್ಮಂ* ಎಂಬುದನ್ನು ಸೊಗಸಾಗಿ ವರ್ಣಿಸುತ್ತದೆ. ಹೊಯ್ಸಳ ಒಂದನೆ ನರಸಿಂಹನ ಕಾಲವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಾಹಿತ್ಯ ಪ್ರಕಾರಗಳು ಮತ್ತು ಸತ್ವಶೈಲಿಗಳ ದೃಷ್ಟಿಯಿಂದ ಒಂದು ಹೊಸಯುಗವನ್ನು ತೆರೆಯಿತು. ಈ ನೂತನ ಯುಗದ ನೇತರನಾದ ಹರಿಹರ ನರಸಿಂಹನ ಆಸ್ಥಾನದಲ್ಲಿ ಕರಣಿಕನಾಗಿದ್ದು, ಅನಂತರ ಹಂಪೆಯಲ್ಲಿ ನೆಲಸಿ ಅಮೂಲ್ಯವಾದ ಕೃತಿ ರಚಿಸಿದನು. ಹರಿಹರನ *ಗಿರಿಜಾ ಕಲ್ಯಾಣ* ಪ್ರೌಢಶೈಲಿಯಲ್ಲಿ ರಚಿತವಾದ ಕಾವ್ಯ. ರಗಳೆ ಕವಿಯೆಂದೇ ಪ್ರಸಿದ್ಧಿಯಾದ ಹರಿಹರನು ನೂರಕ್ಕೂ ಹೆಚ್ಚು ರಗಳೆಗಳನ್ನು ರಚಿಸಿದ್ದಾನೆ. ಅವುಗಳಲ್ಲಿ *ಬಸವರಾಜದೇವರ ರಗಳೆ* 'ಪ್ರಮುಖವಾಗಿದೆ. ಈ ರಗಳೆಗಳು ತಮಿಳುನಾಡಿನ ಶಿವಭಕ್ತರ ಮತ್ತು ಕನ್ನಡದ ವೀರಶೈವ ಶರಣರ ಜೀವನ ಮತ್ತು ಸಾಧನೆಗಳನ್ನು ತಿಳಿಸುತ್ತವೆ. ಕನ್ನಡ ಸಾಹಿತ್ಯದಲ್ಲಿ ಷಟ್ಪದಿ ಪ್ರಕಾರವನ್ನು ಪ್ರವರ್ತನಗೊಳಿಸಿದ ಕೀರ್ತಿ ಹರಿಹರನ ಸೋದರಳಿಯನಾದ ರಾಘುವಾಂಕನಿಗೆ ಸಲ್ಲುತ್ತದೆ. *ಹರಿಹರ ರಗಳೆ* ಪ್ರಕಾರದಲ್ಲಿ ತನ್ನ ಕಾವ್ಯ ರಚಿಸಿದರೆ ರಾಘುವಾಂಕ ತನ್ನೆಲ್ಲಾ ಕಾವ್ಯಗಳನ್ನು ಷಟ್ಪದಿಯಲ್ಲಿ ಬರೆದನು. ಇವನು *ಹರಿಶ್ಚಂದ್ರ ಕಾವ್ಯ, ಸಿದ್ದರಾಮ ಪುರಾಣ, ಸೋಮನಾಥ ಚರಿತೆ, ವೀರೇಶ ಚರಿತೆ, ಶರಭ ಚಾರಿತ್ರ* ಮತ್ತು *ಹರಿಹರ ಮಹತ್ವ* ಎಂಬ ಕೃತಿಗಳನ್ನು ರಚಿಸಿದ್ದಾನೆ. ಇವರ ಜೊತೆಗೆ ಹೆಸರಿಸಬಹುದಾದ ಮತ್ತೊಬ್ಬ ಕವಿ ಎಂದರೆ ಕೆರೆಯ ಪದ್ಮರಸ. ಇವನು ಹರಿಹರನನ್ನು ಅನುಸರಿಸಿ *ದೀಕ್ಷಾಬೋಧೆ* ಎಂಬ ಕೃತಿಯನ್ನು ರಗಳೆಯಲ್ಲಿ ಬರೆದನು. ವೈದಿಕ ಕವಿಗಳಲ್ಲಿ ಮುಖ್ಯನಾದ ರುದ್ರಭಟ್ಟನು *ಜಗನ್ನಾಥ'ವಿಜಯ* ಎಂಬ ಶ್ರೀಕೃಷ್ಣನ ಜೀವನ ವಿಜಯಗಳನ್ನೊಳಗೊಂಡ ಕೃತಿ ರಚಿಸಿದ್ದಾನೆ. ಕನ್ನಡದ ಮುಖ್ಯ ಕಾವ್ಯ ಸಂಕಲನ ಗ್ರಂಥವಾದ *ಸೂಕ್ತಿಸುಧಾರ್ಣವ* ಎಂಬುದನ್ನು ಕವಿ ಮಲ್ಲಿಕಾರ್ಜುನನು ರಚಿಸಿದನು. ಇವನ ಮಗನಾದ ಕೇಶಿರಾಜನು ಕನ್ನಡದ ಸುಪ್ರಸಿದ್ಧ ವೈಯಾಕರಣಿ, ಅವನು *ಶಬ್ದಮಣಿ ದರ್ಪಣ* ಎಂಬ ವ್ಯಾಕಾರಣ ಗ್ರಂಥವನ್ನು ರಚಿಸಿದ್ದಾನೆ. ಆ ಕಾಲದ ಶಾಸನ ಸಾಹಿತ್ಯವು ನಮ್ಮ ಸಂಸ್ಕೃತಿಗೆ

ಮತ್ತೊಂದು ಶ್ರೀಮಂತವಾದ ಬಳುವಳಿ. ಅದರಲ್ಲಿ ಸೋಮನಾಥ ಪಂಡಿತ, ಚಿದಾನಂದ ಕವಿ ಮತ್ತು ದಶಕೀರ್ತಿ ದೇವರು ಪ್ರಮುಖರಾಗಿದ್ದಾರೆ. ಇದೇ ಕಾಲದಲ್ಲಿ ಪ್ರಸಿದ್ಧಿಗೆ ಬಂದ 'ವೀರಶೈವ ಚಳುವಳಿ'ಯು ಬಸವೇಶ್ವರರ ನೇತೃತ್ವದಲ್ಲಿ ಕನ್ನಡ ಸಾಹಿತ್ಯವನ್ನು ದೇಶಿಶೈಲಿಯಲ್ಲಿ ಸೃಷ್ಟಿಸಿತು. ಜೈನಕವಿಗಳು ಕನ್ನಡ ಭಾಷೆಯನ್ನು ಕೋಣೆಯಲ್ಲಿ ಬೆಳಸಿದರೆ ವಚನಕಾರರು ಈ ಭಾಷೆಯನ್ನು ಕೋಣೆಯಿಂದ ಹೊರತಂದು ಬೆಳೆಸಿದರು. ಹೀಗೆ ಈ ಯುಗದಲ್ಲಿ ಕನ್ನಡ ಭಾಷೆ ಸ್ಪಷ್ಟತೆ, ಬಿಗಿ ಮತ್ತು ಸೌಂದರ್ಯಗಳಲ್ಲಿ ಉನ್ನತ ಮಟ್ಟವನ್ನು ಮುಟ್ಟಿತು.

ವಿಷ್ಣುವರ್ಧನನ ಸಮಕಾಲೀನರಾದ ರಾಮಾನುಜಾಚಾರ್ಯರು 'ವಿಶಿಷ್ಟಾದ್ವೈತ ಸಿದ್ಧಾಂತ'ದ ಪ್ರತಿಪಾದಕರು. ನಂತರ ಬಂದ ಮಧ್ವಾಚಾರ್ಯರು 'ದ್ವೈತ ಸಿದ್ಧಾಂತ'ವನ್ನು ಪ್ರತಿಪಾದಿಸಿ ಸಂಸ್ಕೃತದಲ್ಲಿ ಅನೇಕ ಕೃತಿ ರಚನೆಗೈದು ಹೆಸರುವಾಸಿಯಾಗಿದ್ದಾರೆ. ಜೈನ ವಿದ್ವಾಂಸರಲ್ಲಿ *ಸಾರಚತುಷ್ಟ* ಯಕ್ಕೆ ವ್ಯಾಖ್ಯಾನ ಬರೆದ ಬಾಲಚಂದ್ರನೂ, *ಗುರುಪಂಚ ಸ್ಮೃತಿ* ಯನ್ನು ರಚಿಸಿದ ಥಾಮಚಂದ್ರ ಮೂಲಾಧಾರಿಯೂ ಈ ಕಾಲಕ್ಕೆ ಸೇರಿದವರು. ಕವಿಗಳ ಕುಟುಂಬವೇ ಆಗಿದ್ದ ವೀರನರಸಿಂಹನ ಆಸ್ಥಾನದಲ್ಲಿದ್ದ ಎರಡನೆ ವಿದ್ಯಾಚಕ್ರವರ್ತಿ *ಗದ್ಯ ಕರ್ಣಾಮೃತ* ವನ್ನು ಬರೆದನು. ಈ ಗದ್ಯಗ್ರಂಥವು ಇಮ್ಮಡಿ ನರಸಿಂಹನಿಗೂ ಪಾಂಡ್ಯ, ಮಗಧ, ಪಲ್ಲವ ರಾಜರುಗಳ ಒಗ್ಗೂಡಿದ ಸೈನ್ಯಕ್ಕೂ ನಡೆದ ಯುದ್ಧವನ್ನು ವರ್ಣಿಸುತ್ತದೆ. ಮುಮ್ಮಡಿ ವಿದ್ಯಾಚಕ್ರವರ್ತಿಯು *ರುಕ್ಮಿಣಿ ಕಲ್ಯಾಣ* ಮತ್ತು *ಕಾವ್ಯ ಪ್ರಕಾಶ*ಕ್ಕೆ ವ್ಯಾಖ್ಯಾನವನ್ನು ಬರೆದನು. ತ್ರಿವಿಕ್ರಮ ಪಂಡಿತನ ಉದಾಹರಣವು ಪಾಂಚಾಲಿ ಶೈಲಿಯ ಒಂದು ಸೊಗಸಾದ ಕಾವ್ಯ. ಕಾವ್ಯದ ವಸ್ತು ಅನಿರುದ್ಧ ಉಷೆಯರ ವಿವಾಹವಾದರೂ ಶ್ರೀಕೃಷ್ಣನೇ ಈ ಕಾವ್ಯದ ನಾಯಕ. ಈ ಯುಗದ ಎರಡು ಜೀವನ ಚರಿತ್ರೆಗಳಾದ *ಮಣಿಮಂಜರಿ* ಮತ್ತು ಮಧ್ವ ವಿಜಯರನ್ನು ನಾರಾಯಣ ಪಂಡಿತ ರಚಿಸಿದನು. ಹೀಗೆ ಹೊಯ್ಸಳರ ಕಾಲದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳು ಹುಲುಸಾಗಿ ಬೆಳೆದವು. ಇವುಗಳಿಗೆ ಹೊಯ್ಸಳ ದೊರೆಗಳ ಉದಾರ ಪ್ರೋತ್ಸಾಹ, ಸಾಹಿತ್ಯಾಭಿಮಾನವೇ ಕಾರಣವಾಗಿದೆ.

### ಕಲೆ ಮತ್ತು ವಾಸ್ತುಶಿಲ್ಪ

ಕರ್ನಾಟಕದ ವಾಸ್ತುಪರಂಪರೆ ಭವ್ಯವಾದುದು. ಇದನ್ನು ಶ್ರೀಮಂತಗೊಳಿಸುವಲ್ಲಿ ಹಲವು ಅರಸು ಮನೆತನಗಳು ಪಾಲ್ಗೊಂಡಿವೆ. ಅವುಗಳಲ್ಲಿ ಹೊಯ್ಸಳ ವಂಶ ಹೆಸರುವಾಸಿಯಾಗಿದೆ. ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಹೊಯ್ಸಳರು ಒಂದು ರೀತಿಯಲ್ಲಿ ಕಲ್ಯಾಣ ಚಾಲುಕ್ಯ ವಾಸ್ತುಶಿಲ್ಪ ಅವರ ಅವನತಿಯ ನಂತರವೂ ಪೂರ್ಣವಾಗಿ ವಿಕಾಸಗೊಳ್ಳುವುದಕ್ಕೆ ಕಾರಣವಾದರು. ಬಹುತೇಕ ಕಲ್ಯಾಣ ಚಾಲುಕ್ಯ ದೇವಾಲಯಗಳನ್ನು ನಿರ್ಮಿಸಿರುವ ಪದರಗಲ್ಲನ್ನೇ ಹೊಯ್ಸಳರೂ ಬಳಸಿದರು. ಆಗ ಕಲ್ಯಾಣ ಚಾಲುಕ್ಯ ಶೈಲಿಗೆ ನೂತನ ಜೀವದಾನವು ದೊರಕಿತು. ಕಲ್ಯಾಣ ಚಾಲುಕ್ಯ ವಾಸ್ತುಶಿಲ್ಪ ಶೈಲಿಗೆ ತಮ್ಮದೇ ಆದ ಕೆಲವು ವಾಸ್ತುಶಿಲ್ಪ ಒಲವುಗಳನ್ನು ಕೂಡಿಸಿದರು. ಇದರಿಂದಾಗಿ ಅವರ ದೇವಾಲಯದ ಶಿಲ್ಪಗಳಲ್ಲಾಗಲಿ, ವಾಸ್ತು ಅಲಂಕಾರಗಳಲ್ಲಾಗಲಿ ಒಂದು ವೈಶಿಷ್ಟ್ಯಪೂರ್ಣವಾದ ಹೊಯ್ಸಳ ಛಾಯೆ ಕಾಣಿಸಿಕೊಂಡಿತು.

ಕಲ್ಯಾಣ ಚಾಲುಕ್ಯರ ಕಾಲದಂತೆ ಹೊಯ್ಸಳ ಆಳ್ವಿಕೆಯಲ್ಲೂ ದೇವಾಲಯಗಳ ಮತ್ತು ಬಸದಿಗಳ ನಿರ್ಮಾಣಕ್ಕೆ ರಾಜಾಶ್ರಯದ ಕೊರತೆ ಇರಲಿಲ್ಲ. ರಾಜರು, ರಾಣಿಯರು, ಮಂತ್ರಿಗಳು ದಂಡನಾಯಕರು ದೇವಾಲಯಗಳನ್ನು ಕಟ್ಟಿ ಪೋಷಿಸಿದರು. ಹೊಯ್ಸಳರ ಕಾಲದ ದೇವಾಲಯಗಳು ತಮ್ಮದೇ ಆದ ಕೆಲವು ಲಕ್ಷಣಗಳನ್ನು ಒಳಗೊಂಡಿವೆ. ಅವುಗಳಲ್ಲಿ:

೧. ಹೊಯ್ಸಳ ದೇವಾಲಯದ ತಲವಿನ್ಯಾಸವು ನಕ್ಷತ್ರಾಕಾರವಾಗಿರುತ್ತದೆ. ಈ ತಲವಿನ್ಯಾಸದ ಆಕಾರಕ್ಕೆ ತಕ್ಕಂತೆ ಎತ್ತರವಾದ ಜಗತಿಯನ್ನು ನಿರ್ಮಿಸಿ ಅದರ ಮೇಲೆ ದೇವಾಲಯ ಗಳನ್ನು ನಿರ್ಮಿಸಲಾಗಿರುತ್ತದೆ.

೨. ಇವರ ದೇವಾಲಯಗಳನ್ನು ಗರ್ಭಗುಡಿಗಳ ಸಂಖ್ಯೆಗೆ ಅನುಗುಣವಾಗಿ ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟಗಳೆಂದು ವಿಭಾಗಿಸಬಹುದು.

೩. ಈ ದೇವಾಲಯಗಳನ್ನು ಹಸಿರುಗಪ್ಪು ಬಣ್ಣದ ಬಳಪದ ಕಲ್ಲು ಅಥವಾ ಕ್ಲೋರೈಟಿಕ್ ಷಿಸ್ಟ್ ಕಲ್ಲಿನಿಂದ ನಿರ್ಮಿಸಲಾಗಿರುತ್ತದೆ.

೪. ದೇಗುಲಗಳ ಭಿತ್ತಿಯು ಕುಸುರಿ ಕೆತ್ತನೆಯ ಶಿಲ್ಪಗಳಿಂದ ಅಲಂಕೃತವಾಗಿರುತ್ತದೆ. ಭಿತ್ತಿಯ ಕೆಳಭಾಗ ಹಲವಾರು ಶಿಲ್ಪ ಪಟ್ಟಿಕೆಗಳಿಂದ ಕೂಡಿರುತ್ತದೆ. ಕೆಳಗಿನ ಪಟ್ಟಿಕೆಯಲ್ಲಿ ಆನೆಗಳ ಸಾಲು, ಅದರ ಮೇಲೆ ಕುದುರೆಗಳು, ಮುಂದಿನದು ಹೂವಿನ ಸುರುಳಿ, ಅದರ ಮೇಲೆ ಯುದ್ಧಗಳ ಸಮಕಾಲೀನ ಬದುಕಿನ, ಮಹಾಭಾರತ, ರಾಮಾಯಣ ಮತ್ತು ಭಾಗವತಗಳ ಚಿತ್ರಣವನ್ನು ಈ ಪಟ್ಟಿಕೆಗಳಲ್ಲಿ ಕಾಣಬಹುದು. ಈ ಪಟ್ಟಿಕೆಗಳೆಲ್ಲವೂ ದೇವಾಲಯ ವನ್ನು ಸುತ್ತುವರಿದಿದೆ.

೫. ಹೊಯ್ಸಳ ದೇಗುಲದ ಶಿಖರಗಳು ನಕ್ಷತ್ರಾಕಾರವಾಗಿ ಮೆಟ್ಟಿಲು-ಮೆಟ್ಟಿಲಾಗಿ ಮೇಲಕ್ಕೆ ಹೋಗುತ್ತವೆ. ಶಿಖರದ ಮೇಲೆ ಆಮಲಕ ಅದರ ಮೇಲೆ ಕಲಶ ಇರುತ್ತದೆ. ಶಿಖರದ ಮುಂಭಾಗ ಸುಖನಾಸಿವರೆಗೂ ಹಬ್ಬಿ ಅದರ ಮೇಲೆ ಹುಲಿಯೊಂದಿಗೆ ಹೋರಾಡು ತ್ತಿರುವ ಸಳನ ವಿಗ್ರಹ ಇರುತ್ತದೆ.

೬. ದೇವಾಲಯದ ಒಳಗೆ ಮಹಾದ್ವಾರ ವಿಸ್ತೃತ ಕೆತ್ತನೆಗಳಿಂದ ಕೂಡಿರುತ್ತದೆ. ಇದರ ಎರಡೂ ಕಡೆಗಳಲ್ಲಿ ದ್ವಾರಪಾಲಕ ವಿಗ್ರಹಗಳಿರುತ್ತವೆ. ದ್ವಾರದ ಲಲಾಟ ಬಿಂಬದ ಮೇಲ್ಭಾಗದಲ್ಲಿ ಮಕರ ತೋರಣವಿರುತ್ತದೆ.

೭. ಈ ದೇವಾಲಯಗಳ ಬಹುಮುಖ್ಯ ಅಂಶ ಕಂಬಗಳ ರಚನೆ, ಇವುಗಳನ್ನು ಲೇತ್‌ಯಂತ್ರದ ಮೇಲೆ ಇಟ್ಟು ತಿರುಗಿಸಿ ಮಾಡಿರುವುದರಿಂದ ಒಂದು ವಿಶಿಷ್ಟರೂಪ ಪಡೆದಿವೆ. ಈ ಕಂಬಗಳ ಮೇಲ್ಭಾಗದಲ್ಲಿ ಅದಕ್ಕೂ ಮೇಲ್ಛಾವಣಿಗೂ ಹೊಂದಿ ಕೊಂಡಂತೆ ಕೆಳಗೆ ಭಾಗಿರುವ ಮದನಿಕಾ ವಿಗ್ರಹಗಳನ್ನು ಅಳವಡಿಸಿದ್ದಾರೆ.

೮. ಇವರ ಕಾಲದ ದೇವಾಲಯಗಳ ಇನ್ನೊಂದು ಪ್ರಮುಖ ಭಾಗವೆಂದರೆ ನವರಂಗದ ಮೇಲ್ಛಾವಣಿಯಲ್ಲಿನ ಭುವನೇಶ್ವರಿಗಳು. ಇವು ವರ್ತುಲಾಕಾರ ಇಲ್ಲವೇ ನಕ್ಷತ್ರಾಕಾರ ವಾಗಿದ್ದು ಹಲವಾರು ಹಂತಗಳಿಂದ ಕೂಡಿರುತ್ತವೆ.

ಈ ಎಲ್ಲ ಲಕ್ಷಣಗಳನ್ನು ಒಳಗೊಂಡಿರುವ ಹೊಯ್ಸಳರ ದೇವಾಲಯಗಳು ಮೇಲು ನೋಟದ ಶೋಧನೆಯಿಂದ ಕರ್ನಾಟಕದ ವಿವಿಧ ಕಡೆ ನೂರಕ್ಕೂ ಹೆಚ್ಚು ಕಡೆ ಇವೆ. ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯಲ್ಲಿ ಕ್ರಿ.ಶ. ೧೧೧೩ ರಲ್ಲಿ ಕಟ್ಟಿರುವ ದೊಡ್ಡಗದ್ದವಳ್ಳಿಯಲ್ಲಿನ ಲಕ್ಷ್ಮಿ ದೇವಾಲಯ ಆರಂಭಿಕ ದೇವಾಲಯಗಳಲ್ಲಿ ಮೊದಲನೆಯದು. ಬೇಲೂರಿನ ಕೇಶವ ದೇವಾಲಯವು ಕ್ರಿ.ಶ. ೧೧೧೭ ರಲ್ಲಿ ವಿಷ್ಣುವರ್ಧನನ ಸ್ವಯಂ ಅಣತಿಯಂತೆ ಕಟ್ಟಲಾಯಿತು. ತಲಕಾಡಿನ ಕೀರ್ತಿ ನಾರಾಯಣ ದೇಗುಲವೂ ಇವನ ಕಾಲಕ್ಕೇ ಸಂಬಂಧಿಸಿದುದು. ಬೇಲೂರಿನ ಕಪ್ಪೆಚನ್ನಿಗ ದೇವಾಲಯವನ್ನು ವಿಷ್ಣುವರ್ಧನನ ರಾಣಿ ಶಾಂತಲಾದೇವಿ ಕಟ್ಟಿಸಿದಳು. ಒಂದನೇ ನರಸಿಂಹನ ಆಳ್ವಿಕೆಯಲ್ಲಿ ವಾಸ್ತು ನಿರ್ಮಾಣ ಕಾರ್ಯ ಅವ್ಯಾಹತವಾಗಿ ಸಾಗಿತು. ಇವನ ಕಾಲದಲ್ಲಿ ೧೫ಕ್ಕೂ ಹೆಚ್ಚು ದೇವಾಲಯಗಳು ನಿರ್ಮಾಣವಾಗಿವೆ. ಅವುಗಳಲ್ಲಿ ದಾವಣಗೆರೆ ಬಳಿಯ ಆನೆಕೊಂಡದ ಈಶ್ವರ ದೇವಾಲಯ (ಕ್ರಿ.ಶ.೧೧೬೦), ಹಾಸನದ ಬಳಿಯ ಕೋರಮಂಗಲದ ಬುಚೇಶ್ವರ ದೇಗುಲ (ಕ್ರಿ.ಶ.೧೧೭೩), ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ ಎರಡನೆ ಬಲ್ಲಾಳನ ಕಾಲದ ತರಿಕೆರೆ ಬಳಿಯ ಅಮೃತಾಪುರದ ಅಮೃತೇಶ್ವರ ದೇವಾಲಯ (ಕ್ರಿ.ಶ.೧೧೯೬), ಹಳೇಬೀಡಿನ ಕೇದಾರೇಶ್ವರ ದೇವಾಲಯ (ಕ್ರಿ.ಶ.೧೨೧೯), ಅರಸೀಕೆರೆಯ ಈಶ್ವರ ದೇವಾಲಯ (ಕ್ರಿ.ಶ.೧೨೦೦), ಇಮ್ಮಡಿ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಅರಸೀಕೆರೆ ಬಳಿಯ ಹಾರನಹಳ್ಳಿಯ ಸೋಮೇಶ್ವರ ದೇಗುಲ (ಕ್ರಿ.ಶ. ೧೨೩೪), ಮತ್ತು ಬಸರಾಳಿನ ಮಲ್ಲಿಕಾರ್ಜುನ ದೇವಾಲಯಗಳು ನಿರ್ಮಿತವಾದವು. ಸೋಮೇಶ್ವರನ ಆಳ್ವಿಕೆಯಲ್ಲಿ ನುಗ್ಗೆಹಳ್ಳಿಯ ಲಕ್ಷ್ಮಿನರಸಿಂಹ ಮತ್ತು ಸದಾಶಿವನ ದೇಗುಲಗಳು ಕಟ್ಟಲ್ಪಟ್ಟವು. ತುಮಕೂರು ಜಿಲ್ಲೆಯ ತುರುವೆಕೆರೆಯ ಕೇಶವ ಮತ್ತು ಮೂಲೆ ಶಂಕರೇಶ್ವರ ದೇಗುಲ (ಕ್ರಿ.ಶ.೧೨೬೦), ಶೆಟ್ಟಿಕೆರೆಯ ಯೋಗಮಾಧವ ದೇವಾಲಯ (ಕ್ರಿ.ಶ.೧೨೬೧) ಮತ್ತು ಪ್ರಖ್ಯಾತಿಯೂ ಆದ ಸೋಮನಾಥಪುರದ ಕೇಶವ ದೇವಾಲಯ (ಕ್ರಿ ಶ. ೧೨೬೮) ಹೊಯ್ಸಳರ ಕಾಲದ ಪ್ರಮುಖ ದೇವಾಲಯಗಳಾಗಿವೆ.

ಇವುಗಳಲ್ಲಿ ಬೇಲೂರು, ಹಳೇಬೀಡು ಮತ್ತು ಸೋಮನಾಥಪುರದ ದೇವಾಲಯಗಳು ಹೊಯ್ಸಳ ಶಿಲ್ಪಶೈಲಿಯ ಅತ್ಯುತ್ಕೃಷ್ಟ ಸೃಷ್ಟಿ ಎಂದು ಪರಿಗಣಿಸಬಹುದು. ಫರ್ಗ್ಯೂಸನ್ ಅಭಿಪ್ರಾಯದಂತೆ ಹಳೇಬೀಡಿ ಹೊಯ್ಸಳೇಶ್ವರ ದೇವಾಲಯ "ವಾಸ್ತುಶಿಲ್ಪ ಸೃಷ್ಟಿಯಲ್ಲಿ ರತ್ನಪ್ರಾಯವಾಗಿದೆ. ಗಾಥಿಕ್ ಕಲೆಯ ಯಾವ ನಿರ್ಮಿತಿಗಿಂತಲೂ ಇದೂ ಅದೆಷ್ಟೋ ಮಿಗಿಲಾದುದು".

ಹೊಯ್ಸಳೇಶ್ವರ ದೇವಾಲಯವನ್ನು ವಿಷ್ಣುವರ್ಧನನ ಅಧಿಕಾರಿಯಾದ ಕೇತಮಲ್ಲನ (ಕ್ರಿ.ಶ. ೧೧೨೧) ಆಜ್ಞೆಯಂತೆ ಕಟ್ಟಲಾಯಿತು. ಕೇದರೋಜ ಎಂಬ ಸ್ಥಪತಿ ಇದನ್ನು ಕಟ್ಟಿದನು. ಐದು ಅಡಿ ಎತ್ತರದ ಜಗತಿಯ ಮೇಲೆ ನಕ್ಷತ್ರಾಕಾರದಲ್ಲಿ ಕಟ್ಟಲಾಗಿದೆ. ಇದು ದ್ವಿಕೂಟ ಮಾದರಿ ದೇವಾಲಯ. ಎರಡೂ ಭಾಗಗಳಲ್ಲೂ ಎರಡು ಗರ್ಭಗೃಹಗಳು ಸುಕನಾಸಿ, ನವರಂಗ ಮಹಾದ್ವಾರಗಳಿವೆ. ನಂದಿ ಮಂಟಪಗಳಲ್ಲಿ ಬೃಹತ್ ಪ್ರಮಾಣದ ನಂದಿ ವಿಗ್ರಹಗಳಿವೆ. ನವರಂಗ ಅತ್ಯಾಕರ್ಷಕವಾಗಿದ್ದು ಪ್ರತಿಯೊಂದು ಅಂಕಣವೂ ಸುಂದರವಾದ ಭುವನೇಶ್ವರಿಯ

ನ್ನೊಳಗೊಂಡಿದೆ. ಇಲ್ಲಿನ ಶಿಲ್ಪಕಲಾ ಕೃತಿಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದರೆ ಆ ಕಾಲದ ಉಡುಗೆ-ತೊಡುಗೆ, ವಾಹನ ಮೊದಲಾದ ಸಾಮಾಜಿಕ ವಿಚಾರಗಳ ಮೇಲೆ ಕುತೂಹಲಕಾರಿಯಾದ ಬೆಳಕನ್ನು ಶಿಲ್ಪಗಳು ನೀಡುತ್ತವೆ.

ಸೋಮನಾಥಪುರದ ಕೇಶವ ದೇವಾಲಯವನ್ನು ಮೂರನೆ ಸೋಮೇಶ್ವರನ ಮಂತ್ರಿ ಸೋಮದಂಡನಾಯಕನು ಕ್ರಿ.ಶ.೧೨೬೮ ರಲ್ಲಿ ಈ ಪಟ್ಟಣ ದೇಗುಲವನ್ನು ಕಟ್ಟಿಸಿದನು. ಇದು ಮೂರು ಗರ್ಭಗೃಹಗಳುಳ್ಳ ಈ ತ್ರಿಕೂಟಾಚಲ ದೇವಾಲಯದ ಪ್ರಾಕಾರಸಹಿತ ಉದ್ದಗಲ ಒಟ್ಟು ೨೧೫ ಅಡಿ x ೧೭೭ ಅಡಿ ಮತ್ತು ಸುತ್ತಲೂ ೬೪ ಸಣ್ಣ ಕೋಣೆಗಳಿದ್ದು ಒಂದೊಂದರ ಮುಂದೆ ಕಂಬಗಳಿವೆ. ಈ ದೇವಾಲಯ ನಕ್ಷತ್ರಾಕಾರದ ಗೋಪುರಗಳಿಂದ, ಲಾವಣ್ಯಪೂರ್ಣ ಶಿಲ್ಪಕೃತಿಗಳಿಂದ ಅಪ್ರತಿಮ ಎನಿಸಿಕೊಂಡಿದೆ. ಮುಖ್ಯ ಗರ್ಭಗೃಹದಲ್ಲಿ ವಿಗ್ರಹವಿಲ್ಲ. ಉತ್ತರದ ಗರ್ಭಗೃಹದಲ್ಲಿ ಜನಾರ್ಧನ, ದಕ್ಷಿಣ ಗರ್ಭಗೃಹದಲ್ಲಿ ವೇಣು ಗೋಪಾಲ ವಿಗ್ರಹವಿದೆ. ದೇವಾಲಯದ ಹೊರಭಿತ್ತಿಯ ಮೇಲೆ ಎಂದಿನಂತೆ ಆನೆಗಳು, ರಾವುತರು, ಸುರುಳಿಯಲಂಕಾರ, ಪೌರಾಣಿಕ ಕಥೆಗಳ ಚಿತ್ರಗಳು, ಹಂಸಗಳು ಈ ಪಟ್ಟಿಕೆಗಳಿಂದ ಅಲಂಕೃತವಾಗಿವೆ. ನವರಂಗದ ಬೆಳಕಿನ ವ್ಯವಸ್ಥೆಗೆ ಜಾಲಂಧ್ರಗಳಿವೆ. ಮೂರು ಗರ್ಭಗುಡಿಗಳ ಮೇಲೆ ಮೂರು ಶಿಖರಗಳಿವೆ.

ಬೇಲೂರಿನ ಚನ್ನಕೇಶವ ದೇವಾಲಯವು ವಿಷ್ಣುವರ್ಧನನು ತಲಕಾಡಿನಲ್ಲಿ ಚೋಳರ ವಿರುದ್ಧ ವಿಜಯ ಪಡೆದಿದ್ದಕ್ಕಾಗಿ ಕ್ರಿ.ಶ.೧೧೧೭ ರಲ್ಲಿ ಕಟ್ಟಿಸಿದನು. ಇದರ ಮುಖ್ಯ ಶಿಲ್ಪಿಗಳು ದಾಸೋಜ ಮತ್ತು ಅವನ ಮಗ ಚಾವಣ. ಇವರು ಬಳ್ಳಿಗಾವೆಯವರು. ದೇವಾಲಯದ ಹೊರಭಾಗ ಶಿಲ್ಪಾಕೃತಿಗಳಿಂದ ನಮ್ಮನ್ನು ಆಕರ್ಷಿಸಿದರೆ, ಒಳಭಾಗ ಕುಶಲ ಕೆತ್ತನೆಯಿಂದ ದಿಗ್ಭ್ರಮೆಗೊಳಿಸುತ್ತದೆ. ಇಲ್ಲಿರುವ ನರಸಿಂಹ ಸ್ತಂಭ ಅತ್ಯಾಕರ್ಷಕವಾದುದು. ಗರ್ಭಗೃಹದಲ್ಲಿ ಒಂದು ಆಳಿಗಿಂತಲೂ ಹೆಚ್ಚು ಎತ್ತರವಾಗಿರುವ ಚನ್ನಕೇಶವ ವಿಗ್ರಹವಿದೆ. ಹಿಂದಿನ ಎರಡು ಕೈಗಳಲ್ಲಿ ಶಂಕ ಚಕ್ರ ಮುಂದಿನ ಕೈಗಳಲ್ಲಿ ಗದಾಪದ್ಮಗಳನ್ನು ಧರಿಸಿ ಹಸನ್ಮುಖಿಯಾಗಿ ನಿಂತಿದೆ. ಇದರ ಹಿಂಭಾಗದಲ್ಲಿ ದಶಾವತಾರಗಳನ್ನು ಕೆತ್ತಿದ ಪ್ರಭಾವಳಿಯಿದೆ. ಈ ದೇವಾಲಯ ವಾಸ್ತುಶಿಲ್ಪ ಮತ್ತು ಶಿಲ್ಪಗಳ ಸಮನ್ವಯದಿಂದ ಕೂಡಿದ ಒಂದು ಒಳ್ಳೆಯ ಕಲಾಕೃತಿಯಾಗಿದೆ.

## ೪.೮ ಸಾಮಾಜಿಕ-ಧಾರ್ಮಿಕ ಸುಧಾರಣಾ ಚಳುವಳಿಗಳು

೮ ಮತ್ತು ೧೨ನೆಯ ಶತಮಾನಗಳ ನಡುವಣ ಮಧ್ಯಯುಗೀನ ಕರ್ನಾಟಕದ ಸಾಮಾಜಿಕ-ಧಾರ್ಮಿಕ ಆಂದೋಲನಗಳ ಇತಿಹಾಸವನ್ನು ಪಾರಲೌಕಿಕ ಚಿಂತನೆಯ ಸಂಕೀರ್ಣ ಅಭಿವ್ಯಕ್ತಿಯಾಗಿ, ಸಾಂಪ್ರದಾಯಿಕ ದರ್ಶನಗಳ ಪುನರ್‌ವ್ಯಾಖ್ಯೆಯಾಗಿ, ನೈತಿಕ ವಿಧಿಗಳು ಮತ್ತು ಆಚರಣೆಗಳ ಪುನರ್ ಮೌಲ್ಯಮಾಪನವಾಗಿ ನೋಡಬಹುದು. ಶಂಕರ, ರಾಮಾನುಜ, ಮಧ್ವ ಈ ಮೂವರು ಆಚಾರ್ಯರೂ ಪ್ರವರ್ತಿಸಿ ಮುನ್ನಡೆಸಿದ ದಾರ್ಶನಿಕ ಮತ್ತು ಧಾರ್ಮಿಕ ಆಂದೋಲನಗಳು ಮೂಲತಃ ಸ್ವೀಕೃತ ಸಾಂಪ್ರದಾಯಕತೆಯ ಚೌಕಟ್ಟಿನಲ್ಲೇ ಉದಯಿಸಿದವು. ಸಾಮಾಜಿಕ ಪರಿವರ್ತನೆಯಲ್ಲದಿದ್ದರೂ ಸಮಾಜ ವಿಮರ್ಶೆಯ ಚಾಲಕ ಶಕ್ತಿಯಾಗಬಲ್ಲ ಕ್ರಾಂತಿಕಾರಕ ವಿಚಾರಗಳನ್ನು ಜನರ ಮುಂದಿಟ್ಟವು. ೧೨ನೆಯ ಶತಮಾನದಲ್ಲಿ 'ವೀರಶೈವ ಆಂದೋಲನ'ವು ಬಸವೇಶ್ವರರ ನೇತೃತ್ವದಲ್ಲಿ ನಡೆದು ಇವರು ತಮ್ಮದೇ ಆದ ವೈಚಾರಿಕತೆ ಹಾಗೂ ಕ್ರಾಂತಿಪೂರ್ಣವಾದ ಸಮಾಜದ ನಿರ್ಮಾಣಕ್ಕೆ ತೊಡಗಿದರು. ಜಾತ್ಯಾತೀತ ಸಮಾಜವನ್ನು ರೂಪಿಸುವುದು ಇವರ ಬದುಕಿನ ಉದ್ದೇಶವಾಗಿತ್ತು. 'ಕುಲ' ಯಾವುದಾದರೇನು 'ಕಾಯಕ' ಮುಖ್ಯ. ಅದರ ಮೂಲಕ ಸತ್ಯದರ್ಶನದ ಪ್ರಯತ್ನ ಮಾಡಿದರು. ಹೀಗೆ ಈ ನಾಲ್ಕೂ ಜನ ಸುಧಾರಕರು ಕರ್ನಾಟಕವನ್ನು ತಮ್ಮ ಕರ್ಮಭೂಮಿಯನ್ನಾಗಿ ಮಾಡಿಕೊಂಡು ಸಮಾಜವನ್ನು ಶುದ್ಧೀಕರಿಸುವ ಪ್ರಯತ್ನ ಮಾಡಿದರು. ಇವರ ಸಾಧನೆಗಳನ್ನು ನಾವೀಗ ಪರಿಶೀಲಿಸೋಣ.

### ಶಂಕರಾಚಾರ್ಯರು (ಕ್ರಿ.ಶ. ೭೮೮-೮೨೦)

'ಅದ್ವೈತ ತತ್ವ'ದ ಸ್ಥಾಪಕರಾದ ಶಂಕರಾಚಾರ್ಯರು ಕ್ರಿ.ಶ. ೭೮೮ ರಲ್ಲಿ ಕೇರಳ ರಾಜ್ಯದ 'ಕಾಲಟಿ' ಎಂಬ ಗ್ರಾಮದಲ್ಲಿ ನಂಬೂದರಿ ಬ್ರಾಹ್ಮಣರಾದ ಶಿವಗುರು ಮತ್ತು ಆರ್ಯಾಂಭ ಎಂಬ ದಂಪತಿಗಳಿಗೆ ಜನಿಸಿದರು. ತಂದೆಯನ್ನು ಕಳೆದುಕೊಂಡ ಶಂಕರರು ತಾಯಿಯ ಆರೈಕೆಯಲ್ಲಿ ಬೆಳೆದರು. ಬಾಲ್ಯದಲ್ಲಿಯೇ ತಮ್ಮ ಅಪ್ರತಿಮ ಬುದ್ಧಿಮತ್ತೆಯನ್ನು ತೋರುತ್ತಿದ್ದ ಶಂಕರರು ತಮ್ಮ ಏಳನೇ ವಯಸ್ಸಿಗೆ ಎಲ್ಲ ಸೂತ್ರಗಳಲ್ಲಿ ಸಂಪೂರ್ಣ ನಿಪುಣತೆ ಪಡೆದಿದ್ದರು. ಏಕೈಕ ಪುತ್ರನಾಗಿದ್ದರಿಂದ ಅವನು ಸಾಂಸಾರಿಕ ಜೀವನದಲ್ಲಿ ತೊಡಗಬೇಕೆಂದು ಅವರ ತಾಯಿಯ ಬಯಕೆಯಾಗಿತ್ತು. ಆದರೆ ಶಂಕರರು ಪ್ರಾಪಂಚಿಕ ಜೀವನದ ಬಲೆಯಲ್ಲಿ ಸಿಗಲು ಇಷ್ಟಪಡಲಿಲ್ಲ. ಅವರ ತಾಯಿಯ ಪೋಷಣೆಗೆ ತಕ್ಕ ಏರ್ಪಾಟು ಮಾಡಿ ಅವರ ಅಪ್ಪಣೆ ಪಡೆದುಕೊಂಡು ಶಂಕರರು ಸನ್ಯಾಸ ದೀಕ್ಷೆ ಪಡೆದರು.

ಶಂಕರಾಚಾರ್ಯರು ಮನೆಯನ್ನು ಬಿಟ್ಟು ಹೆಚ್ಚಿನ ಜ್ಞಾನವನ್ನು ಪಡೆದುಕೊಳ್ಳಲು ಗುರುವನ್ನು ಅರಸುತ್ತಾ ಹೋದರು. ನರ್ಮದಾ ನದಿ ತೀರದಲ್ಲಿದ್ದ ಗೋವಿಂದ ಭಗವತ್ಪಾದರನ್ನು ಭೇಟಿಯಾಗಿ ಅವರ ಶಿಷ್ಯರಾದರು. ಮೂರು ವರ್ಷಗಳ ಕಾಲ ಅವರ ಬಳಿ ಅಧ್ಯಯನ ನಡೆಸಿದ ಅವರು ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಹಾಗೂ ಭಗವದ್ಗೀತೆಗಳ ಆಳವಾದ

ಅಧ್ಯಯನ ಮಾಡಿದರು. ಗುರುವಿನ ಆಜ್ಞೆಯಂತೆ ತನ್ನ ಅಧ್ಯಯನದ ಅಂತರಾರ್ಥಗಳನ್ನು ಪ್ರತಿಪಾದಿಸಲು ವಾರಣಾಸಿಗೆ ತೆರಳಿದರು. ಇಲ್ಲಿ ವಿಷ್ಣುಶರ್ಮರು ಅವರ ಮೊದಲ ಶಿಷ್ಯರಾದರು. ಅಲ್ಲಿಂದ ಬದರಿಕಾಶ್ರಮಕ್ಕೆ ತೆರಳಿದ ಶಂಕರರು ಅಲ್ಲಿ ವ್ಯಾಸಮಹರ್ಷಿ ಮತ್ತು ಗೌಡಪಾದರನ್ನು ಸಂಧಿಸಿ ಅವರ ಆಶೀರ್ವಾದ ಪಡೆದರು. ಅಲ್ಲಿಂದ ಅವರು ಪುನಃ ವಾರಣಾಸಿಗೆ ಹಿಂತಿರುಗಿ ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಹಾಗೂ ಭಗವದ್ಗೀತೆಯ ಮೇಲೆ ವ್ಯಾಖ್ಯಾನ ಬರೆದರು. ಈ ವ್ಯಾಖ್ಯಾನಗಳಿಗೆ 'ಪ್ರಸ್ಥಾನತ್ರಯಿ' ಎಂದು ಹೆಸರು. ವಾರಣಾಸಿಯಿಂದ ಶಂಕರರು 'ಭಾರತ ದರ್ಶನ' ಕಾರ್ಯವನ್ನು ಆರಂಭಿಸಿದರು. ಹಿಮಾಲಯ ದಿಂದ ರಾಮೇಶ್ವರದವರೆಗೆ ಬರಿಗಾಲಿನಲ್ಲಿ ಸಂಚರಿಸಿ ಅದ್ವೈತ ಸಿದ್ಧಾಂತ ಪ್ರತಿಪಾದನೆಯನ್ನು ಕೈಗೊಂಡರು. ಅನೇಕ ಕಡೆ ವಿದ್ವಾಂಸರುಗಳೊಂದಿಗೆ ಚರ್ಚೆ ನಡೆಸಿ ಹಿಂದೂಧರ್ಮದ ಹಿರಿಮೆಯನ್ನು ಎತ್ತಿ ಹಿಡಿದರು. ಈ ಜ್ಞಾನ ದಿಗ್ವಿಜಯ ಯಾತ್ರೆಯ ಕಾಲದಲ್ಲಿ ಕಾಶ್ಮೀರ, ನೇಪಾಳ, ಬದರಿಕಾಶ್ರಮ, ಕೇದಾರನಾಥ, ಗಂಗೋತ್ರಿ ಮುಂತಾದ ಸ್ಥಳಗಳಿಗೆ ಭೇಟಿ ನೀಡಿ ದರು. ಈ ಸಮಯದಲ್ಲಿ ಖ್ಯಾತ ಮೀಮಾಂಸದರ್ಶನದ ಧರ್ಮ ಪ್ರಚಾರಕರಾದ ಕುಮಾರಿಲ ಭಟ್ಟರನ್ನು ಪ್ರಯಾಗದಲ್ಲಿ ಭೇಟಿ ಮಾಡಿ ಭಾಷ್ಯಗಳನ್ನು ಅವರಿಗೆ ತೋರಿಸಿದರು. ಬೌದ್ಧ, ಜೈನ, ಕಾಪಾಲಿಕ ಈ ಧರ್ಮದ ವಿದ್ವಾಂಸರನ್ನು ತಮ್ಮ ವಾದಗಳಿಂದ ಪರಾಭವಗೊಳಿಸಿದರು. ತಮ್ಮ ಸಮಕಾಲೀನ ಪಂಡಿತ ದಂಪತಿಗಳಾದ ಮಂಡನ ಮಿಶ್ರ ಮತ್ತು ಭಾರತೀದೇವಿಯನ್ನು ವಾದದಲ್ಲಿ ಸೋಲಿಸಿದರು. ಈ ಸಮಯದಲ್ಲಿ ಅವರಿಗೆ ತಮ್ಮ ತಾಯಿ ಅಸ್ವಸ್ಥರಾದ ವಿಷಯ ತಿಳಿದು ಕಾಲಟಿಗೆ ತೆರಳಿ ಅವರಿಗೆ ಆಧ್ಯಾತ್ಮ ವಿಷಯಗಳನ್ನು ಬೋಧಿಸಿದರು. ಆಕೆಯ ಅಂತ್ಯಸಂಸ್ಕಾರವನ್ನು ನೆರವೇರಿಸಿ ಮತ್ತೊಮ್ಮೆ ಆಧ್ಯಾತ್ಮಿಕವಾಗಿ ಭಾರತವನ್ನು ಜಯಿಸಲು ಹೊರಟರು. ಇವರು ಪ್ರಚುರಪಡಿಸಿದ ಮತಕ್ಕೆ 'ಅದ್ವೈತ ಮತ' ಎಂದು ಕರೆಯುವರು. ಈ ಮತದಲ್ಲಿ ಆರು ದೇವತೆಗಳ ಆರಾಧನೆಗೆ ಅವಕಾಶ ಮಾಡಿಕೊಡಲಾಗಿದೆ. ಅಂತಹ ದೇವತೆ ಗಳೆಂದರೆ ಶಿವ, ವಿಷ್ಣು, ಗಣಪತಿ, ಕಾರ್ತೀಕೇಯ, ಸೂರ್ಯ ಮತ್ತು ಶಕ್ತಿ. ಆದುದರಿಂದ ಶಂಕರಾಚಾರ್ಯರಿಗೆ 'ಷಣ್ಮತ ಸ್ಥಾಪನಾಚಾರ್ಯ' ಎಂಬ ಹೆಸರು ಬಂದಿತು.

ಶಂಕರಾಚಾರ್ಯರು ಅದ್ವೈತ ತತ್ವದ ಪ್ರಸಾರಕ್ಕಾಗಿ ಭಾರತದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪ್ರಮುಖ ಮಠಗಳನ್ನು ಸ್ಥಾಪಿಸಿದರು. ಅವುಗಳೆಂದರೆ ಒರಿಸ್ಸಾದ ಜಗನಾಥ ಪುರಿಯಲ್ಲಿ 'ಗೋವರ್ಧನಪೀಠ'ವನ್ನು ಪಶ್ಚಿಮದಲ್ಲಿನ ಗುಜರಾತ್‌ನ ದ್ವಾರಕೆಯಲ್ಲಿ 'ಕಾಳಿಕಾಪೀಠ'ವನ್ನು ಉತ್ತರದ ಉತ್ತರಪ್ರದೇಶದ ಬದರಿಕಾಶ್ರಮದಲ್ಲಿ 'ಜ್ಯೋತಿರ್ಮಠ' ವನ್ನು ದಕ್ಷಿಣಭಾಗದ ಕರ್ನಾಟಕದ ಶೃಂಗೇರಿಯಲ್ಲಿ 'ಶಾರದಾಪೀಠ'. ಈ ನಾಲ್ಕು ಪೀಠಗಳು ವೈದಿಕ ಸಂಸ್ಕೃತಿಯ ಕೇಂದ್ರಗಳಾಗಿ ಪ್ರಸಿದ್ಧಿ ಹೊಂದಿದವು. ಕಂಚಿಯ 'ಕಾಮಕೋಟಿ ಪೀಠ'ವು ನಂತರ ಅಸ್ತಿತ್ವಕ್ಕೆ ಬಂದಿತು. ಇವುಗಳೇ ಅಲ್ಲದೆ ಇನ್ನೂ ಅನೇಕ ಉಪ ಮಠಗಳೂ ಕೂಡ ಇವೆ. ಈ ಎಲ್ಲ ಮಠಗಳು ಇಂದಿಗೂ ಧಾರ್ಮಿಕತೆಯನ್ನು ಸಂಸ್ಕೃತಿಯನ್ನು ಸಂವರ್ಧಿಸುವ ಕೇಂದ್ರಸ್ಥಾನ ಗಳಾಗಿವೆ. ಶಂಕರರು ತಮ್ಮ ದೈವನಿಯತ ಕಾರ್ಯಪೂರ್ಣಗೊಂಡ ಮೇಲೆ ತಮ್ಮ ೩೨ನೆಯ

ವಯಸ್ಸಿನಲ್ಲಿ ಐಹಿಕ ಪ್ರಪಂಚವನ್ನು ತ್ಯಜಿಸಿದರು. ಅವರ ಜೀವಿತದ ಕಾಲವನ್ನು 'ಶಂಕರ ಯುಗ' ಎಂದು ಕರೆಯಬಹುದು.

### ಕೃತಿಗಳು

ಇವರು ಮಹಾನ್ ಜ್ಞಾನಿಗಳಾಗಿದ್ದು *ಆನಂದಲಹರಿ, ಶಿವಾನಂದಲಹರಿ, ಸೌಂದರ್ಯ ಲಹರಿ, ಭಜಗೋವಿಂದಂ, ವಿವೇಕ ಚೂಡಾಮಣಿ, ಪ್ರಬುದ್ಧ ಸುಧಾರಕ, ವೇದಾಂತ ಸೂತ್ರ, ದಕ್ಷಿಣಮೂರ್ತಿ ಸ್ತೋತ್ರ* ಮುಂತಾದ ಕೃತಿಗಳನ್ನು ಬರೆದಿದ್ದಾರೆ. ಇವರು ಬರೆದ ಅನೇಕ ಸ್ತೋತ್ರಗಳಲ್ಲಿ *ಭಜಗೋವಿಂದಂ* ಬಹು ಜನಪ್ರಿಯವಾಗಿದೆ.

### ಬೋಧನೆಗಳು

ಶಂಕರಾಚಾರ್ಯರು ಪ್ರತಿಪಾದಿಸಿದ ತತ್ವ ಅದ್ವೈತ ಸಿದ್ಧಾಂತವೆಂದು ಹೆಸರಾಗಿದೆ. ಇದನ್ನು 'ಮಾಯಾವಾದ', 'ಜೀವೈಕ್ಯವಾದ' ಎಂದೂ ಕರೆಯಲಾಗಿದೆ. ಅದ್ವೈತ ವೇದಾಂತವು ವೇದ ಪ್ರಾಮಣ್ಯದ ಮೇಲೆ ನಿಂತಿದೆಯಾದರೂ ಶಂಕರರು ಅದಕ್ಕೆ ತರ್ಕ ಮತ್ತು ಪ್ರತಿಭೆಗಳ ಪುಷ್ಟಿ ನೀಡಿದರು. ಅವರ ಸಿದ್ಧಾಂತವನ್ನು ಈ ಮೂರು ಪ್ರತಿಜ್ಞಾ ವಾಕ್ಯಗಳಲ್ಲಿ ಸಂಕ್ಷೇಪಿಸಬಹುದು.

೧. ಬ್ರಹ್ಮನು ಸತ್ಯ

೨. ಜಗತ್ತು ತೋರಿಕೆಯ ಸತ್ಯ (ಜಗತ್ತು ಮಿಥ್ಯ)

೩. ಜೀವವು ಬ್ರಹ್ಮದಿಂದ ಬೇರೆಯಲ್ಲ

ಕಟ್ಟಾ ಅದ್ವೈತವಾದಿಯಾಗಿ ಶಂಕರರು ಬ್ರಹ್ಮವೊಂದೇ ಸತ್ಯ, ಅದು ಸರ್ವವ್ಯಾಪಿ. ಅದಕ್ಕೆ ಕೊನೆ ಮೊದಲು ಇಲ್ಲ. ಅದು ವರ್ಣನಾತೀತವಾದುದು ಹಾಗೂ ಅನಿರ್ವಚನೀಯ. ಈ ಜಗತ್ತು ಮತ್ತು ಸುತ್ತಲಿರುವ ವಸ್ತುಗಳೆಲ್ಲಾ ಸ್ವಪ್ನದಲ್ಲಿ ನಾವು ಕಾಣುವ ವಸ್ತುಗಳಂತೆ ಅನಿತ್ಯ, ಅಶ್ವಾಶ್ವತ. ಬ್ರಹ್ಮವೇ ಅಂತಿಮ ಸತ್ಯ ಹಾಗೂ ಅದೊಂದೇ ನಿಜವಾಗಿ ಅಸ್ತಿತ್ವವುಳ್ಳ ವಸ್ತು. ಅದು ನಿರ್ಗುಣ, ನಿರಾಕಾರ. ಈ ವಿಶ್ವಕ್ಕೆ ಬ್ರಹ್ಮನನ್ನು ಬಿಟ್ಟು ಪ್ರತ್ಯೇಕ ಅಸ್ತಿತ್ವವಿಲ್ಲ. ಇದನ್ನೇ ಶಂಕರರು "ನಾನೇ ಬ್ರಹ್ಮನು" (ಅಹಂ ಬ್ರಹ್ಮಾಸ್ಮಿ) ಎಂದು ಪ್ರತಿಪಾದಿಸಿದರು. ಜೀವನೂ ಬ್ರಹ್ಮನೂ ಪ್ರತ್ಯೇಕರಲ್ಲ. ಆದರೆ ಪ್ರತಿ ಜೀವಾತ್ಮನು ತಾನೇ ಬ್ರಹ್ಮವೆಂಬ ಸಂಗತಿ ಯನ್ನು ಸಾಧನೆಯಿಂದ ಮನವರಿಕೆ ಮಾಡಿಕೊಳ್ಳಬೇಕು. ಈ ಆತ್ಮಜ್ಞಾನ ಅಥವಾ ಬ್ರಹ್ಮಜ್ಞಾನ ವನ್ನು ಪಡೆಯಲು ಭಕ್ತಿ ಅಥವಾ ಜ್ಞಾನಮಾರ್ಗಗಳನ್ನು ಅನುಸರಿಸಬಹುದು. ಮೀಮಾಂಸಕರ ಕರ್ಮ ಮಾರ್ಗಕ್ಕೆ ವ್ಯತಿರಿಕ್ತವಾಗಿ ಶಂಕರರು ಭಕ್ತಿ ಮತ್ತು ಜ್ಞಾನಮಾರ್ಗವನ್ನು ಪ್ರತಿಪಾದಿಸಿ ದ್ದರು. ನೈತಿಕ ಜೀವನ ಪ್ರತಿಯೊಬ್ಬನ ಸಾಮಾಜಿಕ ಕರ್ತವ್ಯಗಳ ಪೂರೈಕೆಯನ್ನು ಅವರು ಒತ್ತಿ ಹೇಳಿದರು. ಮಾನವ ಸಮಾಜಕ್ಕೆ ನಿಷ್ಕಾಮವಾದ ಕರ್ಮವನ್ನು ಮಾಡಬೇಕೆಂದು ಅವರ ಪ್ರತಿಪಾದನೆಯಾಗಿತ್ತು. ಕರ್ಮ ಅಥವಾ ಉಪಾಸನೆಯಿಂದಲೇ ಮೋಕ್ಷ ದೊರೆಯದು "ಸೋಹಂ" ಎಂಬ ಆತ್ಮಜ್ಞಾನದಿಂದ ಮಾತ್ರ ಜನಸಾಮಾನ್ಯರಿಗೆ ಬ್ರಹ್ಮನ ನಿರ್ಗುಣ ಸ್ವರೂಪ ವನ್ನು ಅರಿಯುವುದು ಸಾಧ್ಯವಲ್ಲದ ಮಾತು. ಅವರಿಗಾಗಿ ಶಂಕರರು ಸಗುಣ (ಸಾಕಾರ) ಸ್ವರೂಪವನ್ನು ವಿವರಿಸಿದ್ದಾರೆ. ಪ್ರತಿಯೊಬ್ಬರೂ ತಮ್ಮ ಇಷ್ಟದೇವತೆಯ ಆರಾಧನೆ

ಮಾಡುತ್ತಾ ಕೊನೆಯ ಹಂತದಲ್ಲಿ ತಾದಾತ್ಮ್ಯವನ್ನು ಹೊಂದಬಹುದು. ಇದುವೇ ಮೋಕ್ಷ ಎಂದು ಅವರು ಪ್ರತಿಪಾದಿಸಿದರು.

## ರಾಮಾನುಜಾಚಾರ್ಯ (ಕ್ರಿ.ಶ. ೧೦೧೭-೧೧೩೭)

'ವಿಶಿಷ್ಟಾದ್ವೈತ ಸಿದ್ಧಾಂತ'ದ ಪ್ರತಿಪಾದಕರಾದ ಶ್ರೀ ರಾಮಾನುಜಾಚಾರ್ಯರು ಕ್ರಿ.ಶ. ೧೦೧೭ ರಲ್ಲಿ ತಮಿಳುನಾಡಿನ 'ಶ್ರೀಪೆರಂಬದೂರಿ'ನಲ್ಲಿ ಜನಿಸಿದರು. ಅವರ ತಂದೆ ಕೇಶವ ದೀಕ್ಷಿತ, ತಾಯಿ ಕಾಂತಿಮತಿ. ತಮ್ಮ ಎಂಟನೆಯ ವಯಸ್ಸಿನಲ್ಲೇ ರಾಮಾನುಜರಿಗೆ ಉಪನಯನ ಮಾಡಲಾಯಿತು. ನಂತರ ಕಾಂಚಿಗೆ ವಿದ್ಯಾಭ್ಯಾಸಕ್ಕೆ ಆಗಮಿಸಿದ ರಾಮನುಜರು ಯಾದವ ಪ್ರಕಾಶರ ಶಿಷ್ಯರಾದರು. ಅವರು ನಿಷ್ಟ ಅದ್ವೈತಿಗಳಾಗಿದ್ದು ರಾಮಾನುಜರು ಅವರ ಬಳಿ ವೇದ ಉಪನಿಷತ್ತುಗಳನ್ನು ಅಧ್ಯಯನ ಮಾಡಿದರು. ಆದರೆ ಕ್ರಮೇಣ ಗುರುಶಿಷ್ಯರ ನಡುವೆ ವೈಚಾರಿಕ ಭಿನ್ನಾಭಿಪ್ರಾಯಗಳು ಆರಂಭವಾಗಿ ಅವರೀರ್ವರ ಸಂಬಂಧ ಮುರಿಯಿತು. ಅಧ್ಯಯನವನ್ನು ಮೊಟಕುಗೊಳಿಸಿದ ರಾಮಾನುಜರು ಕಂಚಿಯ ವರದರಾಜ ಸ್ವಾಮಿಯ ಅಭಿಷೇಕಕ್ಕೆ ಬೇಕಾದ ಜಲವನ್ನು ಪೂರೈಸುವ ಕಾಯಕವನ್ನು ಕೈಗೊಂಡರು. ಅವನ ಸಜ್ಜನಿಕೆಯನ್ನು ತಿಳಿದುಕೊಂಡ ಶ್ರೀರಂಗದ ಮಠಾಧಿಪತಿಗಳಾಗಿದ್ದ ಯಮುನಾಚಾರ್ಯರು ಶ್ರೀರಾಮಾನುಜರನ್ನು ಶ್ರೀರಂಗಕ್ಕೆ ಬರುವಂತೆ ಕರೆಕಳುಹಿಸಿದರು. ಆದರೆ ಅವರು ಶ್ರೀರಂಗ ತಲುಪುವ ವೇಳೆಗೆ ಯಮುನಾಚಾರ್ಯರು ಅಸುನೀಗಿದ್ದರು. ಶ್ರೀರಾಮಾನುಜರಿಗೆ ಯಮುನಾಚಾರ್ಯರ ದೇಹ ದರ್ಶನ ಮಾತ್ರ ಲಭಿಸಿತು. ಅಲ್ಲಿಂದ ಹಿಂತಿರುಗಿದ ರಾಮಾನುಜರು ಕಂಚಿಯಲ್ಲಿ ತಮ್ಮ ಎಂದಿನ ಕಾರ್ಯದಲ್ಲಿ ಮಗ್ನರಾದರು.

ಯಮುನಾಚಾರ್ಯರ ಮರಣದ ಬಳಿಕ ಶ್ರೀರಂಗದ ಮಠದಲ್ಲಿ ಶಾಸ್ತ್ರಗಳ ಸೂಕ್ಷ್ಮ ಅರ್ಥಗಳನ್ನು ವಿವರಿಸಿ ಹೇಳುವಂತಹ ಯೋಗ್ಯ ಗುರುಗಳು ಇಲ್ಲದಂತಾಯಿತು. ಆದುದರಿಂದ ರಾಮಾನುಜರಿಗೆ ದೀಕ್ಷೆ ನೀಡಿ ಅವರನ್ನು ಶ್ರೀರಂಗಕ್ಕೆ ಕರೆದು ತರುವ ಹೊಣೆಗಾರಿಕೆಯನ್ನು ಮಠದ ಶಿಷ್ಯರಾದ ಮಹಾಪೂರ್ಣರಿಗೆ ವಹಿಸಲಾಯಿತು. ಆ ವೇಳೆಗೆ ಕಂಚಿಯಲ್ಲಿದ್ದ ಶ್ರೀರಾಮಾನುಜರಿಗೂ ಗುರುಗಳ ಮಾರ್ಗದರ್ಶನ ಅವಶ್ಯ ಎಂಬ ಭಾವನೆಯುಂಟಾಗಿ ಮಹಾಪೂರ್ಣರನ್ನು ತಮ್ಮ ಗುರುವಾಗಿ ಸ್ವೀಕರಿಸಬೇಕೆಂಬ ಇಚ್ಛೆಯಿಂದ ಅವರೂ ಶ್ರೀರಂಗಕ್ಕೆ ಹೊರಟರು. ಹೀಗೆ ಇಬ್ಬರೂ ಮಾರ್ಗಮಧ್ಯದಲ್ಲಿ 'ಮಧುರಾಂತಕಮ್' ಎಂಬಲ್ಲಿ ಭೇಟಿಯಾದರು. ನಂತರ ಕಂಚಿಗೆ ಬಂದು ಇಲ್ಲಿ ಪರಸ್ಪರರ ಸಹವಾಸದಲ್ಲಿ ಆರು ತಿಂಗಳು ಕಳೆದರು.

ರಾಮಾನುಜರ ಸಾಂಸಾರಿಕ ಬದುಕು ಸುಖಮಯವಾಗಿರಲಿಲ್ಲ. ಅವರ ಆಶೋತ್ತರಗಳಿಗೆ ಅನುಗುಣವಾಗಿ ವರ್ತಿಸುವ ಮನಸ್ಸು ಅವರ ಪತ್ನಿಗೆ ಇರಲಿಲ್ಲ. ಪತಿ-ಪತ್ನಿಯರ ನಡುವೆ ನಿತ್ಯವೂ ಜಗಳವಾಗುತ್ತಿತ್ತು. ಇವರ ಗುರುಗಳಾದ ಮಹಾಪೂರ್ಣರು ಸಪತ್ನೀಕರಾಗಿ ರಾಮಾನುಜರಲ್ಲಿಯೇ ಇರಲಾರಂಭಿಸಿದರು. ಪತಿಯ ಗುರು ಹಾಗೂ ಗುರುಪತ್ನಿ ತಮ್ಮವರಲ್ಲವೆಂಬ ನೆಪದಿಂದ ಅವರನ್ನು ಅಗೌರವದಿಂದ ಕಾಣಲಾರಂಭಿಸಿದರು. ಒಮ್ಮೆ ರಾಮಾನುಜರ ಪತ್ನಿ ಶೂದ್ರರೆನಿಸಿದ ಮಹಾಪೂರ್ಣರ ಪತ್ನಿಯ ಜೊತೆ ಅಗೌರವವಾಗಿ ನಡೆದು

ಕೊಂಡಿದ್ದರಿಂದ ತೀರಾ ದುಃಖಿತರಾದ ರಾಮಾನುಜರು ಪತ್ನಿಯನ್ನು ತವರು ಮನೆಗೆ ಕಳುಹಿಸಿ ತಾವು ಸನ್ಯಾಸ ತೆಗೆದುಕೊಂಡರು. ನಂತರ ಅವರು ಶ್ರೀರಂಗಕ್ಕೆ ತೆರಳಿ ಅಲ್ಲಿನ ಮಠಾಧಿಪತ್ಯ ವನ್ನು ವಹಿಸಿಕೊಂಡರು. ಶ್ರೀರಂಗದ ದೇವಾಲಯದಲ್ಲಿ ಹಲವಾರು ಸುಧಾರಣೆಗಳನ್ನು ಜಾರಿಗೆ ತಂದರು. ನಂತರ ರಾಮಾನುಜರು ದೀರ್ಘಕಾಲದ ತೀರ್ಥಯಾತ್ರೆಗೆ ಹೊರಟರು. ತಿರುಪತಿ, ಕುಂಭಕೋಣ, ಅಳಗರ್ ಕೋಯಿಲ್, ಅಳ್ವಾರ್ ತಿರುನಗರಿ, ಮಥುರಾ, ಬೃಂದಾವನ, ದ್ವಾರಕ, ಅಯೋಧ್ಯ ಮುಂತಾದ ಕಡೆಗಳಿಗೆ ಹೋಗಿ ಕಾಶ್ಮೀರವನ್ನು ತಲುಪಿದರು. ಹೋದಲೆಲ್ಲಾ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಚಾರ ಮಾಡಿದರು. ರಾಮಾನುಜರ ಕೀರ್ತಿ ಇದರಿಂದ ಎಲ್ಲೆಡೆಯೂ ವ್ಯಾಪಿಸತೊಡಗಿತು. ಇವರ ಮತ ಪ್ರಚಾರದ ಪ್ರಕ್ರಿಯೆಗಳು ಚೋಳರ ದೊರೆಯೂ, ಶೈವ ಧರ್ಮಾಭಿಮಾನಿಯೂ ಆದ ಕುಲೋತ್ತುಂಗನಿಗೆ ಅಸಮಾಧಾನವನ್ನುಂಟು ಮಾಡಿದವು. ಅವನು ಶೈವರಲ್ಲದವರನ್ನು ಪೀಡಿಸುವ ನೀತಿಯನ್ನು ಕೈಗೊಂಡಿದ್ದನು. ಇದನ್ನು ಅರಿತ ಶ್ರೀರಾಮನುಜರ ಶಿಷ್ಯರು ವ್ಯಾಕುಲಚಿತ್ತರಾಗಿ ತಮ್ಮ ಆತ್ಮರಕ್ಷಣೆಗಾಗಿ ಚೋಳ ದೇಶವನ್ನು ಬಿಟ್ಟು ಹೋಗಬೇಕೆಂದು ಪ್ರಾರ್ಥಿಸಿದರು. ಈ ಮಧ್ಯೆ ರಾಮಾನುಜರನ್ನು ಕರೆದೊಯ್ಯಲು ಚೋಳ ಅರಸನ ದೂತರು ಬಂದಾಗ ಶ್ರೀರಾಮಾನುಜರಂತೆ ವೇಷವನ್ನು ಧರಿಸಿದ್ದ ಅವರ ಆಪ್ತಶಿಷ್ಯ ಕೂರೇಶರು ಕುಲೋತ್ತುಂಗನ ಆಸ್ಥಾನಕ್ಕೆ ಹೋದರು. ಅಲ್ಲಿ ಶಿವ ಪಾರಮ್ಯನನ್ನು ಒಪ್ಪಿಕೊಳ್ಳಲು ಕೂರೇಶನು ನಿರಾಕರಿಸಿದಾಗ ಚೋಳರ ಅರಸನು ಅವರ ಕಣ್ಣುಗಳನ್ನು ಕೀಳಿಸಿದನಂತೆ. ಈ ಘಟನೆ ಶ್ರೀರಾಮಾನುಜರು ಕರ್ನಾಟಕಕ್ಕೆ ಬಂದು ನೆಲೆಸಲು ಕಾರಣವಾಯಿತು.

ಸಾಂಪ್ರದಾಯಿಕ ಕಥೆಗಳ ಪ್ರಕಾರ ಶ್ರೀರಾಮಾನುಜರು ಕರ್ನಾಟಕದಲ್ಲಿ ಎರಡು ದಶಕಗಳ ಕಾಲ ನೆಲಸಿದ್ದರೆಂಬ ಪ್ರತೀತಿ ಇದೆ. ಶ್ರವಣಬೆಳಗೊಳದ ಜೈನ ಬರಹಗಳ ಪ್ರಕಾರ ರಾಮಾನುಜರು ಹೊಯ್ಸಳ ವಿಷ್ಣುವರ್ಧನನನ್ನು ಶ್ರೀವೈಷ್ಣವಕ್ಕೆ ಮತಾಂತರಿಸಿದರು. ತೊಂಡನೂರು (ತೊಣ್ಣೂರು), ಮೇಲುಕೋಟೆಗಳಲ್ಲಿ ರಾಮಾನುಜರು ದೀರ್ಘಕಾಲ ನೆಲೆಸಿದರು. ಮೇಲುಕೋಟೆಯಲ್ಲಿ ಚಲುವ ನಾರಾಯಣಸ್ವಾಮಿಯನ್ನು ಪ್ರತಿಷ್ಠಾಪಿಸಿದರು. ಅವರ ಪ್ರಭಾವದಿಂದಲೇ ಹೊಯ್ಸಳರ ಕಾಲದಲ್ಲಿ ಅನೇಕ ವೈಷ್ಣವ ದೇವಾಲಯಗಳು ಕಟ್ಟಲ್ಪಟ್ಟವು. 'ಶ್ರೀವೈಷ್ಣವ ಧರ್ಮ' ಮೈಸೂರು ಪ್ರದೇಶದ ಉದ್ದಗಲಗಳಲ್ಲಿ ವಿಸ್ತರಿಸಿ ಅಲ್ಲಿನ ಜನಪ್ರಿಯ ಧರ್ಮಗಳಲ್ಲೊಂದಾಯಿತು. ಇಲ್ಲಿ ದೀನ-ದಲಿತರ ಪಂಚಮರ ಉದ್ಧಾರ ಕ್ಕಾಗಿ ಆಚಾರ್ಯರು ಶ್ರಮಿಸಿದರು. ಅವರನ್ನು ಶಿಷ್ಯರನ್ನಾಗಿ ತಮ್ಮ ಮತಕ್ಕೆ ಸೇರಿಸಿಕೊಂಡರು. ಅನೇಕ ಅಂತ್ಯಜರಿಗೆ ದೀಕ್ಷೆ ನೀಡಿ ಕೆಲವು ತೇದಿಗಳಲ್ಲಿ ಅವರಿಗೆ ದೇವಾಲಯ ಪ್ರವೇಶಕ್ಕೆ ಅವಕಾಶ ನೀಡಿದರು. ಈ ವೇಳೆಗೆ ಕುಲೋತ್ತುಂಗನು ಮೃತನಾಗಿ ಪರಿಸ್ಥಿತಿ ಸುಧಾರಿಸಿತ್ತು. ಈ ಸುದ್ದಿ ಕೇಳಿದ ರಾಮಾನುಜರು ಶ್ರೀರಂಗಕ್ಕೆ ಹಿಂತಿರುಗಿದರು. ಅವರ ಅತ್ಯಂತ ಶ್ರೇಷ್ಠ ಕೃತಿಯಾದ ಶ್ರೀಭಾಷ್ಯವನ್ನು ಬರೆದು ಮುಗಿಸಿದ ನಂತರ ಕ್ರಿ.ಶ.೧೧೩೭ ರಲ್ಲಿ ೧೨೦ನೆ ವಯಸ್ಸಿನಲ್ಲಿ ದೇಹತ್ಯಾಗ ಮಾಡಿದರು. ಇವರು ವಿಶಿಷ್ಟಾದ್ವೈತ ಸಿದ್ಧಾಂತದ ಬಗ್ಗೆ ಒಂಭತ್ತು

ಗ್ರಂಥಗಳನ್ನು ಬರೆದಿದ್ದಾರೆ. *ವೇದಾಂತ ಸಂಗ್ರಹ, ವೇದಾಂತ ದೀಪ, ವೇದಾಂತ ಸಾರ, ಭಗವದ್‌ಗೀತ ಭಾಷ್ಯ* ಈ ಗ್ರಂಥಗಳು ಆಚಾರ್ಯರ ಬೋಧನೆ ಮತ್ತು ಸಾಧನೆಗಳನ್ನು ಸಮಗ್ರವಾಗಿ ತಿಳಿಸುತ್ತವೆ.

### ವಿಶಿಷ್ಟಾದ್ವೈತ ಸಿದ್ಧಾಂತ

ವಿಶಿಷ್ಟಾದ್ವೈತ ಸಿದ್ಧಾಂತವು ದ್ವೈತವನ್ನು ಖಂಡಿಸುತ್ತದೆ. ಜ್ಞಾನವು ಅಖಂಡ ಸ್ವಯಂಪ್ರಕಾಶ ಎನ್ನುವುದನ್ನು ರಾಮಾನುಜರು ಅಲ್ಲಗಳೆದು ಅರಿವಿಗೆ ಬಂದ ವಿಷಯವಿರಬೇಕು. ಅರಿವು ಹಾಗೂ ಅದರ ವಿಷಯಗಳಿಗೆ ಭೇದವಿರಬೇಕು. ಆದ್ದರಿಂದ ಅರಿವು-ಜ್ಞಾನ ಅಖಂಡವಲ್ಲ. ತನ್ನೊಳಗಿನ ಅರಿವು ಹಾಗೂ ವರ್ತಮಾನದ ಅರಿವು ಸ್ವಯಂಪ್ರಕಾಶ. ಆದರೆ ಇತರರ ಅನ್ಯಕಾಲದ ಅರಿವು ಸ್ವಯಂಪ್ರಕಾಶವಲ್ಲ. ಬ್ರಹ್ಮ, ಜೀವ ಮತ್ತು ಭೌತ ಪ್ರಕೃತಿ ಈ ಮೂರು ಸನಾತನ ಮತ್ತು ಭಿನ್ನ-ಭಿನ್ನವಾದವು. ಈ ಮೂರು ಒಂದನ್ನೊಂದು ಬಿಡಲಾಗದಂತಹ ನಿಕಟ ಸಂಬಂಧವನ್ನು ಹೊಂದಿವೆ. ಇವು ಒಂದೇ ತತ್ವದ ಅಂಗಗಳು, ಬ್ರಹ್ಮವು, ಅಖಂಡ ವಸ್ತು. ಬ್ರಹ್ಮನಲ್ಲಿ ಚಿತ್ ಮತ್ತು ಅಚಿತ್ ಎಂಬ ಎರಡೂ ತತ್ವಗಳಿರುತ್ತವೆ. ಇವುಗಳಲ್ಲಿ ಚಿತ್ ಎಂಬುದು ಜೀವವನ್ನು ಅಚಿತ್ ಎಂಬುದು ಜಡತತ್ವ ಅಥವಾ ಪ್ರಕೃತಿಯನ್ನು ಸೂಚಿಸುತ್ತದೆ. ಶಂಕರರ ಅದ್ವೈತವಾದದಲ್ಲಿ ಬ್ರಹ್ಮ ಒಂದೇ ತತ್ವ. ಇದರಲ್ಲಿ ಜೀವ ಮತ್ತು ಪ್ರಕೃತಿಗಳು ತತ್ವವೇ. ಆದರೆ ಅವೆರಡೂ ಬ್ರಹ್ಮನ ಅಧೀನ. ಆದುದರಿಂದ ಇದು ಪ್ರತ್ಯೇಕವಾದ ವಿಶಿಷ್ಟಾದ್ವೈತ ಪಂಥವೆನಿಸಿತು.

## ಮಧ್ವಾಚಾರ್ಯ (ಕ್ರಿ.ಶ. ೧೨೩೮-೧೩೧೭)

ದಕ್ಷಿಣ ಭಾರತದ ವೈದಿಕ ಆಚಾರ್ಯರಲ್ಲಿ ಮೂರನೆಯವರು ಮತ್ತು ದ್ವೈತ ವೇದಾಂತ ದರ್ಶನವನ್ನು ಪ್ರತಿಪಾದಿಸಿದವರು ಮಧ್ವಾಚಾರ್ಯರು. ಇವರು ಉಡುಪಿ ಬಳಿಯ 'ಪಾಜಕ' ಅಥವಾ 'ಬೆಳ್ಳೆ' ಎಂಬ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ನಡುವಂತಿಲ್ಲಾಯ (ಮಧ್ಯಗೇಹ) ಎಂಬ ತುಳು ಬ್ರಾಹ್ಮಣ, ತಾಯಿ ವೇದಾವತಿ. ಕ್ರಿ.ಶ. ೧೨೩೮ ರಲ್ಲಿ ಜನಿಸಿದ ಈ ಬಾಲಕನಿಗೆ ವಾಸುದೇವ ಎಂಬ ಹೆಸರಿಟ್ಟು, ಮನೆಯಲ್ಲೇ ಅಕ್ಷರಾಭ್ಯಾಸ ಮಾಡಿಸಲಾಯಿತು. ನಂತರ ಉಡುಪಿಗೆ ಹೋದ ವಾಸುದೇವನು ಅಚ್ಯುತ ಪ್ರೇಕ್ಷಾಚಾರ್ಯರ ಶಿಷ್ಯನಾದನು. ಅಲ್ಲಿ ವೇದ ಉಪನಿಷತ್ತುಗಳ ಅಭ್ಯಾಸವಾಯಿತು. ವಾಸುದೇವನಿಗೆ ಅಚ್ಯುತ ಪ್ರೇಕ್ಷಕರು ಸನ್ಯಾಸದೀಕ್ಷೆ ನೀಡಿ ಆನಂದತೀರ್ಥ ಎಂದು ಹೆಸರಿಟ್ಟರು. 'ಮಧ್ವಾಚಾರ್ಯ' ಎಂಬುದು ಇವರದೇ ಇನ್ನೊಂದು ರೂಪ. ಅದ್ವೈತಿಗಳಾದ ತಮ್ಮ ಗುರುಗಳ ಜೊತೆಯೇ ಮಾಧ್ವರು ಅನೇಕ ಬಾರಿ ಭಿನ್ನಾಭಿಪ್ರಾಯ ತಾಳಿದರು. ಕೊನೆಗೆ ಗುರುಗಳನ್ನೇ ಮಾಧ್ವರು ವಾದದಲ್ಲಿ ಸೋಲಿಸಿದರು.

ಮಧ್ವಾಚಾರ್ಯರು ಅದ್ವೈತ ತತ್ವಗಳನ್ನು ಖಂಡಿಸಿ ವೇದೋಪನಿಷತ್ತಿನಲ್ಲಿ ತಿಳಿಸಿರುವ 'ದ್ವೈತ ಮತ'ವನ್ನು ಪ್ರತಿಪಾದಿಸಿದರು. ತಮ್ಮ ವಿಚಾರಧಾರೆಯನ್ನು ಪ್ರಚಾರ ಮಾಡುವುದಕ್ಕೆ ದಕ್ಷಿಣ ಭಾರತಾದ್ಯಂತ ಸಂಚರಿಸಿದರು. ವಿಷ್ಣುಮಂಗಲ, ತಿರುವನಂತಪುರ, ರಾಮೇಶ್ವರ,

ಶ್ರೀರಂಗಂ, ಕಾಂಚಿ ಮುಂತಾದ ಸ್ಥಳಗಳಲ್ಲಿ ತಮ್ಮ ವಿದ್ವತ್ತನ್ನು ಪ್ರದರ್ಶಿಸಿದರು. ಈ ಸ್ಥಳಗಳಲ್ಲಿ ಅದ್ವೈತ ಮತ ಬಲವಾಗಿ ಬೇರೂರಿತ್ತು. ಆದ್ದರಿಂದ ಈ ಸಂಪ್ರದಾಯದವರ ವಿರೋಧವನ್ನು ಎದುರಿಸಬೇಕಾಯಿತು. ಇಲ್ಲೆಲ್ಲಾ ಅದ್ವೈತ ಪಂಡಿತರನ್ನು ವಾದದಲ್ಲಿ ಸೋಲಿಸಿದ ನಂತರ ಅವರು *ಗೀತಭಾಷ್ಯ*ವನ್ನು ರಚಿಸಿದರು. ಉತ್ತರ ಭಾರತದ ಪ್ರವಾಸ ಕೈಗೊಂಡ ಇವರು ಗೋವೆ ಕಾಶಿಯ ಮೂಲಕವಾಗಿ ಹರಿದ್ವಾರವನ್ನು ತಲುಪಿದರು. ಅಲ್ಲಿಂದ ಬದರಿಕಾಶ್ರಮಕ್ಕೆ ಹೋದರು. ಅಲ್ಲಿದ್ದಾಗ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದರು. ಉತ್ತರ ಭಾರತದಲ್ಲಿ ಹೆಸರಾಂತ ವಿದ್ವಾಂಸರಾಗಿದ್ದ ಗೋದಾವರಿ ತೀರದ ಪುಣತಾಂಬೆಯ ಪದ್ಮನಾಭತೀರ್ಥ ಮತ್ತು ಕಳಿಂಗ ರಾಜಪ್ರತಿನಿಧಿಯಾಗಿದ್ದ ನರಹರಿ ತೀರ್ಥರನ್ನು ವಾದದಲ್ಲಿ ಸೋಲಿಸಿದರು. ದ್ವಾರಕೆಯಿಂದ ಮರಳುವಾಗ ಅವರು ಕೃಷ್ಣ, ಬಲರಾಮರ ವಿಗ್ರಹಗಳನ್ನು ತಂದರು. ಕೃಷ್ಣನನ್ನು ಉಡುಪಿಯಲ್ಲೂ, ಬಲರಾಮನನ್ನು ಮಲ್ಪೆಯಲ್ಲೂ (ವಡಭಾಂಡೇಶ್ವರ) ಪ್ರತಿಷ್ಠಾಪಿಸಿದರು. ಉಡುಪಿ ಮಧ್ವಮತದ ಕೇಂದ್ರವಾಯಿತು. ಅಲ್ಲಿ 'ಅಷ್ಟಮಠ'ಗಳನ್ನು ಸ್ಥಾಪಿಸಿ ತಮ್ಮ ಶಿಷ್ಯರನ್ನು ಆ ಮಠಗಳ ಮುಖ್ಯಸ್ಥರನ್ನಾಗಿ ನೇಮಿಸಿದರು. ಆ ಮಠಗಳೆಂದರೆ ಪೇಜಾವರಮಠ, ಪಲಿಮಾರು ಮಠ, ಅದಮಾರು ಮಠ, ಕೃಷ್ಣಾಪುರ ಮಠ, ಪುತ್ತಿಗೆ ಮಠ, ಶಿರೂರು ಮಠ, ಸೋದೆಮಠ, ಕಾಣಿಯೂರು ಮಠ. ಈ ಮಠದ ಮಠಾಧೀಶರುಗಳು ಕೃಷ್ಣನ ಪೂಜೆಯನ್ನು ಎರಡು ತಿಂಗಳಿಗೊಂದರಂತೆ ಪರ್ಯಾಯದಿಂದ ಮಾಡಬೇಕೆಂದು ನಿಯಮ ಮಾಡಿದರು. ಮುಂದೆ ವಾದಿರಾಜ ತೀರ್ಥರು ಈ 'ಪರ್ಯಾಯ'ವನ್ನು ಎರಡು ವರ್ಷಗಳಿಗೆ ಬದಲಾಯಿಸಿದರು. ತಮ್ಮ ೮೦ನೆಯ ವಯಸ್ಸಿನವರೆಗೂ ಉಡುಪಿಯಲ್ಲಿದ್ದ ಅವರು ತಮ್ಮ ಅಂತ್ಯಕಾಲವನ್ನು ಕಳೆಯಲು ಬದರಿಕಾಶ್ರಮಕ್ಕೆ ಹೋಗಿ ಕ್ರಿ.ಶ.೧೩೧೭ ರಲ್ಲಿ ಬದರಿಯಲ್ಲಿ ಅಂತರ್ದಾನರಾದರು. ಇನ್ನೊಂದು ಮೂಲದ ಪ್ರಕಾರ ಉಡುಪಿಯಲ್ಲಿ ೮೦ ದಿನಗಳು ಕೃಷ್ಣನನ್ನು ಪೂಜಿಸಿ ತಮ್ಮ ೮೦ನೇ ವಯಸ್ಸಿನಲ್ಲಿ ಅನಂತೇಶ್ವರ ದೇವಾಲಯದಲ್ಲಿ ದೇಹತ್ಯಾಗ ಮಾಡಿದರೆಂದು ಹೇಳಲಾಗುತ್ತಿದೆ.

ಮಧ್ವಾಚಾರ್ಯರು ರಚಿಸಿದ ೩೭ ಕೃತಿಗಳಿಗೆ *ಸರ್ವಮೂಲ*ವೆಂದು ಹೆಸರು. ಇವರ ಕೃತಿಗಳಲ್ಲಿ *ಬ್ರಹ್ಮಸೂತ್ರ ಭಾಷ್ಯ, ಗೀತಭಾಷ್ಯ, ಮಹಾಭಾರತ ತಾತ್ಪರ್ಯ ನಿರ್ಣಯ, ವಿಷ್ಣುತತ್ವ ನಿರ್ಣಯ, ಮಾಯಾವಾದ ಖಂಡನ* ಮುಂತಾದವು.

ವಿಷ್ಣು ಸರ್ವೋತ್ತಮ ಎಂದು ಪ್ರತಿಪಾದಿಸಿದ ಅವರು ದ್ವೈತ ವೇದಾಂತವನ್ನು ಪ್ರಚಾರ ಮಾಡಿದರು. ಶಂಕರ ಮಾಯಾವಾದವನ್ನು ಖಂಡಿಸಿದ ಅವರು ಈ ವಿಶ್ವವು ಸತ್ಯವೆಂದು ವಾದಿಸಿದರು. ಪರಮಾತ್ಮ ಮತ್ತು ಜೀವರಲ್ಲಿ ಭೇದಗಳಿವೆ ಎಂದು ಹೇಳಿದರು. ಪರಮಾತ್ಮನು ಸ್ವತಂತ್ರನು ಮತ್ತು ವಿಶ್ವವು ಪರತಂತ್ರವಾದುದು ಹಾಗೂ ಅದು ಬ್ರಹ್ಮ ನಿರ್ಮಿತವಾದುದು. ಬ್ರಹ್ಮನೇ ಜನ್ಮ, ಜೀವನ, ಸ್ಥಾನಮಾನ, ಜ್ಞಾನ, ಬಂಧನ, ಮುಕ್ತಿಗಳನ್ನು ನೀಡತಕ್ಕವನು ಎಂದರು. ಮಧ್ವಾಚಾರ್ಯರು ಪಂಚಬೇಧಗಳ ಕಲ್ಪನೆಯನ್ನು ಮುಂದಿಟ್ಟರು. ಅವುಗಳೆಂದರೆ

೧. ಪರಮಾತ್ಮ ಹಾಗೂ ಜೀವಾತ್ಮ
೨. ಪರಮಾತ್ಮ ಮತ್ತು ಜಡವಸ್ತುಗಳು

೩. ಜೀವಾತ್ಮ ಮತ್ತು ಜಯವಸ್ತುಗಳು
೪. ಒಂದು ಜೀವ ಮತ್ತೊಂದು ಜೀವ
೫. ಒಂದು ಜಡ ಮತ್ತು ಇನ್ನೊಂದು ಜಡ ನಡುವೆ ಬೇಧಗಳಿವೆ

-ಎಂಬುದೇ ಅವರ ಪಂಚಭೇದಗಳ ಕಲ್ಪನೆ. ಈ ಭೇದಗಳ ಕಲ್ಪನೆಯೇ ಅವರ ಪಂಥಕ್ಕೆ 'ದ್ವೈತ' ಎಂಬ ಹೆಸರನ್ನು ನೀಡಿದೆ. ಇದು ಶಂಕರರ ಅದ್ವೈತದ ಕಲ್ಪನೆಗೂ ವ್ಯತಿರಿಕ್ತವಾದುದು.

## ಬಸವೇಶ್ವರ (ಕ್ರಿ.ಶ. ೧೧೩೨-೧೧೬೮)

ಶಂಕರ, ರಾಮಾನುಜ, ಮಧ್ವ ಈ ಮೂವರು ಆಚಾರ್ಯರು ತಮ್ಮ ಬುದ್ಧಿಮತ್ತೆಯಿಂದಲೂ ದಿಟ್ಟವಾದ ಪಾರಲೌಕಿಕ ಚಿಂತನೆಗಳಿಂದಲೂ ಶಕ್ತಿಶಾಲಿಯಾದ ಧಾರ್ಮಿಕ ಆಂದೋಲನಗಳನ್ನು ಮಾಡಿದರು. ಅವರ ತಾತ್ವಿಕ ನೆಲೆಗಳು ಗಮನಾರ್ಹವಾಗಿ ಸಾಮಾಜಿಕ ವಿಮರ್ಶೆಯನ್ನು, ಔದಾರ್ಯವನ್ನು ಸೂಚಿಸುತ್ತಿದ್ದಾಗಲೂ ಕೂಡ ಬೆಳೆಯುತ್ತಿದ್ದ ಬ್ರಾಹ್ಮಣ ಸಾಂಪ್ರದಾಯಿಕತೆಯನ್ನು ಅವರು ನಿರಾಕರಿಸಲಿಲ್ಲ. ಬ್ರಾಹ್ಮಣ ಏಕಸ್ವಾಮ್ಯವು ಕಲ್ಪಿಸಿದ ಅನೇಕಾನೇಕ ಜಾತೀಯ ಕಟ್ಟು-ಪಾಡುಗಳ ಅನರ್ಹತೆಗಳನ್ನು ತಿರಸ್ಕರಿಸಿ ಈ ಧರ್ಮವನ್ನು ಎಲ್ಲ ಜನರಿಗೂ ಸಮಾನವಾಗಿ ತೆರೆದಿಡುವ ಕೆಲಸವನ್ನು ಬಹುದೊಡ್ಡ ಪ್ರಮಾಣದಲ್ಲಿ ಬಸವೇಶ್ವರರು ಮಾಡಿದರು. ಬಸವೇಶ್ವರರು ನಂದಿಯ ಅವತಾರವೆಂದೂ ಭೂಲೋಕದಲ್ಲಿ ವೀರಶೈವ ಧರ್ಮಪ್ರಸಾರ ಮಾಡಲು ಶಿವನು ಅವನನ್ನು ಇಲ್ಲಿಗೆ ಕಳುಹಿಸಿದನೆಂದೂ ವರ್ಣಿಸಲಾಗಿದೆ. ಪರಂಪರೆಯು ವೀರಶೈವ ಧರ್ಮದ ಪ್ರಾರಂಭವನ್ನು ಪಂಚಾಚಾರ್ಯರಾದ ರೇಣುಕ, ಧಾರುಕ, ಏಕೋರಾಮು, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯರಿಗೆ ಆರೋಪಿಸುತ್ತದೆ. ಇವರು ಸ್ಥಾವರ ಲಿಂಗಗಳಿಂದ ಉದ್ಭವಿಸಿ ರಂಭಾಪುರಿ, ಉಜ್ಜಯಿನಿ, ಕೇದಾರ, ಕಾಶಿ, ಶ್ರೀಶೈಲದಲ್ಲಿ ಮಠಗಳನ್ನು ಸ್ಥಾಪಿಸಿರುವರೆಂದು ಹೇಳಲಾಗಿದೆ.

೧೨ನೆಯ ಶತಮಾನದ ಎರಡನೆಯ ಪಾದದಲ್ಲಿ ಈ 'ವೀರಶೈವ ಚಳುವಳಿ'ಯನ್ನು ಬಸವಣ್ಣನು ಪ್ರಾರಂಭಿಸಿದನು. ಅವನ ತಂದೆ-ತಾಯಿಯರು ಉತ್ತಮ ಕುಲವೆಂದು ಪರಿಗಣಿತವಾಗಿದ್ದ ಬ್ರಾಹ್ಮಣ ವರ್ಗಕ್ಕೆ ಸೇರಿದ್ದರು. ಕರ್ನಾಟಕದ ಉತ್ತರ ಭಾಗದ ವಿಜಾಪುರ ಜಿಲ್ಲೆಯ ಇಂಗಳೇಶ್ವರ 'ಬಾಗೇವಾಡಿ' ಎಂಬ ಅಗ್ರಹಾರದಲ್ಲಿ ಬಸವೇಶ್ವರರು ಜನಿಸಿದರು. ಬಾಗೇವಾಡಿ ಪುರವರಾಧೀಶ್ವರ ಎಂಬ ಕೀರ್ತಿಗೆ ಪಾತ್ರರಾದ ಮಾದರಸ ಮತ್ತು ಮಾದಲಂಬಿಕೆ ಈತನ ತಂದೆ-ತಾಯಿಯರು. ಅವರು ಶಿವನ ಆರಾಧಕರಾಗಿದ್ದರು. ಬಸವೇಶ್ವರರು ಧಾರ್ಮಿಕ ಆಚರಣೆ ನಡಾವಳಿಗಳ ವಾತಾವರಣದಲ್ಲಿ ಬೆಳೆಯಲಾರಂಭಿಸಿದರು. ಸಾಂಪ್ರದಾಯಿಕ ನಂಬಿಕೆಗಳ ವಿರುದ್ಧ ತನ್ನದೇ ಆದ ಭಕ್ತಿಮಾರ್ಗವೊಂದನ್ನು ಬಸವಣ್ಣನವರು ಬಾಲ್ಯದಲ್ಲಿಯೇ ಕಂಡುಕೊಂಡಿದ್ದರು. ಬ್ರಾಹ್ಮಣರ ಸಂಕೇತವಾಗಿದ್ದ ಪವಿತ್ರ ಜನಿವಾರ ಧರಿಸುವುದನ್ನು ಆತನು ಧಿಕ್ಕರಿಸಿದ್ದನು. ಬ್ರಾಹ್ಮಣ ಬಾಲಕರಿಗೆ ಕಡ್ಡಾಯ ಧಾರ್ಮಿಕ ವಿಧಿಯಾಗಿದ್ದ ಉಪನಯನ ಮಾಡಿಕೊಳ್ಳಲು ಬಸವಣ್ಣನವರು ಸಿದ್ದರಿರಲಿಲ್ಲ ಎಂದು ತಿಳಿದುಬರುತ್ತದೆ. ಇದರಿಂದ ಅವರು ತಂದೆ, ತಾಯಿ, ಬಂಧು-ಬಳಗದ ಕೋಪತಾಪಗಳಿಗೆ ತುತ್ತಾಗಬೇಕಾಯಿತು. ಬಸವಣ್ಣ ತನ್ನ

ಮನೆ ತ್ಯಜಿಸುವ ಮೊದಲು ಪವಿತ್ರವಾದ ಜನಿವಾರವನ್ನು ತೆಗೆದುಹಾಕಿದ್ದನು. ಪುರೋಹಿತಶಾಹಿ ಕಟ್ಟು-ಕಟ್ಟಳೆ ಸಂಪ್ರದಾಯಗಳಿಂದ ನಿರ್ದೇಶಿತವಾಗುವ ಆಚರಣೆಗಳಿಗೆ ಬದಲಾಗಿ ದೇವರ ಜೊತೆಯಲ್ಲಿ ವ್ಯಕ್ತಿಗತ ಮಟ್ಟದಲ್ಲಿ ಸಂಬಂಧ ಬೆಳೆಸಲು ಅನುವು ಮಾಡಿಕೊಡುವ ಮಾರ್ಗಕ್ಕೆ ಬಸವಣ್ಣನು ಹೆಚ್ಚಿನ ಮಹತ್ವ ನೀಡಿದನು. ಹೀಗೆ ಆತನು ತನ್ನ ಊರು ಹಾಗೂ ಆ ವಾತಾವರಣವನ್ನು ಬಿಟ್ಟು ಆಧ್ಯಾತ್ಮಿಕ ಸಿದ್ಧಿ ಸಾಧಿಸುವ ಮಾರ್ಗವನ್ನು ಹುಡುಕುತ್ತಾ ಹೊರಟನು. ಕೃಷ್ಣ ಮತ್ತು ಮಲಪ್ರಭಾ ನದಿಗಳು ಸೇರುವ ಪವಿತ್ರ ತಾಣವಾದ ಕೂಡಲ ಸಂಗಮಕ್ಕೆ ಬಂದನು. ಈ ಪರಿಸರ ಅವರಿಗೆ ನೆಮ್ಮದಿ ನೀಡಿತು. ಅಲ್ಲಿನ ಪ್ರಸಿದ್ಧ ದೇವಾಲಯವು ವಿದ್ವಾಂಸರ ಆಧ್ಯಾತ್ಮವಾದಿಗಳ ಶಿಕ್ಷಣ ಕೇಂದ್ರವಾಗಿತ್ತು. ಅಲ್ಲಿ ಈಶಾನ್ಯ ಗುರುಗಳ ದಿವ್ಯಸಾನಿಧ್ಯ ಅವರಿಗೆ ತೃಪ್ತಿಯನ್ನು ತಂದಿತು. ಅವನು ಕೂಡಲಸಂಗಮದಲ್ಲಿ ಗುರುಸನ್ನಿಧಿಯಲ್ಲಿ ಕಾಲ ಕಳೆದನಾದರೂ ಈಶಾನ್ಯ ಗುರುವಿನ ಉಪದೇಶದಿಂದ ಪ್ರಬುದ್ಧ ಮಾನವಾಗಿ ಸನಾತನ ಭಾರತೀಯ ಧರ್ಮಕ್ಕೆ ಹಿಡಿದಿದ್ದ ಅಂದಃಶ್ರದ್ಧೆಯೆಂಬ ಕೊತ್ತದಿಂದ ಅದನ್ನು ಪಾರುಮಾಡಲು ಶಕ್ತನಾದನು. ಹಲವಾರು ವರ್ಷಗಳ ಕಾಲ ಅಲ್ಲಿ ಆತನು ಸಾಧನೆಗೈಯ್ದನು. ಸಂಸಾರ ತ್ಯಾಗಮಾಡಿ ಸಿದ್ಧಿ-ಸಾಧನೆ ಗಳಿಸುವ ಬಗ್ಗೆ ಆತನಿಗೆ ನಂಬಿಕೆ ಇರಲಿಲ್ಲ. ಪ್ರಾಪಂಚಿಕ ಸಂಸಾರದಲ್ಲೇ ಇದ್ದುಕೊಂಡೇ ಸತ್ಯವನ್ನು ಕಂಡುಕೊಳ್ಳುವ ಮಾರ್ಗ ಬಸವಣ್ಣನದಾಗಿತ್ತು. ಹೀಗೆ ಪ್ರಾಪಂಚಿಕದೊಡನೆ ಪಾರಮಾರ್ಥಿಕವನ್ನು ಸಾಧಿಸುವ ಕಲೆಯನ್ನು ಬಸವಣ್ಣ ಸಿದ್ಧಿಸಿಕೊಂಡನು.

ಬಸವಣ್ಣನವರು ಕಲ್ಯಾಣದ ಚಾಲುಕ್ಯ ಸಾಮ್ರಾಜ್ಯದ ಸಾಮಂತ ಬಿಜ್ಜಳ ಆಳುತ್ತಿದ್ದ ಮಂಗಳವಾಡಕ್ಕೆ ಹೋದರು. ಅಲ್ಲಿ ಅವರ ಬಂಧುವಾದ ಸಿದ್ದದಂಡಾದೀಶನು ಬಿಜ್ಜಳನ ಆಸ್ಥಾನದಲ್ಲಿ ಅಧಿಕಾರಿಯಾಗಿದ್ದನು. ಅವರ ಸಹಾಯದಿಂದ ಬಸವಣ್ಣ ಬಿಜ್ಜಳನ ಆಸ್ಥಾನದಲ್ಲಿ ಕರಣಿಕ ಹುದ್ದೆಯನ್ನು ಪಡೆದುಕೊಂಡನು. ಬಸವಣ್ಣನಿಗೆ ಸಿದ್ದದಂಡಾದೀಶನ ಮಗಳಾದ ಗಂಗಾಂಬಿಕೆಯೊಂದಿಗೆ ವಿವಾಹವಾಯಿತು. ಆಸ್ಥಾನದಲ್ಲಿ ಬಸವಣ್ಣ ಬಹುಬೇಗ ಪ್ರವರ್ಧಮಾನಕ್ಕೆ ಬಂದನು. ಯುವ ಕರಣಿಕನಾಗಿದ್ದ ಬಸವಣ್ಣನವರ ಬಗ್ಗೆ ಬಿಜ್ಜಳನಿಗೆ ತುಂಬಾ ವಿಶ್ವಾಸ. ಕೆಲವೇ ವರ್ಷಗಳಲ್ಲಿ ಬಸವಣ್ಣನು ಬಿಜ್ಜಳನ ಪ್ರಧಾನ ಭಂಡಾರಿಯಾಗಿ ನೇಮಕಗೊಂಡನು. ಬಲದೇವನ ಮಗಳಾದ ನೀಲಾಂಬಿಕೆಯ ಜೊತೆ ಬಸವಣ್ಣನಿಗೆ ಎರಡನೇ ವಿವಾಹವಾಯಿತು. ಪ್ರಧಾನ ಭಂಡಾರಿಯಾಗಿ ಖ್ಯಾತಿಯನ್ನು ಗಳಿಸುವುದರ ಜೊತೆಗೆ ಬಸವಣ್ಣನು ಆಧ್ಯಾತ್ಮಿಕ ಸಾಧನೆಯಲ್ಲೂ ಪರಿಪೂರ್ಣತೆ ಸಾಧಿಸಿಕೊಂಡನು. ಈ ಕಾರಣಕ್ಕೆ ಅಭಿಮಾನದಿಂದ ಜನರು ಆತನನ್ನು 'ಭಕ್ತಿ ಭಂಡಾರಿ' ಎಂದು ಸಂಬೋಧಿಸತೊಡಗಿದರು.

ಕಾಲಕ್ರಮೇಣ ಬಸವಣ್ಣನ ಆಧ್ಯಾತ್ಮಿಕ ಸಾಧನೆಯು ಹೆಚ್ಚು ಜನರನ್ನು ಆಕರ್ಷಿಸ ತೊಡಗಿತು. ಆತನ ಸುತ್ತಮುತ್ತ ಭಕ್ತರ ಗುಂಪು ನೆರೆಯಿತು. ಸಾಂಪ್ರದಾಯಿಕ ಧಾರ್ಮಿಕ ಆಚರಣೆಗಳಿಗೆ ಭಿನ್ನವಾದ ಆತನ ಸರಳ ಭಕ್ತಿಮಾರ್ಗ ಜನರಲ್ಲಿ ಆಸಕ್ತಿ ಕೆರಳಿಸಿತು. ಎಲ್ಲರೂ ಸಮಾನ ನೆಲೆಯಲ್ಲಿ ಪಾಲುಗೊಳ್ಳುವಂತಹ ಧರ್ಮವನ್ನು ಬಸವಣ್ಣನು ಬೋಧಿಸಿದನು.

ಬ್ರಾಹ್ಮಣ ವರ್ಗದಿಂದ ಬಂದಿದ್ದ ಬಸವಣ್ಣನು ಅಸ್ಪೃಶ್ಯ ವರ್ಗದಿಂದ ಬಂದ ಭಕ್ತರ ಬಗ್ಗೆ ಹೆಚ್ಚಿನ ಮಮತೆ ತೋರುತ್ತಿದ್ದನು. ಸಾಂಪ್ರದಾಯಿಕ ಬೇಧ-ಭಾವಗಳನ್ನು ತೊರೆದು ಅವನು ಅವರುಗಳೊಡನೆ ಹೆಚ್ಚು ಹೆಚ್ಚು ಬೆರೆಯುತ್ತಿದ್ದನು. ಅವರಿಗೆಲ್ಲಾ ಅವನ ಧರ್ಮದಲ್ಲಿ ಸ್ವಾಗತವಿತ್ತು.

ಕಲ್ಯಾಣದ ಚಾಲುಕ್ಯರ ದೊರೆ ಮೂರನೆ ತೈಲಪನು ದುರ್ಬಲ ಅರಸನಾಗಿದ್ದುದರಿಂದ ರಾಜ್ಯವು ಶಿಥಿಲವಾಗುತ್ತಿತ್ತು. ಸಾಮ್ರಾಜ್ಯದ ಒಂದೊಂದೇ ಭಾಗ ಕೈ ಬಿಟ್ಟುಹೋಗುತ್ತಿತ್ತು. ಈ ಅವಕಾಶವನ್ನುಪಯೋಗಿಸಿಕೊಂಡ ಸಾಮಂತ ಬಿಜ್ಜಳನು ಮೂರನೆ ತೈಲಪನನ್ನು ಸೋಲಿಸಿ ಅವನ ರಾಜ್ಯಾಪಹರಣ ಮಾಡಿದನು. ನಂತರ ಕಲ್ಯಾಣಕ್ಕೆ ರಾಜಧಾನಿ ವರ್ಗಾವಣೆಯಾದಾಗ ಬಸವಣ್ಣನವರೂ ಕೂಡ ಬಿಜ್ಜಳನೊಂದಿಗೆ ಕಲ್ಯಾಣಕ್ಕೆ ಆಗಮಿಸಿದರು. ಈ ರಾಜಕೀಯ ಸ್ಥಿತ್ಯಂತರದಲ್ಲಿ ಬಸವಣ್ಣನವರ ಜೀವನದಲ್ಲೂ ಅನೇಕ ಬದಲಾವಣೆಗಳುಂಟಾದವು. ಮುಂದೆ ಕಲ್ಯಾಣನಗರ ಬಸವಣ್ಣನವರ ಕಾರ್ಯಕ್ಷೇತ್ರವಾಯಿತು.

ಕಲ್ಯಾಣದಲ್ಲಿ ಬಸವಣ್ಣ ಭಕ್ತಿ ಪ್ರವೃತ್ತಿ ಮತ್ತು ಆಡಳಿತದ ಬದುಕು ಜೊತೆಯಾಗಿ ಮುನ್ನಡೆಯಿತು. ಅವರ 'ಮಹಾಮನೆ'ಯ ಅಂತರಂಗದ ಸಂಕಷ್ಟಗಳಿಂದ ಬಳಲುವ ವ್ಯಕ್ತಿಗಳಿಗೆ ಸಮಾಧಾನ ಮತ್ತು ದಾರಿ ನೀಡುವ ಕೇಂದ್ರವಾಯಿತು. ಅತ್ಯಲ್ಪ ಕಾಲದಲ್ಲಿಯೇ ಬಸವಣ್ಣನವರ ಮಹಾಮನೆ ಅಪಾರ ಸಂಖ್ಯೆಯ ಅನುಭಾವಿಗಳ ಕೇಂದ್ರವಾಯಿತು. ನಾಡಿನ ನಾನಾ ಮೂಲೆಗಳಿಂದ ಹಾಗೂ ಹೊರನಾಡಿನಿಂದಲೂ ಭಕ್ತರು ಕಲ್ಯಾಣಕ್ಕೆ ಬಂದು ನೆಲೆಸ ತೊಡಗಿದರು. ಸಮಾಜದ ಎಲ್ಲ ವರ್ಗದ ಜನರು ಅಲ್ಲಿ ನೆರೆದರು. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ತತ್ವಗಳ ಅನುಷ್ಠಾನ ಮತ್ತು ಚಿಂತನೆಯ ಗೋಷ್ಠಿ ಸ್ಥಾಪನೆಯಾಯಿತು. ಶಿವನಾಭವಿಗಳು ಸಭೆಯಾಗಿ ಸೇರುವ ಸ್ಥಳಕ್ಕೆ 'ಅನುಭವ ಮಂಟಪ' ಎಂದು ಕರೆಯಲಾಯಿತು. ಇದು ಸಮಷ್ಟಿ ಜನರ ಅಂತರಂಗದ ಶಾಂತಿ ಮತ್ತು ಸಾಧನಗಳ ಕ್ರಿಯೆಯ ಕಮ್ಮಟವಾಯಿತು. ಜಾತಿಭೇದ, ಲಿಂಗ ತಾರತಮ್ಯವಿಲ್ಲದೆ ಎಲ್ಲ ವರ್ಗದ ಜನರೂ ಈ ಚಿಂತನ ಗೋಷ್ಠಿಯಲ್ಲಿ ಪಾಲ್ಗೊಂಡು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಿದ್ದರು. ಇದರ ಅಧ್ಯಕ್ಷ ಪದವಿಯನ್ನು ಜ್ಞಾನ ಮತ್ತು ವೈರಾಗ್ಯಗಳಿಗೆ ಪ್ರಸಿದ್ಧಿಯಾಗಿದ್ದ ಅಲ್ಲಮಪ್ರಭು ವಹಿಸಿದ್ದರು. ಈ ಅನುಭವ ಮಂಟಪದಲ್ಲಿ ಗೋಷ್ಠಿ ಮುಂದುವರಿದಂತೆ ಅನುಭಾವದ ಬೆಳಕಿನಲ್ಲಿ ವೀರಶೈವಧರ್ಮದ ತತ್ವ ಪರಿಣಾಮಕಾರಿಯಾಗಿ ರೂಪುಗೊಳ್ಳಲಾರಂಭಿಸಿತು. ವಚನ ಸಾಹಿತ್ಯ ಸಮೃದ್ಧವಾಗಿ ಬೆಳೆಯಿತು. ಅನುಭವ ಮಂಟಪ ಜ್ಞಾನಜಿಜ್ಞಾಸೆಯ ಕೇಂದ್ರವಾಯಿತು. ಇದರ ಕೀರ್ತಿ ನಾಡಿನ ಮೂಲೆಮೂಲೆಗೂ ತಲುಪಿತು. ಕರ್ಮಯೋಗಿ ಸೊನ್ನಲಿಗೆಯ ಸಿದ್ದರಾಮ, ಉಡುತಡಿಯ ಮಹಾದೇವಿಯಕ್ಕ, ಕಾಶ್ಮೀರದಿಂದ ಬಂದ ಮೋಳಿಗೆಯ ಮಾರಯ್ಯ, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಣ್ಣ, ಹಡಪದ ಅಪ್ಪಣ್ಣ, ತುರುಗಾಹಿ ರಾಮಣ್ಣ ಇನ್ನೂ ಮುಂತಾದ ಉಚ್ಚ

ವರ್ಗದ ಮತ್ತು ಕೆಳವರ್ಗದ ಶರಣರೆಲ್ಲಾ ಕಲ್ಯಾಣಕ್ಕೆ ಆಗಮಿಸಿ ಅನುಭವ ಮಂಟಪದ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ಬಸವಣ್ಣನವರ 'ಸಾಮಾಜಿಕ ಕ್ರಾಂತಿ' ಕಲ್ಯಾಣದಲ್ಲಿ ಪೂರ್ಣಪ್ರಮಾಣದಲ್ಲಿ ನಡೆಯತೊಡಗಿತು. ಬಸವಣ್ಣನ ಭಕ್ತಿ, ಚನ್ನಬಸವಣ್ಣನವರ ಜ್ಞಾನ. ಅಲ್ಲಮಪ್ರಭುವಿನ ವೈರಾಗ್ಯ ಜೊತೆಗೂಡಿ ಕಲ್ಯಾಣದ ಕ್ರಾಂತಿ ಅರ್ಥಪೂರ್ಣವಾಯಿತು. ಅನುಭವ ಮಂಟಪದಲ್ಲಿ ಕಿಡಿಯಾಗಿ ಕಾಣಿಸಿಕೊಂಡ ಕ್ರಾಂತಿ ಜನಸಮೂಹದ ಎಲ್ಲರನ್ನು ವೈಚಾರಿಕ ಪಥದಲ್ಲಿ ಮುನ್ನಡೆಸಿದ್ದನ್ನು ಸಂಪ್ರದಾಯವಾದಿಗಳು ಸಹಿಸದಾದರು. ನಂತರ ಬಿಜ್ಜಳನಿಗೂ ಬಸವಣ್ಣನಿಗೂ ಭಿನ್ನಾಭಿಪ್ರಾಯಗಳು ಆರಂಭವಾದವು.

ಭಕ್ತಿಭಂಡಾರಿ ಬಸವಣ್ಣನಿಂದ ಕಲ್ಯಾಣ ವೀರಶೈವ ಆಂದೋಲನದ ಮುಖ್ಯ ಕೇಂದ್ರವಾದಂತೆ ಬಸವಣ್ಣನ ಧಾರ್ಮಿಕ ವೈಚಾರಿಕತೆಗಳು ಬಿಜ್ಜಳನಲ್ಲಿ ಅಸಮಾಧಾನ ಮೂಡಿಸಿದವು. ಅಸ್ಪೃಶ್ಯತೆಯನ್ನು ಬಸವಣ್ಣನು ನಿರಾಕರಿಸಿದ್ದು, ಕಂಬಳಿಯ ನಾಗಿದೇವನ ಮನೆಯಲ್ಲಿ ಊಟ ಮಾಡಿದುದು ಅರಸನಿಂದ ತೀವ್ರ ಖಂಡನೆಗೆ ಎಡೆಗೊಟ್ಟಿತು. ಸ್ಥಾಪಿತವಾಗಿರುವ ವ್ಯವಸ್ಥೆಯನ್ನು ಮುರಿಯುವುದರಿಂದ ಜನರಲ್ಲಿ ತೀವ್ರ ಅಶಾಂತಿಯುಂಟಾಗಿ ಅದನ್ನು ಹತೋಟಿಯಲ್ಲಿಡುವುದು ಬಹಳ ಕಷ್ಟವಾಗುತ್ತದೆಂದು ಬಿಜ್ಜಳನು ಹೆದರಿದನು. ಆದರೆ ಮುಂದೆ ನಡೆದ ಒಂದು ಘಟನೆ ಕಲ್ಯಾಣದಲ್ಲಿ ಕ್ರಾಂತಿಯನ್ನೇ ಮಾಡಿತು. ಬಸವಣ್ಣನವರ ಆಶೀರ್ವಾದದಿಂದ ಮಧುವಯ್ಯ ಎಂಬ ಬ್ರಾಹ್ಮಣನ ಮಗಳಿಗೂ ಅಸ್ಪೃಶ್ಯನಾಗಿದ್ದ ಹರಳಯ್ಯನ ಮಗನಿಗೂ ಅಂತರ್ಜಾತಿಯ ವಿವಾಹ ನಡೆಯಿತು. ಇದು ಈ ಧರ್ಮಶಾಸ್ತ್ರಕಾರರು ನಿಷೇಧಿಸಿದ್ದ ಪ್ರತಿಲೋಮ ವಿವಾಹ. ಕೋಪಗೊಂಡ ಬಿಜ್ಜಳನು ಹರಳಯ್ಯ, ಮಧುವಯ್ಯರನ್ನು ಹಿಡಿದು ತರಿಸಿ ಅವರ ಕಣ್ಣುಗಳನ್ನು ಕೀಳಿಸಿದನು. ಈ ಅತ್ಯಾಚಾರವು ಇಡೀ ಜಂಗಮ ಸಮುದಾಯವನ್ನು ಸಿಡಿದೇಳುವಂತೆ ಮಾಡಿತು. ಇದರಿಂದ ತೀವ್ರವಾಗಿ ಮನನೊಂದ ಬಸವಣ್ಣನವರು ಕಲ್ಯಾಣವನ್ನು ತ್ಯಜಿಸಿ 'ಕೂಡಲಸಂಗಮ'ಕ್ಕೆ ತೆರಳಿದರು. ಭಕ್ತಿಯ ತಾಣವಾಗಿದ್ದ ಕಲ್ಯಾಣ ಗೊಂದಲದ ಗೂಡಾಯಿತು. ಹೆಚ್ಚು ತೀವ್ರಗಾಮಿಗಳಾಗಿದ್ದವರು ಜಗದೇವನ ಮುಖಂಡತ್ವದಲ್ಲಿ ಬಿಜ್ಜಳನನ್ನು ಕಲ್ಯಾಣ ನಗರದಲ್ಲಿ ಇರಿದು ಕೊಲೆ ಮಾಡಿ ಸೇಡು ತೀರಿಸಿಕೊಂಡರು. ಬಿಜ್ಜಳನ ಕೊಲೆ ಮತ್ತು ಕಲ್ಯಾಣದ ಗಂಭೀರ ಪರಿಸ್ಥಿತಿಯ ಸುದ್ದಿ ಕೂಡಲಸಂಗಮದಲ್ಲಿದ್ದ ಬಸವಣ್ಣನವರಿಗೆ ತಲುಪಿತು. ಇದರಿಂದ ತೀವ್ರವಾಗಿ ಮನನೊಂದ ಅವರು ಕೂಡಲ ಸಂಗಮದಲ್ಲಿ ಐಕ್ಯವಾದರು.

ಬಸವಣ್ಣ ಒಬ್ಬ ಮುಕ್ತ ಚಿಂತಕನಾಗಿದ್ದನು. ಪ್ರಚಲಿತವಾಗಿದ್ದ ಶೈವಧರ್ಮವನ್ನು ಸಾಮಾಜಿಕ ವಿಮರ್ಶೆ ಮತ್ತು ಪರಿವರ್ತನೆಯನ್ನು ಸಾಧಿಸುವ ಹರಿತವಾದ ಆಯುಧವನ್ನಾಗಿ ಪರಿವರ್ತಿಸಿದನು. ಬಸವಣ್ಣನೊಬ್ಬ ಶ್ರೇಷ್ಠ ಪ್ರಗತಿಗಾಮಿ. ಶಾಸ್ತ್ರಗಳನ್ನು ಮತ್ತು ಆಚರಣೆಗಳನ್ನು ಕುರುಡಾಗಿ ನಂಬುವುದು ಸರಿಯಲ್ಲ. ಅದು ವ್ಯಕ್ತಿಯನ್ನು ಭಗವಂತನಿಂದಲೂ, ನೆರೆಯುವರಿಂದಲೂ ದೂರ ಸರಿಯುವಂತೆ ಮಾಡುತ್ತದೆ. 'ದಯೆಯೇ ಧರ್ಮದ ಮೂಲ'

ತಳಹದಿ. ಸಮಾಜದ ಜಾತಿವಿಭಜನೆಗಳು ಭಗವಂತನಿಗೆ ಮಾಡುವ ಅಪಮಾನ. ಭಗವಂತನಿಗಾಗಿ ಉತ್ಕಟ ಹಂಬಲವು ಅವನನ್ನು ಸನ್ಯಾಸಿಯನ್ನಾಗಿ ಮಾಡಲಿಲ್ಲ. ತನ್ನೊಬ್ಬನ ಮುಕ್ತಿಗಾಗಿ ಅವಿರತ ಶ್ರಮಿಸುವ ವ್ಯಕ್ತಿಯನ್ನಾಗಿಸಲಿಲ್ಲ. ಪ್ರತಿಯೊಬ್ಬನೂ ಅವನ ಸ್ಥಾನಮಾನ, ಬಡತನ, ಸಿರಿತನ, ಜಾತಿ-ಲಿಂಗ ಏನೇ ಇರಲಿ ಭಗವತ್ ಕೃಪೆಗೆ ಮತ್ತು ಮೋಕ್ಷಕ್ಕೆ ಅರ್ಹನು ಎಂದು ಸಾರಿದನು. ಅದು ಯಾರಿಗೂ ನಿಲುಕುದುದಲ್ಲ. ಭಗವಂತನು ನಮ್ಮೊಳಗೆ ನೆಲೆಸಿದ್ದಾನೆ. ನಮ್ಮ ದೇಹವೇ ಅವನ ದೇವಾಲಯ ಎಂದು ಉಪದೇಶಿಸಿದನು. ಇಷ್ಟಲಿಂಗದ ಆರಾಧನೆಗೆ ಹೆಚ್ಚು ಮಹತ್ವ ನೀಡಿದನು. ಇದರ ಪರಿಣಾಮವಾಗಿ ಪುರೋಹಿತರ ಹಾಗೂ ಕಠೋರ ನಿಯಮಗಳ ನಿಯಂತ್ರಣದಲ್ಲಿದ್ದ ಪೂಜಾವಿಧಿ ವಿಧಾನಗಳು ಇಲ್ಲಿ ಅನಗತ್ಯವಾದವು. ವ್ಯಕ್ತಿಗತ ಆಧ್ಯಾತ್ಮಿಕ ಸಾಧನೆಯ ಮೂಲಕ ಅಂತಿಮವಾಗಿ ಅನುಭಾವದ ಸ್ಥಿತಿಗೇರುವುದೇ ವೀರಶೈವ ಉಪಾಸನಾ ವಿಧಾನದ ಗುರಿಯಾಗಿತ್ತು. ಸಾಂಪ್ರದಾಯಿಕ ಉಪಾಸನಾ ಪದ್ಧತಿ ಜೊತೆಗೆ ಪವಿತ್ರ ಶಾಸ್ತ್ರಗ್ರಂಥಗಳನ್ನು ಚಳುವಳಿ ತಿರಸ್ಕರಿಸಿತು. ಸಂಸ್ಕೃತ ಭಾಷೆಯಲ್ಲಿದ್ದ ಶಾಸ್ತ್ರಸಾಹಿತ್ಯಕ್ಕೆ ಬದಲಾಗಿ ಹೊಸ ಸಾಹಿತ್ಯ ಸೃಷ್ಟಿಯಾಯಿತು. ವೀರಶೈವ ಶರಣರು ಕನ್ನಡ ಭಾಷೆಯಲ್ಲಿ ಸರಳವಾದ ಚಿಕ್ಕಚಿಕ್ಕ ಪದ್ಯಗಳನ್ನು ರಚಿಸಿದರು. ಈ ಪದ್ಯಗಳನ್ನು 'ವಚನ' ಗಳೆಂದು ಕರೆಯಲಾಗಿದೆ.

'ಕಾಯಕ' ಎಂಬ ಮಾತು ಮತ್ತು ಅದರ ಅರ್ಥಕಲ್ಪನೆ ಶರಣರು ವಿಚಾರ ಪ್ರಪಂಚಕ್ಕೆ ಮತ್ತು ಜನಜೀವನದ ಸಂಸ್ಕೃತಿಗೆ ಕೊಟ್ಟ ಕಾಣಿಕೆ. ಸಮಾಜ ಸ್ವಯಂಪೂರ್ಣವಾಗಬೇಕಾದರೆ ಮತ್ತು ಸುಖಮಯವಾಗಬೇಕಾದರೆ ಎಲ್ಲರೂ ತಮ್ಮ ತಮ್ಮ ಉದ್ಯೋಗಗಳನ್ನು ಮಾಡಬೇಕು. ಕಾಯಕದ ಮಹತ್ವವನ್ನು ಅರಿಯಬೇಕು. "ಕಾಯಕವೇ ಕೈಲಾಸ" ಎಂದು ಶರಣರು ಒತ್ತಿ ಹೇಳಿದ್ದಾರೆ. ಭಿಕ್ಷೆ ಬೇಡುವುದನ್ನು ಅವರು ಒಪ್ಪದೆ ಕಟುವಾಗಿ ಖಂಡಿಸಿದರು. ಇನ್ನೊಬ್ಬರ ಹಂಗಿನಲ್ಲಿ ಬಾಳುವ ಜೀವನ ಒಂದು ಜೀವನವೇ ಅಲ್ಲ. "ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ ಅಚ್ಚ ಶರಣರ ಕಂಡರೆ ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆ" ಎನ್ನುತ್ತಾನೆ. ಭಕ್ತನಾಗಲೀ, ಗುರುವಾಗಲೀ, ಜಂಗಮನಾಗಲಿ ಎಲ್ಲರೂ ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿ ಸಾಧನೆಯನ್ನು ಕೈಗೊಳ್ಳಬೇಕೆಂಬುದು ಶರಣರ ದೃಷ್ಟಿಯಾಗಿತ್ತು. ಈ ಕಾಲಘಟ್ಟದಲ್ಲಿ ವಚನಗಾರರಿಗೆ ಸರಿಸಮಾನವಾಗಿ ಅಸಂಖ್ಯಾತ ವಚನಗಾರ್ತಿಯರು ಸಹ ತಮ್ಮ ತಾತ್ವಿಕತೆಯನ್ನು ಮೆರೆದರು. ಅವರಲ್ಲಿ ಅಕ್ಕಮಹಾದೇವಿಯಂಥವರ ಪಾತ್ರ ಹಿರಿದು. ಒಟ್ಟಾರೆ ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ವಚನಗಳು ಅನಾವರಣಗೊಂಡದ್ದು ಮಹತ್ವದ ಸಂಗತಿ.

**ಹೆಚ್ಚಿನ ಓದಿಗಾಗಿ**

೧. ಯಾಜದಾನಿ ಜಿ (ಸಂ)- ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್
೨. ಸುಂದರ ಅ - ಬನವಾಸಿ ವಾಸ್ತು ಮತ್ತು ಮೂರ್ತಿಶಿಲ್ಪ
೩. ದೇಸಾಯಿ ಪಿ.ಬಿ. ಮತ್ತು ಇತರರು- ದಿ ಹಿಸ್ಟರಿ ಆಫ್ ಕರ್ನಾಟಕ

೪. ಆಲೂರು ವೆಂಕಟರಾವ್ - ಕರ್ನಾಟಕ ಗತವೈಭವ
೫. ಸುಂದರ ಅ. (ಸಂ) - ಸಮಗ್ರ ಕರ್ನಾಟಕ ಚರಿತ್ರೆ, ಸಂಪುಟ-೧
೬. ಪಂಚಮುಖಿ ಆರ್.ಎಸ್ - ಕರ್ನಾಟಕ ಇತಿಹಾಸ
೭. ಸುಂದರ ಅ - ದಿ ಅರ್ಲಿ ಕದಂಬ ಟೆಂಪಲ್ ಆರ್ಕಿಟೆಕ್ಚರ್
೮. ಶೆಟ್ಟಿ ಎಸ್.ಆರ್. - ಬನವಾಸಿ ಥ್ರೂ ದಿ ಏಜಸ್
೯. ಗೋಪಾಲ ಬಿ.ಆರ್. - ಕಾರ್ಪಸ್ ಆಫ್ ಕದಂಬ ಇನ್‌ಸ್ಕ್ರಿಪ್ಷನ್
೧೦. ಮೋರೇಸ್ ಜಿ.ಎಂ. - ಕದಂಬ ಕುಲ
೧೧. ಗೋಪಾಲ್ ಬಿ.ಆರ್. - ಬನವಾಸಿ ಕದಂಬರು
೧೨. ಶರ್ಮ ಎಲ್.ಟಿ. ಮತ್ತು ಶ್ರೀಧರ - ಬನವಾಸಿ ಕದಂಬರು
೧೩. ಷೇಕ್ ಅಲಿ ಬಿ. - ಹಿಸ್ಟರಿ ಆಫ್ ದಿ ವೆಸ್ಟರ್ನ್ ಗಂಗಾಸ್
೧೪. ಕೃಷ್ಣರಾವ್ ಎಂ.ವಿ. - ಗಂಗಾಸ್ ಆಫ್ ತಲಕಾಡ್
೧೫. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ - ಕರ್ನಾಟಕ ಇತಿಹಾಸ ದರ್ಶನ
೧೬. ಪಂಚಮುಖಿ ಆರ್.ಎಸ್. ಮತ್ತು ಲಕ್ಷ್ಮೀನಾರಾಯಣ - ಕರ್ನಾಟಕದ ಅರಸು ಮನೆತನಗಳು
೧೭. ತಿಪ್ಪೇರುದ್ರಸ್ವಾಮಿ ಎಚ್. - ಕರ್ನಾಟಕ ಸಂಸ್ಕೃತಿ ಸಮೀಕ್ಷೆ
೧೮. ರಮೇಶ್ ಕೆ.ವಿ. - ಚಾಲುಕ್ಯಾಸ್ ಆಫ್ ವಾತಾಪಿ
೧೯. ದೀಕ್ಷಿತ್ ಜಿ.ಎಸ್. - ಪೊಲಿಟಿಕಲ್ ಹಿಸ್ಟರಿ ಆಫ್ ಚಾಲುಕ್ಯಾಸ್ ಆಫ್ ಬಾದಾಮಿ
೨೦. ನಾಗರಾಜರಾವ್ ಎಂ.ಎಸ್. (ಸಂ) - ದಿ ಚಾಲುಕ್ಯಾಸ್ ಆಫ್ ಬಾದಾಮಿ
೨೧. ಅಣ್ಣಿಗೇರಿ ಎ.ಎಂ. - ಐಹೊಳೆ ಕಲೆ ಮತ್ತು ಸಂಸ್ಕೃತಿ
೨೨. ಕಸೆನ್ ಹೆಚ್. - ದಿ ಚಾಲುಕ್ಯ ಆರ್ಕಿಟೆಕ್ಚರ್ ಆಫ್ ದಿ ಕ್ಯಾನರೀಸ್ ಡಿಸ್ಟ್ರಿಕ್ಟ್
೨೩. ಗೋಪಾಲ್ ಬಿ.ಆರ್. - ಕರ್ನಾಟಕದ ಕಲೆಗಳು - ವಾಸ್ತು
೨೪. ರಾಜಶೇಖರ್ ಎಸ್. - ಅರ್ಲಿ ಚಾಲುಕ್ಯನ್ ಆರ್ಕಿಟೆಕ್ಚರ್
೨೫. ಶಿವರಾಮಕಾರಂತ ಕೆ. - ಚಾಲುಕ್ಯ ವಾಸ್ತು ಮತ್ತು ಶಿಲ್ಪ
೨೬. ಆಲ್ಟೇಕರ್ - ದಿ ರಾಷ್ಟ್ರಕೂಟಾಸ್ ಅಂಡ್ ದೇರ್ ಟೈಮ್ಸ್
೨೭. ಗೋಸ್ವಾಮಿ - ಆರ್ಟ್ ಆಫ್ ದಿ ರಾಷ್ಟ್ರಕೂಟಾಸ್
೨೮. ಕರ್ಮಾರ್‌ಕರ್ ಎ.ಪಿ. - ಕಲ್ಚರಲ್ ಹಿಸ್ಟರಿ ಆಫ್ ಕರ್ನಾಟಕ
೨೯. ಮುಗಳಿ ಆರ್.ಎಸ್. - ಹೆರಿಟೇಜ್ ಆಫ್ ಕರ್ನಾಟಕ
೩೦. ಕೃಷ್ಣ ಎಂ.ಎಚ್. - ಅಜಂತ ಮತ್ತು ಎಲ್ಲೋರಾ
೩೧. ವೆಂಕೋಬರಾವ್ - ಮೈಸೂರು ದೇಶದ ವಾಸ್ತುಶಿಲ್ಪ
೩೨. ಸೀತಾರಾಮ್ ಜಾಗೀರ್‌ದಾರ್ - ಕನ್ನಡ ಸಾಹಿತ್ಯದ ಬೆಳವಣಿಗೆ ಹಾಗೂ ರಾಷ್ಟ್ರಕೂಟ ಅರಸರ ಮನೆತನ

೩೩. ನಾಗರಾಜರಾವ್ ಎಂ.ಎಸ್. (ಸಂ) - ದಿ ಚಾಲುಕ್ಯಾಸ್ ಆಫ್ ಕಲ್ಯಾಣಿ
೩೪. ಕೃಷ್ಣಮುರಾರಿ - ದಿ ಚಾಲುಕ್ಯಾಸ್ ಆಫ್ ಕಲ್ಯಾಣಿ
೩೫. ನಾಗಯ್ಯ ಜಿ.ಎಂ. - ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ
೩೬. ಕಲಬುರ್ಗಿ ಎಂ.ಎಂ. - ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ
೩೭. ಗುರುವ ಆರ್.ಎನ್. - ತರ್ದವಾಡಿ ನಾಡು
೩೮. ಕೊಹಿಲೋ ಡಬ್ಲೂ - ಹೊಯ್ಸಳ ವಂಶ
೩೯. ಡೆರೆಟ್ ಜೆ.ಡಿ.ಎಂ. - ದಿ ಹೊಯ್ಸಳಾಸ್
೪೦. ಕೆ.ಎಸ್. ಶಿವಣ್ಣ - ಎ ಕ್ರಿಟಿಕ್ ಆಫ್ ಹೊಯ್ಸಳ ಪಾಲಿಟಿ
೪೧. ಷೇಕ್ ಅಲಿ ಬಿ (ಸಂ) - ದಿ ಹೊಯ್ಸಳ ಡೈನಾಸ್ಟಿ
೪೨. ವೆಂಕಟರಮಣ ಕೆ.ಆರ್. - ದಿ ಹೊಯ್ಸಳಾಸ್ ಇನ್ ದಿ ತಮಿಳಕಂಟ್ರಿ
೪೩. ಪರ್ಸೀಬ್ರೌನ್ - ಇಂಡಿಯನ್ ಆರ್ಕಿಟೆಕ್ಚರ್
೪೪. ಶ್ರೀಕಂಠಶಾಸ್ತ್ರಿ - ಹೊಯ್ಸಳ ವಾಸ್ತುಶಿಲ್ಪ
೪೫. ಚಿದಾನಂದಮೂರ್ತಿ ಎಂ. - ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ
೪೬. ಸೂರ್ಯನಾಥ ಯು. ಕಾಮತ್ - ಕರ್ನಾಟಕದ ಸಂಕ್ಷಿಪ್ತ ಇತಿಹಾಸ
೪೭. ಕಲಬುರ್ಗಿ ಎಂ.ಎಂ. (ಸಂ) - ಸಮಗ್ರ ವಚನ ಸಂಪುಟಗಳು

## ಮಾದರಿ ಪ್ರಶ್ನೆಗಳು

**I. ಒಂದು ವಾಕ್ಯದಲ್ಲಿ ಉತ್ತರಿಸಿ**

೧. ಶಾತವಾಹನ ಸಂತತಿಯ ಸ್ಥಾಪಕ ಯಾರು?
೨. ಗಾಥಸಪ್ತಸತಿಯ ಕರ್ತೃ ಯಾರು?
೩. ಗೌತಮಿಪುತ್ರ ಶಾತಕರ್ಣಿಯ ಬಿರುದು ಯಾವುದು?
೪. ಬೌದ್ಧ ಸನ್ಯಾಸಿಗಳ ನಿವಾಸಕ್ಕೆ ಏನೆಂದು ಕರೆಯುವರು?
೫. ಶಾತವಾಹನರ ಅಧಿಕೃತ ಭಾಷೆ ಯಾವುದು?
೬. ಕದಂಬರ ರಾಜಲಾಂಛನ ಯಾವುದು?
೭. ಬನವಾಸಿಯ ಬಳಿ ಹರಿಯುವ ನದಿ ಯಾವುದು?
೮. ಹಲ್ಮಿಡಿ ಶಾಸನ ಯಾವ ವಂಶದ ಕಾಲದಲ್ಲಿ ರಚಿತವಾಯಿತು?
೯. ಗುಡ್ನಾಪುರ ಶಾಸನವನ್ನು ಯಾವ ದೊರೆ ಬರೆಸಿದನು?
೧೦. ಕದಂಬರ ನಾಣ್ಯಗಳಿಗೆ ಯಾವ ಹೆಸರಿತ್ತು?
೧೧. ಕದಂಬರ ಕಾಲದ ಗುಹೆಯನ್ನು ಎಲ್ಲಿ ಕಾಣಬಹುದು?
೧೨. ಗಂಗವಾಡಿ ೯೬,೦೦೦ ಎಂದು ಯಾವ ರಾಜ ಮನೆತನವನ್ನು ಕರೆಯುವರು?
೧೩. ಗಂಗರ ಮೊದಲ ರಾಜಧಾನಿ ಯಾವುದು?
೧೪. ಗಂಗ ವಂಶದ ಗಣ್ಯಮಂತ್ರಿ ಯಾರು?

೧೫. ಗಂಗವಂಶ ಸ್ಥಾಪನೆಗೆ ಪ್ರೇರಕ ಶಕ್ತಿಯಾಗಿದ್ದ ಮುನಿ ಯಾರು?
೧೬. ದುರ್ವಿನೀತನನ್ನು ಪ್ರಸಿದ್ಧ ಬರಹಗಾರನೆಂದು ಹೊಗಳಿರುವ ಕೃತಿ ಯಾವುದು?
೧೭. ಬಾದಾಮಿಯ ಕೋಟೆಯನ್ನು ನಿರ್ಮಿಸಿದವನಾರು?
೧೮. ಎರಡನೆ ಪುಲಿಕೇಶಿಯನ್ನು ಪರಾಭವಗೊಳಿಸಿದ ಪಲ್ಲವ ದೊರೆ ಯಾರು?
೧೯. ಮಂಗಳೇಶನಿಂದ ನಿರ್ಮಿತಗೊಂಡ ಬಾದಾಮಿಯ ಗುಹೆ ಯಾವುದು?
೨೦. ಬಾದಾಮಿಯ ಚಾಲುಕ್ಯರ ಸೈನ್ಯಕ್ಕೆ ಏನೆಂದು ಕರೆಯುವರು?
೨೧. ಎರಡನೆ ಪುಲಿಕೇಶಿಯ ಆಸ್ಥಾನಕ್ಕೆ ರಾಯಭಾರಿಯನ್ನು ಕಳುಹಿಸಿದ್ದ ಪರ್ಷಿಯಾದ ದೊರೆ ಯಾರು?
೨೨. ರಾಷ್ಟ್ರಕೂಟರ ಮೂಲಸ್ಥಾನ ಯಾವುದು?
೨೩. ಕೈಲಾಸನಾಥ ದೇವಾಲಯವು ಎಲ್ಲಿದೆ?
೨೪. ರಾಷ್ಟ್ರಕೂಟರ ರಾಜಲಾಂಛನ ಯಾವುದು?
೨೫. ಶ್ರೀವಿಜಯನ ಕೃತಿ ಯಾವುದು?
೨೬. ಉತ್ತರ ಭಾರತದ ಮೇಲೆ ದಾಳಿ ಮಾಡಿದ ರಾಷ್ಟ್ರಕೂಟ ದೊರೆ ಯಾರು?
೨೭. ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಆತ್ಮಚರಿತ್ರೆ ಯಾವುದು?
೨೮. ಇಮ್ಮಡಿ ತೈಲಪ ಯಾವ ವಂಶದ ದೊರೆಯನ್ನು ಸೋಲಿಸಿ ಚಾಲುಕ್ಯ ಸಾಮ್ರಾಜ್ಯ ಸ್ಥಾಪಿಸಿದನು?
೨೯. ಆರನೆಯ ವಿಕ್ರಮಾದಿತ್ಯನನ್ನು ಸೋಲಿಸಿದ ಹೊಯ್ಸಳ ದೊರೆ ಯಾರು?
೩೦. ಪಂಪಯುಗದ ಕಾಲವನ್ನು ಎಲ್ಲಿಯವರೆಗೆ ಗುರುತಿಸಲಾಗಿದೆ?
೩೧. ಜ್ಯೋತಿಷ್ಯ ವಿಷಯದ ಮೇಲೆ ಕೃತಿ ರಚಿಸಿದ ಕವಿ ಯಾರು?
೩೨. ಹೊಯ್ಸಳರ ರಾಜ ಲಾಂಛನ ಯಾವುದು?
೩೩. 'ಚತುಸಮಯ ಸಮುದ್ಧರಣ' ಎಂದರೇನು?
೩೪. ಹೊಯ್ಸಳ ಸಾಮ್ರಾಜ್ಯದ ಸ್ಥಾಪನೆಗೆ ಕಾರಣರಾದ ಮುನಿ ಯಾರು?
೩೫. ತಲಕಾಡಿನ ಕೀರ್ತಿನಾರಾಯಣ ದೇವಾಲಯವನ್ನು ಕಟ್ಟಿಸದವರಾರು?
೩೬. ಯಾವ ಯುದ್ಧದಲ್ಲಿ ಆರನೆ ವಿಕ್ರಮಾದಿತ್ಯನು ವಿಷ್ಣುವರ್ಧನನಿಂದ ಪರಾಭವಗೊಂಡನು?
೩೭. ಶಂಕರಾಚಾರ್ಯರು ಎಲ್ಲಿ ಜನಿಸಿದರು?
೩೮. ಉಡುಪಿಯಲ್ಲಿರುವ ಮಧ್ವ ಪರಂಪರೆಯ ಮಠಗಳೆಷ್ಟು?
೩೯. ರಾಮಾನುಜಾಚಾರ್ಯರು ಯಾವ ಸಿದ್ಧಾಂತವನ್ನು ಪ್ರತಿಪಾದಿಸಿದರು.
೪೦. ಅನುಭವ ಮಂಟಪದ ಅಧ್ಯಕ್ಷರಾಗಿದ್ದವರಾರು?
೪೧. ಬಸವಣ್ಣನವರು ಯಾವ ವಂಶದ ರಾಜರ ಪ್ರಧಾನಮಂತ್ರಿಯಾಗಿದ್ದರು?

II. ಎರಡು ವಾಕ್ಯಗಳಲ್ಲಿ ಉತ್ತರಿಸಿ

೧. ಶಾತವಾಹನರ ಮೊದಲ ದೊರೆ ಯಾರು? ಅವನ ರಾಜಧಾನಿ ಯಾವುದು?
೨. ಶಾತವಾಹನರ ಕಾಲದ ಸ್ಮಾರಕಗಳಿರುವ ಸ್ಥಳಗಳನ್ನು ಹೆಸರಿಸಿ.
೩. ಶಾತವಾಹನರ ರಾಜಕವಿ ಯಾರು? ಅವನ ಕೃತಿ ಯಾವ ಭಾಷೆಯಲ್ಲಿದೆ?
೪. ಶಾತವಾಹನರ ಪ್ರಸಿದ್ಧ ದೊರೆ ಯಾರು? ಅವನ ದಿಗ್ವಿಜಯಗಳ ಬಗ್ಗೆ ತಿಳಿಸುವ ಶಾಸನ ಯಾವುದು?
೫. ಕದಂಬ ವಂಶದ ಸ್ಥಾಪಕ ಯಾರು? ಅವನ ರಾಜಧಾನಿ ಯಾವುದು?
೬. ಮಯೂರಶರ್ಮನ ಪೂರ್ವಜರು ಯಾರು?
೭. ಮಯೂರಶರ್ಮನ ಗುರು ಯಾರು? ಅವನು ಉನ್ನತ ವಿದ್ಯಾಭ್ಯಾಸಕ್ಕೆ ಎಲ್ಲಿಗೆ ಹೋದನು?
೮. ಬನವಾಸಿಗಿರುವ ಹೆಸರುಗಳನ್ನು ತಿಳಿಸಿ.
೯. ಹಲಸಿಯಲ್ಲಿ ಜೈನ ಬಸದಿ ಕಟ್ಟಿಸಿದ ದೊರೆ ಯಾರು? ಏಕೆ ಕಟ್ಟಿಸಿದನು?
೧೦. ಗಂಗರ ರಾಜಧಾನಿಗಳನ್ನು ಹೆಸರಿಸಿ.
೧೧. ಗಂಗ ರಾಜ್ಯದ ಸ್ಥಾಪಕ ಯಾರು? ಅವರ ರಾಜಲಾಂಛನ ಯಾವುದು?
೧೨. ಶ್ರವಣಬೆಳಗೊಳದ ಗೊಮ್ಮಟೇಶ್ವರನ ವಿಗ್ರಹ ಯಾರ ಕಾಲದಲ್ಲಿ, ಯಾರಿಂದ ನಿರ್ಮಿತ ವಾಯಿತು?
೧೩. ಗಂಗ ರಾಜ್ಯದ ಅಂತ್ಯ ಹೇಗಾಯಿತು?
೧೪. ಗಂಗರ ಕಾಲದ ವಾಸ್ತುಶಿಲ್ಪ ಕೇಂದ್ರಗಳನ್ನು ಹೆಸರಿಸಿ.
೧೫. ರವಿಕೀರ್ತಿ ಯಾರು? ಅವನಿಂದ ವಿರಚಿತವಾದ ಶಿಲಾಶಾಸನ ಯಾವುದು?
೧೬. ಹ್ಯೂಯೆನ್‌ತ್ಸಾಂಗ್ ಯಾರು? ಅವನು ಯಾರ ಕಾಲದಲ್ಲಿ ಕರ್ನಾಟಕವನ್ನು ಸಂದರ್ಶಿಸಿದನು?
೧೭. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವನ್ನು ಯಾರು? ಏಕೆ ಕಟ್ಟಿಸಿದರು?
೧೮. ವಾತಾಪಿಕೊಂಡ ಎಂಬ ಬಿರುದು ಯಾರಿಗಿತ್ತು? ಅವನು ಅದನ್ನು ಹೇಗೆ ಪಡೆದುಕೊಂಡನು?
೧೯. ಬಾದಾಮಿಯಲ್ಲಿನ ಗುಹೆಗಳೆಷ್ಟು? ಅವುಗಳ ನಿರ್ಮಾತೃ ಯಾರು?
೨೦. ಪಟ್ಟದಕಲ್ಲಿನ ಪ್ರಮುಖ ನಾಲ್ಕು ದೇವಾಲಯಗಳನ್ನು ಹೆಸರಿಸಿ.
೨೧. ಪಲ್ಲವರೊಂದಿಗೆ ಹೋರಾಟ ನಡೆಸಿದ ಚಾಲುಕ್ಯ ಅರಸರನ್ನು ತಿಳಿಸಿ.
೨೨. ರಾಷ್ಟ್ರಕೂಟರ ರಾಜಧಾನಿ ಯಾವುದು? ಅದು ಈಗ ಯಾವ ಜಿಲ್ಲೆಯಲ್ಲಿದೆ?
೨೩. ಸುಲೇಮಾನ್ ಯಾರು? ಅವನು ಯಾರ ಆಸ್ಥಾನಕ್ಕೆ ಭೇಟಿ ನೀಡಿದ್ದನು?
೨೪. ನೃಪತುಂಗನ ಆಸ್ಥಾನ ಕವಿಗಳಾರು?
೨೫. ರಾಷ್ಟ್ರಕೂಟರ ಕೊನೆ ದೊರೆ ಯಾರು? ಅವನನ್ನು ಯಾರು ಸೋಲಿಸಿದರು?
೨೬. 'ಕವಿರಾಜಮಾರ್ಗ' ಕುರಿತು ವಿವರಣೆ ನೀಡಿ.

೨೭. ಕೈಲಾಸನಾಥ ದೇಗುಲವನ್ನು ಯಾರು ಕಟ್ಟಿಸಿದರು? ಅವನು ಯಾವ ವಂಶಕ್ಕೆ ಸೇರಿದವನು?

೨೮. ಕವಿ ಚಕ್ರವರ್ತಿ ಬಿರುದು ಯಾರದು? ಅವನ ಕೃತಿಗಳಾವುವು?

೨೯. ಕಲ್ಯಾಣಿ ಚಾಲುಕ್ಯ ಸಾಮ್ರಾಜ್ಯ ಸ್ಥಾಪಕ ಯಾರು? ಅವನ ರಾಜಧಾನಿ ಯಾವುದು?

೩೦. ಇಟಗಿಯ ಮಹಾದೇವ ದೇವಾಲಯ ನಿರ್ಮಿಸಿದವರಾರು? ಅವನು ಯಾರ ದಂಡನಾಯಕನಾಗಿದ್ದನು?

೩೧. ಮಾನಸೋಲ್ಲಾಸದ ಬಗೆಗೆ ವಿವರಣೆ ನೀಡಿ.

೩೨. ರನ್ನನ ನಾಲ್ಕು ಕೃತಿಗಳನ್ನು ಹೆಸರಿಸಿ.

೩೩. ಆರನೆಯ ವಿಕ್ರಮಾದಿತ್ಯನ ಸೋದರರನ್ನು ತಿಳಿಸಿ.

೩೪. ಹೊಯ್ಸಳರ ರಾಜಧಾನಿಗಳಾವುವು?

೩೫. ವಿಷ್ಣುವರ್ಧನನ ಪೂರ್ವಜರನ್ನು ಹೆಸರಿಸಿ.

೩೬. ಹೊಯ್ಸಳ ಸಾಮ್ರಾಜ್ಯದ ಸ್ಥಾಪನೆ ಹೇಗಾಯಿತು?

೩೭. 'ತಲಕಾಡುಗೊಂಡ' ಎಂಬ ಬಿರುದನ್ನು ಯಾರು ಏಕೆ ಧರಿಸಿದರು?

೩೮. ಗದ್ಯ ಕರ್ಣಾಮೃತ ಕೃತಿಯ ಮಹತ್ವವೇನು?

೩೯. ಷಣ್ಮತ ಸ್ಥಾಪನಾಚಾರ್ಯ ಎಂದರೇನು?

೪೦. ಶಂಕರಾಚಾರ್ಯರ ನಾಲ್ಕು ಮಠಗಳನ್ನು ಹೆಸರಿಸಿ.

೪೧. ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಏಕೆ ಬಂದರು? ಅವರಿಗೆ ಆಶ್ರಯ ನೀಡಿದವರಾರು?

೪೨. 'ಪರ್ಯಾಯ' ಎಂದರೇನು?

೪೩. ಬಸವಣ್ಣನವರ ಅಂತ್ಯ ಹೇಗಾಯಿತು?

**III. ಪ್ರತಿಯೊಂದಕ್ಕೆ ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ**

೧. ಗೌತಮಿಪುತ್ರ ಶಾತಕರ್ಣಿ ಆಳ್ವಿಕೆಯ ವೃತ್ತಾಂತವನ್ನು ಕೊಡಿರಿ.

೨. ಶಾತವಾಹನರ ಕಾಲದ ಸಾಹಿತ್ಯವನ್ನು ಕುರಿತು ಬರೆಯಿರಿ.

೩. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಶಾತವಾಹನರ ಕೊಡುಗೆಯನ್ನು ವಿವರಿಸಿ.

೪. ಮಯೂರನ ಜೀವನ ಮತ್ತು ಸಾಧನೆಗಳನ್ನು ಚಿತ್ರಿಸಿ.

೫. ಕಾಕುತ್ಸವರ್ಮ ಯಾರು? ಅವನ ಸಾಧನೆಗಳೇನು?

೬. ಕದಂಬರ ಕಾಲದ ಮುಖ್ಯ ಶಾಸನಗಳ ಬಗೆಗೆ ವಿವರ ನೀಡಿ.

೭. ಕದಂಬರ ಶೈಕ್ಷಣಿಕ ವ್ಯವಸ್ಥೆಯನ್ನು ವಿವರಿಸಿ.

೮. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಕದಂಬರ ಕೊಡುಗೆ ಏನು?

೯. ದುರ್ವಿನೀತನ ಸಾಧನೆಗಳನ್ನು ವಿವರಿಸಿ.

೧೦. ಗಂಗರು ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ತಿಳಿಸಿ.

೧೧. ಗಂಗರ ಕಾಲದ ಕಲೆ ಮತ್ತು ವಾಸ್ತುಶಿಲ್ಪವನ್ನು ವರ್ಣಿಸಿ.
೧೨. ಗಂಗರು 'ಸರ್ವಧರ್ಮ ಸಮನ್ವಯಿಗಳು' ಹೇಗೆ?
೧೩. ಇಮ್ಮಡಿ ಪುಲಿಕೇಶಿಯ ಪೂರ್ವಜರ ಸಾಧನೆಗಳೇನು?
೧೪. ಚಾಲುಕ್ಯ-ಪಲ್ಲವ ಸಂಘರ್ಷವನ್ನು ಕುರಿತು ಬರೆಯಿರಿ.
೧೫. ಚಾಲುಕ್ಯರ ಕಾಲದ ಸಾಹಿತ್ಯದ ಪ್ರಗತಿಯನ್ನು ವಿವರಿಸಿ.
೧೬. ಧ್ರುವ ಮತ್ತು ಮೂರನೇ ಗೋವಿಂದನ ಉತ್ತರ ಭಾರತದ ದಿಗ್ವಿಜಯಗಳನ್ನು ಕುರಿತು ಬರೆಯಿರಿ.
೧೭. ದಿಗ್ವಿಜಯಿಯಾಗಿ ಮತ್ತು ಸಾಂಸ್ಕೃತಿಕ ವೀರನಾಗಿ ನೃಪತುಂಗನ ಸಾಧನೆಗಳನ್ನು ವಿವರಿಸಿ.
೧೮. ರಾಷ್ಟ್ರಕೂಟರ ಕಾಲದ ಸಾಹಿತ್ಯ ಪ್ರಗತಿಯನ್ನು ಕುರಿತು ಬರೆಯಿರಿ.
೧೯. ಕಲೆ ಮತ್ತು ವಾಸ್ತುಶಿಲ್ಪಕ್ಕೆ ರಾಷ್ಟ್ರಕೂಟರ ಕೊಡುಗೆ ಏನು?
೨೦. ಆರನೆಯ ವಿಕ್ರಮಾದಿತ್ಯನು ಕಲ್ಯಾಣಿ ಚಾಲುಕ್ಯ ಸಾಮ್ರಾಜ್ಯ ಸಿಂಹಾಸನವನ್ನು ಪಡೆದುಕೊಂಡ ಬಗೆಯನ್ನು ವಿವರಿಸಿ.
೨೧. ಕಲ್ಯಾಣಿ ಚಾಲುಕ್ಯರ ಕಾಲದ ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಕುರಿತು ಬರೆಯಿರಿ.
೨೨. ವಾಸ್ತುಶಿಲ್ಪಕ್ಕೆ ಕಲ್ಯಾಣಿ ಚಾಲುಕ್ಯರ ಕೊಡುಗೆಗಳೇನು?
೨೩. ಹೊಯ್ಸಳ ಮತ್ತು ಕಲ್ಯಾಣಿ ಚಾಲುಕ್ಯರ ಘರ್ಷಣೆಯನ್ನು ವಿವರಿಸಿ.
೨೪. ಹೊಯ್ಸಳ ವಿಷ್ಣುವರ್ಧನನ ಸಾಧನೆಗಳೇನು?
೨೫. ಹೊಯ್ಸಳರ ಕಾಲದ ಧಾರ್ಮಿಕ ವ್ಯವಸ್ಥೆಯನ್ನು ವಿವರಿಸಿ.
೨೬. ಹೊಯ್ಸಳ ವಾಸ್ತುಶಿಲ್ಪದ ಮುಖ್ಯ ಲಕ್ಷಣಗಳನ್ನು ಕುರಿತು ಬರೆಯಿರಿ.
೨೭. ಶಂಕರಾಚಾರ್ಯರ ಜೀವನ ಸಾಧನೆಗಳನ್ನು ವಿವರಿಸಿ.
೨೮. ಮಧ್ವಾಚಾರ್ಯರ ಸಾಧನೆಗಳೇನು?
೨೯. ರಾಮಾನುಜಾಚಾರ್ಯರ ಜೀವನೇತಿಹಾಸವನ್ನು ಸಂಕ್ಷೇಪಿಸಿ.
೩೦. ಬಸವಣ್ಣನವರ ಸಾಮಾಜಿಕ ಸುಧಾರಣೆಗಳೇನು?

**IV. ೨೦ ರಿಂದ ೪೦ ವಾಕ್ಯಗಳಲ್ಲಿ ಉತ್ತರಿಸಿ**

೧. ಶಾತವಾಹನರ ರಾಜಕೀಯ ಇತಿಹಾಸವನ್ನು ಕುರಿತು ವಿಶ್ಲೇಷಿಸಿ.
೨. ಶಾತವಾಹನರ ಸಾಂಸ್ಕೃತಿಕ ಕೊಡುಗೆಗಳನ್ನು ಕುರಿತು ಬರೆಯಿರಿ.
೩. ಕದಂಬ ರಾಜರ ಆಳ್ವಿಕೆಯನ್ನು ಕುರಿತು ಬರೆಯಿರಿ.
೪. ಸಾಂಸ್ಕೃತಿಕ ಕ್ಷೇತ್ರಕ್ಕೆ ಕದಂಬರು ನೀಡಿದ ಕೊಡುಗೆಗಳೇನು?
೫. ಗಂಗ ರಾಜ್ಯದ ಅಂತ್ಯ ಹೇಗಾಯಿತು? ವಿವರಿಸಿ.
೬. ಗಂಗರ ಕಾಲದ ವಾಸ್ತುಶಿಲ್ಪ ಕೇಂದ್ರಗಳನ್ನು ಕುರಿತು ವಿವರಿಸಿ.
೭. ಗಂಗ ದೊರೆಗಳ ರಾಜಕೀಯ ಇತಿಹಾಸವನ್ನು ಕುರಿತು ಬರೆಯಿರಿ.
೮. ಗಂಗರ ಸಾಂಸ್ಕೃತಿಕ ಕೊಡುಗೆಗಳನ್ನು ಕುರಿತು ವಿವರಿಸಿ.
೯. ಇಮ್ಮಡಿ ಪುಲಿಕೇಶಿಯ ದಿಗ್ವಿಜಯಗಳನ್ನು ಬಣ್ಣಿಸಿ.

೧೦. ಬಾದಾಮಿ, ಐಹೊಳೆ, ಪಟ್ಟದಕಲ್ಲಿನಲ್ಲಿರುವ ಚಾಲುಕ್ಯರ ವಾಸ್ತುಶಿಲ್ಪವನ್ನು ಕುರಿತು ಚರ್ಚಿಸಿ.
೧೧. ರಾಷ್ಟ್ರಕೂಟ ದೊರೆಗಳ ರಾಜಕೀಯ ಚರಿತ್ರೆಯ ವಿವರಗಳನ್ನು ನೀಡಿ.
೧೨. ಸಾಹಿತ್ಯ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ರಾಷ್ಟ್ರಕೂಟರ ಕೊಡುಗೆ ಯಾವ ಬಗೆಯದು?
೧೩. ಸಾಹಿತ್ಯ ಕ್ಷೇತ್ರಕ್ಕೆ ಕಲ್ಯಾಣಿ ಚಾಲುಕ್ಯರು ನೀಡಿದ ಕೊಡುಗೆಗಳೇನು ಎಂಬುದನ್ನು ವಿವರಿಸಿ.
೧೪. ಕಲ್ಯಾಣಿ ಚಾಲುಕ್ಯರು ಕರ್ನಾಟಕ ಸಂಸ್ಕೃತಿಗೆ ನೀಡಿದ ಕಾಣಿಕೆಗಳಾವುವು? ವಿವರಿಸಿ.
೧೫. ಹೊಯ್ಸಳ ರಾಜಕೀಯ ಚರಿತ್ರೆಯನ್ನು ಕುರಿತು ಬರೆಯಿರಿ.
೧೬. ನಾಡಿನ ಸಾಂಸ್ಕೃತಿಕ ಕ್ಷೇತ್ರಕ್ಕೆ ಹೊಯ್ಸಳರು ನೀಡಿದ ಕಾಣಿಕೆಗಳು ಯಾವುವು? ವಿವರಿಸಿ.
೧೭. ಮಧ್ಯಕಾಲೀನ ಕರ್ನಾಟಕದ ಸಮಾಜ ಹಾಗೂ ಧಾರ್ಮಿಕ ಸುಧಾರಣೆಗಳ ಸ್ವರೂಪವನ್ನು ಕುರಿತು ಬರೆಯಿರಿ.
೧೮. ಸಮಾಜದ ಸುಧಾರಣೆಯಲ್ಲಿ ಬಸವಣ್ಣನವರ ಜೀವನ ಹಾಗೂ ತಾತ್ವಿಕ ಚಿಂತನೆಗಳು ಎಷ್ಟು ಪರಿಣಾಮಕಾರಿ ಎಂಬುದನ್ನು ವಿಶ್ಲೇಷಿಸಿ.

## V. ಹೆಚ್ಚಿನ ಜ್ಞಾನಕ್ಕಾಗಿ ಕಾರ್ಯ-ಯೋಜನೆಗಳು (Assignments/Projects)

೧. ಶಾತವಾಹನರ ಕಾಲದ ಸ್ಮಾರಕಗಳನ್ನು ಪ್ರದರ್ಶಿಸಿ: ಉದಾಹರಣೆಗೆ ಅಮರಾವತಿ, ನಾಗರ್ಜುನಕೊಂಡಗಳ ಸ್ತೂಪಗಳು. ಕಾರ್ಲೆಯಲ್ಲಿನ ಚೈತ್ಯದ ಚಿತ್ರ ಇತ್ಯಾದಿ.
೨. ಕದಂಬರ ಕಾಲದ ಸ್ಮಾರಕಗಳ ಚಿತ್ರಗಳನ್ನು ಸಂಗ್ರಹಿಸಿ. ಉದಾ. ಹಲ್ಮಿಡಿ, ತಾಳಗುಂದ, ಚಂದ್ರವಳ್ಳಿ ಶಾಸನಗಳ ಚಿತ್ರಗಳು. ಬನವಾಸಿಯ ಮಧುಕೇಶ್ವರ ದೇವಾಲಯದ ಚಿತ್ರ, ಪದ್ಮಟಂಕ ನಾಣ್ಯದ ಚಿತ್ರ ಇತ್ಯಾದಿ.
೩. ಗಂಗರ ಕಾಲದ ಸ್ಮಾರಕಗಳ ಚಿತ್ರಗಳನ್ನು ಪ್ರದರ್ಶಿಸಿ.
ಉದಾ. ಶ್ರವಣಬೆಳಗೊಳ, ಕೋಲಾರ, ತಲಕಾಡು ಸ್ಥಳಗಳಲ್ಲಿನ ಬಸದಿಗಳು, ಗೊಮ್ಮಟೇಶ್ವರ, ಮದಗಜ ಮೊದಲಾದ ಸ್ಮಾರಕಗಳು ಇತ್ಯಾದಿ.
೪. ಭಾರತದ ಭೂಪಟದಲ್ಲಿ ಇಮ್ಮಡಿ ಪುಲಿಕೇಶಿಯ ಕಾಲದ ಬಾದಾಮಿ ಚಾಲುಕ್ಯರ ಸಾಮ್ರಾಜ್ಯ ವಿಸ್ತರಣೆಯನ್ನು ಗುರುತಿಸಿ ಸಂಕ್ಷಿಪ್ತ ವಿವರ ನೀಡಿ. ಅಥವಾ ಬಾದಾಮಿ ಚಾಲುಕ್ಯರ ಚಾರಿತ್ರಿಕ ಕುರುಹುಗಳುಳ್ಳ ಸ್ಥಳಗಳಿಗೆ ಭೇಟಿ ನೀಡಿ. ಉದಾ. ಬಾದಾಮಿ, ಐಹೊಳೆ, ಪಟ್ಟದಕಲ್ಲು ಇತ್ಯಾದಿ.
೫. ರಾಷ್ಟ್ರಕೂಟರ ಸ್ಮಾರಕಗಳ ಚಿತ್ರಗಳನ್ನು ಪ್ರದರ್ಶಿಸಿ. ಉದಾ. ಅಜಂತಾ, ಎಲ್ಲೋರಾ, ಎಲಿಫೆಂಟಾ ಇತ್ಯಾದಿ.

೬. ಕಲ್ಯಾಣದ ಚಾಲುಕ್ಯರ ಕಾಲದ ಸ್ಮಾರಕಗಳ ಚಿತ್ರಗಳನ್ನು ಪ್ರದರ್ಶಿಸಿ. ಉದಾ. ಇಟಗಿಯ ಮಹಾದೇವ ದೇವಾಲಯ, ಕುರುವತ್ತಿಯ ಮಲ್ಲಿಕಾರ್ಜುನ ಹಾಗೂ ಕಾಶಿವಿಶ್ವೇಶ್ವರ ದೇವಾಲಯಗಳು ಇತ್ಯಾದಿ.

೭. ಹೊಯ್ಸಳರ ಕಲೆ ಮತ್ತು ವಾಸ್ತುಶಿಲ್ಪಗಳನ್ನು ಪ್ರತಿನಿಧಿಸುವ ದೇವಾಲಯ, ಸ್ಮಾರಕಗಳ ಚಿತ್ರಗಳನ್ನು ಪ್ರದರ್ಶಿಸಿ. ಉದಾ. ಬೇಲೂರು, ಹಳೇಬೀಡು, ಸೋಮನಾಥಪುರ, ದೊಡ್ಡ ಗದ್ದವಳ್ಳಿ ಇತ್ಯಾದಿ.

೮. ಆಚಾರ್ಯತ್ರಯರ ಹಾಗೂ ಬಸವೇಶ್ವರರನ್ನು ಪ್ರತಿನಿಧಿಸುವ ಚಿತ್ರಗಳನ್ನು ಪ್ರದರ್ಶಿಸಿ. ಅಥವಾ ಶೃಂಗೇರಿ, ಕಂಚಿ, ಉಡುಪಿ ಹಾಗೂ ಬಸವ ಕಲ್ಯಾಣಗಳಿಗೆ ಭೇಟಿ ಕೊಡಿ. ಅಥವಾ ಆಚಾರ್ಯತ್ರಯರನ್ನು ತುಲನಾತ್ಮಕ ಅಧ್ಯಯನ ಮಾಡಿ.

೯. ಇಮ್ಮಡಿ ಪುಲಿಕೇಶಿ, ವಿಷ್ಣುವರ್ಧನ, ರಾಣಿ ಶಾಂತಲಾದೇವಿ, ಕವಿ ಪಂಪ ಮೊದಲಾದವರ ಚಾರಿತ್ರಿಕ ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಿ.

೧೦. ವಚನ ಸಾಹಿತ್ಯ, ದಾಸ ಸಾಹಿತ್ಯಗಳ ಬಗೆಗೆ ಯೋಜನೆ ರೂಪಿಸಿ. ಅಥವಾ ಕವಿ ಪಂಪ, ಪೊನ್ನ, ರನ್ನ, ಜನ್ನ, ಹರಿಹರ, ರಾಘವಾಂಕ ಮೊದಲಾದವರ ಸಾಹಿತ್ಯಿಕ ಕೊಡುಗೆಗಳಲ್ಲಿ ಪ್ರತಿಬಿಂಬಿತವಾಗಿರುವ ಸಮಾಜದ ಚಿತ್ರಣ ಹಾಗೂ ಚಾರಿತ್ರಿಕ ಸಂಗತಿಗಳನ್ನು ಪರಿಶೀಲಿಸಿ.

ಅಧ್ಯಾಯ ೫

# ಮಧ್ಯಕಾಲೀನ ಕರ್ನಾಟಕ

## ೫.೧ ವಿಜಯನಗರ ಸಾಮ್ರಾಜ್ಯ

ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದ ವಿಜಯನಗರ ಸಾಮ್ರಾಜ್ಯವು ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ಮೊದಲನೆಯದಾಗಿ ಇದು ಯಾವುದೇ ಒಂದು ಭಾಷಾವಾರು ಪ್ರಾಂತ್ಯಕ್ಕೆ ಸೀಮಿತಗೊಂಡಿರದೆ ಇಡೀ ದಕ್ಷಿಣ ಭಾರತದ ಮೇಲೆ ತನ್ನ ಪ್ರಭಾವವನ್ನು ಹೊಂದಿತ್ತು. ಎರಡನೆಯದಾಗಿ ಇದು ಇತರ ರಾಜ್ಯಗಳಂತೆ ಅಥವಾ ಸಾಮ್ರಾಜ್ಯದಂತೆ ಒಂದು ರಾಜವಂಶದಿಂದ ಆಳಲ್ಪಡದೆ ನಾಲ್ಕು ವಂಶಗಳಾದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಸಂತತಿಗಳಿಂದ ಆಳಲ್ಪಟ್ಟಿತು. ಕೊನೆಯದಾಗಿ ಇದು ಹಲವಾರು ಕ್ಷೇತ್ರಗಳಲ್ಲಿ ಅದರಲ್ಲೂ ಆಡಳಿತ, ಆರ್ಥಿಕ, ವ್ಯಾಪಾರ, ನಗರೀಕರಣ, ಸಾಹಿತ್ಯ ಮತ್ತು ಕಲೆಗಳಲ್ಲಿ ಇದುವರೆಗೆ ಯಾರು ಸಾಧಿಸದ ಪ್ರಗತಿಯನ್ನೆ ಸಾಧಿಸಿತು. ಈ ಕಾರಣಗಳಿಂದಾಗಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯು ದಕ್ಷಿಣ ಭಾರತದಲ್ಲಷ್ಟೇ ಅಲ್ಲದೆ ಇಡೀ ಭಾರತದ ಇತಿಹಾಸದಲ್ಲಿ ಪ್ರಮುಖವಾದ ಘಟನೆಯಾಗಿದೆ.

ವಿಜಯನಗರದ ಇತಿಹಾಸವನ್ನು ರಚಿಸುವಲ್ಲಿ ಮತ್ತು ಅರ್ಥೈಸುವಲ್ಲಿ ಹಲವು ರೀತಿಯ ಆಕರಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಅಸಂಖ್ಯಾತ ಶಾಸನಗಳು, ನಾಣ್ಯಗಳು, ಸ್ಮಾರಕಗಳು, ಪ್ರಾಕ್ತನ ಸಾಮಾಗ್ರಿಗಳು ಮತ್ತು ದೇಶಿಯ ಹಾಗೂ ವಿದೇಶಿಯ ಬರವಣಿಗೆಗಳು.

### ಮೂಲ

ವಿಜಯನಗರ ಸಾಮ್ರಾಜ್ಯದ ಸಂಸ್ಥಾಪನೆಯ ಕಾಲದ ಬಗ್ಗೆ ಮತ್ತು ಸಂಸ್ಥಾಪಕರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಾದ ಅಭಿಪ್ರಾಯಗಳಿಲ್ಲ. ಆಂಧ್ರಪ್ರದೇಶ ಮತ್ತು ತಮಿಳು ನಾಡಿನ ಕೆಲವು ಇತಿಹಾಸಕಾರರಾದ ಎನ್. ವೆಂಕಟರಮಣಯ್ಯ ಮತ್ತು ಕೆ.ಎ. ನೀಲಕಂಠಶಾಸ್ತ್ರಿ ಮತ್ತಿತರರ ಪ್ರಕಾರ ವಿಜಯನಗರದ ಸ್ಥಾಪಕರಾದ ಹರಿಹರ ಮತ್ತು ಬುಕ್ಕರು ವಾರಂಗಲ್ಲಿನ ಕಾಕತೀಯರ ಆಸ್ಥಾನದಲ್ಲಿದ್ದವರು. ವಾರಂಗಲ್ಲು ದೆಹಲಿ ಸುಲ್ತಾನರ ವಶವಾದಾಗ ಈ ಇಬ್ಬರು ಸೋದರರನ್ನು ದೆಹಲಿಗೆ ಕರೆದೊಯ್ದು ಅಲ್ಲಿ ಇಸ್ಲಾಂಗೆ ಮತಾಂತರಿಸಿ ನಂತರ ದಕ್ಷಿಣಕ್ಕೆ ಕಳುಹಿಸಲಾಯಿತು. ಇಲ್ಲಿ ಇವರು ವಿದ್ಯಾರಣ್ಯರನ್ನು ಭೇಟಿಯಾದಾಗ ಮತ್ತೆ ಹಿಂದೂ ಧರ್ಮಕ್ಕೆ ಮತಾಂತರಿಸಿ, ಹಿಂದೂ ಧರ್ಮವನ್ನು ರಕ್ಷಣೆ ಮಾಡುವುದಕ್ಕೋಸ್ಕರ ಕ್ರಿ.ಶ. ೧೩೩೬ ರಲ್ಲಿ ಹೊಸ ರಾಜ್ಯವನ್ನು 'ವಿಜಯನಗರ'ದ ಹೆಸರಿನಲ್ಲಿ ಕಟ್ಟಲಾಯಿತು.

ಆದರೆ ಈ ವಾದವನ್ನು ಕರ್ನಾಟಕದ ಇತಿಹಾಸಕಾರರಾದ ಫಾದರ್ ಹೆರಾಸ್, ಬಿ.ಎ. ಸಾಲೆತೊರೆ, ಪಿ.ಬಿ. ದೇಸಾಯಿ ಮತ್ತಿತರರ ಪ್ರಕಾರ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಕರ್ನಾಟಕದವರಾಗಿದ್ದು, ಹೊಯ್ಸಳರ ಸಂಬಂಧಿಗಳಾಗಿದ್ದರು. ಮಲ್ಲಿಕಾಫೂರನ ದಂಡೆಯಾತ್ರೆಯ ನಂತರ ಹೊಯ್ಸಳ ಬಲ್ಲಾಳನು ದಕ್ಷಿಣ ಭಾರತದ ರಾಜರನ್ನೆಲ್ಲಾ ಒಗ್ಗೂಡಿಸಿ ಹಿಂದೂ ಧರ್ಮ ಮತ್ತು ಸಂಸ್ಕೃತಿಗಳ ರಕ್ಷಣೆಗೋಸ್ಕರ ತನ್ನ ರಾಜಧಾನಿಗಳನ್ನು ಬದಲಾಯಿಸು ವುದರ ಜೊತೆಗೆ ಅವುಗಳನ್ನು ಬಲಪಡಿಸತೊಡಗಿದನು. ಇವನು ಉತ್ತರದಲ್ಲಿ ತುಂಗಭದ್ರಾ ನದಿಯ ದಂಡೆಯಲ್ಲಿ ಕೋಟೆಯನ್ನು ಕಟ್ಟಿ ಅದನ್ನು ಹರಿಹರ ಮತ್ತು ಬುಕ್ಕನ ಅಧೀನಕ್ಕೊಳ ಪಡಿಸಿದನು. ಅಂದಿನಿಂದ ಅವರು ಹೊಯ್ಸಳರ ಮಾಂಡಲೀಕರಾಗಿಯೂ, ನಂತರ ವೈವಾಹಿಕ ಸಂಬಂಧಗಳಿಂದ ರಕ್ತ ಸಂಬಂಧಿಗಳಾದರು. ಮೂರನೆ ಬಲ್ಲಾಳನು ಕ್ರಿ.ಶ. ೧೩೪೨ ರ ಯುದ್ಧ ದಲ್ಲಿ ಸತ್ತಾಗ ಅವನ ಮಗ ವಿರೂಪಾಕ್ಷ ಬಲ್ಲಾಳನು ಕೇವಲ ನಾಲ್ಕು ವರ್ಷ ಆಡಳಿತ ನಡೆಸಿ ಅವನು ಸಹ ಕ್ರಿ.ಶ. ೧೩೪೬ ರಲ್ಲಿ ತೀರಿಹೋದನು. ಹೀಗೆ ಹೊಯ್ಸಳ ವಂಶವು ಕೊನೆಗೊಂಡ ನಂತರವೇ ಹರಿಹರ ಮತ್ತು ಬುಕ್ಕರು ಹಂಪೆಯನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡು ವಿದ್ಯಾರಣ್ಯರ ಮಾರ್ಗದರ್ಶನದಲ್ಲಿ ಸ್ವತಂತ್ರರಾಜರಾಗಿ ಆಳಲಾರಂಭಿಸಿದರು.

ಈ ವಾದವನ್ನು ಇದುವರೆಗೆ ನಂಬದಿದ್ದ ವಿದೇಶಿ ಇತಿಹಾಸಕಾರರು ಈಗ ಒಪ್ಪಿಕೊಂಡು ಪುಷ್ಟೀಕರಿಸುತ್ತಿದ್ದಾರೆ. ಈ ವಾದಗಳೇನಿದ್ದರೂ ವಿಜಯನಗರ ಸಾಮ್ರಾಜ್ಯವು ಕೆಲವು ಬದಲಾವಣೆ ಮತ್ತು ಬೆಳವಣಿಗೆಗಳ ಕಾರಣಗಳಿಂದ ಅಸ್ತಿತ್ವಕ್ಕೆ ಬಂದಿತು. ಅವುಗಳೆಂದರೆ, ಹದಿನಾಲ್ಕನೆಯ ಶತಮಾನದ ಆದಿಭಾಗದಲ್ಲಿ ದಕ್ಷಿಣ ಭಾರತವನ್ನು ಆಳುತ್ತಿದ್ದ ಸೇವುಣರನ್ನು, ಕಾಕತೀಯರನ್ನು, ಹೊಯ್ಸಳರನ್ನು ಮತ್ತು ಪಾಂಡ್ಯರನ್ನು ದೆಹಲಿ ಸುಲ್ತಾನರು ಸೋಲಿಸಿ ತಮ್ಮ ಅಧಿಪತ್ಯವನ್ನು ಹೇರಿದಾಗ ಇಲ್ಲಿ ಎರಡು ಸಂಸ್ಕೃತಿ, ಧರ್ಮ ಮತ್ತು ರಾಜಕೀಯ ವ್ಯವಸ್ಥೆಗಳ ನಡುವೆ ಸೆಣಸಾಟ ಉಂಟಾಯಿತು. ಈ ಸೆಣಸಾಟದ ಫಲವೇ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ.

ವಿಜಯನಗರ ಸಾಮ್ರಾಜ್ಯವನ್ನು ನಾಲ್ಕು ವಂಶಗಳಾದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಮನೆತನಗಳು ಕ್ರಿ.ಶ. ೧೩೩೬ ರಿಂದ ೧೫೬೫ ರವರೆಗೆ ಬಹಳ ಯಶಸ್ವಿ ಯಾಗಿ ಆಳಿದವು. ಇವರು ಹಂಪೆಯನ್ನು ತಮ್ಮ ರಾಜಧಾನಿಯನ್ನಾಗಿಯೂ ಮತ್ತು 'ವರಾಹ' ವನ್ನು ತಮ್ಮ ರಾಜಚಿಹ್ನೆ ಅಥವಾ ರಾಜಲಾಂಛನವಾಗಿಯೂ ಇಟ್ಟುಕೊಂಡಿದ್ದರು. ಆದರೆ ಕ್ರಿ.ಶ. ೧೫೬೫ ರ ತಾಳೀಕೋಟೆ ಯುದ್ಧದ ನಂತರ ಅರವೀಡು ವಂಶದವರು ವಿಜಯನಗರ ಸಾಮ್ರಾಜ್ಯದ ಹಿರಿಮೆಯನ್ನು ಕಾಪಾಡುವಲ್ಲಿ ವಿಫಲರಾದರು.

ವಿಜಯನಗರ ಸಾಮ್ರಾಜ್ಯವನ್ನು ಮೊದಲು ಸ್ಥಾಪಿಸಿದ ಮತ್ತು ಆಳಿದವರೆಂದರೆ ಸಂಗಮ ವಂಶಸ್ಥರು. ಸಂಗಮನ ಮಕ್ಕಳಾದ ಹರಿಹರ, ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪ ಪ್ರಾರಂಭದ ದಿನಗಳಲ್ಲಿ ರಾಜ್ಯ ಕಟ್ಟುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಇವರೈವರಲ್ಲಿ ಮೊದಲ ಇಬ್ಬರು ಸೋದರರು ಸ್ವತಂತ್ರರಾಗಿ ಆಳಿದರೆ ಉಳಿದ ಮೂವರು ಅಧಿಕಾರಿಗಳಾಗಿ

ಕಾರ್ಯ ನಿರ್ವಹಿಸಿದ್ದರು. ಶೃಂಗೇರಿಯ ೧೩೪೬ ರ ಶಾಸನದ ಪ್ರಕಾರ ಹರಿಹರನು ತಾನು ಅಧಿಕಾರಕ್ಕೆ ಬಂದ ಕೂಡಲೇ ತನ್ನ ಪರಿವಾರದವರೊಡನೆ ಶೃಂಗೇರಿಗೆ ಭೇಟಿ ನೀಡಿ, ಅಲ್ಲಿಯ ಭಾರತೀತೀರ್ಥ ಸ್ವಾಮಿಜಿಗೆ ಒಂಭತ್ತು ಹಳ್ಳಿಗಳನ್ನು ದಾನಮಾಡಿದನು.

**ಒಂದನೆ ಹರಿಹರ** (೧೩೪೬-೧೩೫೬)

ಇವನು ಅಧಿಕಾರಕ್ಕೆ ಬಂದಾಗ ಹಲವು ಸಮಸ್ಯೆಗಳನ್ನು ಎದುರಿಸಬೇಕಾಯಿತು. ಮೊದಲಿಗೆ ಇವನು ಹೊಯ್ಸಳರ ಪ್ರಾಂತ್ಯಗಳನ್ನು ತನ್ನ ನೇರ ಆಡಳಿತಕ್ಕೊಳಪಡಿಸಿದ. ನಂತರ ಇದೇ ಸಮಯದಲ್ಲಿ ಅಸ್ತಿತ್ವಕ್ಕೆ ಬಂದ ಬಹಮನಿ ಸುಲ್ತಾನರ ದಾಳಿಗಳನ್ನು ಯಶಸ್ವಿಯಾಗಿ ಎದುರಿಸಿ ವಿಜಯನಗರಕ್ಕೆ ರಕ್ಷಣೆ ನೀಡುವಲ್ಲಿ ಸಫಲನಾದನು. ಇವನು ಯಾವುದೇ ಚಕ್ರವರ್ತಿಯ ಬಿರುದುಗಳನ್ನು ಧರಿಸದೇ ಮಹಾ ಮಂಡಳೇಶ್ವರನೆಂದೇ ಕರೆದುಕೊಂಡಿದ್ದನು. ಇವನಿಗೆ ಮಕ್ಕಳಿಲ್ಲದ ಕಾರಣ ಅವನ ತಮ್ಮ ಒಂದನೆ ಬುಕ್ಕನು ಅಧಿಕಾರಕ್ಕೆ ಬರಬೇಕಾಯಿತು.

**ಒಂದನೆ ಬುಕ್ಕ** (೧೩೫೬-೧೩೭೭)

ಇವನು ಯುವರಾಜನಾಗಿದ್ದಾಗ ತನ್ನ ಅಣ್ಣನಿಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಸಹಕಾರ ನೀಡಿದ್ದನು. ರಾಬರ್ಟ್ ಸಿವೆಲ್ಲರ ಪ್ರಕಾರ ಇವನು ದಕ್ಷಿಣ ಭಾರತದ ಬಹುತೇಕ ಭಾಗಗಳನ್ನು ತನ್ನ ಆಡಳಿತಕ್ಕೊಳಪಡಿಸಿಕೊಂಡಿದ್ದ. ಬಹಮನಿ ಸುಲ್ತಾನರೊಡನೆ ಎರಡು ಬಾರಿ ಯುದ್ಧ ಮಾಡಿ ತನ್ನ ರಾಜ್ಯವನ್ನು ಶತ್ರುಗಳಿಂದ ಕಾಪಾಡಿದ. ಇವನ ಕಾಲದ ಅತ್ಯಂತ ಪ್ರಮುಖ ಘಟನೆಯೆಂದರೆ ಮಧರೆಯ ಸುಲ್ತಾನಗಿರಿಯನ್ನು ಇವನ ಮಗನಾದ ಕುಮಾರ ಕಂಪಣ್ಣನು ದಕ್ಷಿಣ ದಂಡೆಯಾತ್ರೆ ಕೈಗೊಂಡು ಕಿತ್ತೊಗೆದದ್ದು. ಈ ದಂಡೆಯಾತ್ರೆಯಲ್ಲಿ ಕಂಪಣ್ಣನು ಶಂಭುವರಾಯನನ್ನೇ ಸೋಲಿಸಿ ಕೊನೆಯಲ್ಲಿ ಮಧುರೆಯ ಸುಲ್ತಾನನನ್ನು ಯುದ್ಧದಲ್ಲಿ ಕೊಂದನು. ಇದರ ಪರಿಣಾಮವಾಗಿ ಇಡೀ ದಕ್ಷಿಣ ಭಾರತವು ಮುಸ್ಲಿಂ ಸುಲ್ತಾನರ ಆಳ್ವಿಕೆಯಿಂದ ಬಿಡುಗಡೆ ಹೊಂದಿ ವಿಜಯನಗರ ಸಾಮ್ರಾಜ್ಯದ ಅಧೀನಕ್ಕೊಳಪಟ್ಟಿತು. ಈ ಘಟನೆಯನ್ನು ಕುಮಾರ ಕಂಪಣ್ಣನ ಹೆಂಡತಿ ಗಂಗಾದೇವಿಯು ತನ್ನ ಸಂಸ್ಕೃತ ಕಾವ್ಯ *ಮಧುರಾ ವಿಜಯಂ* ನಲ್ಲಿ ಸುಂದರವಾಗಿ ವರ್ಣಿಸಿದ್ದಾಳೆ. ಇವನ ಕಾಲದ ಮತ್ತೊಂದು ಪ್ರಮುಖ ಘಟನೆಯೆಂದರೆ ಚೀನಾ ದೇಶದ ಮಿಂಗ್ ಸಂತತಿಯ ಆಸ್ಥಾನಕ್ಕೆ ಬುಕ್ಕರಾಯನು ತನ್ನ ರಾಯಭಾರಿಯನ್ನು ಕ್ರಿ.ಶ. ೧೩೭೪ ರಲ್ಲಿ ಕಳಿಸಿಕೊಟ್ಟದ್ದು.

**ಇಮ್ಮಡಿ ಹರಿಹರ** (೧೩೭೭-೧೪೦೪)

ಇವನು ಬುಕ್ಕನ ಎರಡನೆ ಮಗನಾಗಿದ್ದು, ಇವನ ಆಳ್ವಿಕೆಯು ಸಂಗಮ ವಂಶದಲ್ಲಿಯೇ ಅತ್ಯಂತ ವಿಶೇಷವಾಗಿದೆ. ಪ್ರಪ್ರಥಮ ಬಾರಿಗೆ ಸಾಮ್ರಾಟರ ಬಿರುದುಗಳನ್ನು ಧರಿಸಿ ತನ್ನ ರಾಜಕೀಯ ಪ್ರತಿಷ್ಠೆಗಳನ್ನು ಹೆಚ್ಚಿಸಿಕೊಂಡನು. ಆಡಳಿತದ ಲೋಪ-ದೋಷಗಳನ್ನು ಸರಿಪಡಿಸಲು ಇವನೇ ಪ್ರಾಂತೀಯ ಆಡಳಿತವನ್ನು ತನ್ನ ಕೈಗೆ ನೇರವಾಗಿ ತೆಗೆದುಕೊಂಡು ತನ್ನ ಮಕ್ಕಳನ್ನು ಅಧಿಕಾರಿಗಳನ್ನಾಗಿ ನೇಮಿಸಿದನು. ನೆಲ್ಲೂರು ಜಿಲ್ಲೆಯ ಕರ್ನೂಲಿನ ಮೇಲೆ

ದಂಡೆತ್ತಿ ಹೋಗಿ ಕೊಂಡವೀಡನ್ನು ವಶಪಡಿಸಿಕೊಂಡನು. ಇವನ ಮಗ ಎರಡನೆಯ ಬುಕ್ಕನು ರಂಗಾಲ ಕೋಟೆಯನ್ನು ರಾಜಕೊಂಡದ ವೇಮಲರಿಂದ ವಶಪಡಿಸಿಕೊಂಡನು. ತೀರ ಪ್ರದೇಶಗಳಲ್ಲಿ ಮುಜಾಹಿದ್‌ನಿಂದ ಗೋವಾ, ಚೌಲ್ ಮತ್ತು ದಾಬೋಲ್ ಬಂದರುಗಳನ್ನು ವಶಪಡಿಸಿಕೊಂಡನು. ಇದರ ಪರಿಣಾಮವಾಗಿ ಉತ್ತರದಲ್ಲಿ ಕೃಷ್ಣಾನದಿಯು ರಾಜ್ಯದ ಗಡಿಯಾಯಿತು. ಕೊನೆಯ ಕಾಲದಲ್ಲಿ ಇವನು ಬಹಮನಿ ಸುಲ್ತಾನ ಫಿರೋಜ್‌ಷಾನೊಡನೆ ಸೋತಾಗ ಯುದ್ಧದ ವೆಚ್ಚವನ್ನು ಕೊಟ್ಟು ತನ್ನ ನೆಲವನ್ನು ರಕ್ಷಿಸಿಕೊಂಡನು.

**ಒಂದನೆ ದೇವರಾಯ** (೧೪೦೬-೧೪೨೨)

ಇವನು ಫಿರೋಜ್‌ಷಾನಿಂದ ಸೋತು ದುಸ್ತರವಾದ ಒಪ್ಪಂದಕ್ಕೆ ಸಹಿ ಮಾಡಿ ಬಂಡಿಪುರದ ಕೋಟೆಯನ್ನು ಅವನಿಗೆ ಬಿಟ್ಟುಕೊಟ್ಟನು. ಇದೇ ಸಮಯದಲ್ಲಿ ಕೊಂಡವೀಡಿನ ರೆಡ್ಡಿಯವರು ಉದಯಗಿರಿಯನ್ನು ವಶಪಡಿಸಿಕೊಂಡರು. ಈ ಸಂದರ್ಭದಲ್ಲಿ ದೇವರಾಯನು ರಾಜ ಮಂಡ್ರಿಯ ತೆಲುಗು-ಚೋಳ ದೊರೆಯಾದ ಕಟಾಯ ವೇಮನೊಡನೆ ಸುಲ್ತಾನನ ವಿರುದ್ಧ ಸ್ನೇಹ ಬೆಳೆಸಿದನು. ಆದರೂ ಬಹಮನಿ ಸುಲ್ತಾನನಿಂದ ಸೋಲನ್ನೇ ಅನುಭವಿಸಿದನು. ಇದರಿಂದ ಧೈರ್ಯಗುಂದದ ದೇವರಾಯನು ನೆಲಗೊಂಡ, ಹಾನಗಲ್ ಕೋಟೆಗೆ ಮುತ್ತಿಗೆ ಹಾಕಿ ಸುಲ್ತಾನನ ಸೈನ್ಯವನ್ನು ಹೀನಾಯವಾಗಿ ಸೋಲಿಸಿದನು. ಇದರ ಪರಿಣಾಮವಾಗಿ ರಾಜಮಂಡ್ರಿಯ ಕೆಲವು ಭಾಗಗಳನ್ನು ದೇವರಾಯನು ವಶಪಡಿಸಿಕೊಂಡನು. ಇವನ ಕಾಲದಲ್ಲಿಯೆ ಇಟಲಿಯ ಪ್ರವಾಸಿ ನಿಕೊಲೋಕೊಂಟಿಯು ವಿಜಯನಗರಕ್ಕೆ ಭೇಟಿ ನೀಡಿದ್ದು. ಇವನ ಸಾವಿನ ನಂತರ ಉತ್ತರಾಧಿಕಾರಕ್ಕಾಗಿ ಅಂತರಕಲಹ ಉಂಟಾಗಿ ಅಂತಿಮವಾಗಿ ಎರಡನೆಯ ದೇವರಾಯನು ಅಧಿಕಾರಕ್ಕೆ ಬಂದ.

**ಎರಡನೆ ದೇವರಾಯ** (೧೪೨೬-೧೪೪೬)

ಇವನ ಆಳ್ವಿಕೆಯು ವಿಜಯನಗರದ ಇತಿಹಾಸದಲ್ಲಿ ಪ್ರಮುಖ ಮೈಲಿಗಲ್ಲಾಗಿದೆ. ಅಧಿಕಾರಕ್ಕೆ ಬಂದ ಕೆಲವೇ ವರ್ಷಗಳಲ್ಲಿ ರಾಜಮಂಡ್ರಿಯ ರೆಡ್ಡಿಯವರೊಡಗೂಡಿ ಒರಿಸ್ಸಾದ ಗಜಪತಿ ಕಪಿಲೇಂದ್ರನನ್ನು ಸೋಲಿಸಿದನು. ನಂತರ ಕೊಂಡವೀಡನ್ನು ಸಹ ವಶಪಡಿಸಿ ಕೊಂಡನು. ದಕ್ಷಿಣದಲ್ಲಿ ಕಲ್ಲಿಕೋಟೆಯ ಜಾಮೋರಿನ್ ಹೊರತುಪಡಿಸಿ ಕ್ವಿಲಾನ್ ಮತ್ತಿತರ ರಾಜರನ್ನು ತನ್ನ ಅಧೀನಕ್ಕೊಳಪಡಿಸಿದನು. ಇದರಿಂದಾಗಿ ಇವನ ಆಳ್ವಿಕೆಯು ಪಶ್ಚಿಮದಲ್ಲಿ ಅರಬ್ಬಿ ಸಮುದ್ರದಿಂದ ಪೂರ್ವದಲ್ಲಿ ಬಂಗಾಳ ಕೊಲ್ಲಿಯವರೆಗೆ ಹಬ್ಬಿತ್ತು. ಬಹಮನಿಯವ ರೊಡನೆ ಎರಡು ಬಾರಿ ಯುದ್ಧ ಮಾಡಿ ಅಪಾರ ನಷ್ಟ ಅನುಭವಿಸಿದನು. ಈ ಸೋಲಿನ ನಂತರ ತನ್ನ ಸೈನ್ಯವನ್ನು ಪುನರ್ರಚಿಸಲು ಸೂಕ್ತ ಕ್ರಮ ಕೈಗೊಂಡನು. ತನ್ನ ಸೈನ್ಯದಲ್ಲಿ ಮುಸ್ಲಿಮರಿಗೆ ಆದ್ಯತೆ ನೀಡಿ ಅವರಿಗೆ ಮಸೀದಿಯನ್ನು ಕಟ್ಟಿಸಿ, ಕುರಾನನ್ನು ತನ್ನ ಸಿಂಹಾಸನದ ಪಕ್ಕದಲ್ಲಿರಿಸಿಕೊಂಡನು. ಇವನ ನಂತರ ಸಂಗಮವಂಶವು ನಶಿಸತೊಡಗಿತು.

## ಸಾಳುವ ವಂಶ

**ನರಸಿಂಹ** (೧೪೮೬-೧೪೯೧)

ಇವನು ಸಾಳುವ ವಂಶದ ಸ್ಥಾಪಕ. ಸಂಗಮ ದೊರೆಗಳ ದೌರ್ಬಲ್ಯದ ಲಾಭ ಪಡೆದು ವಿಜಯನಗರದ ಇತಿಹಾಸದಲ್ಲಿ ಪ್ರಪ್ರಥಮವಾಗಿ ಅಧಿಕಾರದ ಅಪಹರಣ ಮಾಡಿದವನು. ಅಧಿಕಾರಕ್ಕೆ ಬರುವ ಮೊದಲು ಚಂದ್ರಗಿರಿಯ ಅಧಿಕಾರಿಯಾಗಿದ್ದು, ಅಧಿಕಾರಕ್ಕೆ ಬಂದ ಕೂಡಲೇ ಗಜಪತಿಯನ್ನು ಸೋಲಿಸಿ ಉದಯಗಿರಿಯನ್ನು ಆಕ್ರಮಿಸಿಕೊಂಡನು. ತಮಿಳುನಾಡಿನಲ್ಲಿ ಕೆಲವು ದಂಗೆಗಳನ್ನು ಅಡಗಿಸಿದನು. ಆದರೆ ದಕ್ಷಿಣದಲ್ಲಿ ಉಮ್ಮತ್ತೂರಿನ ಮತ್ತು ಮೈಸೂರಿನ ಅರಸರು ಇವನ ಅಧಿಕಾರವನ್ನು ಮಾನ್ಯ ಮಾಡಿರಲಿಲ್ಲ. ಗೋವಾ ಬಂದರನ್ನು ಬಹಮನಿಯವರು ವಶಪಡಿಸಿಕೊಂಡಾಗ ವಿಜಯನಗರದ ವ್ಯಾಪಾರಕ್ಕೆ ಅಪಾರ ನಷ್ಟವಾಗತೊಡಗಿತು. ಅದನ್ನು ಸರಿದೂಗಲು ನರಸಿಂಹನು ತುಳು ರಾಜ್ಯವನ್ನು ಗೆದ್ದುಕೊಂಡನು. ಇದಲ್ಲದೆ ಹೊನ್ನಾವರ, ಭಟ್ಕಳ, ಬಾರಕೂರು ಮತ್ತು ಮಂಗಳೂರು ಬಂದರನ್ನು ತನ್ನ ವಶಕ್ಕೆ ತೆಗೆದುಕೊಂಡು ಪಾಶ್ಚಿಮಾತ್ಯ ರಾಷ್ಟ್ರಗಳೊಡನೆ ವ್ಯಾಪಾರ ಸಂಬಂಧವನ್ನು ಪುನರುಜ್ಜೀವನಗೊಳಿಸಿದನು. ನ್ಯೂನಿಜ್‌ನ ಪ್ರಕಾರ ಇವನು ಕುದುರೆಗಳನ್ನು ಓಮೆಜ್ ಮತ್ತು ಏಡನ್‌ಗಳಿಂದ ಆಮದು ಮಾಡಿಕೊಳ್ಳುತ್ತಿದ್ದನು. ಇವನ ಸಾವಿನ ನಂತರ, ಮಕ್ಕಳು ಚಿಕ್ಕವರಿದ್ದ ಕಾರಣ ಮಂತ್ರಿಯಾಗಿದ್ದ ತುಳು ವಂಶದ ನರಸನಾಯಕನನ್ನು ರಾಜಪ್ರತಿನಿಧಿಯನ್ನಾಗಿ ಮಾಡಲಾಯಿತು. ನರಸನಾಯಕನು ಇದರ ಲಾಭ ಪಡೆದು ಕ್ರಮೇಣ ಸರ್ವಾಧಿಕಾರಿಯಾದನು. ನರಸಿಂಹನ ಇಬ್ಬರು ಮಕ್ಕಳು ಸಾವನ್ನಪ್ಪಿದ್ದರಿಂದ ಸಾಳುವ ವಂಶ ಕೊನೆಗೊಂಡು ತುಳುವ ವಂಶ ಅಧಿಕಾರಕ್ಕೆ ಬಂದಿತು.

## ತುಳುವ ವಂಶ

ತುಳುವವಂಶದ ಸ್ಥಾಪಕ ವೀರನರಸಿಂಹ. ಇವನು ಅಧಿಕಾರಕ್ಕೆ ಬಂದಾಗ ಕೆಲವು ಅಧಿಕಾರಿಗಳು ದಂಗೆಯೆದ್ದರು. ಇದಲ್ಲದೆ ವಿಜಯನಗರದ ಶತ್ರುಗಳು ಇದರ ಲಾಭ ಪಡೆದು ಇವನ ರಾಜ್ಯವನ್ನು ಕಬಳಿಸಲಾರಂಭಿಸಿದರು. ಇದನ್ನು ತಡೆಯಲು ಕೆಲವು ಆಡಳಿತಾತ್ಮಕ ಮತ್ತು ಸೈನಿಕ ಸುಧಾರಣೆಗಳನ್ನು ಜಾರಿಗೊಳಿಸಿದರೂ ಏನೂ ಫಲ ನೀಡಲಿಲ್ಲ. ಇವನು ಹಠಾತ್ತನೆ ಸತ್ತಿದ್ದರಿಂದ ಇವನ ಮಲಸೋದರ ಕೃಷ್ಣದೇವರಾಯನು ಅಧಿಕಾರಕ್ಕೆ ಬಂದನು.

### ಕೃಷ್ಣದೇವರಾಯ (೧೫೦೯-೧೫೨೯)

ಇವನು ವಿಜಯನಗರದ ಪ್ರಸಿದ್ಧ ಹಾಗೂ ಬಲಿಷ್ಠ ದೊರೆ. ಅಧಿಕಾರವನ್ನು ವಹಿಸಿಕೊಂಡಾಗ ಆಡಳಿತ ಅಷ್ಟೇನು ಸುಗಮವಾಗಿರಲಿಲ್ಲ. ಇವನು ಅಧಿಕಾರಕ್ಕೆ ಬಂದಾಗ ಬಹಮನಿ ಸಾಮ್ರಾಜ್ಯವು ಐದು ಷಾಹಿ ಮನೆತನಗಳಾಗಿ ಒಡೆದು ಬಿಜಾಪುರದ ಆದಿಲ್‌ಷಾನು ವಿಜಯನಗರದ ಮೇಲೆ ದಾಳಿಗೆ ಸಜ್ಜಾಗಿದ್ದನು. ಇದೇ ಸಮಯದಲ್ಲಿ ಪೋರ್ಚುಗೀಸರು ಪಶ್ಚಿಮ ಕರಾವಳಿಯಲ್ಲಿ ಬೀಡು ಬಿಟ್ಟು ದಕ್ಷಿಣ ಭಾರತದ ದೊರೆಗಳ ಸಹಕಾರಕ್ಕೆ

ಹಾತೊರೆಯುತ್ತಿದ್ದರು. ದಕ್ಷಿಣದಲ್ಲಿ ಉಮ್ಮತ್ತೂರಿನ ಗಂಗರಾಜನು ವಿಜಯನಗರದ ಅಧಿಕಾರವನ್ನು ಧಿಕ್ಕರಿಸುತ್ತಿದ್ದನು. ಇವೆಲ್ಲವನ್ನು ಗಮನಿಸಿದ ಕೃಷ್ಣದೇವರಾಯನು ವಿಜಯನಗರಕ್ಕೆ ಸರಿಯಾದ ರಕ್ಷಣೆ ಕೊಡಲು ನಿರ್ಧರಿಸಿದ.

ಕೃಷ್ಣದೇವರಾಯನು ಅಧಿಕಾರ ವಹಿಸಿಕೊಂಡ ಕೆಲವೇ ವರ್ಷಗಳಲ್ಲಿ ಷಾಹಿ ಸುಲ್ತಾನರು ಒಂದುಗೂಡಿ ಇವನ ಮೇಲೆ ದಂಡೆತ್ತಿ ಬಂದಾಗ ಅವರನ್ನು ಯುದ್ಧದಲ್ಲಿ ಸೋಲಿಸಿ ಹಿಮ್ಮೆಟ್ಟಿಸಿದನು. ಈ ಯುದ್ಧದಲ್ಲಿ ಮಹಮ್ಮದ್‌ಷಾನು ಗಾಯಗೊಂಡು ಪಲಾಯನಗೈದ. ಸೋತ ಸುಲ್ತಾನರ ಸೈನ್ಯವನ್ನು ಹಿಂಬಾಲಿಸಿದ ವಿಜಯನಗರದ ಸೈನ್ಯವು ಅವರನ್ನು ಮತ್ತೆ ಕೋವಿಲಕೊಂಡದ ಬಳಿ ಸೋಲಿಸಿ, ಬಿಜಾಪುರದ ಯೂಸುಫ್ ಆದಿಲ್‌ಖಾನ್‌ನನ್ನೂ ಕೊಲ್ಲಲಾಯಿತು. ಈ ವಿಜಯದ ನಂತರ ಕೃಷ್ಣದೇವರಾಯನು ಕೃಷ್ಣಾ, ತುಂಗಭದ್ರಾ, ದೋ-ಅಬ್ ಪ್ರದೇಶಕ್ಕೆ ಧಾವಿಸಿ ರಾಯಚೂರನ್ನು ವಶಪಡಿಸಿಕೊಂಡನು. ನಂತರ ಗುಲ್ಬರ್ಗವನ್ನು ವಶಪಡಿಸಿಕೊಂಡು ಸೆರೆಮನೆಯಲ್ಲಿದ್ದ ಸುಲ್ತಾನ ಮಹಮ್ಮದ್‌ನನ್ನು ಬಿಡಿಸಿ ಬಹಮನಿ ಸಿಂಹಾಸನದಲ್ಲಿ ಕೂರಿಸಿದ. ಇದಕ್ಕಾಗಿ ಇವನಿಗೆ 'ಯವನರಾಜ್ಯ ಸ್ಥಾಪನಾಚಾರ್ಯ' ಎಂಬ ಬಿರುದು ಬಂದಿತು.

ಪಶ್ಚಿಮ ಕರಾವಳಿಯಲ್ಲಿದ್ದ ಪೋರ್ಚುಗೀಸ್ ಗೌರ್ನರ್ ಅಲ್ಬುಕರ್ಕ್‌ನು ಕೃಷ್ಣದೇವರಾಯನು ಪೋರ್ಚುಗೀಸರ ನೆಲೆಗಳನ್ನು ಸ್ಥಾಪಿಸಲು ನೆರವು ನೀಡಿದರೆ, ಅವನಿಗೆ ಕುದುರೆಗಳನ್ನು ನಿರಂತರವಾಗಿ ಪೂರೈಸುವುದಾಗಿ ಭರವಸೆ ನೀಡಿದ್ದ. ಆದರೆ ಇದಕ್ಕೆ ಕೃಷ್ಣದೇವರಾಯನು ನೇರವಾಗಿ ಒಪ್ಪಿಕೊಂಡಿರಲಿಲ್ಲ. ಏಕೆಂದರೆ, ಗೋವಾ ಬಂದರು ಪಟ್ಟಣವು ವಿಜಯನಗರದ ಅಂತರರಾಷ್ಟ್ರೀಯ ವ್ಯಾಪಾರಕ್ಕೆ ಅತ್ಯವಶ್ಯಕವಾಗಿದ್ದುದರಿಂದ ಹಾಗೂ ಅದು ಸುಲ್ತಾನರ ಅಧೀನದಲ್ಲಿದ್ದುದರಿಂದ ಅಲ್ಲದೆ ಅದನ್ನು ತನ್ನ ವಶಕ್ಕೆ ತೆಗೆದುಕೊಳ್ಳಲೇ ಬೇಕಾಗಿತ್ತು. ಆದರೆ ಅಲ್ಬುಕರ್ಕನು ಕ್ರಿ.ಶ. ೧೫೧೦ ರಲ್ಲಿ ಗೋವಾವನ್ನು ಮುತ್ತಿಗೆ ಹಾಕಿ ಸುಲ್ತಾನರಿಂದ ವಶಪಡಿಸಿಕೊಂಡನು. ಇದರಿಂದ ಕೃಷ್ಣದೇವರಾಯನಿಗೆ ಅಸಮಾಧಾನವಾದರೂ ತನ್ನ ಶತ್ರುವಿನ ಹಿಡಿತದಿಂದ ಕೈತಪ್ಪಿದ್ದು ಸಮಾಧಾನ ನೀಡಿತ್ತು. ಅಂದಿನಿಂದ ಪೋರ್ಚುಗೀಸರ ಮತ್ತು ವಿಜಯನಗರದ ನಡುವಣ ಸಂಬಂಧಗಳು ಉತ್ತಮಗೊಳ್ಳಲಾರಂಭವಾದವು.

ದಕ್ಷಿಣದಲ್ಲಿ ತನ್ನ ಅಧಿಕಾರವನ್ನು ಧಿಕ್ಕರಿಸುತ್ತಿದ್ದ ಉಮ್ಮತ್ತೂರಿನ ಗಂಗರಾಜನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸದೆಬಡಿದು ಶ್ರೀರಂಗಪಟ್ಟಣ ಮತ್ತು ಶಿವನಸಮುದ್ರವನ್ನು ತನ್ನ ಹತೋಟಿಗೆ ತೆಗೆದುಕೊಂಡನು. ಈ ವಿಜಯದ ನಂತರ ಗಜಪತಿ ಪ್ರತಾಪರುದ್ರದೇವನನ್ನು ಸೋಲಿಸಿ ಪೆನುಕೊಂಡ, ಉದಯಗಿರಿ, ಕೊಂಡವೀಡು, ವಿಜಯವಾಡ, ಕೊಂಡಪಲ್ಲಿ ಮತ್ತು ರಾಜಮಂಡ್ರಿಗಳನ್ನು ವಶಪಡಿಸಿಕೊಂಡನು. ಕೃಷ್ಣದೇವರಾಯನ ಸೈನ್ಯವು ಒರಿಸ್ಸಾದ ರಾಜಧಾನಿ ಕಟಕ್‌ನ್ನು ಸಮೀಪಿಸಿದಾಗ ಪ್ರತಾಪರುದ್ರನು ತನ್ನ ಮಗಳಾದ ಜಗನ್ಮೋಹಿನಿಯನ್ನು ಕೊಟ್ಟು ಇವನಿಗೆ ವಿವಾಹ ಮಾಡಿ ವೈವಾಹಿಕ ಸಂಬಂಧ ಬೆಳೆಸಿದನು. ಇದರ ನಂತರ ಕೃಷ್ಣಾನದಿಯ

ಉತ್ತರಭಾಗದಲ್ಲಿ ಗೆದ್ದಂಥ ಪ್ರದೇಶಗಳನ್ನು ಪ್ರತಾಪರುದ್ರನಿಗೆ ವಾಪಸ್ಸು ಮಾಡಿದನು. ಗೊಲ್ಕೊಂಡದ ಸುಲ್ತಾನನು ಪ್ರತಾಪರುದ್ರನ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡನು. ಈ ವಿಜಯದ ಗುಂಗಿನಲ್ಲಿ ಸುಲ್ತಾನನು ವಿಜಯನಗರದ ಮೇಲೆ ದಂಡೆತ್ತಿ ಬಂದಾಗ ಸಾಳುವ ತಿಮ್ಮನು ಅವನನ್ನು ಸದೆಬಡಿದು ಹಿಮ್ಮೆಟ್ಟಿಸಿದನು.

ಕೃಷ್ಣದೇವರಾಯನು ಒರಿಸ್ಸಾದ ಮೇಲೆ ತನ್ನ ಗಮನ ಕೇಂದ್ರೀಕರಿಸಿದ್ದಾಗ ಬಿಜಾಪುರದ ಇಸ್ಮಾಯಿಲ್ ಆದಿಲ್‌ಷಾನು ರಾಯಚೂರನ್ನು ವಶಪಡಿಸಿಕೊಂಡನು. ಇದು ಗೊತ್ತಾದಾಗ ರಾಯಚೂರನ್ನು ಮುತ್ತಿಗೆ ಹಾಕಿ ಸುಲ್ತಾನನ್ನು ಸೋಲಿಸಿ ಅದನ್ನು ವಶಪಡಿಸಿಕೊಂಡನು. ಇದರ ನಂತರ ಗುಲ್ಬರ್ಗಾವನ್ನು ವಶಪಡಿಸಿಕೊಂಡು, ಬಂಧಿತನಾಗಿದ್ದ ಬಹಮನಿ ರಾಜಕುಮಾರನನ್ನು ಅಲ್ಲಿಯ ಸುಲ್ತಾನನ್ನಾಗಿ ನೇಮಕ ಮಾಡಿದ. ಈ ರೀತಿ ಕೃಷ್ಣದೇವ ರಾಯನು ತನ್ನ ಎಲ್ಲಾ ದಂಡಯಾತ್ರೆಗಳಲ್ಲಿ ವಿಜಯಗೈದು ವಿಜಯನಗರ ಸಾಮ್ರಾಜ್ಯದ ಎಲ್ಲೆಗಳನ್ನು ವಿಸ್ತರಿಸುವುದರ ಜೊತೆಗೆ ಅದಕ್ಕೆ ದಕ್ಷತೆ ಮತ್ತು ದೃಢತೆಯನ್ನು ನೀಡುವಲ್ಲಿ ಯಶಸ್ವಿಯಾಗಿದ್ದನು.

ಕೃಷ್ಣದೇವರಾಯನು ಒಬ್ಬ ಯಶಸ್ವಿ ಯೋಧನಾಗಿರುವುದರ ಜೊತೆಗೆ ಒಬ್ಬ ಉತ್ತಮ ಆಡಳಿತಗಾರ, ಕಲಾ ಪೋಷಕ ಮತ್ತು ಸಾಹಿತ್ಯಾಭಿಮಾನಿ. ಇವನು ಸ್ವತಃ ಕವಿಯಾಗಿದ್ದು ತೆಲುಗಿನಲ್ಲಿ *ಆಮುಕ್ತಮಾಲ್ಯದ* ವನ್ನು ಮತ್ತು ಸಂಸ್ಕೃತದಲ್ಲಿ *ಜಾಂಬವತಿ ಪರಿಣಯ* ವನ್ನು ರಚಿಸಿದ. ಇದರಲ್ಲಿರುವ ನೀತಿಗಳಂತೆ ತನ್ನ ಆಡಳಿತವನ್ನು ನಿರ್ವಹಿಸಿದನು. ಇವನ ಕಾಲದಲ್ಲಿ ಭೇಟಿ ನೀಡಿದ್ದ ವಿದೇಶಿ ಯಾತ್ರಿಕರಾದ ಡೊಮಿಂಗೋ ಪಾಯಸ್ ಮತ್ತು ನ್ಯೂನಿಜ್‌ರು ಇವನ ಆಡಳಿತದ ಸಾಮರ್ಥ್ಯ, ವ್ಯಾಪಾರ, ಕೃಷಿ ಮತ್ತು ನೀರಾವರಿಗೆ ನೀಡುತ್ತಿದ್ದ ಪ್ರೋತ್ಸಾಹಗಳನ್ನು ಕುರಿತು ಮುಕ್ತವಾಗಿ ಹೊಗಳಿದ್ದಾರೆ. ಇವನು ಪೋರ್ಚುಗೀಸರೊಡನೆ ಉತ್ತಮ ರಾಜತಾಂತ್ರಿಕ ಮತ್ತು ವ್ಯಾಪಾರ ಸಂಬಂಧಗಳನ್ನು ಹೊಂದಿದ್ದನು. ಇವನ ಆಳ್ವಿಕೆಯಲ್ಲಿ ಹಲವಾರು ದೇವಾಲಯಗಳು ಕಟ್ಟಲ್ಪಟ್ಟವು. ಅಲ್ಲದೆ ಜೀರ್ಣೋದ್ಧಾರ ಗೊಂಡವು. ಅವುಗಳಲ್ಲಿ ಪ್ರಮುಖವಾದವು ಕೃಷ್ಣಸ್ವಾಮಿ, ವಿಠ್ಠಲಸ್ವಾಮಿ, ವಿರೂಪಾಕ್ಷ ದೇವಾಲಯಗಳು. ಇವನು ತನ್ನ ತಾಯಿ ನಾಗಲಾದೇವಿಯ ಹೆಸರಲ್ಲಿ ನಾಗಲಾಪುರ ಎಂಬ 'ಹೊಸಪಟ್ಟಣ' (ಹೊಸಪೇಟೆ)ವನ್ನು ಕಟ್ಟಿಸಿದನು. ಇವನ ಆಳ್ವಿಕೆಯ ಕಾಲದಲ್ಲಿ ವಿಜಯ ನಗರವು ತನ್ನ ಅತ್ಯುನ್ನತ ಮಟ್ಟ ತಲುಪಿತು. ಇವನ ಸಾವಿನೊಂದಿಗೆ (೧೫೨೯) ವಿಜಯನಗರ ಸಾಮ್ರಾಜ್ಯದ ವೈಭವವು ಅವನತಿ ಹೊಂದಲಾರಂಭಿಸಿತು.

**ಅಚ್ಯುತರಾಯ** (೧೫೩೦-೧೫೪೨)

ಕೃಷ್ಣದೇವರಾಯನ ನಂತರ ಅವನ ಮಲಸೋದರ ಅಚ್ಯುತರಾಯನು ಅಧಿಕಾರಕ್ಕೆ ಬಂದನು. ಆದರೆ ಇವನ ಅಳಿಯ ಅರವೀಡು ರಾಮರಾಯನು ಕೃಷ್ಣದೇವರಾಯನ ಚಿಕ್ಕ ಮಗುವನ್ನು ಪಟ್ಟಕ್ಕೆ ತಂದು ಅಧಿಕಾರದ ಸೂತ್ರವನ್ನು ತಾನೇ ವಹಿಸಿಕೊಳ್ಳುವುದಕ್ಕೆ ಹವಣಿಸುತ್ತಿದ್ದ. ಆದರೆ ಆ ಮಗುವು ತೀರಿಹೋದದ್ದರಿಂದ ಅಚ್ಯುತರಾಯನೇ ರಾಜನಾಗಿ

ಉಳಿಯುವಂತಾಯಿತು. ಆದರೂ ರಾಮರಾಯನು ತನ್ನ ಆಪ್ತರಿಗೆಲ್ಲಾ ಪ್ರಮುಖ ಹುದ್ದೆಗಳನ್ನು ನೀಡಿ ತನ್ನ ಅಧಿಕಾರವನ್ನು ಬಲಪಡಿಸತೊಡಗಿದ. ನಂತರ ಅಚ್ಯುತರಾಯನನ್ನು ಪದಚ್ಯುತಿ ಮಾಡಿ ಆತನನ್ನು ಸೆರೆಯಲ್ಲಿಟ್ಟು ತಾನೇ ರಾಜನಾಗಲು ಪ್ರಯತ್ನಿಸಿದನು. ಇದಕ್ಕೆ ವಿರೋಧವಿದ್ದರಿಂದ ಅಚ್ಯುತರಾಯನ ಸೋದರ ಸದಾಶಿವನನ್ನು ಅಧಿಕಾರಕ್ಕೆ ತರಲಾಯಿತು. ರಾಮರಾಯನ ಗೈರುಹಾಜರಿಯಲ್ಲಿ ಅಚ್ಯುತರಾಯ ಸೆರೆಮನೆಯಿಂದ ಬಿಡುಗಡೆ ಹೊಂದಿ ಮತ್ತೊಮ್ಮೆ ರಾಜನಾದ. ಅಚ್ಯುತರಾಯನ ಆಳ್ವಿಕೆ ಇಂತಹ ಪ್ರಕ್ಷುಬ್ದ ಸ್ಥಿತಿಯಲ್ಲೇ ಕಳೆದುಹೋಯಿತು. ಕೊನೆಯಲ್ಲಿ ವಿಜಯನಗರದ ಆಡಳಿತದ ಚುಕ್ಕಾಣಿಯು ಅರವೀಡು ವಂಶದ ರಾಮರಾಯನ ಕೈಸೇರಿತು. ಅಧಿಕಾರ ಸಿಕ್ಕ ತಕ್ಷಣ ವಿಜಯನಗರದ ಅರಸರಿಗಿದ್ದ ಬಿರುದುಗಳನ್ನೆಲ್ಲಾ ಇವನೂ ಧರಿಸತೊಡಗಿದ. ಇವನ ಅತೀ ಬುದ್ಧಿವಂತಿಕೆಯು ವಿಜಯ ನಗರವನ್ನು ಅವನತಿಯ ಹಾದಿಯತ್ತ ಸಾಗಿಸಿತು. ಬಹಮನಿ ಸುಲ್ತಾನರಲ್ಲಿ ಒಡಕು ಹುಟ್ಟು ಹಾಕಿ ಅವರ ಒಳಜಗಳದಲ್ಲಿ ತಾನು ಸುಖ ಅನುಭವಿಸತೊಡಗಿದನು. ಇದನ್ನರಿತ ಸುಲ್ತಾನರು ಒಳಗೊಳಗೆ ಒಗ್ಗಟ್ಟಾಗತೊಡಗಿದರು. ಇವೆಲ್ಲದರ ಪರಿಣಾಮವಾಗಿ ವಿಜಯನಗರ ಮತ್ತು ಷಾಹಿ ರಾಜ್ಯಗಳ ನಡುವೆ ಕ್ರಿ.ಶ. ೧೫೬೫ ರಲ್ಲಿ ಭೀಕರ ಯುದ್ಧ ನಡೆಯಿತು.

### ತಾಳಿಕೋಟೆ ಯುದ್ಧ

ಕ್ರಿ.ಶ. ೧೫೬೫ ರಲ್ಲಿ ನಡೆದ ಈ ಯುದ್ಧವನ್ನು ಮೂರು ಹೆಸರುಗಳಿಂದ ಕರೆಯಲಾಗಿದೆ. ಅವುಗಳೆಂದರೆ ತಾಳಿಕೋಟೆ, ರಕ್ಕಸ-ತಂಗಡಿ ಮತ್ತು ಕೃಷ್ಣಾಬನ್ನಿಹಟ್ಟಿ. ಈ ಯುದ್ಧವನ್ನು ವಿಜಯನಗರ ಸಾಮ್ರಾಜ್ಯದ ಮರೆಯಲಾಗದಂತಹ ಕಹಿ ಘಟನೆಯೆಂದು ಪರಿಗಣಿಸಲಾಗಿದೆ. ಈ ಯುದ್ಧಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ:

೧. ಕೆಲವು ಇತಿಹಾಸಕಾರರ ಪ್ರಕಾರ ಈ ಯುದ್ಧಕ್ಕೆ ಅರವೀಡು ವಂಶಜ ಅಳಿಯ ರಾಮರಾಯನೇ ಪ್ರಮುಖ ಕಾರಣ. ಇವನನ್ನು ಈ ದುರಂತ ಘಟನೆಯ ಖಳನಾಯಕನನ್ನಾಗಿ ಬಿಂಬಿಸಲಾಗಿದೆ.

೨. ವಿಜಯನಗರ ಸಾಮ್ರಾಜ್ಯದ ಸಂಸ್ಥಾಪನೆಯು ಬಹಮನಿ ಸುಲ್ತಾನರಿಗೆ ಸಹಿಸಲಾರದ ತುತ್ತಾಗಿತ್ತು. ಅಂದಿನಿಂದಲೇ ಅವರು ಇದರ ಅವನತಿಗೆ ಹವಣಿಸುತ್ತಿದ್ದರು.

೩. ವಿಜಯನಗರದ ಸಂಗಮ, ಸಾಳುವ ಮತ್ತು ತುಳುವ ಅರಸರು ಬಲಿಷ್ಠರಾದ್ದರಿಂದ ಸುಲ್ತಾನರ ದಾಳಿಗಳನ್ನು ಯಶಸ್ವಿಯಾಗಿ ಹತ್ತಿಕ್ಕಿ ರಾಜ್ಯದ ರಕ್ಷಣೆ ಮಾಡಿದ್ದರು. ಆದರೆ ಅರವೀಡು ವಂಶದ ಅರಸರು ದುರ್ಬಲರಾದ್ದರಿಂದ ಷಾಹೀ ಸುಲ್ತಾನರು ತಮ್ಮ ಸೇಡನ್ನು ತೀರಿಸಿಕೊಳ್ಳಲು ಹೊಂಚುಹಾಕುವಂತಾಗಿತ್ತು.

೪. ಇನ್ನು ಕೆಲವು ಇತಿಹಾಸಕಾರರ ಪ್ರಕಾರ ಅಳಿಯ ರಾಮರಾಯ ಮತ್ತು ಅವನ ಸೈನಿಕರು ಅಹಮ್ಮದ್ ನಗರದಲ್ಲಿ ಎಸಗಿದ ಹೀನ ಕೃತ್ಯಗಳು ಮತ್ತು ಷಾಹೀ ಸುಲ್ತಾನರಿಗೆ ಹಾಗೂ ಇಸ್ಲಾಂ ಧರ್ಮಕ್ಕೆ ಮಾಡಿದ ಅವಮಾನಗಳು ಷಾಹೀ ಸುಲ್ತಾನರು ವಿಜಯ ನಗರವನ್ನು ದ್ವೇಷಿಸುವಂತೆ ಮಾಡಿತು.

೫. ಯುದ್ಧದ ಸಮಯದಲ್ಲಿ ಕಟ್ಟಡಗಳ ನಾಶ ಮತ್ತು ಸುಲ್ತಾನರ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದು ಅವರಿಗೆ ಸಹಿಸಲಾರದಾಗಿತ್ತು.

೬. ಫೆರಿಸ್ತಾನ ಪ್ರಕಾರ ರಾಮರಾಯನು ಸುಲ್ತಾನರಿಗೆ ಮಾಡಿದ ಅವಮಾನವೇ ಅವರನ್ನು ತಮ್ಮಲ್ಲಿದ್ದ ವೈಷಮ್ಯವನ್ನು ಮರೆತು ಒಂದಾಗುವುದಕ್ಕೆ ನೆರವಾಯಿತು.

ಈ ಮೇಲ್ಕಾಣಿಸಿದ ಕಾರಣಗಳಲ್ಲಿ ಕೆಲವನ್ನು ಒಪ್ಪಿಕೊಳ್ಳಲಾಗುವುದಿಲ್ಲ. ಅದರಲ್ಲೂ ಇಸ್ಲಾಂ ಧರ್ಮಕ್ಕೆ ಮಾಡಿದ ಅವಮಾನ. ಏಕೆಂದರೆ ವಿಜಯನಗರದ ಸೈನ್ಯದಲ್ಲಿ ಹಲವಾರು ಮುಸ್ಲಿಂ ಸೈನಿಕರು ಇದ್ದರು. ಇದಲ್ಲದೆ ವಿಜಯನಗರದ ರಾಜಧಾನಿಯಲ್ಲೇ ಸೈನಿಕರಿಗಾಗಿ ಮಸೀದಿಯನ್ನು ಕಟ್ಟಿಸಿ ಆಸ್ಥಾನದಲ್ಲಿ ಕುರಾನ್‌ನ್ನು ಇಡಿಸಲಾಗಿತ್ತು. ಹೀಗಿರುವಾಗ ಇಸ್ಲಾಂ ಧರ್ಮಕ್ಕೆ ಅವಮಾನವಾದ ಕಾರಣ ಯುದ್ಧವಾಯಿತು ಎನ್ನುವುದು ತಪ್ಪಾಗುತ್ತದೆ. ಸಾಮಾನ್ಯವಾಗಿ ಯುದ್ಧಗಳು ಒಂದು ರಾಜ್ಯದ ನೆಲವನ್ನು, ಜಲವನ್ನು ಮತ್ತು ಸಂಪತ್ತನ್ನು ಹೆಚ್ಚಿಸುವುದಕ್ಕಾಗಿ ನಡೆಯುತ್ತವೆಯೇ ಹೊರತು ಧರ್ಮವನ್ನು ಕಾಪಾಡುವುದಕ್ಕಲ್ಲ. ಇವುಗಳಲ್ಲಿ ಪ್ರಮುಖ ಕಾರಣವೆಂದರೆ ರಾಮರಾಯನ ದುರಾಸೆ ಮತ್ತು ಅವರ ಕ್ಷಿಪ್ರ ರಾಜಕೀಯ ಬೆಳವಣಿಗೆ. ಇದನ್ನು ಗಮನಿಸಿದ ಸುಲ್ತಾನರು ಇವನನ್ನು ಹೀಗೆ ಬಿಟ್ಟರೆ ಅವರ ಅಸ್ತಿತ್ವಕ್ಕೆ ಸಂಚಕಾರ ಬರಬಹುದೆಂದು ತಿಳಿದು ಅವನನ್ನು ನಿರ್ನಾಮ ಮಾಡಲು ತಮ್ಮ ತಮ್ಮಲ್ಲಿದ್ದ ವೈಷಮ್ಯಗಳನ್ನು ಕ್ಷಣಕಾಲ ಮರೆತು ಒಂದಾಗಿ ಒಕ್ಕೂಟವನ್ನು ರಚಿಸಿ, ರಾಮರಾಯನ ಮೇಲೆ ಯುದ್ಧ ಸಾರಿದರು.

ಈ ಯುದ್ಧದಲ್ಲಿ ವಿಜಯನಗರದ ಸೈನ್ಯವನ್ನು ಸುಮಾರು ೮೦ ವರ್ಷದ ಮುದುಕ ರಾಮರಾಯನು ಬೃಹತ್ ಸೈನ್ಯದಿಂದ ಮುನ್ನಡೆಸಿದರೆ ಒಕ್ಕೂಟದ ಸೈನ್ಯವನ್ನು ಷಾಹೀ ಸುಲ್ತಾನರು ನಡೆಸಿದರು. ವಿಜಯನಗರದ ಸೈನ್ಯವು ಸುಲ್ತಾನರ ಸೈನ್ಯಕ್ಕಿಂತ ಅಧಿಕ ಸಂಖ್ಯೆಯಲ್ಲಿದ್ದರೂ ಸಹ ರಾಮರಾಯನ ಸೋಲು ಮತ್ತು ಸೆರೆಯಿಂದಾಗಿ ವಿಜಯನಗರ ಸೈನ್ಯವು ದಿಕ್ಕಾಪಾಲಾಗಿ ರಣರಂಗದಿಂದ ಓಡಿಹೋಯಿತು. ರಾಮರಾಯನನ್ನು ಸೆರೆ ಹಿಡಿದ ನಂತರ ಆದಿಲ್‌ಷಾನ ಇಷ್ಟಕ್ಕೆ ವಿರುದ್ಧವಾಗಿ ಅವನ ತಲೆಯನ್ನು ಅಹಮದ್‌ನಗರದ ಸುಲ್ತಾನನು ಕತ್ತರಿಸಿ ಹಾಕಿದನು.

**ಪರಿಣಾಮಗಳು**

೧. ರಾಮರಾಯನ ಕೊಲೆಯಿಂದಾಗಿ ವಿಜಯನಗರ ಸಾಮ್ರಾಜ್ಯವು ಈ ಯುದ್ಧದಲ್ಲಿ ಹೀನಾಯ ಸೋಲನ್ನು ಅನುಭವಿಸಿತು.

೨. ಈ ಸೋಲಿನ ಪರಿಣಾಮವಾಗಿ ಸುಮಾರು ೨೦೦ ವರ್ಷಗಳ ಕಾಲ ದಕ್ಷಿಣ ಭಾರತದ ಸಂಸ್ಕೃತಿ-ಧರ್ಮಗಳನ್ನು ಕಾಪಾಡಿದ ವಿಜಯನಗರ ಸಾಮ್ರಾಜ್ಯವು ಅಂತ್ಯಗೊಂಡು ಮುಸ್ಲಿಂ ಸುಲ್ತಾನರ ಅಧಿಪತ್ಯವನ್ನು ಸ್ಥಾಪಿಸಲು ಕಾರಣವಾಯಿತು.

೩. ಇದರಿಂದಾಗಿ ದಕ್ಷಿಣ ಭಾರತದಲ್ಲಿ ರಾಜಕೀಯ ಅಸ್ಥಿರತೆಯುಂಟಾಗಿ ಸಣ್ಣಪುಟ್ಟ ರಾಜ್ಯಗಳು (ತುಂಡರಸರು) ಅಸ್ತಿತ್ವಕ್ಕೆ ಬಂದವು.

೪. ವಿಜಯನಗರ ಸಾಮ್ರಾಜ್ಯವು ಇದುವರೆಗೆ ಸಾಧಿಸಿದ್ದ ಪ್ರಗತಿಯು ಹಿನ್ನಡೆಯ ಲಾರಂಭಿಸಿತು.

೫. ಷಾಹಿ ಸುಲ್ತಾನರು ವಿಜಯನಗರದಲ್ಲಿ ಬೀಡುಬಿಟ್ಟು ಸಂಪತ್ತನ್ನು ಕೊಳ್ಳೆ ಹೊಡೆಯ ಲಾರಂಭಿಸಿದರು. ಅಂದಿನಿಂದ ವಿಜಯನಗರವು ಶತ್ರುಗಳ ದಾಳಿಗೆ ಸಿಲುಕಿ ಹಾಳಾಗಿ ಹಾಳು ಹಂಪೆಯಾಯಿತು.

ರಾಮರಾಯನ ಸಾವಿನ ನಂತರ ಅವನ ತಮ್ಮಂದಿರು ರಾಜ್ಯವನ್ನು ಕಾಪಾಡುವುದರ ಬದಲು ತಮಗೆ ಸಿಕ್ಕಿದ್ದನ್ನು ದೋಚಿಕೊಂಡು ವಿಜಯನಗರವನ್ನು ಬಿಟ್ಟು ಪೆನುಗೊಂಡೆಗೆ ಪಲಾಯನ ಮಾಡಿದರು. ಅಂದಿನಿಂದ ಅರವೀಡು ವಂಶದವರು ಸುಮಾರು ಕ್ರಿ.ಶ. ೧೬೭೪ ರವರೆಗೆ ಅಧಿಕಾರದಲ್ಲಿ ಮುಂದುವರಿದರು. ಒಂದನೆ ಶ್ರೀರಂಗನು ಅರವೀಡು ವಂಶವನ್ನು ಪುನಶ್ಚೇತನಗೊಳಿಸಿದನು. ಮೂರನೆಯ ಶ್ರೀರಂಗನು ಈ ವಂಶದ ಮತ್ತು ರಾಜ್ಯದ ಕೊನೆಯ ಪ್ರಮುಖ ದೊರೆಯಾಗಿದ್ದ.

**ಆಡಳಿತ**

ವಿಜಯನಗರ ಸಾಮ್ರಾಜ್ಯದ ಆಡಳಿತ ಕ್ರಮ ಮತ್ತು ರಾಜ್ಯದ ಸ್ವರೂಪದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಕೆಲವರು ಇದನ್ನು 'ಸೈನಿಕ ರಾಜ್ಯ'ವೆಂದೂ, ಇನ್ನು ಕೆಲವರು ಇದೊಂದು 'ವಿಘಟನಾ ರಾಜ್ಯ' (ಸೆಗ್‌ಮೆಂಟರಿ ಸ್ಟೇಟ್)ವೆಂದೂ ಮತ್ತೆ ಕೆಲವರು 'ಕೇಂದ್ರೀಕೃತ ರಾಜ್ಯ'ವೆಂದು ಹಾಗೂ 'ಊಳಿಗಮಾನ್ಯ ರಾಜ್ಯ'ವೆಂದು ಪರಿಗಣಿಸಿದ್ದಾರೆ. ವಿಜಯನಗರದ ಹುಟ್ಟು, ಬೆಳವಣಿಗೆ ಮತ್ತು ಅಂತ್ಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿದವರು ಇದನ್ನು 'ಮಿಲಿಟರಿ ಸ್ಟೇಟ್' ಅಥವಾ 'ವಾರ್ ಸ್ಟೇಟ್' (ಸೈನಿಕ ರಾಜ್ಯ) ಎಂದು ಕರೆದಿದ್ದಾರೆ. ಆದ'ರೆ ಈ ಪರಿಕಲ್ಪನೆ ಸಮಂಜಸವಲ್ಲ. ಏಕೆಂದರೆ ವಿಜಯನಗರ ಸಾಮ್ರಾಜ್ಯದ ಉದ್ದೇಶವು ಇತರ ಸಾಮ್ರಾಜ್ಯಗಳಂತೆ ತಾನು ಬೆಳೆಯಬೇಕು ಎಂಬುದೇ ಹೊರತು ನಿರಂತರವಾಗಿ ಯುದ್ಧದಲ್ಲಿ ಪಾಲ್ಗೊಳ್ಳುವುದಾಗಿರಲಿಲ್ಲ. ತನ್ನ ನೆಲದ, ಜಲದ, ಜನರ ರಕ್ಷಣೆಯ ಪ್ರಶ್ನೆ ಬಂದಾಗ ಅದನ್ನು ಕಾಪಾಡುವುದು ರಾಜ್ಯದ ಆದ್ಯ ಕರ್ತವ್ಯವಾಗಿತ್ತು. ಹಾಗಾಗಿ ಇತರ ರಾಜ್ಯಗಳಂತೆ ಇವರು ಸಹ ಸೈನ್ಯ ಕಟ್ಟಿ, ಕೋಟೆಗಳನ್ನು ಕಟ್ಟಿ ಯುದ್ಧಗಳಲ್ಲಿ ಪಾಲ್ಗೊಂಡಿದ್ದರು. ಇನ್ನು ಎರಡನೆಯದಾದ 'ವಿಘಟನಾ ರಾಜ್ಯ' ವ್ಯವಸ್ಥೆ (ಸೆಗ್ಮೆಂಟರಿ ಸ್ಟೇಟ್)ಯಲ್ಲಿ ರಾಜನು ರಾಜ್ಯದ ಅಂಚಿನ ಪ್ರದೇಶಗಳಲ್ಲಿ ಕೇವಲ ಸಾಂಪ್ರದಾಯಿಕ ಅಧಿಕಾರವನ್ನು ಹೊಂದಿರುತ್ತಾನೆಯೇ ಹೊರತು ನಿಜವಾದ ಅಧಿಕಾರ ಹೊಂದಿರುವುದಿಲ್ಲ. ಅಲ್ಲಿ ನಿಜವಾದ ಅಧಿಕಾರವನ್ನು ಪ್ರಾಂತ್ಯದ ಆಡಳಿತಾಧಿಕಾರಿಗಳು ಅನುಭವಿಸುತ್ತಾರೆ. ರಾಜನ ನಿಜವಾದ ಅಧಿಕಾರ ಕೇವಲ ರಾಜ್ಯದ ಮಧ್ಯಭಾಗದಲ್ಲಿ (ಕೋರ್ ಏರಿಯ)ರುತ್ತದೆ.ಆದ್ದರಿಂದ ಇಲ್ಲಿ ಅಧಿಕಾರ ಕೇಂದ್ರೀಕೃತವಾಗಿರದೇ ವಿಕೇಂದ್ರೀಕರಣಗೊಂಡಿರುತ್ತದೆ. ಇನ್ನು ಊಳಿಗ ಮಾನ್ಯ ವ್ಯವಸ್ಥೆಯೆಂದರೆ - ವಿಜಯನಗರದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ 'ಅಮರ ನಾಯಕ'ರ ವ್ಯವಸ್ಥೆಯು ರಾಜನ ಅಧಿಕಾರವನ್ನು ಮೊಟಕುಗೊಳಿಸಿ ಪ್ರಾಂತೀಯ ಅಧಿಕಾರಿಗಳನ್ನು ಬಲಪಡಿಸಿತೆಂದು ವಾದಿಸಲಾಗಿದೆ.

ಈ ಎಲ್ಲಾ ಅಂಶಗಳು ಹೊರನೋಟಕ್ಕೆ ಎದ್ದು ಕಾಣುತ್ತವೆ. ಆದರೆ ವಿಜಯನಗರದ ಆಡಳಿತವನ್ನು ಆಳವಾಗಿ ಅಭ್ಯಸಿಸಿದರೆ ಅಲ್ಲಿ 'ಕೇಂದ್ರೀಕೃತ ಸರ್ಕಾರ' ಇದ್ದುದು ಕಂಡು ಬರುತ್ತದೆ. ಏಕೆಂದರೆ ಇಡೀ ಆಡಳಿತದ ಚುಕ್ಕಾಣಿಯು ರಾಜನ ಕೈಯಲ್ಲಿತ್ತು. ರಾಜನೇ ತನ್ನ ಮಂತ್ರಿಗಳನ್ನು ಆರಿಸುತ್ತಿದ್ದನು. ಮಂತ್ರಿಗಳನ್ನು ಆರಿಸುವ ಮುನ್ನ ಅವನ ಹಿನ್ನೆಲೆಯನ್ನು ಶೋಧಿಸಿಯೇ ಆರಿಸುತ್ತಿದ್ದರು. ಇದಲ್ಲದೆ ನಾಯಕರ ಪದ್ಧತಿಯಲ್ಲಿಯೂ ಸಹ ನಾಯಕನನ್ನಾಗಿ ಆರಿಸುವವನ ಹಿನ್ನೆಲೆಯನ್ನು ಶೋಧಿಸಿ ಕೆಲವು ಷರತ್ತುಗಳೊಂದಿಗೆ ಅವನಿಗೆ ಅಧಿಕಾರ ನೀಡಲಾಗುತ್ತಿತ್ತು. ಆಡಳಿತದ ಕೊನೆಯ ಅಧಿಕಾರಿಯಾದ ಗಾವುಂಡನನ್ನು ಸಹ ರಾಜ್ಯದ ಕಾರ್ಯಕರ್ತರೇ (ಏಜೆಂಟರು) ಆರಿಸುತ್ತಿದ್ದರು. ಹೀಗೆ ನಾವು ಪ್ರತಿ ಹಂತದಲ್ಲಿಯೂ ರಾಜ್ಯದ ರಾಜನ ಪಾತ್ರವನ್ನು ಕಾಣಬಹುದು. ಹೀಗಿರುವಾಗ ಮೇಲಿನ ಅಭಿಪ್ರಾಯಗಳನ್ನು ಒಪ್ಪಿಕೊಳ್ಳುವುದು ಸಮಂಜಸವಲ್ಲ.

ರಾಜಪ್ರಭುತ್ವವು ವಿಜಯನಗರ ಸಾಮ್ರಾಜ್ಯದ ಪ್ರಮುಖ ಲಕ್ಷಣವಾಗಿದ್ದು ವಂಶ ಪಾರಂಪರ್ಯವಾಗಿತ್ತು. ಆದರೆ ಕೆಲವು ಸಂದರ್ಭಗಳಲ್ಲಿ ಅರ್ಹ ವ್ಯಕ್ತಿ ಸಿಗದಿದ್ದಾಗ ಅದು ರಾಜನ ತಮ್ಮ ಅಥವಾ ತಮ್ಮನ ಮಗನಿಗೆ ಪಟ್ಟಾಭಿಷೇಕವಾಗುತ್ತಿತ್ತು. ರಾಜನೇ ಆಡಳಿತದ ಕೇಂದ್ರಬಿಂದುವಾಗಿದ್ದನು. ದುಷ್ಟ ಶಿಕ್ಷಕ ಶಿಷ್ಟ ಪರಿಪಾಲಕ ಎಂಬುದು ಅಂದಿನ ರಾಜನೀತಿಯ ಮಂತ್ರವಾಗಿತ್ತು. ರಾಜನು ತನ್ನ ದಿನನಿತ್ಯದ ಆಡಳಿತವನ್ನು ನಡೆಸುವುದಕ್ಕೋಸ್ಕರ ಮಂತ್ರಿ ಮಂಡಲವನ್ನು ಹೊಂದಿದ್ದನು. ಕೆಲವೊಮ್ಮೆ ಮಂತ್ರಿಪದವಿಯು ವಂಶಪಾರಂಪರ್ಯವಾಗಿತ್ತು. ಈ ಮಂತ್ರಿಗಳನ್ನು ರಾಜನೇ ಸ್ವತಃ ಆರಿಸುತ್ತಿದ್ದನು. ಪ್ರಧಾನಮಂತ್ರಿಯನ್ನು 'ಮಹಾಪ್ರಧಾನ' ಅಥವಾ 'ಶ್ರೀಪ್ರಧಾನ' ಎಂದು ಕರೆಯಲಾಗುತ್ತಿತ್ತು. ಇತರ ಮಂತ್ರಿಗಳನ್ನು ದಂಡನಾಯಕ ಅಥವಾ ದಣ್ಣಾಯಕ ಎಂದು ಸಂಭೋದಿಸಲಾಗುತ್ತಿತ್ತು. ರಾಜನ ಆಸ್ಥಾನವು ರಾಜಪುರೋಹಿತ, ಪುರೋಹಿತರು, ಶ್ರೀಮಂತರು, ಪಂಡಿತರು, ಕವಿಗಳು ಮತ್ತು ಸಂಗೀತಗಾರರಿಂದ ಕೂಡಿರುತ್ತಿತ್ತು.

ಆಡಳಿತದ ಅನುಕೂಲಕ್ಕಾಗಿ ವಿಸ್ತಾರವಾದ ವಿಜಯನಗರ ಸಾಮ್ರಾಜ್ಯವನ್ನು ಹಲವು ಪ್ರಾಂತ್ಯಗಳನ್ನಾಗಿ ವಿಂಗಡಿಸಿ ಅವುಗಳನ್ನು ರಾಜ್ಯ ಅಥವಾ 'ಮಂಡಲ'ಗಳೆಂದು ಕರೆಯಲಾಗಿತ್ತು. ಈ ರಾಜ್ಯಗಳನ್ನು ಪುನಃ ವಿಷಯ ಅಥವಾ ವೇಂಟೆ, ಸೀಮೆ ಅಥವಾ ನಾಡು ಮತ್ತು ಸ್ಥಳ ಅಥವಾ ಕಂಪಣ ಎಂದು ಪುನರ್ ವಿಂಗಡಿಸಲಾಗಿತ್ತು. ಪ್ರತಿ ರಾಜ್ಯ ಅಥವಾ ಮಂಡಲವು ಜವಾಬ್ದಾರಿಯುತ ಅಧಿಕಾರಿಗಳಿಂದ ಹಾಗೂ ಕೆಲವೊಮ್ಮೆ ರಾಜಪರಿವಾರದವರಿಂದ ಆಳಲ್ಪಡುತ್ತಿತ್ತು.

ವಿಜಯನಗರ ಸಾಮ್ರಾಜ್ಯದ ರಾಜ್ಯ ವ್ಯವಸ್ಥೆಯ ಪ್ರಮುಖ ಅಂಶವೆಂದರೆ 'ನಾಯಂಕರ ಪದ್ಧತಿ' ಕೆಲವು ಪ್ರಾಂತ್ಯಗಳನ್ನು (ಮಂಡಲ) ನೋಡಿಕೊಳ್ಳಲು ವಿಜಯನಗರದ ಅರಸರು ಕೆಲವು ಷರತ್ತುಗಳೊಂದಿಗೆ ನೇಮಿಸುತ್ತಿದ್ದರು. ಹೀಗೆ ನೇಮಕಗೊಂಡವರನ್ನು ನಾಯಕ ಅಥವಾ 'ಅಮರನಾಯಕ'ರೆಂದು ಹಾಗೂ ಈ ವ್ಯವಸ್ಥೆಯನ್ನು ನಾಯಂಕರ ಅಥವಾ ಅಮರನಾಯಂಕರ

ಪದ್ಧತಿಯೆಂದು ಕರೆಯಲಾಗಿದೆ. ನಾಯಕ ಪದವಿಯನ್ನು ಪಡೆಯಲು ಇವರು ಕೆಲವು ಷರತ್ತುಗಳನ್ನು ಪೂರೈಸಬೇಕಾಗಿತ್ತು. ಅವುಗಳೆಂದರೆ,

೧. ಇವರು ಪ್ರತಿವರ್ಷ ನಿಗದಿ ಪಡಿಸಿದಷ್ಟು ಹಣವನ್ನು ರಾಜ್ಯದ ಬೊಕ್ಕಸಕ್ಕೆ ಪಾವತಿಸ ಬೇಕಾಗಿತ್ತು.
೨. ಯುದ್ಧದ ಸಮಯದಲ್ಲಿ ನಿಗದಿಪಡಿಸಿದಷ್ಟು ಸೈನ್ಯವನ್ನು ರಾಜನ ಸಹಾಯಕ್ಕೆ ಕಳಿಸಿ, ತಾವು ಸಹ ಯುದ್ಧದಲ್ಲಿ ಕಡ್ಡಾಯವಾಗಿ ಪಾಲ್ಗೊಳ್ಳಬೇಕಾಗಿತ್ತು.
೩. ರಾಜನ ಆಸ್ಥಾನದಲ್ಲಿ ಮತ್ತು ಅರಮನೆಯಲ್ಲಿ ನಡೆಯುವ ಸಭೆ ಮತ್ತು ಕಾರ್ಯಗಳಲ್ಲಿ ಪಾಲ್ಗೊಳ್ಳುವುದು ಹಾಗೂ
೪. ದೇವಾಲಯಗಳಿಗೆ ದಾನ ಮಾಡುವುದು, ಹಾಳಾದ ದೇವಾಲಯಗಳನ್ನು ದುರಸ್ತಿ ಗೊಳಿಸುವುದು, ಕೆರೆ-ಕಾಲುವೆ ಮತ್ತು ಬಾವಿಗಳನ್ನು ತೋಡಿಸಿ ಒಣ ಮತ್ತು ಬಂಜರು ಭೂಮಿಯನ್ನು ಕೃಷಿಗೆ ಸಿದ್ಧಪಡಿಸುವುದಾಗಿತ್ತು.

ವಿಜಯನಗರ ಕಾಲದಲ್ಲಿ ಎರಡು ರೀತಿಯ ರಾಜ್ಯ ಅಥವಾ ಮಂಡಲಗಳನ್ನು ಈ ರೀತಿಯ ಅಧಿಕಾರಿಗಳು ನೋಡಿಕೊಳ್ಳುತ್ತಿದ್ದರು. ಕೆಲವು ರಾಜ್ಯಗಳನ್ನು ಅಮರನಾಯಕರು ಹಾಗೂ ಇನ್ನು ಕೆಲವು ರಾಜ್ಯಗಳನ್ನು ರಾಜನ ಪ್ರತಿನಿಧಿಗಳು ನಿರ್ವಹಿಸುತ್ತಿದ್ದರು. ಅಮರನಾಯಕರ ರಾಜಕೀಯ ಸ್ಥಾನಮಾನಗಳು ರಾಜಪ್ರತಿನಿಧಿಗಳ ಸ್ಥಾನಮಾನಗಳಿಗಿಂತ ಭಿನ್ನವಾಗಿದ್ದವು. ರಾಜ್ಯಪಾಲರು ರಾಜನ ನೇರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಅವರನ್ನು ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ಸುಲಭವಾಗಿ ವರ್ಗಾಯಿಸಲಾಗುತ್ತಿತ್ತು. ಆದರೆ ಅಮರನಾಯಕರನ್ನು ಹಾಗೆ ವರ್ಗಾಯಿಸದೆ ಇಡೀ ಮಂಡಲದ ಅಧಿಕಾರವನ್ನು ಅವರಿಗೆ ವಹಿಸಲಾಗಿತ್ತು. ಆದ್ದರಿಂದ ಈ ನಾಯಕರು ತಮ್ಮ ರಾಜ್ಯದ ಮೇಲೆ ಸಂಪೂರ್ಣ ಅಧಿಕಾರ ಹೊಂದಿದ್ದರು. ಈ ಪದ್ಧತಿಯು ತತ್ಕಾಲಕ್ಕೆ ವಿಜಯನಗರದ ಅರಸರಿಗೆ ಅನುಕೂಲವಾಗಿದ್ದಿತಷ್ಟೇ, ತದನಂತರ ಈ ವ್ಯವಸ್ಥೆಯು ತೀವ್ರರೂಪದ ತೊಂದರೆಯನ್ನುಂಟುಮಾಡಿತು. ಇವರಿಗೆ ಸ್ವತಂತ್ರವಾಗಿ ಸೈನ್ಯ ಕಟ್ಟಲು ಹಾಗೂ ಸ್ಥಳೀಯ ಆಡಳಿತವನ್ನು ನಿರ್ವಹಿಸಲು ಅಧಿಕಾರವಿದ್ದುದರಿಂದ, ದುರ್ಬಲ ದೊರೆಗಳು ಅಧಿಕಾರಕ್ಕೆ ಬಂದಾಗ ಅವರನ್ನು ಧಿಕ್ಕರಿಸಿ ಸ್ವತಂತ್ರರಾಗಲು ಅಥವಾ ಬೇರೆ ರಾಜನಿಗೆ ಸಹಾಯ ಮಾಡಲು ಅನುವು ಮಾಡಿಕೊಟ್ಟಿತು. ಹೀಗಾಗಿ ತಾಳೀಕೋಟೆಯ ಯುದ್ಧದ ನಂತರ ಇವರ ಅಧಿಕಾರಿಗಳಾಗಿದ್ದ ಮೈಸೂರಿನ ಒಡೆಯರು, ಇಕ್ಕೇರಿ ಮತ್ತು ಚಿತ್ರದುರ್ಗದ ನಾಯಕರು ದುರ್ಬಲ ರಾಜರು ಅಧಿಕಾರಕ್ಕೆ ಬಂದಾಗ ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡು ಸ್ವತಂತ್ರ ರಾಜ್ಯವನ್ನು ಕಟ್ಟಲಾರಂಭಿಸಿದರು.

ಆಡಳಿತ ವ್ಯವಸ್ಥೆಯ ಕೊನೆಯ ಭಾಗವೇ ಹಳ್ಳಿ. ಹಳ್ಳಿಗಳ ಆಡಳಿತವನ್ನು ಸ್ಥಳೀಯ ಸಂಸ್ಥೆಗಳು ನೋಡಿಕೊಳ್ಳುತ್ತಿದ್ದವು. ಈ ಸಂಸ್ಥೆಯ ಮುಖ್ಯಸ್ಥನಾಗಿ ಗೌಡನು ಕಾರ್ಯ ನಿರ್ವಹಿಸುತ್ತಿದ್ದನು. ಗೌಡನಿಗೆ ದಿನನಿತ್ಯದ ಕಾರ್ಯಗಳಲ್ಲಿ ಸೇನಬೋವ ಅಥವಾ ಕರಣಿಕ ಮತ್ತು ತಳವಾರ ಅಥವಾ ಕಾವಲುಗಾರರು ನೆರವಾಗುತ್ತಿದ್ದರು. ಈ ಅಧಿಕಾರಿಗಳಿಗೆ ಆಯಾ

ಹಳ್ಳಿಗಳಲ್ಲಿಯೇ ಸಂಬಳದ ಬದಲು ಕಂದಾಯರಹಿತ ಭೂಮಿಯನ್ನು ಕೊಡಲಾಗಿತ್ತು. ಈ ಪದ್ಧತಿಯನ್ನು 'ಅಯಾಗಾರ ವ್ಯವಸ್ಥೆ'ಯೆಂದು ಕರೆಯಲಾಗಿತ್ತು.

**ನ್ಯಾಯಾಡಳಿತ:** ರಾಜನ ಪ್ರಮುಖ ಕರ್ತವ್ಯವು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಕಾಪಾಡುವುದಾಗಿತ್ತು. ರಾಜನೆ ಪ್ರಮುಖ ಸಮಸ್ಯೆಗಳನ್ನು ಬಗೆಹರಿಸಿ ನ್ಯಾಯ ನೀಡುತ್ತಿದ್ದನು. ಪ್ರತಿ ಸಮಸ್ಯೆಗೆ ಅವನದೇ ಅಂತಿಮ ನಿರ್ಣಯ. ತನ್ನ ದಿನನಿತ್ಯದ ಆಡಳಿತದಲ್ಲಿ ನ್ಯಾಯಾಧೀಶರನ್ನು ನೇಮಿಸಿಕೊಳ್ಳುತ್ತಿದ್ದನು. ಕೆಳಮಟ್ಟದಲ್ಲಿ ಅಲ್ಲಿಯ ಅಧಿಕಾರಿಗಳೇ ನ್ಯಾಯಾಡಳಿತವನ್ನು ನಿರ್ವಹಿಸುತ್ತಿದ್ದರು. ಅಪರಾಧಿಗಳಿಗೆ ಕಠಿಣ ಶಿಕ್ಷೆ ನೀಡಲಾಗುತ್ತಿತ್ತು. ಕೊಲೆಗಡುಕರಿಗೆ, ಕಳ್ಳರಿಗೆ, ವ್ಯಭಿಚಾರಿಗಳಿಗೆ ಮತ್ತು ರಾಜದ್ರೋಹಿಗಳಿಗೆ ಮರಣದಂಡನೆ ಮತ್ತು ಅಂಗಹೀನ ಮಾಡಲಾಗುತ್ತಿತ್ತು.

**ಕಂದಾಯಾಡಳಿತ:** ಇದಕ್ಕಾಗಿ ಪ್ರತ್ಯೇಕವಾದ ವಿಭಾಗವಿತ್ತು. ರಾಜ್ಯದ ಬೊಕ್ಕಸಕ್ಕೆ ಪ್ರಮುಖವಾಗಿ ಭೂಕಂದಾಯ, ವಾಣಿಜ್ಯ ತೆರಿಗೆಗಳು, ವೃತ್ತಿ ತೆರಿಗೆಗಳು ಅಮರನಾಯಕರಿಂದ ದೇಣಿಗೆಗಳು ಮತ್ತು ದಂಡಗಳಿಂದ ಆದಾಯ ಬರುತ್ತಿತ್ತು.

### ಸೈನಿಕಾಡಳಿತ

ವಿಜಯನಗರದ ಕಾಲದಲ್ಲಿ ಪ್ರತ್ಯೇಕವಾದ ಸೈನಿಕ ವಿಭಾಗವಿದ್ದು, ಅದನ್ನು 'ಕಂದಾಚಾರ' ಎಂದು ಕರೆಯಲಾಗಿತ್ತು. ಈ ವಿಭಾಗವು ಓರ್ವ ದಂಡನಾಯಕನ ಅಧೀನದಲ್ಲಿತ್ತು. ವಿಜಯನಗರವು ಬೃಹತ್ ಗಾತ್ರದ ಸೈನ್ಯ ಹೊಂದಿದ್ದು ಕಾಲ್ದಳ, ಅಶ್ವದಳ, ಗಜದಳ, ರಥಗಳು ಮತ್ತು ಫಿರಂಗಿ ದಳವನ್ನು ಹೊಂದಿತ್ತು. ಅಶ್ವದಳವು ಮಧ್ಯಯುಗೀನ ಕಾಲದ ಯುದ್ಧಗಳಲ್ಲಿ ನಿರ್ಣಾಯಕ ಪಾತ್ರವಹಿಸುತ್ತಿದ್ದರಿಂದ ಕುದುರೆಗಳನ್ನು ಪರ್ಷಿಯಾ ಮತ್ತು ಅರೇಬಿಯಾ ದೇಶಗಳಿಂದ ಭಾರೀ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುತ್ತಿದ್ದರು. ಕೋಟೆಗಳು ಸಹ ರಾಜ್ಯದ ಸಂರಕ್ಷಣೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದವು. ಇಲ್ಲಿಯ ಶಾಸನಗಳ ಪ್ರಕಾರ ವಿಜಯನಗರದ ಅರಸರು ನೌಕಾದಳವನ್ನು ಹೊಂದಿದ್ದರು. ಅಬ್ದುಲ್‌ರಜಾಕ್ ಪ್ರಕಾರ ವಿಜಯನಗರವು ಹನ್ನೊಂದು ಲಕ್ಷ ಸೈನಿಕರನ್ನು ಹೊಂದಿತ್ತು. ಡೊಮಿಂಗೊ ಪಾಯಸ್‌ನ ಪ್ರಕಾರ ಕೃಷ್ಣದೇವರಾಯನ ಸೈನ್ಯವು ಏಳು ಲಕ್ಷ ಸೈನಿಕರನ್ನು ಹಾಗೂ ಮೂವತ್ತು ಸಾವಿರ ಕುದುರೆಗಳನ್ನು ಹೊಂದಿತ್ತು.

### ಸಮಾಜ

ವಿಜಯನಗರ ಕಾಲದ ಸಮಾಜವು ಶ್ರೇಣೀಕೃತ ಸಮಾಜವಾಗಿದ್ದು ಪುರೋಹಿತರು, ಆಳರಸರು, ವ್ಯಾಪಾರಿಗಳು ಮತ್ತು ಉತ್ಪಾದಕ ವರ್ಗಗಳಿಂದ ಕೂಡಿತ್ತು. ಇವುಗಳಲ್ಲಿ ಪುರೋಹಿತ ವರ್ಗ ಮತ್ತು ಆಳುವ ವರ್ಗ ಸಮಾಜದಲ್ಲಿ ಹೆಚ್ಚು ಸ್ಥಾನಮಾನ ಹೊಂದಿದ್ದರು. ಆಳರಸರು ಪುರೋಹಿತ ವರ್ಗದವರನ್ನು ತಮ್ಮ ಆಸ್ಥಾನದಲ್ಲಿ, ಆಡಳಿತದಲ್ಲಿ, ನ್ಯಾಯಾಡಳಿತದಲ್ಲಿ ಮತ್ತು ಸೈನಿಕ ವ್ಯವಸ್ಥೆಯಲ್ಲಿ ಹೆಚ್ಚು ಪ್ರಾಶಸ್ತ್ಯ ನೀಡಿದ್ದರು. ಇದಲ್ಲದೆ ಈ ಕಾಲದಲ್ಲಿ

ಹೆಚ್ಚು ದೇವಾಲಯಗಳು ನಿರ್ಮಾಣಗೊಂಡಿದ್ದರಿಂದ ಅವುಗಳ ನಿರ್ವಹಣೆಯನ್ನು ಪುರೋಹಿತಶಾಹಿ ವರ್ಗಕ್ಕೆ ವಹಿಸಲಾಯಿತು. ದೇವಾಲಯಗಳಿಗೆ ದಾನ ಮಾಡಿದ ಭೂಮಿ, ಹಣ, ಒಡವೆ, ಚಿನ್ನ ಮತ್ತು ದನಕರುಗಳು ಪ್ರತ್ಯೇಕವಾಗಿ ಅಥವಾ ಪರೋಕ್ಷವಾಗಿ ಇವರ ಕೈಸೇರಿ ಇವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಗಣನೀಯ ಪ್ರಮಾಣದಲ್ಲಿ ಹೆಚ್ಚಾದವು. ಹೀಗಾಗಿ ಇವರು ಕ್ರಮೇಣ ಸಮಾಜದ ಇತರೆ ವರ್ಗಗಳ ಮೇಲೆ ತಮ್ಮ ಹಿಡಿತವನ್ನು ಹೊಂದಲು ಅನುವಾಯಿತು.

ಅಂದಿನ ಸಾಮಾಜಿಕ ರಚನೆಯ ಮತ್ತೊಂದು ಪ್ರಮುಖ ಲಕ್ಷಣವೆಂದರೆ ಉತ್ಪಾದಕ ವರ್ಗಗಳಲ್ಲಿ 'ಎಡಗೈ' ಮತ್ತು 'ಬಲಗೈ' ಜಾತಿಗಳ ಸಂಘಟನೆ. ಇವು ವಿಜಯನಗರದ ಪೂರ್ವ ಕಾಲದಲ್ಲಿಯೇ ದಕ್ಷಿಣ ಭಾರತದಲ್ಲಿ ಅಸ್ತಿತ್ವಕ್ಕೆ ಬಂದಿದ್ದವು. ಎಡಗೈ ಗುಂಪಿನವರು ಶೈವ ಪಂಥಕ್ಕೆ ಸೇರಿದವರಾಗಿದ್ದು ಇವರು ಕರಕುಶಲ ವೃತ್ತಿಗಳಲ್ಲಿ ಮತ್ತು ವ್ಯಾಪಾರದಲ್ಲಿ ನಿರತರಾಗಿದ್ದರು. ಹಾಗೂ ಬಲಗೈ ಗುಂಪಿನವರು ವೈಷ್ಣವ ಪಂಥದವರಾಗಿದ್ದು ಕೃಷಿ ಮತ್ತು ಸ್ಥಳೀಯ ವ್ಯಾಪಾರವನ್ನು ಮಾಡುತ್ತಿದ್ದರು. ಈ ಕಾಲದ ಮತ್ತೊಂದು ಪ್ರಮುಖ ಬೆಳವಣಿಗೆಯೆಂದರೆ ಉತ್ಪಾದಕ ವರ್ಗಗಳಾದ ನೇಯ್ಗೆಯವರು, ತೆಲ್ಲಿಗರು ಮತ್ತು ಲೋಹದ ಕೆಲಸಗಾರರು ಸಹ ಸಮಾಜದ ಇತರ ಉನ್ನತ ವರ್ಗದವರಂತೆ ಹೆಚ್ಚಿನ ಸ್ಥಾನಮಾನಗಳನ್ನು ಪಡೆಯಲು ಪ್ರಯತ್ನಿಸುತ್ತಿದ್ದರು. ಇನ್ನು ವ್ಯಾಪಾರಿ ವರ್ಗದವರು ತಮ್ಮ ಬಳಿ ಹಣ ಇದ್ದುದರಿಂದ ತಮ್ಮ ಆದಾಯದ ಸ್ವಲ್ಪ ಭಾಗವನ್ನು ದೇವಾಲಯ, ಕೆರೆಕಟ್ಟೆ ಕಟ್ಟಿಸುವುದರ ಮೂಲಕ ಸ್ಥಳೀಯರ ಗಮನ ಸೆಳೆದು ಸಮಾಜದಲ್ಲಿ ಹೆಚ್ಚು ಗೌರವ ಮತ್ತು ಮಾನ್ಯತೆ ಗಳಿಸುತ್ತಿದ್ದರು.

ಉನ್ನತ ವರ್ಗದ ಸ್ತ್ರೀಯರು ಸಾಮಾಜಿಕ ಕ್ಷೇತ್ರದಲ್ಲಿ, ಸಾಹಿತ್ಯದಲ್ಲಿ ಮತ್ತು ರಾಜಕೀಯ ಕ್ಷೇತ್ರದಲ್ಲಿ ಸಕ್ರಿಯ ಪಾತ್ರವಹಿಸಿದ್ದರು. ಕೆಲವರು ನೃತ್ಯ ಮತ್ತು ಸಂಗೀತದಲ್ಲಿ ಪ್ರಾವೀಣ್ಯತೆ ಗಳಿಸಿದ್ದರು. ದೇವದಾಸಿ ಪದ್ಧತಿಯನ್ನು ಪ್ರೋತ್ಸಾಹಿಸಲಾಗಿತ್ತು. ವೇಶ್ಯಾವಾಟಿಕೆಯು ಕಾನೂನಿನ ಮಾನ್ಯತೆ ಪಡೆದಿತ್ತು. ವೇಶ್ಯಾವಾಟಿಕೆಯ ಮೇಲೆ ಸುಂಕವನ್ನು ವಿಧಿಸಲಾಗಿತ್ತು. ಬಹುಪತ್ನಿತ್ವ, ವರದಕ್ಷಿಣೆ ಮತ್ತು ಸತಿಪದ್ಧತಿಯು ಪ್ರಚಲಿತದಲ್ಲಿದ್ದವು. ಪುರುಷರು ಸಹ ವಿವಿಧ ರೀತಿಯ ಬಲಿದಾನ ಮಾಡಿಕೊಳ್ಳುತ್ತಿದ್ದರು. ಇದಕ್ಕೆ ಸಾಕ್ಷಿಯಾಗಿ ಅಂದಿನ ಕಾಲದ ಸಾವಿರಾರು 'ವೀರಗಲ್ಲು'ಗಳು ಮತ್ತು 'ಸತಿಗಲ್ಲು'ಗಳು ಇಂದಿಗೂ ಉಳಿದುಬಂದಿವೆ.

### ಆರ್ಥಿಕತೆ

ವಿಜಯನಗರ ಕಾಲದ ಆರ್ಥಿಕತೆಯೂ ಕೃಷಿ, ಉದ್ಯಮ ಮತ್ತು ವ್ಯಾಪಾರಗಳಿಂದ ಕೂಡಿತ್ತು. ಇದನ್ನು ಪ್ರಮುಖವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು. ಅವುಗಳೆಂದರೆ, ಕೃಷಿ ಮತ್ತು ಕೃಷಿಯೇತರ ಆರ್ಥಿಕತೆ. ಆಳುವ ವರ್ಗ ತನ್ನ ಅಭಿವೃದ್ಧಿಗಾಗಿ ಈ ಕಾಲದಲ್ಲಿ ಕೃಷಿಗೆ ಹೆಚ್ಚು ಒತ್ತು ಕೊಡಲಾರಂಭಿಸಿದರು. ಕೆರೆ ಕಟ್ಟೆ, ಕಾಲುವೆ ಮತ್ತು ಬಾವಿಗಳನ್ನು ಕಟ್ಟುವುದರಿಂದ ಮಳೆಯ ನೀರನ್ನು ಸಂಗ್ರಹಿಸಿ ಕೃಷಿ ಚಟುವಟಿಕೆಗಳನ್ನು ವೃದ್ಧಿಗೊಳಿಸ

ಲಾಯಿತು. ಇದಲ್ಲದೆ, ಜನಸಂಖ್ಯೆಯ ಒತ್ತಡವು ಸಹ ಬಂಜರು ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಯಿತು. ಇಂತಹ ಕೆಲಸ ಮಾಡಿದವರಿಗೆ ಆಳುವವರ್ಗ ಕೆಲವು ರಿಯಾಯತಿಗಳನ್ನು ನೀಡಿ ಉತ್ತೇಜನ ನೀಡುತ್ತಿದ್ದರು. ಹೀಗಾಗಿ ಈ ಅವಧಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಹೊಸ ಕೃಷಿ ಪ್ರಧಾನವಾದ ನೆಲೆಗಳು ಅಸ್ತಿತ್ವಕ್ಕೆ ಬಂದವು. ಇತ್ತೀಚಿನ ಸಂಶೋಧೆಯ ಪ್ರಕಾರ ರಾಜ್ಯದ ಬೊಕ್ಕಸಕ್ಕೆ ಪ್ರಮುಖವಾಗಿ ಭೂಕಂದಾಯದಿಂದ ಆದಾಯ ಬರುತ್ತಿತ್ತು. ಭೂಕಂದಾಯವು ಸಾಮಾನ್ಯವಾಗಿ ೧/೪ ರಿಂದ ೧/೬ ರವರೆಗೆ ಇತ್ತು. ಕೃಷ್ಣದೇವರಾಯನ ಕಾಲದಲ್ಲಿ ಬಹಳ ವಿವರವಾದ ಮತ್ತು ವ್ಯವಸ್ಥಿತವಾದ ಭೂಮಾಪನ ಮಾಡಿ ಕಂದಾಯವನ್ನು ೧/೩ ರಿಂದ ೧/೬ ರವರೆಗೆ ನಿಗಧಿಪಡಿಸಲಾಗಿತ್ತು. ಈ ಹೊಸ ಪದ್ಧತಿಗೆ 'ರಾಯರೇಖೆ' ಎಂದು ಕರೆಯಲಾಗುತ್ತಿತ್ತು.

ಈ ಅವಧಿಯಲ್ಲಿ ವಿವಿಧ ರೀತಿಯ ಭೂ ಹಿಡುವಳಿಗಳು ಅಸ್ತಿತ್ವದಲ್ಲಿದ್ದವು. ಅವುಗಳೆಂದರೆ- ಬ್ರಹ್ಮದೇಯ, ದೇವಾದಾಯ, ಮಠಪೂರ ಮತ್ತು ಸೇವಾ ಹಿಡುವಳಿ. 'ಬ್ರಹ್ಮದೇಯ' ಹಿಡುವಳಿ ಎಂದರೆ ಬ್ರಾಹ್ಮಣರಿಗೆ ರಾಜರು ಮತ್ತು ಸಾರ್ವಜನಿಕರು ನೀಡಿದ ಭೂಮಿಯನ್ನು ಬ್ರಹ್ಮದೇಯವೆಂದು ಕರೆಯಲಾಗಿದೆ. 'ದೇವಾದಾಯ' ಹಿಡುವಳಿಯೆಂದರೆ, ದೇವಾಲಯಗಳಿಗೆ ಸಾರ್ವಜನಿಕರು, ಆಳರಸರು, ವ್ಯಾಪಾರಿಗಳು ಮತ್ತಿತರರು ನೀಡಿದ ಭೂಮಿಯನ್ನು ದೇವಾದಾಯವೆಂದು ಕರೆಯಲಾಗಿದೆ. 'ಮಠಪೂರ' ಹಿಡುವಳಿಯೆಂದರೆ ಮಠಗಳಿಗೆ ಸಾರ್ವಜನಿಕರು ದಾನ ಮಾಡಿದ ಭೂಮಿಯನ್ನು ಮಠಪೂರ ಹಿಡುವಳಿಯೆನ್ನಲಾಗಿದೆ. ಇಂತಹ ಭೂಮಿಯಿಂದ ಬಂದ ಆದಾಯದಿಂದ ಮಠದಲ್ಲಿ ಉಚಿತ ಊಟ, ಬಟ್ಟೆ ಮತ್ತು ವಸತಿ ಸೌಕರ್ಯ ಒದಗಿಸಲಾಗುತ್ತಿತ್ತು. 'ಸೇವಾ ಹಿಡುವಳಿ'ಯೆಂದರೆ, ಯಾರು ರಾಜ್ಯದ ಸೇವೆಯಲ್ಲಿದ್ದರೋ ಹಾಗೂ ರಾಜ್ಯಕ್ಕಾಗಿ ಪ್ರಾಣ ನೀಡಿದವರಿಗೆ ನಗದು ಬದಲು ಭೂಮಿಯನ್ನು ಅವರ ಜೀವಿತಕ್ಕೆ ಕೊಡಲಾಗಿತ್ತು. ಇದಲ್ಲದೆ ಸಾರ್ವಜನಿಕ ಕಾರ್ಯಗಳಾದ ಕೆರೆ, ಕಾಲುವೆ, ಕಟ್ಟೆ, ಶಾಲೆ ಮುಂತಾದವುಗಳನ್ನು ನಿರ್ಮಿಸಿದವರಿಗೆ ಸಹ ಹಣದ ಬದಲು ಭೂಮಿಯನ್ನು ನೀಡಲಾಗಿತ್ತು. ಇಂತಹ ಹಿಡುವಳಿಗಳನ್ನು ರಕ್ತಕೊಡುಗೆ, ಉಂಬಳಿ, ಮಾನ್ಯ, ಇನಾಂ, ಬಿತ್ತುವಟ್ಟ ಮತ್ತು ಜಾಗೀರ್ ಎಂದು ಕರೆಯಲಾಗಿತ್ತು. ಇವುಗಳಲ್ಲಿ ಪ್ರಮುಖವಾದುದ್ದು ಅಮರನಾಯಕ ಭೂ ಹಿಡುವಳಿ. ಇದು ವಿಜಯನಗರದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರಿಂದ ತಿಳಿದುಬರುವುದೇನೆಂದರೆ, ಈ ಕಾಲದಲ್ಲಿ ಹಣಕಾಸಿನ ಕೊರತೆ ಇದ್ದುದರಿಂದ ಮಾರುಕಟ್ಟೆಯ ಆರ್ಥಿಕತೆಗೆ ಹೆಚ್ಚು ಒತ್ತು ಕೊಡದೆ ಕೃಷಿಯನ್ನು ಅವಲಂಬಿಸಬೇಕಾಗಿತ್ತು. ಭೂಮಿಯ ಅಂದಿನ ಸಮಾಜದ ಆರ್ಥಿಕ ಮತ್ತು ಸಾಮಾಜಿಕ ಹಾಗೂ ರಾಜಕೀಯ ಸ್ಥಿತಿಗತಿಗಳನ್ನು ನಿರ್ಧರಿಸುವ ಮಾಪನವಾಗಿತ್ತೆಂದರೆ ತಪ್ಪಾಗಲಾರದು.

ಆರ್ಥಿಕತೆಯ ಇನ್ನೊಂದು ಭಾಗವಾದ ಕೃಷಿಯೇತರ ಆರ್ಥಿಕತೆಯು ಕೃಷಿಯೇತರ ಚಟುವಟಿಕೆಗಳ ಮೇಲೆ ಆಧಾರಿತವಾಗಿದೆ. ಕೃಷಿಯೇತರ ಚಟುವಟಿಕೆಗಳೆಂದರೆ ಬಟ್ಟೆ ತಯಾರಿಕೆ, ಉಣ್ಣೆ ಉತ್ಪಾದನೆ, ಲೋಹದ ಕೆಲಸ, ಚರ್ಮ ಹದ ಮಾಡುವುದು, ಮಡಿಕೆ

ತಯಾರಿಸುವುದು ಮತ್ತು ಬೆಲ್ಲ, ಸಕ್ಕರೆ ಉತ್ಪಾದನೆ. ಈ ಚಟುವಟಿಕೆಗಳು ವಿಜಯನಗರ ಕಾಲದಲ್ಲಿ ಹೆಚ್ಚಿನ ಮಟ್ಟದಲ್ಲಿ ಬೆಳೆದು ಆರ್ಥಿಕತೆಯ ಸ್ವರೂಪವನ್ನು ಬದಲಾಯಿಸಿದ್ದವು. ಕೃಷಿಯೇತರ ಬೆಳವಣಿಗೆಗೆ ಮುಖ್ಯ ಕಾರಣ ಕೃಷಿ ಕ್ಷೇತ್ರದಲ್ಲುಂಟಾದ ತೀವ್ರ ಬೆಳವಣಿಗೆಗಳು. ನೀರಾವರಿ ಸೌಕರ್ಯದಿಂದಾಗಿ ಆಹಾರ ಬೆಳೆಗಳ ಜೊತೆಗೆ ಆಹಾರೇತರ ಅಂದರೆ ವಾಣಿಜ್ಯ ಬೆಳೆಗಳಾದ ಹತ್ತಿ, ಕಬ್ಬು, ಎಣ್ಣೆ ಕಾಳುಗಳು, ಅಡಿಕೆ, ತೆಂಗು ಮತ್ತು ಬಾಳೆಹಣ್ಣು ಇತ್ಯಾದಿಗಳನ್ನು ಅಧಿಕ ಪ್ರಮಾಣದಲ್ಲಿ ಬೆಳೆದ ಕಾರಣ ಕೃಷಿ ಆಧಾರಿತ ಉದ್ಯಮಗಳು ಅಸ್ತಿತ್ವಕ್ಕೆ ಬಂದವು. ಅಂದಿನ ಶಾಸನಗಳು ಉತ್ಪಾದನಾ ಘಟಕಗಳ ಮೇಲೆ ವಿಧಿಸುತ್ತಿದ್ದ ಸುಂಕವನ್ನು ಮಗ್ಗದೆರೆ, ಗಾಣದೆರೆ, ತುಂಬದೆರೆ ಇತ್ಯಾದಿ ಶಬ್ದಗಳಿಂದ ಸೂಚ್ಯವಾಗಿ ತಿಳಿಸುತ್ತವೆ. ಈ ಚಟುವಟಿಕೆಗಳಿಂದ ಸ್ಥಳೀಯ ಮಾರುಕಟ್ಟೆಗಳು, ಅಂಗಡಿಗಳು ಮತ್ತು ಬಜಾರುಗಳು ಅಸ್ತಿತ್ವಕ್ಕೆ ಬಂದವು. ಇದರಿಂದಾಗಿ ಹಲವಾರು ನಗರ ಮತ್ತು ಪಟ್ಟಣಗಳು ಸ್ಥಾಪಿಸಲ್ಪಟ್ಟವು. ಕೆಲವು ಇತಿಹಾಸಕಾರರ ಪ್ರಕಾರ ಕ್ರಿ.ಶ. ೧೪ ರಿಂದ ೧೬ ನೆ ಶತಮಾನದಲ್ಲಿ ಸುಮಾರು ೮೦ ದೊಡ್ಡ ನಗರ ಕೇಂದ್ರಗಳಿದ್ದವು. ಈ ರೀತಿಯ ನಗರೀಕರಣದಿಂದ ವ್ಯಾಪಾರ ಮಾರ್ಗಗಳು, ವ್ಯಾಪಾರೀ ಸಂಘಗಳು ಹೆಚ್ಚಾದವು. ಇವುಗಳ ಪರಿಣಾಮವಾಗಿ ವಿಜಯನಗರವು ಸ್ಥಳೀಯ ವ್ಯಾಪಾರದ ಜೊತೆಗೆ ಅಂತರರಾಷ್ಟ್ರೀಯ ವ್ಯಾಪಾರವು ಸಹ ಬೆಳೆಯತೊಡಗಿತು. ವಿಜಯನಗರದ ರಾಜಧಾನಿಯಲ್ಲಿ ಹಲವಾರು ಬಜಾರುಗಳಿದ್ದು ಅಲ್ಲಿ ಸ್ಥಳೀಯ ಹಾಗೂ ವಿದೇಶಿ ವ್ಯಾಪಾರಿಗಳು ಕೊಡುಕೊಳ್ಳುವಿಕೆ ಮಾಡುತ್ತಿದ್ದರು. ಅಬ್ದುಲ್‌ರಜಾಕ್‌ನ ಪ್ರಕಾರ ವಿಜಯನಗರವು ಸುಮಾರು ೩೦೦ ಬಂದರುಗಳನ್ನು ಹೊಂದಿದ್ದು, ಹಿಂದೂಮಹಾಸಾಗರದ ದ್ವೀಪಗಳೊಡನೆ ಮಲಯ, ಬರ್ಮಾ, ಚೀನಾ, ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕ, ಅಬಿಸ್ಸೀನಿಯಾ ಮತ್ತು ಪೋರ್ಚುಗಲ್‌ಗಳೊಡನೆ ವ್ಯಾಪಾರ ಸಂಪರ್ಕ ಹೊಂದಿತ್ತು. ವಿಜಯನಗರದ ಪ್ರಮುಖ ಬಂದರುಗಳೆಂದರೆ ಗೋವಾ, ಚೌಲ್, ದಬೋಲ್, ಹೊನ್ನಾವರ, ಬಾರಕೂರು, ಮಂಗಳೂರು, ಮಂಜೇಶ್ವರ ಮತ್ತು ನೀಲೇಶ್ವರ.

ಅಂದಿನ ಪ್ರಮುಖ ಆಮದಾಗುತ್ತಿದ್ದ ವಸ್ತುಗಳೆಂದರೆ ಕುದುರೆಗಳು, ಆನೆಗಳು, ಮುತ್ತು, ತಾಮ್ರ, ಚೈನಾ ರೇಷ್ಮೆ, ಹವಳ, ಪಾದರಸ ಮತ್ತು ಮಖಮಲ್ಲು ಬಟ್ಟೆ. ಕುದುರೆಗಳನ್ನು ಅರೇಬಿಯಾ, ಸಿರಿಯಾ ಮತ್ತು ಟರ್ಕಿಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಇಲ್ಲಿಂದ ಮುಖ್ಯವಾಗಿ ರಫ್ತಾಗುತ್ತಿದ್ದ ವಸ್ತುಗಳೆಂದರೆ ಅಕ್ಕಿ, ಸಕ್ಕರೆ, ತೆಂಗಿನಕಾಯಿ, ಶ್ರೀಗಂಧ, ತೇಗ, ಮೆಣಸು, ಲವಂಗ, ಶುಂಠಿ, ಚಕ್ಕೆ, ಸಜ್ಜೆ, ಪಗಡೆ, ಹತ್ತಿಯ ಬಟ್ಟೆಗಳು ಮತ್ತು ಮುದ್ರಿಸಿದ ಬಟ್ಟೆಗಳು ಇವುಗಳನ್ನು ಸಾಮಾನ್ಯವಾಗಿ ಪರ್ಷಿಯಾ, ಆಫ್ರಿಕಾ, ಚೀನಾ ಮತ್ತು ಶ್ರೀಲಂಕಾಗಳಿಗೆ ಕಳಿಸಲಾಗುತ್ತಿತ್ತು. ವಜ್ರಗಳನ್ನು ಸಹ ಇಲ್ಲಿಂದ ರಫ್ತು ಮಾಡಲಾಗುತ್ತಿತ್ತೆಂದು ನಂಬಲಾಗಿದೆ. ಇಷ್ಟು ಪ್ರಮಾಣದಲ್ಲಿ ವ್ಯಾಪಾರ ನಡೆಯಲು ಪ್ರಮುಖ ಕಾರಣವೆಂದರೆ ಅಂದಿನ ಸಾರಿಗೆ ಸಂಪರ್ಕ ವ್ಯವಸ್ಥೆ. ವಿಜಯನಗರವನ್ನು ಸಾಮ್ರಾಜ್ಯದ ಎಲ್ಲಾ ಕಡೆಗಳಿಂದ ರಸ್ತೆ ಸೌಕರ್ಯದೊಂದಿಗೆ ಜೋಡಿಸಲಾಗಿತ್ತು. ವ್ಯಾಪಾರದ ಸಾಮಾಗ್ರಿಗಳನ್ನು ಎತ್ತಿನಗಾಡಿ ಮತ್ತು ಕುದುರೆ,

ಕತ್ತೆ ಮತ್ತಿತರ ಪ್ರಾಣಿಗಳ ಮೇಲೆ ಸಾಗಿಸುತ್ತಿದ್ದರು. ಕೆಲವು ಪ್ರದೇಶಗಳಲ್ಲಿ ದೂರದ ಪ್ರಯಾಣಿಕರಿಗೆ ಕಾವಲುಗಾರರನ್ನು ನೇಮಿಸಲಾಗಿತ್ತು.

ಅಂದಿನ ಆರ್ಥಿಕತೆಯ ಇನ್ನೊಂದು ಪ್ರಮುಖ ಅಂಶವೆಂದರೆ ನಾಣ್ಯಪದ್ಧತಿ. ವಿಜಯನಗರ ಸಾಮ್ರಾಜ್ಯದಲ್ಲಿ ಹಲವಾರು ಟಂಕಶಾಲೆಗಳಿದ್ದು, ವಿವಿಧ ರೀತಿಯ ನಾಣ್ಯಗಳನ್ನು ತಯಾರಿಸಲಾಗುತ್ತಿತ್ತು. ಚಿನ್ನದ ನಾಣ್ಯಗಳಲ್ಲಿ ವರಾಹ, ಗದ್ಯಾಣ, ಹೊನ್ನು, (ಪೊನ್) ಅಥವಾ ಪಗೋಡ ಚಿನ್ನದ ನಾಣ್ಯಗಳು, ಪ್ರತಾಪ, ಹಣ, ಹಗ, ವೀಸಾ ಮತ್ತು ಕಾಸು ಪ್ರಮುಖವಾದವು. ಇವುಗಳ ಜೊತೆಗೆ ಪರದೇಶದ ನಾಣ್ಯಗಳು ಸಾಮಾನ್ಯವಾಗಿ ತೀರ ಪ್ರದೇಶಗಳಲ್ಲಿ ಚಲಾವಣೆಯಲ್ಲಿದ್ದವು. ಈ ರೀತಿ ವಿಜಯನಗರ ಕಾಲದಲ್ಲಿ ಆರ್ಥಿಕತೆಯು ಕೃಷಿ ಮತ್ತು ಮಾರುಕಟ್ಟೆಯ ಆರ್ಥಿಕ ಅಂಶಗಳಿಂದ ಕೂಡಿತ್ತು.

### ಧರ್ಮ

ಕೆಲವು ಇತಿಹಾಸಕಾರರ ಪ್ರಕಾರ ವಿಜಯನಗರ ನಿರ್ಮಾಣವಾದುದೇ ಧರ್ಮದ ತಳಹದಿಯ ಮೇಲೆ. ದಕ್ಷಿಣ ಭಾರತದಲ್ಲಿ ಈ ವೇಳೆಗಾಗಲೇ ಶೈವ, ಜೈನ ಮತ್ತು ವೈಷ್ಣವ ಮತಗಳು ತಲೆಯೆತ್ತಿದ್ದವು. ವಿಜಯನಗರದ ಅರಸರು ಈ ಮೂರು ಧರ್ಮಗಳಿಗೆ ಸಮಾನವಾದ ಪ್ರೋತ್ಸಾಹ ನೀಡಿ ಧರ್ಮ ಸಹಿಷ್ಣುತೆಯನ್ನು ಕಾಪಾಡಿದ್ದರು. ಇದಕ್ಕೆ ಸಾಕ್ಷಿಯೆಂಬಂತೆ ಇಂದಿಗೂ ಸಹ ಹಂಪಿಯಲ್ಲಿ ಶೈವ, ವೈಷ್ಣವ ಮತ್ತು ಜೈನ ದೇವಾಲಯಗಳನ್ನು ಕಾಣಬಹುದು. ಬುಕ್ಕರಾಯನ ಕಾಲದಲ್ಲಿ ವೈಷ್ಣವರಿಗೂ ಮತ್ತು ಜೈನರಿಗೂ ಧಾರ್ಮಿಕ ಕಲಹ ಉಂಟಾದಾಗ ಬುಕ್ಕರಾಯನು ಸಮರ್ಥವಾಗಿ ವಿವಾದವನ್ನು ಪರಿಹರಿಸಿ ಇಬ್ಬರಿಗೂ ಸ್ನೇಹ ಬೆಳೆಸಿದ ಘಟನೆಯನ್ನು ಆನೆಗೊಂದಿ, ಹೊಸಪಟ್ಟಣ, ಪೆನುಗೊಂಡೆ, ಕಲ್ಲೆಹಪಟ್ಟಣ ಮತ್ತು ಶ್ರವಣಬೆಳಗೊಳದ ಶಾಸನಗಳು ಸಾರಿ ಹೇಳುತ್ತವೆ. ವಿಜಯನಗರವು ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳನ್ನು ಸಹ ಪ್ರೋತ್ಸಾಹಿಸಿತು. ಎರಡನೆ ದೇವರಾಯನು ಮುಸ್ಲಿಮರನ್ನು ತನ್ನ ಸ್ನೇಹಿತರನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದ್ದನು. ಫೆರಿಸ್ತಾನ ಪ್ರಕಾರ ಇವನು ಖುರಾನಿನ ಪ್ರತಿಯನ್ನು ತನ್ನ ಸಿಂಹಾಸನದ ಮುಂದಿಟ್ಟುಕೊಳ್ಳುತ್ತಿದ್ದನು. ವಿಜಯನಗರದ ರಾಜವಂಶಗಳಲ್ಲಿಯೂ ಧಾರ್ಮಿಕ ಬದಲಾವಣೆಗಳು ಕಂಡುಬಂದವು. ಸಂಗಮ ವಂಶದವರು ಶೈವರಾಗಿದ್ದರೆ, ಉಳಿದ ಮೂರು ವಂಶಗಳು ವೈಷ್ಣವ ಧರ್ಮದ ಕಡೆ ಹೆಚ್ಚು ಒಲವನ್ನು ತೋರಿಸಿದ್ದವು.

ಈ ಕಾಲದ ಧಾರ್ಮಿಕ ಕ್ಷೇತ್ರದಲ್ಲಿ ನಡೆದ ಒಂದು ಪ್ರಮುಖ ಬೆಳವಣಿಗೆಯೆಂದರೆ, ದಾಸಕೂಟದ ಉಗಮ, ವ್ಯಾಸರಾಯರ ನೇತೃತ್ವದಲ್ಲಿ ಪುರಂದರ, ಕನಕ ಮೊದಲಾದ ದಾಸರು ಕೀರ್ತನೆಗಳ ಮೂಲಕ ವೈಷ್ಣವ ಧರ್ಮವನ್ನು ಪ್ರಚಾರ ಮಾಡಿದರು. ಮಧ್ವಾಚಾರ್ಯರು ಪ್ರತಿಪಾದಿಸಿದ ದ್ವೈತಸಿದ್ಧಾಂತರ ಹಿನ್ನೆಲೆಯಲ್ಲಿ ಹೊರಹೊಮ್ಮಿದ ಈ ಭಕ್ತಿ ಸಾಹಿತ್ಯವು ಕರ್ನಾಟಕದ ಧಾರ್ಮಿಕ ಜೀವನದಲ್ಲಿ ಒಂದು ಪ್ರಮುಖ ಘಟ್ಟವಾಗಿದೆ.

## ಸಾಹಿತ್ಯ

ವಿಜಯನಗರದ ಕಾಲದಲ್ಲಿ ದಕ್ಷಿಣ ಭಾರತದ ಎಲ್ಲಾ ಭಾಷೆಗಳಲ್ಲಿಯೂ ಸಾಹಿತ್ಯ ಬೆಳವಣಿಗೆ ಹೊಂದಿತು. ಇವುಗಳಲ್ಲಿ ಪ್ರಮುಖವಾದವುಗಳೆಂದರೆ ಸಂಸ್ಕೃತ, ಕನ್ನಡ, ತೆಲುಗು ಮತ್ತು ತಮಿಳು.

**ಸಂಸ್ಕೃತ ಸಾಹಿತ್ಯ:** ಸಂಸ್ಕೃತ ಸಾಹಿತ್ಯವು ಸಾಮಾನ್ಯವಾಗಿ ಧಾರ್ಮಿಕ ವಿಷಯವನ್ನೊಳಗೊಂಡಿತ್ತು. ಧಾರ್ಮಿಕ ಗುರುಗಳಾದ ವಿದ್ಯಾಶಂಕರ, ವಿದ್ಯಾರಣ್ಯ, ನಯನಾಚಾರ್ಯ ಮತ್ತು ಮಧ್ವರು ನೂರಾರು ಕೃತಿಗಳನ್ನು ರಚಿಸಿದರು. ನಯನಾಚಾರ್ಯರ *ವೇದಾಂತ ಪ್ರಕಾಶ* ವು ಅತ್ಯಂತ ಶ್ರೇಷ್ಠ ಕೃತಿಯಾಗಿದೆ. ಇದಲ್ಲದೆ ಇವರು *ಯಜ್ಞತಂತ್ರ ಸುಧಾನಿಧಿ, ಪ್ರಾಯಶ್ಚಿತ್ತ ಸುಧಾನಿಧಿ* ಮತ್ತು *ಪುರುಷಾರ್ಥ ಸುಧಾನಿಧಿ* ಯನ್ನು ರಚಿಸಿದರು. ವಿದ್ಯಾರಣ್ಯರು ಅರವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ, *ಪರಾಸರೆ ಮಾಧವೀಯ, ಶಂಕರ ವಿಜಯ* ಮತ್ತು *ರಾಜಕಲಾನಿರ್ಣಯ.* ಮಾಧವ ಮಂತ್ರಿಯು *ತಾತ್ಪರ್ಯ ದೀಪಿಕೆ* ಎಂಬ ವ್ಯಾಖ್ಯಾನವನ್ನು ಪದ್ಮಪುರಾಣದ *ಸೂತಸಂಹಿತೆ* ಯ ಮೇಲೆ ರಚಿಸಿದರು. ಈಶ್ವರ ದೀಕ್ಷಿತರು ರಾಮಾಯಣದ ಮೇಲೆ ಎರಡು ವ್ಯಾಖ್ಯಾನಗಳನ್ನು ಬರೆದರು. ಕುಮಾರು ಕಂಪಣ್ಣನ ಹೆಂಡತಿ ಗಂಗಾಬಿಕೆಯು ತನ್ನ ಗಂಡನ ದಿಗ್ವಿಜಯಗಳನ್ನು ಕುರಿತು *ವೀರ ಕಂಪಣರಾಯ ಚರಿತ* ಅಥವಾ *ಮಧುರಾ ವಿಜಯಂ* ಎಂಬ ಕಾವ್ಯವನ್ನು ರಚಿಸಿದಳು. *ಸೊನಾದ್ರಿನಾಥ*ನು *ರಾಮಾಭ್ಯುದಯ* ವನ್ನು ಎರಡನೆ ರಾಜನಾಥ ದಿಂಡಿಮನು *ಸಾಳುವಾಭ್ಯುದಯ* ವನ್ನು, ಮೂರನೆ ರಾಜನಾಥ ದಿಂಡಿಮನು *ಅಚ್ಯುತರಾಭ್ಯುದಯ* ವನ್ನು ಹಾಗೂ ಶಿವಸೂರ್ಯನು *ಪಾಂಡವಾಭ್ಯುದಯ* ವನ್ನು ರಚಿಸಿದ್ದಾರೆ. ಅಭಿರಾಮ ಕಾಮಾಕ್ಷಿಯು *ಅಭಿನವ ರಾಮಾಭ್ಯುದಯ* ವನ್ನು, ತಿರುಮಲಾಂಬೆಯು *ವರದಾಂಬಿಕಾ ಪರಿಣಯ* ವನ್ನು ಹಾಗೂ ತಿರುಮಲಮ್ಮನು ಶಾಸನಗಳಲ್ಲಿ ಸಂಸ್ಕೃತ ಕಾವ್ಯವನ್ನು ರಚಿಸಿದ್ದಾರೆ. ಮಲ್ಲಿಕಾರ್ಜುನನು *ಮಹಾಂತರ ಸುಧಾನಿಧಿ* ಯನ್ನು, ಕೃಷ್ಣದೇವರಾಯನು *ಜಾಂಬವತಿ ಪರಿಣಯ* ವನ್ನು ಮತ್ತು ಅವನ *ಅಮುಕ್ತಮಾಲ್ಯದ* ಪ್ರಕಾರ *ಮಾದಲಸ ಚರಿತ, ಸತ್ಯವಧು ಶಾಂತವನ, ಸಕಲ ಕಥಾಸಾರ ಸಂಗ್ರಹ, ರಸಮಂಜರಿ* ಮತ್ತು *ಜ್ಞಾನ ಚಿಂತಾಮಣಿ* ಯನ್ನು ರಚಿಸಿದ್ದಾನೆ.

ಸಂಸ್ಕೃತದಲ್ಲಿ ಲೌಕಿಕ ವಿಷಯದಲ್ಲಿಯೂ ಕೃತಿಗಳನ್ನು ರಚಿಸಲಾಗಿದೆ. ಅವುಗಳೆಂದರೆ ಸಂಗೀತ, ಪ್ರಣಯ, ಔಷಧಿ ಮತ್ತು ಖಗೋಳಶಾಸ್ತ್ರ, ವಿದ್ಯಾರಣ್ಯರ *ಸಂಗೀತಸಾರ,* ಲಕ್ಷ್ಮೀನಾರಾಯಣನ *ಸಂಗೀತ ಸೂರ್ಯೋದಯ,* ಮೂರನೆ ದೇವರಾಯನ *ರತಿರತ್ನ ಪ್ರದೀಪಿಕಾ* ವನ್ನು ನಯನಾಚಾರ್ಯರು *ಆಯುರ್ವೇದ ಸುಧಾನಿಧಿ* ಯನ್ನು ಮತ್ತು ಲಕ್ಷ್ಮಣ ಪಂಡಿತನು *ವೈದ್ಯರಾಜವಲ್ಲಭ* ಎಂಬ ಕೃತಿಯನ್ನು, ನಯನರು *ಧಾತುವಿಧಿ* ಎಂಬ ವ್ಯಾಕರಣ ಗ್ರಂಥವನ್ನು ಹಾಗೂ ವಿದ್ಯಾರಣ್ಯರು *ಕಾಲಮಾಧವ* ಎಂಬ ಕೃತಿಯನ್ನು ಖಗೋಳಶಾಸ್ತ್ರದ ಮೇಲೆ ರಚಿಸಿದ್ದಾರೆ.

**ಕನ್ನಡ ಸಾಹಿತ್ಯ:** ವಿಜಯನಗರ ಕಾಲದ ಕನ್ನಡ ಸಾಹಿತ್ಯವನ್ನು ವಿದ್ವಾಂಸರು ಜೈನ, ವೀರಶೈವ ಮತ್ತು ಬ್ರಾಹ್ಮಣ ಸಾಹಿತ್ಯ ಎಂದು ವರ್ಗೀಕರಿಸಿದ್ದಾರೆ. ಜೈನರ ಪ್ರಮುಖ ಸಾಹಿತಿಗಳೆಂದರೆ ಬಾಹುಬಲಿ ಮತ್ತು ಮಧುರ. ಇವರು ಚಂಪೂ ಶೈಲಿಯಲ್ಲಿ ೧೫ ತೀರ್ಥಂಕರರನ್ನು ಕುರಿತು ಕಾವ್ಯಗಳನ್ನು ರಚಿಸಿದ್ದಾರೆ. ಇತರರೆಂದರೆ *ಭರತೇಶ ವೈಭವ* ವನ್ನು ರಚಿಸಿದ ರತ್ನಾಕರವರ್ಣಿ. ವಿದ್ಯಾನಂದ ಮತ್ತು ಇರುಗಪ್ಪ ಬೊಮ್ಮರಸರು ಹಲವು ಕೃತಿಗಳನ್ನು ರಚಿಸಿದ್ದಾರೆ. ಭಟ್ಟಕಳಂಕದೇವನು *ಕರ್ನಾಟಕ ಶಬ್ದಾನುಶಾಸನ* ವೆಂಬ ಕನ್ನಡ ವ್ಯಾಕರಣವನ್ನು ರಚಿಸಿದನು.

ವೀರಶೈವ ಕವಿಗಳಲ್ಲಿ ಲಕ್ಕಣ (ದಂಡೇಶ)ನು ಷಟ್ಪದಿಯಲ್ಲಿ ವೀರಶೈವ ಶರಣರನ್ನು ಕುರಿತು ಬರೆದಿದ್ದಾನೆ. ಚಾಮರಸನು *ಪ್ರಭುಲಿಂಗಲೀಲೆ* ಯನ್ನು, ವಿರೂಪಾಕ್ಷ ಪಂಡಿತನು *ಚನ್ನಬಸವ ಪುರಾಣ* ವನ್ನು ಮತ್ತು ತೋಂಟದ ಸಿದ್ಧೇಶ್ವರರು ಹಲವು ಕಾವ್ಯಗಳನ್ನು ರಚಿಸಿದ್ದಾರೆ. ನಂಜುಂಡ ಕವಿಯು *ಕುಮಾರರಾಮನ ಕಥೆ*, ಭೀಮಕವಿಯು *ಬಸವಪುರಾಣ* ಮೊದಲಾದವುಗಳನ್ನು ರಚಿಸಿದರು.

ಬ್ರಾಹ್ಮಣ ಕವಿಗಳಾದ ಕುಮಾರವ್ಯಾಸನು *ಗದುಗಿನ ಭಾರತ*ವೆಂದೇ ಪ್ರಸಿದ್ಧಿಯಾಗಿರುವ ಕನ್ನಡ ಮಹಾಭಾರತವನ್ನು, ನರಹರಿಯು *ತೊರವೆ ರಾಮಾಯಣ* ವನ್ನು, ಲಕ್ಷ್ಮೀಶನು *ಜೈಮಿನಿಭಾರತ* ವನ್ನು, ನಿತ್ಯಾತ್ಮಸುಖಯೋಗಿಯ ಭಾಗವತವನ್ನು ರಚಿಸಿದ್ದಾರೆ.

ಇದಲ್ಲದೆ, ಕನಕದಾಸರು *ಮೋಹನತರಂಗಿಣಿ* ಯನ್ನು ಸಾಂಗತ್ಯದಲ್ಲೂ ಮತ್ತು *ನಳಚರಿತ* ಮತ್ತು *ಹರಿಭಕ್ತಿಸಾರ*ವನ್ನು ಷಟ್ಪದಿಯಲ್ಲೂ ರಚಿಸಿದ್ದಾರೆ. ಇವರ ಚಿಕ್ಕ ಕಾವ್ಯ ರಾಮಧಾನ್ಯ ಚರಿತೆಯು ರಾಗಿಯ ಶ್ರೇಷ್ಠತೆಯನ್ನು ಸಾರುತ್ತದೆ. ಇವರಲ್ಲದೆ ಶ್ರೀಪಾದರಾಯ ಮತ್ತು ಪುರಂದರದಾಸರು ಸಹ ತಮ್ಮ ಕೀರ್ತನೆಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ.

ಲೌಕಿಕ ವಿಷಯಗಳಲ್ಲೂ ಕೃತಿಗಳನ್ನು ರಚಿಸಲಾಗಿದೆ. ಅವುಗಳೆಂದರೆ- ಕಾವ್ಯ, ಜ್ಯೋತಿಷ್ಯಶಾಸ್ತ್ರ, ಪಶುವೈದ್ಯಕೀಯ, ನಿಘಂಟುಶಾಸ್ತ್ರ, ಶೃಂಗಾರಶಾಸ್ತ್ರ ಮತ್ತು ಪಾಕಶಾಸ್ತ್ರ.

**ತೆಲುಗು ಸಾಹಿತ್ಯ:** ಕೃಷ್ಣದೇವರಾಯನ ಕಾಲದಲ್ಲಿ ತೆಲುಗು ಸಾಹಿತ್ಯವು ತನ್ನ ಉನ್ನತ ಮಟ್ಟವನ್ನು ಮುಟ್ಟಿತ್ತು. ಇವನೇ ಸ್ವತಃ ಕವಿಯಾಗಿದ್ದು *ಅಮುಕ್ತಮಾಲ್ಯದ* ಎಂಬ ಕೃತಿಯನ್ನು ರಚಿಸಿದ್ದಾನೆ. ಇದು ಅಂದಿನ ರಾಜಕೀಯ ಪದ್ಧತಿಯನ್ನು ತಿಳಿಸುತ್ತದೆ. ಇವನ ಆಸ್ಥಾನದಲ್ಲಿ 'ಅಷ್ಟದಿಗ್ಗಜ'ರೆಂಬ ಎಂಟು ಜನ ತೆಲುಗು ಕವಿಗಳಿದ್ದರು. ಅವರೆಂದರೆ ಅಲ್ಲಸಾನಿ ಪೆದ್ದಣ್ಣ, ನಂದಿ ತಿಮ್ಮಣ್ಣ, ರಾಮಭದ್ರ ಕವಿ, ದೂರ್ಜಟಿ, ಮಲ್ಲಣ್ಣ, ಪಿಂಗಳ ಸೂರಣ್ಣ, ರಾಮರಾಜ ಭೂಷಣ ಮತ್ತು ತೆನಾಲಿ ರಾಮಕೃಷ್ಣ ಕವಿ. ಅಲ್ಲಸಾನಿ ಪೆದ್ದಣ್ಣನು *ಮನುಚರಿತಮು*, ತಿಮ್ಮಣ್ಣನು *ಪಾರಿಜಾತ ಅಪಹರಣಮು*, ರಾಮಭದ್ರ ಕವಿಯು *ರಾಧಾಮಾಧವಮು*, ದೂರ್ಜಟಿಯು *ಕಾಳಹಸ್ತಿ ಶತಕ*ವನ್ನು, ಪಿಂಗಳ ಸೂರಣ್ಣನು *ಕಲಾ ಪೂರ್ಣೋದಯಮು*, ರಾಮರಾಜ ಭೂಷಣನು *ವಸುಚರಿತಮು* ಮತ್ತು ತೆನಾಲಿ ರಾಮಕೃಷ್ಣನು *ಉದ್ಭತಾಚಾರ್ಯ ಚರಿತಮು* ಮತ್ತು *ಪಾಂಡುರಂಗ ಮಹಾತ್ಮ ಮು* ರಚಿಸಿದ್ದರು. ಇವುಗಳಲ್ಲಿ ಕೊನೆಯದನ್ನು ತೆಲುಗಿನ ಪಂಚಮಹಾಕಾವ್ಯವೆಂದು ಪರಿಗಣಿಸಲ್ಪಟ್ಟಿದೆ.

ತಮಿಳು ಸಾಹಿತ್ಯ: ತಮಿಳಿನಲ್ಲಿ ಕುಮಾರ ಸರಸ್ವತಿಯು ಕೃಷ್ಣದೇವರಾಯನ ಮತ್ತು ಗಜಪತಿ ರಾಜಕುಮಾರಿಯ ವಿವಾಹವನ್ನು ಕುರಿತು ಕಾವ್ಯವನ್ನು ರಚಿಸಿದ್ದಾರೆ. ಕೃಷ್ಣದೇವ ರಾಯನು ಮಂಡಲ ಪುರುಷ, ಜ್ಞಾನಪ್ರಕಾಶ, ತತ್ವಪ್ರಕಾಶ ಮತ್ತು ಹರಿಹರ ಎಂಬ ಕವಿಗಳನ್ನು ಪ್ರೋತ್ಸಾಹಿಸಿದ್ದನು. ಇವರೆಲ್ಲರೂ ಸಾಮಾನ್ಯವಾಗಿ ಶೈವ ಸಿದ್ಧಾಂತದ ಮೇಲೆ ಕಾವ್ಯ ರಚಿಸಿದ್ದಾರೆ.

ಈ ರೀತಿ ವಿಜಯನಗರದ ಅರಸರು ದಕ್ಷಿಣ ಭಾರತದ ಎಲ್ಲಾ ಭಾಷೆ ಮತ್ತು ಸಾಹಿತ್ಯಗಳ ಬೆಳವಣಿಗೆಗೆ ಅಪಾರವಾದ ಪ್ರೋತ್ಸಾಹ ನೀಡಿದ್ದರು. ಈ ಕಾರಣಗಳಿಂದಾಗಿಯೇ ಕೆಲವು ಇತಿಹಾಸಕಾರರು ವಿಜಯನಗರದ ಕಾಲದ ಸಾಹಿತ್ಯ ಬೆಳವಣಿಗೆಯನ್ನು ರೋಮ್ ಸಾಮ್ರಾಜ್ಯದ ಅಗಸ್ಟಸ್ ಯುಗಕ್ಕೂ ಮತ್ತು ಬ್ರಿಟಿಷ್ ಸಾಮ್ರಾಜ್ಯದ ಎಲಿಜಬೆತ್ ಮತ್ತು ಸ್ಟೂಯರ್ಟ್ ದೊರೆಗಳ ಯುಗಕ್ಕೂ ಹೋಲಿಸಿದ್ದಾರೆ.

## ಕಲೆ ಮತ್ತು ವಾಸ್ತುಶಿಲ್ಪ

ವಿಜಯನಗರ ಕಾಲದಲ್ಲಿ ಇಡೀ ದಕ್ಷಿಣ ಭಾರತದಲ್ಲಿ ಶೈವ, ವೈಷ್ಣವ ಮತ್ತು ಜೈನ ದೇವಾಲಯಗಳನ್ನು ಕಟ್ಟಿಸುವುದರ ಜೊತೆಗೆ ದುರಸ್ತಿ ಕಾರ್ಯಗಳನ್ನು ಕೈಗೊಳ್ಳಲಾಗಿತ್ತು. ಇವರ ಪ್ರಸಿದ್ಧ ದೇವಾಲಯಗಳು ಹಂಪಿ, ಶ್ರೀಶೈಲ, ತಿರುಮಲ, ತಿರುಪತಿ, ಪೆನುಗೊಂಡ, ತಾಡಪತ್ರಿ, ಲೇಪಾಕ್ಷಿ, ಶ್ರೀರಂಗಂ, ಚಿದಂಬರಂ, ಕಂಚಿ, ವೆಲ್ಲೂರು, ರಾಮೇಶ್ವರಂ, ಚಂದ್ರಗಿರಿ, ಕಾಳಹಸ್ತಿ, ಮಧುರೈ ಮತ್ತು ಆನೆಗೊಂದಿಗಳಲ್ಲಿವೆ. ಹಂಪೆಯೊಂದರಲ್ಲೇ ನೂರಕ್ಕೂ ಅಧಿಕ ಸ್ಮಾರಕಗಳಿವೆ. ಇವುಗಳನ್ನು ಧಾರ್ಮಿಕ, ಸಾರ್ವಜನಿಕ ಮತ್ತು ಮಿಲಿಟರಿ ಕಟ್ಟಡಗಳಾಗಿ ವಿಂಗಡಿಸಬಹುದು. ಕೃಷ್ಣದೇವರಾಯನು ವಿರೂಪಾಕ್ಷ ದೇವಾಲಯದ ರಂಗ ಮಂಟಪವನ್ನು ಮತ್ತು ಗೋಪುರವನ್ನು, ಬಾಲಕೃಷ್ಣ ದೇವಾಲಯ, ವಿಜಯವಿಠ್ಠಲ ದೇವಾಲಯಗಳನ್ನು ಕಟ್ಟಿಸಿದನು. ಇದಲ್ಲದೆ ಬೃಹದಾಕಾರದ ಲಕ್ಷ್ಮೀನರಸಿಂಹನ ವಿಗ್ರಹವನ್ನು ಪ್ರತಿಷ್ಠಾಪಿಸಿದನು.

ಕಲಾ ವಿದ್ವಾಂಸರು ಹಂಪೆಯ ಸ್ಮಾರಕಗಳನ್ನು ಪ್ರಮುಖವಾಗಿ ಎರಡು ಗುಂಪುಗಳಾಗಿ ವಿಂಗಡಿಸಿದ್ದಾರೆ. ಅವುಗಳೆಂದರೆ - ದೇವಾಲಯಗಳು ಮತ್ತು ಸಾರ್ವಜನಿಕ ಕಟ್ಟಡಗಳು. ಇಲ್ಲಿಯ ಪ್ರಮುಖ ದೇವಾಲಯಗಳೆಂದರೆ ವಿರೂಪಾಕ್ಷ, ವಿಠ್ಠಲ, ಹಜಾರರಾಮ, ಅಚ್ಯುತ ರಾಯ, ಪಟ್ಟಾಭಿರಾಮ, ಕಡಲೇಕಾಳು, ಸಾಸುವೆಕಾಳು ಗಣೇಶ, ಮಾಲ್ಯವಂತ ರಘುನಾಥ, ಬಾಲಕೃಷ್ಣ, ಚಂದ್ರಶೇಖರ, ಅನಂತಶಯನ ಗುಡಿ ಮತ್ತು ಹೇಮಕೂಟದಲ್ಲಿರುವ ದೇವಾಲಯಗಳು. ಪ್ರಮುಖ ಸಾರ್ವಜನಿಕ ಕಟ್ಟಡಗಳೆಂದರೆ - ಆನೆಯ ಲಾಯ (ಗಜಶಾಲೆ) ರಾಣಿಯ ಈಜುವಕೊಳ, ಮಹಾನವಮಿ ದಿಬ್ಬ, ವೀಕ್ಷಕ ಗೋಪುರಗಳು, ವಾಸದ ಕಟ್ಟಡಗಳು, ಅರಮನೆಗಳು, ಕಾಲುವೆಗಳು, ಕೆರೆಗಳು ಮತ್ತು ಬಾವಿಗಳು ಮತ್ತು ಕೋಟೆ ಕಂದಕಗಳು, ಈ ಎಲ್ಲಾ ಕಟ್ಟಡಗಳನ್ನು ಗ್ರಾನೈಟ್ ಉಪಯೋಗಿಸಿ ಕಟ್ಟಲಾಗಿದೆ.

**ಮುಖ್ಯ ಲಕ್ಷಣಗಳು:** ಹಂಪೆಯ ಹೇಮಕೂಟದಲ್ಲಿರುವ ದೇವಾಲಯಗಳು 'ತ್ರಿಕೂಟಾಚಲ' ದೇವಾಲಯಗಳಾಗಿದ್ದು, ಮೂರು ಗರ್ಭಗುಡಿಗಳನ್ನು, ಮೂರು ಅಂತರಾಳಗಳನ್ನು ಹೊಂದಿದ್ದು ಒಂದು ನವರಂಗವನ್ನು ಮತ್ತು ಒಂದು ಮುಖಮಂಟಪವನ್ನು ಹೊಂದಿವೆ. ಈ ದೇವಾಲಯಗಳು ಕದಂಬ-ನಾಗರ ಶಿಖರವನ್ನು ಹೊಂದಿವೆ. ಇಲ್ಲಿಯ ಇತರ ದೇವಾಲಯಗಳು ಬೃಹದಾಕಾರವಾಗಿಯೂ, ವಿಶಾಲವಾಗಿಯೂ ಮತ್ತು ಎತ್ತರವಾಗಿಯೂ ಕಟ್ಟಲ್ಪಟ್ಟಿವೆ. ಈ ದೇವಾಲಯಗಳಲ್ಲೆವೂ ಸಾಮಾನ್ಯವಾಗಿ ಗರ್ಭಗುಡಿ, ಅಂತರಾಳ, ಪ್ರದಕ್ಷಿಣ ಪಥ, ನವರಂಗ, ಮುಖಮಂಟಪ ಮತ್ತು ಪರಿವಾರ ದೇವತೆಗಳ ಗುಡಿಗಳನ್ನು ಹೊಂದಿವೆ. ಇನ್ನು ಕೆಲವು ದೇವಾಲಯಗಳಲ್ಲಿ ವಾಹನ ಮಂಟಪ, ಕನ್ನಡಿ ಮಂಟಪಗಳನ್ನು ಕಾಣಬಹುದು. ಇದಲ್ಲದೆ ಬಲಿಪೀಠ, ದೀಪಸ್ತಂಭ ಮತ್ತು ಧ್ವಜಸ್ತಂಭಗಳನ್ನು ಹೊಂದಿವೆ. ದೇವಾಲಯಗಳ ಪ್ರಾಕಾರವು ವಿಶಾಲವಾಗಿದ್ದು, ಎತ್ತರವಾದ ಗೋಡೆಗಳಿಂದ ಆವೃತಗೊಂಡಿವೆ. ಕೆಲವು ದೇವಾಲಯಗಳು ಒಂದರಿಂದ ಮೂರು ಪ್ರವೇಶ ದ್ವಾರಗಳನ್ನು ಹೊಂದಿವೆ.

**ಸ್ತಂಭಗಳು:** ಕಂಬಗಳಲ್ಲಿ ಎರಡು ಪ್ರಕಾರಗಳಿವೆ. ಮೊದಲನೆಯದು ಮೂಲತಃ ಚಚ್ಚೌಕಕಾರದಲ್ಲಿದ್ದು, ಎತ್ತರ ಹಾಗೂ ತೆಳುವಾಗಿರುತ್ತವೆ. ಎರಡನೆಯ ರೀತಿಯ ಸ್ತಂಭಗಳನ್ನು ಎರಡು ಭಾಗಗಳಾಗಿ ವಿಂಗಡಿಸಿ, ಮೊದಲ ಭಾಗದಲ್ಲಿ ಯಾಳಿ, ಸಿಂಹ ಮತ್ತು ಓಡುತ್ತಿರುವ ಕುದುರೆಯ ವಿಗ್ರಹಗಳನ್ನು ಕೆತ್ತಲಾಗಿದೆ. ಎರಡನೆ ಭಾಗದಲ್ಲಿ ಚಿಕ್ಕ ಚಿಕ್ಕ ಕಂಬಗಳನ್ನು ೪ ರಿಂದ ೧೦ ರವರೆಗೆ ವಿಂಗಡಿಸಿ ಇವುಗಳಿಂದ ಸಂಗೀತ ಹೊರಹೊಮ್ಮುವಂತೆ ಮಾಡಲಾಗಿದೆ.

**ಕಲ್ಲಿನ ರಥ:** ವಿಠ್ಠಲ ದೇವಾಲಯದಲ್ಲಿರುವ ಒಂದೇ ಕಲ್ಲಿನಲ್ಲಿ ತಯಾರಿಸಿದಂಥ ರಥವು ಶಿಲ್ಪಕಲೆಗೆ ಹೆಸರುವಾಸಿಯಾಗಿದೆ. ಇದರ ಶಿಖರವನ್ನು ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಲಾಗಿದ್ದು, ಈಗ ಇದು ಶಿಥಿಲಾವಸ್ಥೆಯಲ್ಲಿದೆ. ಇದೇ ರೀತಿಯ ರಥವನ್ನು ತಾಡಪತ್ರಿಯಲ್ಲೂ ಕಾಣಬಹುದು.

### ಸಾರ್ವಜನಿಕ ಕಟ್ಟಡಗಳು

ಸಾರ್ವಜನಿಕ-ಲೌಕಿಕ ಕಟ್ಟಡಗಳಲ್ಲಿ 'ಕಮಲ ಮಹಲ್' ಪ್ರಮುಖವಾದದ್ದು. ಇದು ಇಂಡೋ-ಮುಸ್ಲಿಂ (ಇಂಡೋ-ಸೆರ್ಸಾನಿಕ್) ವಾಸ್ತುಶಿಲ್ಪ ಶೈಲಿಯ ಪ್ರಮುಖ ಉದಾಹರಣೆಯಾಗಿದೆ. ಇದರಲ್ಲಿ ಮಹಡಿಗಳಿದ್ದು, ನೆಲ ಅಂತಸ್ತಿನಲ್ಲಿ ತೆರೆದ ಮತ್ತು ವಿಶಾಲವಾದ ಹಜಾರಗಳಿಂದ ಕೂಡಿದ್ದು ಬೃಹದಾಕಾರದ ಕಂಬಗಳನ್ನು ಹೊಂದಿದೆ. ಮೇಲಿನ ಮಹಡಿಯಲ್ಲಿ ಹಲವಾರು ಕಿಟಕಿಗಳು ಮತ್ತು ಕೈಸಾಲೆಗಳಿವೆ. ಇದರ ಚಾವಣಿಯ ಮೇಲೆ ಐದು ಶಿಖರಗಳಿವೆ. 'ಗಜಶಾಲೆ'ಯು ಬಹಳ ದೊಡ್ಡದಾಗಿದ್ದು ಪಶ್ಚಿಮಾಭಿಮುಖ ಹೊಂದಿದ್ದು ಹಲವಾರು ಕೊಠಡಿಗಳನ್ನು ಒಂದೇ ಸಾಲಿನಲ್ಲಿ ಕಾಣಬಹುದು. ಇವುಗಳನ್ನು ರಾಜರು ಬಳಸುತ್ತಿದ್ದು ಪಟ್ಟದ ಆನೆಗಳನ್ನು ಕಟ್ಟಲು ಬಳಸುತ್ತಿದ್ದರೆನ್ನಲಾಗಿದೆ. 'ರಾಣಿಯರ ಸ್ನಾನಕೊಳ'ವು ಕಮಾನಿನ ಕಂಬಗಳ ಸಾಲು ಮತ್ತು ಹೊ[illegible]ಚಿದ ಕೈಸಾಲೆಗಳಿಂದ ಕೂಡಿದೆ. ಇದರಲ್ಲಿ ಸ್ವಚ್ಛ ನೀರನ್ನು ತುಂಬಲು ಮತ್ತು ಮಲೀನವಾದ [illegible] ಹೊರಹಾಕಲು ಪ್ರತ್ಯೇಕವಾದ ಕೊಳವೆಗಳನ್ನು

ಮತ್ತು ಚರಂಡಿಗಳನ್ನು ಮಾಡಲಾಗಿದೆ. 'ಮಹಾನವಮಿ ದಿಬ್ಬ'ವು ಈಗ ಶಿಥಿಲಾವಸ್ಥೆಯಲ್ಲಿದ್ದು ಅದರ ಅಡಿಪಾಯವು ಮಾತ್ರ ಸುಸ್ಥಿತಿಯಲ್ಲಿದೆ. ಇದರ ಸುತ್ತಲೂ ವಿವಿಧ ರೀತಿಯ ಶಿಲ್ಪಗಳ ಪಟ್ಟಿಯಿದೆ. ರಾಜನ ಸಭಾಂಗಣವು ಸಂಪೂರ್ಣವಾಗಿ ಹಾಳಾಗಿ ಅದರ ಅಡಿಪಾಯ ಮಾತ್ರ ಇದೆ. ಇಲ್ಲಿ ಹತ್ತು ಸಾಲಿನ ಕುಳಿಗಳಿದ್ದು ಬಹುಶಃ ಸಭಾಂಗಣದ ಮೇಲ್ಛಾವಣಿಯನ್ನು ಭದ್ರಪಡಿಸಲು ಕಂಬಗಳನ್ನು ಬಳಸಿರಬಹುದು. ಇದರ ಪಕ್ಕದಲ್ಲಿಯೇ ಮೆಟ್ಟಿಲಿರುವ ಪುಷ್ಕರಣಿಯಿದೆ. ಇದರಿಂದ ಬಹುಶಃ ಅರಮನೆಗೆ ನೀರಿನ ಪೂರೈಕೆ ಮಾಡಲಾಗುತ್ತಿತ್ತು.

ಈ ರೀತಿ ವಿಜಯನಗರದ ಕಾಲದಲ್ಲಿ ಎಲ್ಲಾ ರೀತಿಯ ಸ್ಮಾರಕಗಳನ್ನು ಗ್ರಾನೈಟ್ ಕಲ್ಲು, ಇಟ್ಟಿಗೆ ಮತ್ತು ಗಾರೆ ಬಳಸಿ ಕಟ್ಟಲಾಗಿದ್ದು, ಕಲಾಪ್ರಪಂಚದಲ್ಲಿ ಅದ್ವಿತೀಯ ಸಾಧನೆ ಮಾಡಿದ್ದಾರೆ.

**ಚಿತ್ರಕಲೆ**

ಹಂಪೆಯ ವಿರೂಪಾಕ್ಷ ದೇವಾಲಯದ ನವರಂಗದ ಚಾವಣಿಯು ಹಲವಾರು ಚಿತ್ರಗಳಿಂದ ಕೂಡಿದೆ. ಇದರ ವಿಷಯವು ಮನ್ಮಥ ವಿಜಯ, ತ್ರಿಪುರ ಸಂಹಾರ, ವಿಷ್ಣುವಿನ ದಶಾವತಾರ, ಅಷ್ಟದಿಕ್ಪಾಲಕರು, ಶಿವಪಾರ್ವತಿಯರ ಕಲ್ಯಾಣ ಮುಂತಾದವು. ಲೇಪಾಕ್ಷಿಯ ವೀರಭದ್ರ ದೇವಾಲಯದ ನವರಂಗ ಮತ್ತು ಮುಖಮಂಟಪದ ಮೇಲ್ಭಾಗವು ಪಾರ್ವತಿ ಕಲ್ಯಾಣ, ದಕ್ಷಿಣ ಮೂರ್ತಿ, ಶ್ರೀರಾಮನ ಪಟ್ಟಾಭಿಷೇಖ ಮುಂತಾದವುಗಳನ್ನು ಹೊಂದಿದೆ. ಇದಲ್ಲದೆ ಆನೆಗೊಂದಿಯ ಕೆಲವು ದೇವಾಲಯಗಳಲ್ಲಿಯೂ ಈ ರೀತಿಯ ಚಿತ್ರಕಲೆಯನ್ನು ಕಾಣಬಹುದು.

## ವಿದೇಶಿ ಪ್ರವಾಸಿಗರು

ವಿಜಯನಗರದ ಸಂಪತ್ತು ಮತ್ತು ಕೀರ್ತಿಯು ವಿದೇಶಿಯರನ್ನು ಸೆಳೆದಿತ್ತು. ಇಟಲಿಯ ನಿಕೊಲೋಕೊಂಟಿಯ ವಿಜಯನಗರಕ್ಕೆ ಭೇಟಿ ನೀಡಿದ ಪ್ರಥಮ ವಿದೇಶಿ ಯಾತ್ರಿಕನಾಗಿದ್ದಾನೆ. ಇವನು ಒಂದನೆ ದೇವರಾಯನ ಕಾಲದಲ್ಲಿ ಭೇಟಿ ನೀಡಿದ್ದನು. ಇವನ ಪ್ರಕಾರ ವಿಜಯನಗರದ ಸುತ್ತಳತೆಯು ೬೦ ಚದರ ಮೈಲಿಯಿದ್ದು, ಹಲವಾರು ಕಾಲುವೆಗಳನ್ನು ನೀರಾವರಿಗೋಸ್ಕರ ಕಟ್ಟಿಸಲಾಗಿತ್ತು. ಇಲ್ಲಿಯ ಬೀದಿಗಳು, ದ್ವಾರಗಳು ಮತ್ತು ಅರಮನೆಗಳನ್ನು ವಿವರವಾಗಿ ತಿಳಿಸಿದ್ದಾನೆ. ಇಲ್ಲಿಯ ಹಬ್ಬ, ಹರಿದಿನಗಳು ಅದರಲ್ಲೂ ವಿಶೇಷವಾಗಿ ಮಹಾನವಮಿ ಹಬ್ಬದ ಆಚರಣೆ ಮತ್ತು ಸಂಪ್ರದಾಯಗಳನ್ನು ಕುರಿತು ಸಾಕಷ್ಟು ಮಾಹಿತಿ ನೀಡಿದ್ದಾನೆ.

ಅಬ್ದುಲ್‌ರಜಾಕ್‌ನು ಇಮ್ಮಡಿ ದೇವರಾಯನ ಕಾಲದಲ್ಲಿ ಪರ್ಷಿಯಾದಿಂದ ರಾಯಭಾರಿಯಾಗಿ ಬಂದಿದ್ದನು. ಪರ್ಷಿಯಾಕ್ಕೆ ವಾಪಸ್ಸಾದ ನಂತರ ಪರ್ಷಿಯಾದ ಇತಿಹಾಸ ಎಂಬ ಪುಸ್ತಕ ಬರೆದು, ಅದರಲ್ಲಿ ವಿಜಯನಗರಕ್ಕೆ ಸಂಬಂಧಿಸಿದಂತೆ ಸಾಕಷ್ಟು ಮಾಹಿತಿ ನೀಡಿದ್ದಾನೆ. ಇವನ ಪ್ರಕಾರ ವಿಜಯನಗರವು ಹೆಚ್ಚು ಜನಸಂಖ್ಯೆಯಿಂದ ಕೂಡಿದ್ದು, ಫಲವತ್ತಾದ ಭೂಮಿಯನ್ನು ಹೊಂದಿತ್ತು. ವಿಜಯನಗರದ ಸಾಮ್ರಾಜ್ಯವು ಸುಮಾರು ೩೦೦ ಬಂದರುಗಳನ್ನು ಹೊಂದಿತ್ತು. ಜನರು ಶ್ರೀಮಂತರಾಗಿದ್ದು, ವಿವಿಧ ರೀತಿಯ ಆಭರಣಗಳನ್ನು ಧರಿಸುತ್ತಿದ್ದರು.

ವಿಜಯನಗರವು ಏಳುಸುತ್ತಿನ ಗೋಡೆಗಳನ್ನು ಹೊಂದಿದ್ದು ಸುಮಾರು ೧೨,೦೦೦ ಪೊಲೀಸರು ಈ ನಗರವನ್ನು ಕಾಯುತ್ತಿದ್ದರು. ಇದಲ್ಲದೆ ೧,೦೦೦ ಆನೆಗಳಿದ್ದು ಅವು ಬೆಟ್ಟವನ್ನು ಹೋಲುತ್ತಿದ್ದವೆಂದು ಅಭಿಪ್ರಾಯ ಪಟ್ಟಿದ್ದಾನೆ.

ರಷ್ಯಾದ ನಿಕೇಟಿನ್ ಬೀದರ್‌ನಲ್ಲಿ ಸುಮಾರು ನಾಲ್ಕು ವರ್ಷಗಳ ಕಾಲ ಇದ್ದನು. ಇವನು ಹೆಚ್ಚಾಗಿ ಬಹಮನಿ ಸುಲ್ತಾನರ ಬಗ್ಗೆ ಹೆಚ್ಚು ಮಾಹಿತಿ ನೀಡಿದ್ದರೂ, ಈ ಮಾಹಿತಿಯಲ್ಲಿ ವಿಜಯನಗರಕ್ಕೆ ಸಂಬಂಧಿಸಿದಂತೆ ಬಹಳ ಉಪಯುಕ್ತವಾದ ವಿಷಯಗಳನ್ನು ತಿಳಿಯ ಬಹುದು. ಇವನು ವಿಜಯನಗರ ಮತ್ತು ಬಹಮನಿಯರ ನಡುವೆ ನಡೆಯುತ್ತಿದ್ದ ಕದನಗಳ ಬಗ್ಗೆ ಹೆಚ್ಚು ಬೆಳಕು ಚೆಲ್ಲಿದ್ದಾನೆ. ಇದಲ್ಲದೆ ವಿಜಯನಗರದ ಕೋಟೆಗಳು, ಪಟ್ಟಣಗಳು ಮತ್ತು ಸೈನ್ಯದ ಬಗ್ಗೆಯೂ ಸಹ ಮಾಹಿತಿ ನೀಡಿದ್ದಾನೆ.

**ಪೋರ್ಚುಗೀಸ್‌ನ ಡ್ಯೂರೇಟ್ ಬಾರ್ಬೋಸನು** ಕೃಷ್ಣದೇವರಾಯನ ಕಾಲದಲ್ಲಿ ಭೇಟಿ ನೀಡಿದ್ದನು. ಇವನ ಪ್ರಕಾರ ವಿಜಯನಗರವು ಶ್ರೀಮಂತವಾಗಿದ್ದು ಎಲ್ಲಾ ರೀತಿಯ ಸರಕು ಸರಂಜಾಮುಗಳು ಇಲ್ಲಿ ದೊರೆಯುತ್ತಿದ್ದವು. ಭಟ್ಕಳದ ಬಂದರು ಸಮುದ್ರ ವ್ಯಾಪಾರದ ಪ್ರಮುಖ ರೇವುಪಟ್ಟಣವಾಗಿದ್ದು, ಇದರ ಮುಖಾಂತರ ಕಬ್ಬಿಣ, ವಜ್ರ ಮತ್ತು ಸಾಂಬಾರ ಪದಾರ್ಥಗಳನ್ನು ರಫ್ತು ಮಾಡಲಾಗುತ್ತಿತ್ತು. ಮಾಣಿಕ್ಯವನ್ನು ಪೆಗುವಿನಿಂದ, ರೇಷ್ಮೆಯನ್ನು ಚೀನಾ ಮತ್ತು ಅಲೆಗ್ಸಾಂಡ್ರಿಯಾದಿಂದ, ಕರ್ಪೂರ, ಕಸ್ತೂರಿ, ಮೆಣಸು ಹಾಗೂ ಶ್ರೀಗಂಧವನ್ನು ಮಲಬಾರಿನಿಂದ ತರಿಸಲಾಗುತ್ತಿತ್ತು. ಇವನ ಪ್ರಕಾರ ಕೃಷ್ಣದೇವರಾಯನು ಧರ್ಮ ಸಹಿಷ್ಣುವಾಗಿದ್ದನು.

**ಪೋರ್ಚುಗೀಸನ** ಮತ್ತೊಬ್ಬ ಯಾತ್ರಿಕ **ಡೊಮಿಂಗೋ ಪಾಯಸನು** ಇದೇ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ್ದು ಇಲ್ಲಿಯ ಭೂಮಿಯ ಮೇಲ್ಮೈನ ಲಕ್ಷಣಗಳು, ವ್ಯಾಪಾರ, ಮಾರುಕಟ್ಟೆಗಳು, ಆಹಾರ ಪದಾರ್ಥಗಳು, ಆರ್ಥಿಕ ಸ್ಥಿತಿಗಳು, ರಾಜನ ದಿನನಿತ್ಯ ಕಾರ್ಯ ಗಳು, ರಾಣಿಯರು, ಹಬ್ಬಗಳು, ಸಂಪ್ರದಾಯಗಳು, ಅರಮನೆಗಳು ಮತ್ತು ದೇವಾಲಯಗಳ ಬಗ್ಗೆ ತನ್ನ ಬರೆಹಗಳಲ್ಲಿ ಹೆಚ್ಚು ಬೆಳಕು ಬೀರಿದ್ದಾನೆ.

**ಫೆರ್‌ನಾವೋ ನ್ಯೂನಿಜ್‌ನು** ಅಚ್ಯುತದೇವರಾಯನ ಕಾಲದಲ್ಲಿ ಭೇಟಿ ನೀಡಿದ್ದನು. ಇವನ ದಿನಚರಿಯು ೨೩ ಅಧ್ಯಾಯಗಳನ್ನು ಹೊಂದಿದ್ದು, ಅದರಲ್ಲಿ ಮೊದಲಿನ ನಾಲ್ಕು ಅಧ್ಯಾಯಗಳು ಸಂಗಮ ವಂಶದ ಬಗ್ಗೆಯೂ, ೧೪ ಅಧ್ಯಾಯಗಳು ಕೃಷ್ಣದೇವರಾಯನ ಜೀವನ ಮತ್ತು ಆಡಳಿತದ ಬಗ್ಗೆಯೂ ಮತ್ತು ಉಳಿದ ಅಧ್ಯಾಯಗಳು ಸಮಕಾಲೀನ ಸಾಮಾಜಿಕ ಸ್ಥಿತಿಗತಿಗಳನ್ನು ಹಾಗೂ ಅಚ್ಯುತದೇವರಾಯನ ಆಡಳಿತ ಕ್ರಮವನ್ನು ತಿಳಿಸುತ್ತವೆ. ಇವನು ವಿಜಯನಗರವನ್ನು ಹೆಚ್ಚಾಗಿ ವರ್ಣಿಸದಿದ್ದರೂ, ಕೃಷ್ಣದೇವರಾಯನು ರಾಯಚೂರನ್ನು ಮುತ್ತಿಗೆ ಹಾಕಿದ್ದನ್ನು ವಿವರವಾಗಿ ತಿಳಿಸಿದ್ದಾನೆ.

**ಸೀಜರ್ ಫ್ರೆಡರಿಕನು** ತನ್ನ ಬರವಣಿಗೆಗಳಲ್ಲಿ ರಕ್ಕಸತಂಗಡಿ ಯುದ್ಧದ ಬಗ್ಗೆ ಮತ್ತು ವಿಜಯನಗರದ ಅವನತಿಯ ಬಗ್ಗೆ ಹೆಚ್ಚು ಬೆಳಕು ಚೆಲ್ಲಿದ್ದಾನೆ.

ಈ ಮೇಲೆ ತಿಳಿಸಿದ ಎಲ್ಲಾ ವಿದೇಶಿ ಯಾತ್ರಿಕರ ಬರವಣಿಗೆಗಳು ವಿಜಯನಗರ ಸಾಮ್ರಾಜ್ಯವನ್ನು ಅರಿಯುವಲ್ಲಿ ತುಂಬಾ ಸಹಕಾರಿಯಾಗುತ್ತವೆ.

## ೫.೨ ಬಹಮನಿಗಳು ಮತ್ತು ಆದಿಲ್‌ಷಾಹಿಗಳು

### ಬಹಮನಿಗಳು

ಬಹಮನಿ ಸುಲ್ತಾನರು ಕರ್ನಾಟಕದ ಉತ್ತರ ಮತ್ತು ಈಶಾನ್ಯ ಭಾಗವನ್ನು ಹದಿನಾಲ್ಕನೆಯ ಶತಮಾನದ ಮಧ್ಯಭಾಗದಿಂದ ಹದಿನೇಳನೆಯ ಶತಮಾನದವರೆಗೂ ಆಳಿದರು. ಇವರು ವಿಜಯನಗರದ ಸಮಕಾಲೀನರಾಗಿದ್ದು ರಾಜಕೀಯ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಕಲಾಕ್ಷೇತ್ರಗಳಲ್ಲಿ ಕರ್ನಾಟಕದ ಸಂಸ್ಕೃತಿಗೆ ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಇವರ ಇತಿಹಾಸ ತಿಳಿಯಲು ಶಾಸನಗಳು, ನಾಣ್ಯಗಳು, ಸ್ಮಾರಕಗಳು ಮತ್ತು ವಿದೇಶಿ ಮತ್ತು ದೇಶಿಯ ಬರವಣಿಗೆಗಳು ಸಹಾಯ ಮಾಡುತ್ತವೆ.

ದಕ್ಷಿಣ ಭಾರತವು ಮಲ್ಲಿಕ್ ಕಾಫೂರ್‌ನ ದಂಡಯಾತ್ರೆಯೊಂದಿಗೆ ಮುಸ್ಲಿಂ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತು. ಸ್ವಲ್ಪ ಸಮಯದ ನಂತರ ಇವರ ಅಧಿಕಾರಗಳು ಅವನ ವಿರುದ್ಧ ದಂಗೆಯೆದ್ದು ಸ್ವತಂತ್ರರಾದರು. ಅವರಲ್ಲಿ ಪ್ರಮುಖನಾದವನು ಹಸನ್‌ಗಂಗು ಸಹ ಒಬ್ಬ. ಇವನು 'ಅಲ್ಲಾಉದ್ದೀನ್ ಹಸನ್ ಬಹಮನ್ ಷಾ' ಎಂಬ ಬಿರುದಿನೊಂದಿಗೆ ಉತ್ತರ ಕರ್ನಾಟಕದಲ್ಲಿ ಕ್ರಿ.ಶ. ೧೩೪೭ರಲ್ಲಿ ಸ್ವತಂತ್ರ ರಾಜ್ಯವೊಂದನ್ನು ಕಟ್ಟಿದನು.

**ಹಸನ್ ಗಂಗು** (೧೩೪೭-೧೩೫೮)

ಗುಲ್ಬರ್ಗಾವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಕ್ಕಪಕ್ಕದ ಸಣ್ಣಪುಟ್ಟ ರಾಜ್ಯಗಳಾದ ಅಕ್ಕಲಕೋಟೆ, ಮಹೇಂದ್ರಿ, ಕಲ್ಯಾಣ, ಬೀದರ್, ಮಾಳಖೇಡ ಮತ್ತಿತರ ಪ್ರದೇಶಗಳನ್ನು ತನ್ನ ಹತೋಟಿಗೊಳಪಡಿಸಿದನು. ನಂತರ ವಾರಂಗಲ್ಲಿನ ಕಪಾಯನಾಯಕನ ಜೊತೆ ಶಾಂತಿ ಒಪ್ಪಂದ ಮಾಡಿಕೊಂಡು ತನ್ನ ಶತ್ರುಗಳನ್ನು ಸೋಲಿಸಿದನು. ಇವನ ಕಾಲದಲ್ಲಿ ಬಹಮನಿ ರಾಜ್ಯವು ನಾಲ್ಕು ಪ್ರಾಂತ್ಯಗಳಾಗಿ ವಿಂಗಡಿಸಿ- ಗುಲ್ಬರ್ಗಾ, ದೌಲತಾಬಾದ್, ಬೇರಾರ್ ಮತ್ತು ಬಹಮನಿ ತೆಲಂಗಾಣ- ಅವುಗಳನ್ನು ಓರ್ವ ರಾಜ್ಯಪಾಲನು ನಿರ್ವಹಿಸುತ್ತಿದ್ದನು.

ಇವನ ನಂತರ ಮಗನಾದ ಒಂದನೆ ಮಹಮ್ಮದ್‌ನು (೧೩೫೮-೧೩೭೫) ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿ ಬಹಮನಿ ರಾಜ್ಯಕ್ಕೂ ಮತ್ತು ವಿಜಯನಗರದ ನಡುವೆ ಕೃಷ್ಣಾ ತುಂಗಭದ್ರಾ ನದಿಯ ನಡುವಣ ಪ್ರದೇಶಗಳ ಮೇಲೆ ಹತೋಟಿ ಪಡೆಯಲು ಸಾಕಷ್ಟು ಬಾರಿ ಕಲಹಗಳುಂಟಾದವು. ಈ ಕಲಹಗಳಲ್ಲಿ ಬುಕ್ಕರಾಯನನ್ನು ಸೋಲಿಸಿ ಶಾಂತಿ ಒಪ್ಪಂದ ಮಾಡಿಕೊಂಡರು. ಇವನ ನಂತರ ಅಧಿಕಾರಕ್ಕೆ ಬಂದ ಅಲ್ಲಾಉದ್ದೀನ್ ಮುಜಾಹಿದ್, ಒಂದನೆ ದಾವೂದ್, ಎರಡನೆ ಮಹಮ್ಮದ್, ಫಿರೋಜ್ ಗಿಯಾಸ್‌ಉಸ್-ದೀನ್ ಕ್ರಮವಾಗಿ ಸ್ವಲ್ಪಕಾಲ ಆಳ್ವಿಕೆ ನಡೆಸಿದರು. ಇವರ ಕಾಲದಲ್ಲಿ ಅಧಿಕಾರಕ್ಕಾಗಿ ಒಳಜಗಳ ನಡೆದು ಅಂತಿಮವಾಗಿ ಫಿರೋಜ್ ಷಾ ಅಧಿಕಾರಕ್ಕೆ ಬಂದನು. ಇವನು ಸಹ ಸ್ವಲ್ಪಕಾಲ ಆಳಿದನು.

**ಒಂದನೆ ಶಿಯಾಬುದ್ದೀನ್ ಅಹ್ಮದ್** (೧೪೨೨-೧೪೩೬)

ಇವನು ಅಧಿಕಾರಕ್ಕೆ ಬಂದೊಡನೆಯೇ ತನ್ನ ರಾಜಧಾನಿಯನ್ನು ಗುಲ್ಬರ್ಗಾದಿಂದ

ಬೀದರ್‌ಗೆ ವರ್ಗಾಯಿಸಿದನು. ಇವನ ಕಾಲದಲ್ಲಿ ಹಿಂದೂ-ಮುಸ್ಲಿಂ ಸಂಬಂಧಗಳು ಬಲಿಷ್ಠಗೊಂಡವು. ಸಾಕಷ್ಟು ಸಂಖ್ಯೆಯಲ್ಲಿ ವಿದೇಶಿ ಮುಸ್ಲಿಮರು ಬಹಮನಿ ರಾಜ್ಯದಲ್ಲಿ ಪ್ರವೇಶ ಮಾಡಿದರು. ಇವನು ಬೀದರ್ ನಗರವನ್ನು ನಾಲ್ಕು ಭಾಗಗಳಾಗಿ ಮಾಡಿ ಪ್ರತಿ ವಿಭಾಗದಲ್ಲಿ ಒಂದೊಂದು ದೈಹಿಕ ಕಸರತ್ತಿನ ಮೈದಾನ, ಒಂದು ಮಸೀದಿ ಮತ್ತು ಒಂದು ಶಾಲೆಯನ್ನು ತೆರೆದು ಅಲ್ಲಿಯ ಪ್ರತಿ ಯುವಕರಿಗೆ ಲೌಕಿಕ, ಶಾರೀರಿಕ ಮತ್ತು ಧಾರ್ಮಿಕ ತರಬೇತಿಯನ್ನು ನೀಡಲಾಯಿತು.

ಇವನು ಸಹ ತನ್ನ ಪೂರ್ವಜರಂತೆ ವಿಜಯನಗರದೊಡನೆ ಹೋರಾಡಿ ಮೇಲುಗೈ ಸಾಧಿಸಿದ್ದನು. ತೆಲಂಗಾಣದ ರಾಜನು ಇವನ ವಿರುದ್ಧ ದಂಗೆಯೆದ್ದಾಗ ಅದನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಂಡನು. ವಾರಂಗಲ್ಲಿನ ಮೂರನೆ ಸಿಂಗನು ಇವನಿಗೆ ಶರಣಾದನು. ಇವನ ನಂತರ ಎರಡನೆ ಅಲ್ಲಾಉದ್ದೀನ್ ಅಹ್ಮದ್ ನಂತರ ಅಲ್ಲಾಉದ್ದೀನ್ ಹುಮಯೂನ್ ಕ್ರಮವಾಗಿ ಅಧಿಕಾರಕ್ಕೆ ಬಂದರು. ಹುಮಾಯೂನ್ ಕಾಲದಲ್ಲಿ ಮಹಮ್ಮದ್ ಗವಾನನನ್ನು ಪ್ರಧಾನ ಮಂತ್ರಿಯನ್ನಾಗಿ ನೇಮಿಸಲಾಯಿತು. ಈ ನೇಮಕಾತಿಯನ್ನು ಹಲವು ಸ್ಥಳೀಯ ಮುಸ್ಲಿಂ ಮುಖಂಡರು ವಿರೋಧಿಸಲಾರಂಭಿಸಿದರು.

### ಮಹಮದ್ ಗವಾನ್ (ಕ್ರಿ.ಶ. ೧೪೪೭-೧೪೮೧)

ಮೂರನೆ ಶಂಶುದ್ದೀನ್ ಮಹಮ್ಮದ್‌ನ ಕಾಲದಲ್ಲೂ ಮಹಮ್ಮದ್ ಗವಾನ್‌ನನ್ನೇ ಪ್ರಧಾನಮಂತ್ರಿಯನ್ನಾಗಿ ಮಾಡಿ ಅನೇಕ ಬಿರುದುಗಳನ್ನು ನೀಡಲಾಯಿತು. ಗವಾನನು ೧೪೫೩ರಲ್ಲಿ ತನ್ನ ೪೨ರ ವಯಸ್ಸಿನಲ್ಲಿ ಗಿಲಾನ್‌ನಿಂದ ವ್ಯಾಪಾರಕ್ಕಾಗಿ ದೆಹಲಿಗೆ ಬಂದನು. ಅದೃಷ್ಟವು ಅವನನ್ನು ಬೀದರ್‌ಗೆ ಕರೆತಂದಿತು. ಇವನು ಪ್ರಧಾನಮಂತ್ರಿಯಾದ ಮೇಲೆ ಹಲವಾರು ಭೀಕರ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಅವುಗಳಲ್ಲಿ ಪ್ರಮುಖವಾದುದ್ದೆಂದರೆ ಶ್ರೀಮಂತ ವರ್ಗಗಳ ನಡುವೆ ಪ್ರಾರಂಭವಾದ ಅಂತರ ಕಲಹ ಮತ್ತು ವೈಷಮ್ಯ. ಇದರ ನಡುವೆಯೂ ಇವನು ಕೆಲವು ಮಹತ್ತರ ಸುಧಾರಣೆಗಳನ್ನು ಜಾರಿಗೆ ತಂದನು. ವಿದ್ಯಾಭ್ಯಾಸವನ್ನು ಅಭಿವೃದ್ಧಿಗೊಳಿಸುವುದಕ್ಕೋಸ್ಕರ ವಿದೇಶದಿಂದ ವಿದ್ವಾಂಸರನ್ನು ಕರೆಸಿ ಅವರು ಇಲ್ಲಿ ನೆಲೆಯೂರುವಂತೆ ಮಾಡಿದನು. 'ಮದ್ರಸಾ' ಎಂಬ ಕಾಲೇಜನ್ನು ಕಟ್ಟಿಸಿ ಅಲ್ಲಿ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಒಟ್ಟಿಗೆ ನೆಲೆಸುವಂತೆ ಮಾಡಿ ಅವರಿಗೆ ಉಚಿತ ಊಟ, ಬಟ್ಟೆ ಮತ್ತು ಇತರ ವ್ಯವಸ್ಥೆಗಳನ್ನು ಒದಗಿಸಿದನು. ಇವನ ಸ್ವಂತ ಗ್ರಂಥಾಲಯವು ಸುಮಾರು ೩೦೦೦ ಪುಸ್ತಕಗಳನ್ನು ಹೊಂದಿತ್ತು.

ಈ ಅವಧಿಯಲ್ಲಿ ಮಹಮ್ಮದ್ ಖಿಲ್ಜಿಯು ಬಹಮನಿ ರಾಜ್ಯವನ್ನು ಕಬಳಿಸಲು ಮಾಡಿದ ಪ್ರಯತ್ನಗಳು ವಿಫಲವಾದವು. ಗವಾನನು ಕೆಲವು ಸೈನಿಕ ಕಾರ್ಯಾಚರಣೆಗಳಿಂದ ಪಶ್ಚಿಮ ಕರಾವಳಿಯಲ್ಲಿ ಗೋವಾವನ್ನು ತನ್ನ ವಶಕ್ಕೆ ತೆಗೆದುಕೊಂಡನು. ಇದರ ಫಲವಾಗಿ ಬಹಮನಿ ರಾಜ್ಯವು ಸಮುದ್ರದಿಂದ ಸಮುದ್ರದವರೆಗೆ ವ್ಯಾಪಿಸಿತು. ಹಾಗೂ ಉತ್ತರದಲ್ಲಿ ಖಾನ್‌ದೇಶ ಮತ್ತು ದಕ್ಷಿಣದಲ್ಲಿ ತುಂಗಭದ್ರಾ ನದಿಯವರೆಗೆ ಹಬ್ಬಿತು.

ಗವಾನನು ಆಡಳಿತದ ಅನುಕೂಲಕ್ಕೋಸ್ಕರ ತನ್ನ ರಾಜ್ಯವನ್ನು ೮ ಭಾಗಗಳನ್ನಾಗಿ ವಿಂಗಡಿಸಿ ಪ್ರತಿಯೊಂದರಲ್ಲೂ ತನ್ನ ಸೇನಾಧಿಕಾರಿಗಳನ್ನು ನೇಮಿಸಿದನು. ಇದರಿಂದಾಗಿ ಮನ್ಸಬ್ದಾರ ಮತ್ತು ಜಾಗೀರ್‌ದಾರ್‌ರ ಅಧಿಕಾರವು ಕಡಿತಗೊಂಡಿತು. ಹೀಗೆ ಹೊಸದಾಗಿ ರಚಿಸಿದ ಪ್ರಾಂತ್ಯಗಳನ್ನು 'ದಕಿನ್' ಮತ್ತು 'ಅಫಾಕಿ' ಎಂಬ ಎರಡು ಶ್ರೀಮಂತ ವರ್ಗಗಳಿಗೆ ವಹಿಸಿದನು. ಇದಲ್ಲದೆ ಭೂಸುಧಾರಣೆ ಮತ್ತು ಕಂದಾಯ ಪದ್ಧತಿಯನ್ನು ಜಾರಿಗೆ ತಂದನು.

ಈ ಮಧ್ಯೆ ಗವಾನನ ಸೈನ್ಯವು ಒರಿಸ್ಸಾದ ಪುರುಷೋತ್ತಮನನ್ನು ಸೋಲಿಸಿ ಕೊಂಡಪಲ್ಲಿ ಮತ್ತು ಕೊಂಡವೀಡನ್ನು ಆಕ್ರಮಿಸಿಕೊಂಡಿತು. ಜೊತೆಗೆ ವಿಜಯನಗರದ ಸಾಳುವ ನರಸಿಂಹನನ್ನು ಸಹ ಸೋಲಿಸಿದನು. ಇಷ್ಟೆಲ್ಲಾ ಸಾಧನೆ ಮಾಡಿದ್ದರೂ, ಗವಾನನನ್ನು ಸ್ಥಳೀಯ ಶ್ರೀಮಂತ ವರ್ಗ ದ್ವೇಷಿಸುತ್ತಿತ್ತು. ಅವನ ಗೈರು ಹಾಜರಿಯಲ್ಲಿ ಈ ಶ್ರೀಮಂತ ವರ್ಗ ಪಿತೂರಿ ನಡೆಸಿ, ಅದರಲ್ಲಿ ಗವಾನನು ಬಹಮನಿಯ ಶತ್ರುಗಳು ಇವರ ರಾಜ್ಯವನ್ನು ಮುತ್ತಿಗೆ ಹಾಕುವಂತೆ ಸುಳ್ಳುಪತ್ರ ತಯಾರಿಸಿ, ಅದನ್ನು ಸುಲ್ತಾನನಿಗೆ ತೋರಿಸಿದರು. ಇದರ ರಹಸ್ಯ ಅರಿಯದ ಸುಲ್ತಾನನು ಇವನನ್ನು ರಾಜದ್ರೋಹಿಯೆಂದು ಪರಿಗಣಿಸಿ ಕ್ರಿ.ಶ. ೧೪೮೧ ರಲ್ಲಿ ಕೊಲೆ ಮಾಡಿಸಿದನು. ಈ ಸಂಚಿನ ಸತ್ಯ ಅರಿವಾದಾಗ ಮಹಮ್ಮದ್‌ನು ಅದೇ ಕೊರಗಿನಲ್ಲಿ ಕೊನೆಯುಸಿರೆಳೆದನು.

ಮಹಮ್ಮದ್ ಗವಾನ್ ಮತ್ತು ಮಹಮ್ಮದ್ ಸುಲ್ತಾನನ ಸಾವಿನ ನಂತರ ಬಹಮನಿ ರಾಜ್ಯವು ರಾಜಕೀಯವಾಗಿ ಕ್ಷೀಣಿಸತೊಡಗಿತು. ಶಾಹೀಬ್ ಉದ್ದೀನ್ ಮಹಮ್ಮದ್‌ನ ಕಾಲದಲ್ಲಿ ಅಫಾಕಿ ಮತ್ತು ದಕಿನ್ ಗುಂಪುಗಳ ನಡುವೆ ದ್ವೇಷ ಹೆಚ್ಚಾಗಿ ಸುಲ್ತಾನನನ್ನು ಕೊಲೆಗೈಯುವ ಪ್ರಯತ್ನ ವಿಫಲವಾಯಿತು. ಇದಾದ ನಂತರ ರಾಜ್ಯದಲ್ಲಿ ಅರಾಜಕತೆ ಯುಂಟಾಗಿ ಪ್ರಾಂತೀಯ ಆಡಳಿತಗಾರರು ಸ್ವತಂತ್ರರಾಗಿ ಹೊರಹೊಮ್ಮಿದರು. ಇದರಿಂದಾಗಿ ಬಹಮನಿ ರಾಜ್ಯವು ಐದು ಭಾಗಗಳಾಗಿ ಒಡೆದು ಸ್ವತಂತ್ರ ರಾಜ್ಯಗಳು ಹುಟ್ಟಿಕೊಂಡವು. ಅವುಗಳೆಂದರೆ:

೧. ಬೇರಾರ್‌ನ ಇಮದ್ ಷಾಹಿ

೨. ಅಹಮ್ಮದ್‌ನಗರದ ನಿಜಾಮ್ ಷಾಹಿ

೩. ಬಿಜಾಪುರದ ಆದಿಲ್ ಷಾಹಿ

೪. ಗೋಲ್ಕಂಡದ ಕುತುಬ್ ಷಾಹಿ ಹಾಗೂ

೫. ಬೀದರ್‌ನ ಬರೀದ್ ಷಾಹಿ

ಈ ಐದು ಷಾಹಿ ರಾಜ್ಯಗಳಲ್ಲಿ ಬಿಜಾಪುರದ ಆದಿಲ್ ಷಾಹಿಗಳು ಕರ್ನಾಟಕದ ಸಂಸ್ಕೃತಿಗೆ ಸಾಕಷ್ಟು ಕಾಣಿಕೆ ನೀಡಿದ್ದಾರೆ.

### ಬಿಜಾಪುರದ ಸುಲ್ತಾನರು

ಯೂಸುಫ್ ಆದಿಲ್ ಖಾನ್ ಬಿಜಾಪುರ ರಾಜ್ಯದ ಸಂಸ್ಥಾಪಕ. ಇವನು ಮಹಮ್ಮದ್ ಗವಾನನ ಕಾಲದಲ್ಲಿ ಬಿಜಾಪುರದ ರಾಜ್ಯಪಾಲನಾಗಿದ್ದ. ಗವಾನನ ಸಾವಿನನಂತರ ಸ್ವತಂತ್ರ

ಸುಲ್ತಾನನಾದನು. ಇವನು ಅಧಿಕಾರಕ್ಕೆ ಬಂದ ಕೆಲವೇ ವರ್ಷಗಳಲ್ಲಿ ಗೋವಾವನ್ನು ಪೋರ್ಚುಗೀಸರಿಂದ ಮರುಪಡೆದ. ಆದರೆ ನಂತರದ ಸುಲ್ತಾನರು ಇದನ್ನು ಕಾಪಾಡಲು ವಿಫಲರಾದರು. ಇವನ ರಾಜ್ಯದ ಸುತ್ತ ಪ್ರಬಲ ಶತ್ರುಗಳಿದ್ದರು. ಅವರೆಂದರೆ- ಮೀರಜ್ ಮತ್ತು ಗೋವಾ, ಸೋಲಾಪುರ, ಅಲಂದ್, ಗಂಜೋಲೆ, ಅಹಮ್ಮದ್ ನಗರ, ಬೀದರ್ ಮತ್ತು ವಿಜಯನಗರ. ವಿಜಯನಗರದವರು ರಾಯಚೂರು ದೋ-ಅಬ್ ಪ್ರಾಂತ್ಯವನ್ನು ಆಕ್ರಮಿಸಿಕೊಂಡಾಗ ಅವರೊಡನೆ ಶಾಂತಿ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದದ ನಂತರ ಬೀದರ್ ಮೇಲೆ ದಂಡೆತ್ತಿ ಹೋಗಿ ಅವರನ್ನು ಸೋಲಿಸಿದನು. ವಿಜಯನಗರದಲ್ಲಿ ಅಂತರಕಲಹವಿದ್ದಾಗ ಮತ್ತೆ ರಾಯಚೂರನ್ನು ಆಕ್ರಮಿಸಿಕೊಂಡನು. ಗುಜರಾತ ಸುಲ್ತಾನನಿಗೆ ಸಹಾಯ ಮಾಡಿ ಜಮಖಂಡಿಯನ್ನು ಪಡೆದುಕೊಂಡನು.

ಇವನ ನಂತರ ಬಂದ ಒಂದನೆ ಇಬ್ರಾಹಿಂನು ಅರವೀಡು ರಾಮರಾಯನೊಡಗೂಡಿ ಅಹಮ್ಮದ್‌ನಗರ, ಬೀದರ್ ಮತ್ತು ಗೋಲ್ಕಂಡಗಳ ಮೇಲೆ ಮುತ್ತಿಗೆ ಹಾಕಿ ಕೆಲವು ಪ್ರಾಂತ್ಯಗಳನ್ನು ವಶಪಡಿಸಿಕೊಂಡನು. ಇವನ ಮಗ ಅಲಿ ಆದಿಲ್‌ಷಾನು 'ಷಿಯಾ ಪಂಥ'ವನ್ನು ಹೇರಿದ್ದರಿಂದ ಎಲ್ಲರಿಂದಲೂ ದ್ವೇಷಿಸಲ್ಪಟ್ಟನು. ಇವನು ಸಹ ತನ್ನ ತಂದೆ ಯಂತೆ ರಾಮ ರಾಯನ ಸ್ನೇಹ ಬೆಳೆಸಿ ಅಹಮ್ಮದ್‌ನಗರವನ್ನು ಮುತ್ತಿಗೆ ಹಾಕಿದನು. ಆದರೆ ಅಲ್ಲಿಯ ಕ್ರೌರ್ಯಗಳನ್ನು ಸಹಿಸಲಾರದ ಅಲಿಯು ವಿಜಯನಗರದ ಪ್ರಾಬಲ್ಯವನ್ನು ಸದೆಬಡಿಯಲು ಐದು ಸುಲ್ತಾನರು ಒಗ್ಗೂಡಿ ವಿಜಯನಗರದ ವಿರುದ್ಧ ಒಕ್ಕೂಟವನ್ನು ರಚಿಸಿದರು. ಈ ಒಕ್ಕೂಟವು ವೈವಾಹಿಕ ಸಂಬಂಧಗಳಿಂದಾಗಿ ಮತ್ತಷ್ಟು ಪ್ರಬಲವಾಯಿತು. ಒಕ್ಕೂಟದ ಸೈನ್ಯವು ರಾಮರಾಯನನ್ನು ರಕ್ಕಸತಂಗಡಿ (ತಾಳೀಕೋಟೆ) ಯುದ್ಧದಲ್ಲಿ ಸೋಲಿಸಿ ಅವನನ್ನು ಹತ್ಯೆಗೈ ಯಿತು. ಈ ವಿಜಯ ನಂತರ ಈ ಒಕ್ಕೂಟವು ಛಿದ್ರವಾಗಿ ಸುಲ್ತಾನರು ತಮ್ಮ ತಮ್ಮಲ್ಲೇ ಕಚ್ಚಾಡಲಾರಂಭಿಸಿದರು. ಇವನ ನಂತರ ಎರಡನೆ ಇಬ್ರಾಹಿಂ ಆದಿಲ್ ಷಾ ಅಧಿಕಾರಕ್ಕೆ ಬಂದನು.

### ಎರಡನೆ ಇಬ್ರಾಹಿಂ ಆದಿಲ್ ಷಾ (೧೫೮೦-೧೬೨೬)

ಇಬ್ರಾಹಿಂ ಅಧಿಕಾರಕ್ಕೆ ಬಂದಾಗ ಚಿಕ್ಕವನಿದ್ದ ಕಾರಣ ಅವನ ಚಿಕ್ಕಮ್ಮ ಚಾಂದ್ ಬೀಬಿಯು ಅವನ ವಿದ್ಯಾಭ್ಯಾಸ ನೋಡಿಕೊಂಡಳು. ರಾಜ್ಯದ ಆಡಳಿತವನ್ನು ರಾಜ ಪ್ರತಿನಿಧಿ ಗಳು ನೋಡಿಕೊಳ್ಳುತ್ತಿದ್ದರು. ವಯಸ್ಸಿಗೆ ಬಂದ ತಕ್ಷಣ ರಾಜಪ್ರತಿನಿಧಿ ದಿಲಾವರ್ ಖಾನನನ್ನು ಅಧಿಕಾರದಿಂದ ಇಳಿಸಿ ಆಡಳಿತದ ಚುಕ್ಕಾಣಿಯನ್ನು ಹಿಡಿದನು. ಅಧಿಕಾರಕ್ಕೆ ಬಂದ ಕೆಲವೇ ದಿನಗಳಲ್ಲಿ ಅಹಮ್ಮದ್‌ನಗರ ಮತ್ತು ಇಕ್ಕೇರಿ ನಾಯಕರೊಡನೆ ಹೋರಾಡಿ ರಾಜ್ಯವನ್ನು ವಿಸ್ತರಿಸಲಾರಂಭಿಸಿದನು. ಅಹಮ್ಮದ್ ನಗರದ ಎರಡನೆ ನಿಜಾಮ್‌ಷಾ ಇವನ ವಿರುದ್ಧ ಪಿತೂರಿ ಮಾಡಿದ್ದರಿಂದ ಅವನನ್ನು ಕೊಲ್ಲಲಾಯಿತು.

ದೆಹಲಿ ಸುಲ್ತಾನ ಅಕ್ಬರನು ದಕ್ಷಿಣ ರಾಜ್ಯಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದನು. ಆದರೆ ದಕ್ಷಿಣದ ಸುಲ್ತಾನರು ಒಗ್ಗಟ್ಟಾಗಿ ಮೊಗಲರ ಸೈನ್ಯವನ್ನು

ಸೋನಾಪೇಟೆ ಯುದ್ಧದಲ್ಲಿ ಸೋಲಿಸಿದರು. ಇದಾದ ನಂತರ ಅಕ್ಬರನು ನಿಜಾಮ್‌ಷಾನ ಪ್ರದೇಶಗಳನ್ನು ಆಕ್ರಮಿಸಿಕೊಂಡನು. ಇದರಿಂದ ಹೆದರಿದ ಇಬ್ರಾಹಿಂನು ಗೋಲ್ಕೊಂಡದ ಸುಲ್ತಾನನೊಡಗೂಡಿ ಅಕ್ಬರನನ್ನು ಸಂತೈಸಲು ಮುಂದಾದರು. ಅಕ್ಬರ್ ನಂತರ ಬಂದ ಜಹಾಂಗೀರ್ ಅಹಮ್ಮದ್‌ನಗರ ಮತ್ತು ಬಿಜಾಪುರದ ಸುಲ್ತಾನರನ್ನು ತನ್ನ ಅಧೀನಕ್ಕೊಳ ಪಡಿಸುವಲ್ಲಿ ಯಶಸ್ವಿಯಾದನು. ಅಂತೆಯೇ ಜಹಾಂಗೀರನ ಪರೋಕ್ಷ ನೆರವಿನೊಂದಿಗೆ ಇಬ್ರಾಹಿಂನು ಬೀದರನ್ನು ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದ.

ಬೀದರ್‌ನ್ನು ವಶಪಡಿಸಿಕೊಂಡ ನಂತರ ಇಬ್ರಾಹಿಂನು ಅದೋನಿ ಮತ್ತು ಕರ್ನೂಲನ್ನು ವಶಪಡಿಸಿಕೊಂಡು ಅಹಮ್ಮದ್‌ನಗರದ ಕಡೆ ತನ್ನ ಗಮನಹರಿಸಿದನು. ಅಹಮ್ಮದ್ ನಗರದ ಮಲಿಕ್ ಅಂಬರ್‌ನು ಮತ್ತು ಇಬ್ರಾಹಿಂ ಇಬ್ಬರೂ ಸಹ ಮೊಗಲರ ಸ್ನೇಹಕ್ಕೆ ಹಾತೊರೆಯುತ್ತಿದ್ದರು. ಆದರೆ ಈ ಪ್ರಯತ್ನದಲ್ಲಿ ಇಬ್ರಾಹಿಂ ಸಫಲನಾದ ಕಾರಣ ಮಲಿಕ್ ಅಂಬರ್‌ನ ಗೋಲ್ಕಂಡದ ಕುತುಬ್ ಷಾನೊಡಗೂಡಿ ಇಬ್ರಾಹಿಂ ಮತ್ತು ಮೊಗಲರ ಸೈನ್ಯಗಳನ್ನು ಬಟವಾಡಿ ಯುದ್ಧದಲ್ಲಿ ಸೋಲಿಸಿದರು. ಗೆದ್ದ ಮಲಿಕ್ ಅಂಬರ್‌ನು ಬಿಜಾಪುರದ ಕಡೆಗೆ ಧಾವಿಸಿ ಅದನ್ನು ವಶಪಡಿಸಿಕೊಂಡನು. ಸ್ವಲ್ಪ ಕಾಲದಲ್ಲಿಯೇ ಇಬ್ಬರೂ ಕಾಲವಾದರು.

ಇಬ್ರಾಹಿಂ ನಂತರ ಅವನ ಮಗ ಮಹಮ್ಮದ್ ಆದಿಲ್‌ಷಾ ಅಧಿಕಾರಕ್ಕೆ ಬಂದನು. ಇವನು ಮೊಗಲರ ಆಪ್ತನಾಗಿದ್ದು ಅಹಮ್ಮದ್‌ನಗರದವರ ಶತ್ರುವಾಗಿದ್ದನು. ಆದರೆ ಈ ತತ್ವವು ಮಹಮ್ಮದ್‌ನಿಗೆ ಲಾಭ ತರದ ಕಾರಣ ಮತ್ತೊಮ್ಮೆ ಅಹಮ್ಮದ್‌ನಗರದವರೊಡನೆ ಸ್ನೇಹ ಬೆಳೆಸಿದನು. ಇದರಿಂದ ಕುಪಿತಗೊಂಡ ಮೊಗಲ್ ದಂಡನಾಯಕ ಅಸಫ್‌ಖಾನ್ ಬಿಜಾಪುರದ ಮೇಲೆ ದಂಡೆತ್ತಿ ಬಂದಾಗ ಅವರೊಡನೆ ತಾತ್ಕಾಲಿಕವಾಗಿ ಶಾಂತಿ ಒಪ್ಪಂದ ಮಾಡಿಕೊಂಡನು. ಇದೇ ಸಮಯದಲ್ಲಿ ಶಹಜಹಾನನ ಸೈನ್ಯವು ಬಿಜಾಪುರದ ಕಡೆಗೆ ಧಾವಿಸಿದಾಗ, ಹೆದರಿದ ಮಹಮ್ಮದ್‌ನು ಶಾಶ್ವತ ಶಾಂತಿ ಒಪ್ಪಂದಕ್ಕೆ ಸಹಿ ಹಾಕಿದನು. ಇದರ ಪ್ರಕಾರ ನಿಜಾಮಷಾಹಿಯ ಪ್ರಾಂತ್ಯವನ್ನು ಇಬ್ಬರೂ ಹಂಚಿಕೊಳ್ಳುವುದು ಮತ್ತು ಆದಿಲ್‌ಷಾನು ಮೊಗಲರಿಗೆ ವಾರ್ಷಿಕ ಕಪ್ಪಕಾಣಿಕೆಗಳನ್ನು ಕೊಡುವುದಾಗಿತ್ತು.

ಮೊಗಲರೊಡನೆ ಒಪ್ಪಂದ ಮಾಡಿಕೊಂಡ ನಂತರ ಮಹಮ್ಮದ್ ಆದಿಲ್ ಷಾನು ದಕ್ಷಿಣ ದಂಡಯಾತ್ರೆ ಕೈಗೊಂಡನು. ಮೊದಲ ಹಂತದಲ್ಲಿ ಇವನ ಸೇನಾನಾಯಕ ರಣದುಲ್ಲಾ ಖಾನ್‌ನು ಬಸವಾಪಟ್ಟಣ, ಇಕ್ಕೇರಿ, ಬಂಕಾಪುರ ಮತ್ತು ಹರಿಹರವನ್ನು ವಶಪಡಿಸಿಕೊಂಡನು. ಎರಡನೆಯ ಹಂತದಲ್ಲಿ ಮರಾಠರ ಷಾಹಜೀ ನೇತೃತ್ವದಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡನು. ಆದರೆ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಳ್ಳುವಲ್ಲಿ ವಿಫಲರಾದರು. ಇದಕ್ಕೆ ಬದಲಾಗಿ ಚಿಕ್ಕನಾಯಕನಹಳ್ಳಿ, ಬೇಲೂರು ಮತ್ತು ತುಮಕೂರುಗಳನ್ನು ವಶಪಡಿಸಿಕೊಂಡನು. ಈ ನಡುವೆ ರಣದುಲ್ಲಾಖಾನ್ ಮರಣಹೊಂದಿದ್ದರಿಂದ ಮೂರನೆಯ ಹಂತದಲ್ಲಿ ಮುಸ್ತಫಾ ಖಾನ್‌ನ ನೇತೃತ್ವದಲ್ಲಿ ವಿಜಯನಗರದ ಕೊನೆಯ ದೊರೆ ಶ್ರೀರಂಗನನ್ನು ಸೋಲಿಸಿ ವೆಲ್ಲೂರು ಮತ್ತು ಜಿಂಜಿಯನ್ನು ಆಕ್ರಮಿಸಿಕೊಂಡನು. ಈ ಹಂತದಲ್ಲಿ ಷಾಹಜಿ ಮತ್ತು ಮುಸ್ತಫಾರ

ನಡುವೆ ವೈಮನಸ್ಸುಂಟಾಗಿ ಷಾಹಜಿಯನ್ನು ಬಂಧಿಸಲಾಯಿತು. ಈ ದಂಡೆಯಾತ್ರೆಗಳಿಂದ ಕುಪಿತಗೊಂಡ ಶಹಜಹಾನನು ಮಹಮ್ಮದ್ ಆದಿಲ್‌ಷಾನನ್ನು ಎಚ್ಚರಿಸಿದಾಗ ಅವರ ಶಾಂತಿ ಒಪ್ಪಂದವು ಮುಂದುವರಿದು ದೊಡ್ಡ ಅನಾಹುತದಿಂದ ಪಾರಾದನು. ಈ ರೀತಿ ಮೂರನೆ ಮಹಮ್ಮದ್ ಆದಿಲ್‌ಷಾನ ಕಾಲದಲ್ಲಿ ಬಿಜಾಪುರದ ಕೀರ್ತಿಯು ಉನ್ನತ ಮಟ್ಟವನ್ನು ತಲುಪಿತ್ತು. ಆದರೆ ಇವನ ಸಾವಿನೊಂದಿಗೆ ಬಿಜಾಪುರದ ಅಂತ್ಯವು ಪ್ರಾರಂಭವಾಯಿತು.

ಶಹಜಹಾನ್ ನಂತರ ಬಂದ ಔರಂಗಜೇಬನು ದಕ್ಷಿಣ ಭಾರತದ ಮೇಲೆ ದಾಳಿ ಮಾಡಿ ಬೀದರ್ ಮತ್ತು ಕಲ್ಯಾಣವನ್ನು ವಶಪಡಿಸಿಕೊಂಡನು. ಇವನು ಬಿಜಾಪುರಕ್ಕೆ ಮುತ್ತಿಗೆ ಹಾಕಿದಾಗ ಕಪ್ಪವನ್ನು ಕೊಟ್ಟು ಬಿಜಾಪುರದವರು ಪಾರಾದರು. ಅಲಿ ಆದಿಲ್‌ಷಾ ನಂತರ ಸಿಕಂದರ್ ಬಿಜಾಪುರದ ಕೊನೆಯ ಸುಲ್ತಾನನಾಗಿ ಅಧಿಕಾರಕ್ಕೆ ಬಂದನು. ಇವನು ಸಹ ಔರಂಗಜೇಬನಿಗೆ ಶರಣಾಗಿ ಬಿಜಾಪುರವನ್ನು ಒಪ್ಪಿಸಿದನು. ಇವನು ಕ್ರಿ.ಶ ೧೭೦೦ ರಲ್ಲಿ ಕಾಲವಾದ್ದರಿಂದ ಆದಿಲ್‌ಷಾಹಿ ಆಳ್ವಿಕೆಯು ಅಂತ್ಯಗೊಂಡಿತು.

## ಕೊಡುಗೆಗಳು

ಆದಿಲ್‌ಷಾಹಿ ಸುಲ್ತಾನರು ಪ್ರಮುಖವಾಗಿ ಸಾಹಿತ್ಯ ಮತ್ತು ಕಲಾ ಕ್ಷೇತ್ರದಲ್ಲಿ ಅದ್ವಿತೀಯ ಕಾಣಿಕೆಗಳನ್ನು ನೀಡಿದ್ದಾರೆ. ಈ ಕಾಲದಲ್ಲಿ ಪ್ರಮುಖವಾಗಿ ಅರಾಬಿಕ್, ಪರ್ಷಿಯನ್ ಮತ್ತು ಉರ್ದು ಸಾಹಿತ್ಯವು ಗಣನೀಯ ಪ್ರಮಾಣದಲ್ಲಿ ಬೆಳೆಯಿತು.

**ಅರಾಬಿಕ್:** ಈ ಭಾಷೆಯು ಮೊಟ್ಟಮೊದಲ ಬಾರಿಗೆ ಭಾರತದ ಪಶ್ಚಿಮ ಕರಾವಳಿಯಲ್ಲಿ ತನ್ನ ನೆಲೆಯನ್ನು ಕಂಡಿತು. ಖಗೋಳಶಾಸ್ತ್ರದಲ್ಲಿ ಮೀರ್ ಮಹಮ್ಮದ್ ಬಷಿಯು ಮತ್ತು ಗಣಿತಶಾಸ್ತ್ರದಲ್ಲಿ ಸದ್ರುಷ ಷರೀಪ ಬಹಳ ಹೆಸರುವಾಸಿಯಾಗಿದ್ದರು. ಹಕೀಂ ಅಲಿಮುದ್ದೀನ್ ಮತ್ತು ಹಕೀಮ್ ನಾಸೀರುದ್ದೀನ್ ಅಲ್ಲಾಉದ್ದೀನ್ ಬಹಮನ್‌ಷಾನ ಆಸ್ಥಾನದ ವೈದ್ಯ ರಾಗಿದ್ದರು. ಎರಡನೆ ಮಹಮ್ಮದ್ ಷಾ ಸ್ವತಃ ಇಸ್ಲಾಮಿಕ್ ವಿಜ್ಞಾನದಲ್ಲಿ ತಜ್ಞನಾಗಿದ್ದು, ಪರ್ಷಿಯನ್ ಮತ್ತು ಅರಾಬಿಕ್ ಭಾಷೆಗಳಲ್ಲಿ ಪಾಂಡಿತ್ಯವನ್ನು ಗಳಿಸಿದ್ದನು. ಇದಲ್ಲದೆ ಇವನು ತರ್ಕಶಾಸ್ತ್ರ, ಗಣಿತಶಾಸ್ತ್ರ ಮತ್ತು ರೇಖಾಗಣಿತದಲ್ಲಿ ಉಪನ್ಯಾಸ ನೀಡುತ್ತಿದ್ದನು. ಅಂದಿನ ಇತರ ವಿದ್ವಾಂಸರೆಂದರೆ ಕ್ವಾಜಾ ಬಂದೇ ನವಾಜ್, ಷೇಕ್ ಅಲ್ಲಾಉದ್ದೀನ ಅಲಿ, ಬದ್ರುದ್ದೀನ್ ಮಹಮ್ಮದ್ ಮತ್ತು ಕಾಜಿ ಶಹಾಬುದ್ದೀನ್. ಮಹಮ್ಮದ್ ಗವಾನನು ಓರ್ವ ಶ್ರೇಷ್ಠ ಸಾಹಿತ್ಯ ಪೋಷಕನಾಗಿದ್ದು, ಮದ್ರಸಾ ಕಾಲೇಜನ್ನು ಕಟ್ಟಿಸಿದನು. ಆದಿಲ್ ಷಾಹಿಗಳು ಅರಾಬಿಕ್ ಭಾಷೆಯನ್ನು ತಿರಸ್ಕರಿಸವಲಿಲ್ಲ. ಯೂಸುಫ್ ಆದಿಲ್‌ಷಾನ ಆಸ್ಥಾನದಲ್ಲಿ ಸೈಯದ್ ಅಹಮದ್ ಹರವಿ ಮತ್ತು ಮೌಲನ ಗೈತುದ್ದೀನ್ ಹಾಗೂ ಇಬ್ರಾಹಿಂ ಆದಿಲ್ ಷಾನ ಆಸ್ಥಾನದಲ್ಲಿ ಹಬೀಬುಲ್ಲಾ ಎಂಬ ಅರಾಬಿಕ್ ವಿದ್ವಾಂಸರಿದ್ದರು.

**ಪರ್ಷಿಯನ್:** ಬಹಮನಿ ರಾಜ್ಯದ ಸ್ಥಾಪನೆಯೊಂದಿಗೆ ದಕ್ಷಿಣ ಭಾರತದಲ್ಲಿ ಪರ್ಷಿಯನ್ ಸಾಹಿತ್ಯವು ಬೆಳೆಯತೊಡಗಿತು. ಅಂದಿನ ಪ್ರಮುಖ ವಿದ್ವಾಂಸರೆಂದರೆ ಇಸಾಮಿ, ವೇಸ್

ಉದ್ದೀನ್ ಬಿಜಾಪುರಿ, ಮುಲ್ಲಾಹರವಿ, ಹಕೀಮ್ ತಬ್ರೀಜಿ ಮತ್ತು ಹಕೀಮ್ ಶಿರಾಜಿ. ಇಸಾಮಿಯು *ಫುತುಹುಸ್ ಸಲಾತಿನ್*, ಅದರಿಯು *ಬಹನಮ್ ನಾಯ-ಇ-ದಕಿಖಿ* ಮತ್ತು ಜವಾಹಿರುತ ಅಸರ್‌ನು ಹಾಗೂ ಮಹಮ್ಮದ್ ಗವಾನನು *ಮಂಜರಿಲ್ ಇನ್ಸಾ* ಎಂಬ ಕೃತಿಯನ್ನು ರಚಿಸಿದ್ದಾರೆ. ಇತರ ಪ್ರಮುಖ ವಿದ್ವಾಂಸರೆಂದರೆ ಫೆರಿಸ್ತಾ, ಜುಹುರಿ ಮತ್ತು *ಮಲಿಕ್‌ಕುಮ್ಮಿ*. ಫೆರಿಸ್ತಾನು *ತಾರೀಖ್-ಇ-ಫೆರಿಸ್ತಾ* ಎಂಬ ಪುಸ್ತಕವನ್ನು ರಚಿಸಿದ್ದಾನೆ.

ದಖಿನಿ ಉರ್ದು: ದಖಿನಿ ಉರ್ದುವಿನಲ್ಲಿ ಪ್ರಪ್ರಥಮ ಬಾರಿಗೆ ಕ್ವಾಜಾ ಬಂದೇ ನವಾಜರು ಸಾಹಿತ್ಯವನ್ನು ರಚಿಸಿದರು. ಈ ಭಾಷೆಯಲ್ಲಿ ಷಾಮಿರಾಂಜಿಯು *ಕುಷ್‌ನಾಮ* ಮತ್ತು *ಕುಷ್‌ನಗಜ್* ಎಂಬ ಎರಡು ದೀರ್ಘ ಪದ್ಯಗಳನ್ನು ರಚಿಸಿದ್ದಾರೆ. ಬರೀದ್ ಷಾನ ಆಸ್ಥಾನದಲ್ಲಿ ನಿಜಾಮ ಬಿದರಿ, ಕುರೇಷಿ ಬಿದರಿ ಮತ್ತು ಫಿರೋಜ್ ಬಿದರಿ ಎಂಬ ಸಾಹಿತಿಗಳು ಪ್ರೋತ್ಸಾಹ ಪಡೆದಿದ್ದರು. ಅಬ್ದುಲ್ ಇಬ್ರಾಹಿಂ ನಾಮವನ್ನು ರಚಿಸಿದ್ದನು. ಹಸನ್ ಶೌಕಿಯು *ಫಿತ್‌ನಾಮ ನಿಜಾಮ್‌ಷಾ* ಮತ್ತು ಮಜಬಾನಿ *ನಾಮ ಆದಿಲ್‌ಷಾ* ಎಂಬ ಕೃತಿಗಳನ್ನು ರಚಿಸಿದ್ದರು. ಇತರ ಪ್ರಮುಖ ಉರ್ದು ಕವಿಗಳೆಂದರೆ - ಮಲಿಕ್ ಕುಷನುದ್, ಮುಲ್ಲಾನು ಸ್ರಾತಿ ಮತ್ತು ಅಂದಕವಿ ಸೈಯದ್ ಮಿರಾನ್ ಮಿಯನ್ ಖಾನ್.

## ಕಲೆ ಮತ್ತು ವಾಸ್ತುಶಿಲ್ಪ

ಷಾಹೀ ಸುಲ್ತಾನರು ಪ್ರೋತ್ಸಾಹಿಸಿ ಬೆಳಸಿದಂತಹ ವಾಸ್ತುಶೈಲಿಗೆ ಇಸ್ಲಾಮಿಕ್ ವಾಸ್ತುಶೈಲಿ ಎನ್ನಲಾಗಿದೆ. ಈ ಶೈಲಿಯಲ್ಲಿ ಕಟ್ಟಿದಂತಹ ಸ್ಮಾರಕಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಅವುಗಳೆಂದರೆ ಧಾರ್ಮಿಕ ಕಟ್ಟಡಗಳು ಮತ್ತು ಸಾರ್ವಜನಿಕ ಕಟ್ಟಡಗಳು. ಈ ರೀತಿಯ ಕಟ್ಟಡಗಳನ್ನು ನಾವು ಹೆಚ್ಚಾಗಿ ಗುಲ್ಬರ್ಗಾ, ಬೀದರ್ ಮತ್ತು ಬಿಜಾಪುರಗಳಲ್ಲಿ ಕಾಣಬಹುದು.

### ಗುಲ್ಬರ್ಗಾ

ಇದು ಬಹಮನಿ ಸುಲ್ತಾನರ ಪ್ರಥಮ ರಾಜಧಾನಿಯಾದ್ದರಿಂದ ಅಲ್ಲಿ ಹಲವಾರು ಸ್ಮಾರಕಗಳನ್ನು ಕಾಣಬಹುದು. ಇಲ್ಲಿ ಗ್ರಾನೈಟ್‌ನಿಂದ ಕಟ್ಟಿರುವ ಕೋಟೆಯು ಐದು ಬುರುಜುಗಳಿವೆ. ಇಲ್ಲಿಯ ಪ್ರಮುಖ ಸಮಾಧಿಗಳೆಂದರೆ ಹಜ್ರತ್ ಕ್ವಾಜಾ ಬಂದೇ ನವಾಜ್ ಮತ್ತು ಖಲಂದರ್ ಖಾನ್ಸಾ ಮಸೀದಿ. ಒಂದನೆ ಮುಹಮ್ಮದ್‌ಷಾನು ಷಾ ಬಜಾರ್ ಮಸೀದಿಯನ್ನು ಕಟ್ಟಿಸಿದನು. ಇಲ್ಲಿಯ ಪ್ರಾರ್ಥನಾ ಸಭಾಂಗಣವು ೫೦ ಮೀಟರ್ ಉದ್ದ ಮತ್ತು ೨೦ ಮೀಟರ್ ಅಗಲವಿದ್ದು, ೧೫ ಕಮಾನುಗಳನ್ನು ಹೊಂದಿದೆ. ಇದರ ಮುಂಭಾಗದಲ್ಲಿ ಎರಡು ಸ್ತಂಭಗಳಿವೆ. ಕೋಟೆಯ ಜಮೀಯಾ ಮಸೀದಿಯು ಮುಸ್ಲಿಂ ವಾಸ್ತುಶೈಲಿಯ ಪ್ರಸಿದ್ಧ ಕಟ್ಟಡವಾಗಿದೆ. ಇದು ೬೫.೮ ಮೀಟರ್ ಉದ್ದ ಮತ್ತು ೫೫.೬ ಮೀಟರ್ ಅಗಲ ಇದೆ. ಅಲ್ಲಿಯ ಶಾಸನದ ಪ್ರಕಾರ ಇದನ್ನು ಪರ್ಷಿಯಾದ ಶಿಲ್ಪಿ ರಫಿಯ

ಮೇಲ್ವಿಚಾರಣೆಯಲ್ಲಿ ಕಟ್ಟಲಾಗಿದೆ. ಇದು ಇಡೀ ದಕ್ಷಿಣ ಭಾರತದಲ್ಲಿಯೇ ಸುಪ್ರಸಿದ್ಧ ಮುಸ್ಲಿಂ ಶೈಲಿಯ ಕಟ್ಟಡವಾಗಿದೆ.

**ಬೀದರ್**

ಬೀದರ್ ಬಹಮನಿ ಸುಲ್ತಾನರ ಎರಡನೆ ರಾಜಧಾನಿಯಾದ್ದರಿಂದ ಇಲ್ಲಿಯೂ ಸಹ ಕೆಲವು ಮುಸ್ಲಿಂ ವಾಸ್ತುಶೈಲಿಯ ಕಟ್ಟಡಗಳನ್ನು ಕಾಣಬಹುದು. ಇಲ್ಲಿಯ ಪ್ರಮುಖ ಅರಮನೆಗಳೆಂದರೆ ತಕ್ತ್ ಮೆಹಲ್, ರಂಗೀನ್ ಮಹಲ್, ಗಗನ್ ಮಹಲ್, ಟರ್ಕೀಸ್ ಮಹಲ್ ಮತ್ತು ದಿವಾನಿ-ಇ-ಆಮ್. ಇಲ್ಲಿಯ ಪ್ರಮುಖ ಮಸೀದಿಗಳೆಂದರೆ ಜಮೀಯಾ ಮಸೀದಿ ಮತ್ತು ಸೋಲಾ ಕಂಬ ಮಸೀದಿ. ಇಲ್ಲಿ ಸುಮಾರು ೧೨ ಪ್ರಸಿದ್ಧ ಸಮಾಧಿಗಳಿವೆ. ಇಲ್ಲಿಯ ಅತ್ಯಾಕರ್ಷಕ ಸ್ಮಾರಕವೆಂದರೆ ಮಹಮ್ಮದ್ ಗವಾನನು ಕಟ್ಟಿಸಿದ 'ಮದ್ರಸಾ' ಎಂಬ ಕಾಲೇಜ್. ಇದು ೭೩.೮ ಮೀಟರ್ ಉದ್ದ, ೬೭ ಮೀಟರ್ ಅಗಲ ಮತ್ತು ೧೭ ಮೀಟರ್ ಎತ್ತರವಿದೆ. ಇದು ಮೂರು ಅಂತಸ್ತುಗಳನ್ನು ಹೊಂದಿದ್ದು ನಾಲ್ಕು ಭಾಗಗಳಿಂದ ಕೂಡಿದೆ. ಇದರಲ್ಲಿ ಉಪನ್ಯಾಸ ಕೊಠಡಿಗಳು, ಒಂದು ಗ್ರಂಥಾಲಯ, ಒಂದು ಮಸೀದಿ ಹಾಗೂ ವಸತಿಯ ಕೊಠಡಿಗಳಿವೆ. ಈ ಕಟ್ಟಡ ಇಂದು ಶಿಥಿಲಾವಸ್ಥೆಯಲ್ಲಿದೆ. ಜಮಿಯಾ ಮಸೀದಿಯು ಒಂದು ಸುಂದರ ಮುಸ್ಲಿಂ ಶೈಲಿಯ ಕಟ್ಟಡವಾಗಿದ್ದು ಏಳು ದ್ವಾರಗಳನ್ನು ಹೊಂದಿದೆ.

**ಬಿಜಾಪುರ**

ಇಸ್ಲಾಮಿಕ್ ವಾಸ್ತುಶೈಲಿಯ ಉತ್ತಮ ಸ್ಮಾರಕಗಳನ್ನು ಬಿಜಾಪುರದಲ್ಲೂ ಕಾಣಬಹುದು. ಇಲ್ಲಿ ಸುಮಾರು ೫೦ ಮಸೀದಿಗಳು, ೨೦ ಸಮಾಧಿಗಳು ಹಾಗೂ ಹಲವಾರು ಅರಮನೆಗಳಿವೆ. ಈ ಎಲ್ಲಾ ಸ್ಮಾರಕಗಳು ಬಿಜಾಪುರದ ಕೋಟೆಯೊಳಗಿವೆ. ಈ ಕೋಟೆಯು ಸುಮಾರು ೧೦.೫ ಕಿಲೋಮೀಟರ್ ಸುತ್ತಳತೆಯಿದ್ದು, ೫ ರಿಂದ ೬ ಮೀಟರ್ ಎತ್ತರವಿದೆ. ಇದರಲ್ಲಿ ೯೬ ಬುರುಜುಗಳಿದ್ದು ಐದು ದ್ವಾರಗಳನ್ನು ನೋಡಬಹುದು.

ಬಿಜಾಪುರದ ಸ್ಮಾರಕಗಳು ಹಳೆಯ ಪರ್ಷಿಯನ್ ಮತ್ತು ಆಟೋಮನ್ ಶೈಲಿಯನ್ನು ಹೋಲುತ್ತವೆ. ಇಲ್ಲಿಯ ಸ್ಮಾರಕಗಳ ಪ್ರಮುಖ ಲಕ್ಷಣಗಳೆಂದರೆ:

೧. ಗುಮ್ಮಟಗಳು. ಇವು ಆಕೃತಿಯಲ್ಲಿ ಗೋಳಾಕಾರವಾಗಿವೆ.
೨. ಕಮಾನುಗಳನ್ನು ಅಲಂಕಾರಯುತವಾಗಿ ಕಟ್ಟಲಾಗಿದ್ದು, ಅವುಗಳಲ್ಲಿ ಒಳ್ಳೆಯ ಬರವಣಿಗೆಗಳನ್ನು ಕಾಣಬಹುದು.
೩. ಕಂಬಗಳನ್ನು ಬಳಸದೇ ಇಡೀ ಕಟ್ಟಡದ ಭಾರವನ್ನು ದಪ್ಪ ಗೋಡೆಗಳ ಮೇಲೆ ಕೇಂದ್ರೀಕರಿಸಲಾಗಿದೆ.
೪. ಹೊರಚಾಚಿದ ಕಪೋತಗಳನ್ನು ಮತ್ತು ಕಲಾತ್ಮಕವಾದ ದಿಂಡನ್ನು ಈ ಕಟ್ಟಡಗಳಲ್ಲಿ ಪ್ರಯೋಗಿಸಿದ್ದಾರೆ.
೫. ಕಟ್ಟಡಗಳು ಶ್ರೀಮಂತವಾಗಿ ಅಲಂಕಾರಗೊಂಡಿದ್ದು, ಗುಲಾಬಿ ಹೂವಿನ ಆಕೃತಿಯಲ್ಲಿವೆ.

ಇಲ್ಲಿಯ ಪ್ರಮುಖ ಸ್ಮಾರಕಗಳೆಂದರೆ ಅಸರ್ ಮಹಲ್, ಗಗನ್ ಮಹಲ್, ಮೆಹ್ತಾರ್ ಮಹಲ್, ಚೈನಿ ಮಹಲ್, ಆನಂದ್ ಮಹಲ್, ಜಹಾಜ್ ಮಹಲ್, ಇಬ್ರಾಹಿಂ ರೋಜಾ, ಜಮಿಯಾ ಮಸೀದಿ ಮತ್ತು ಗೋಳಗುಮ್ಮಟ. ಜಮಿಯಾ ಮಸೀದಿಯನ್ನು ಒಂದನೆ ಆದಿಲ್ ಷಾನು ಕಟ್ಟಿಸಿದ್ದು ಇದರ ವಿಸ್ತೀರ್ಣವು ೧೭೦ ಮೀಟರ್ ಉದ್ದ ಮತ್ತು ೭೫ ಮೀಟರ್ ಅಗಲವಿದೆ. ಇದರ ಮೂರು ಬದಿಗಳಲ್ಲಿ ಏಳು ಕಮಾನುಗಳಿವೆ. ಇಬ್ರಾಹಿಂ ರೋಜಾವನ್ನು ಎರಡನೆ ಆದಿಲ್‌ಷಾನು ಕಟ್ಟಿಸಿದ್ದು ಅದು ಒಂದು ಸಮಾಧಿ ಹಾಗೂ ಒಂದು ಮಸೀದಿಯನ್ನು ಹೊಂದಿದೆ. ಇದು ಒಂದು ಅತ್ಯಾಕರ್ಷಕ ಸ್ಮಾರಕವಾಗಿದೆ. ಗೋಳಗುಮ್ಮಟವು ಇಡೀ ಪ್ರಪಂಚದಲ್ಲಿಯೇ ಬಹಳ ಪ್ರಸಿದ್ಧವಾದ ಸ್ಮಾರಕ. ವಾಸ್ತುಶೈಲಿಯ ಪ್ರಕಾರ ಇದು ಒಂದು ಸರಳ ಕಟ್ಟಡವಾಗಿದ್ದು ಇದರಲ್ಲಿ ಮಹಮ್ಮದ್ ಆದಿಲ್‌ಷಾ ಮತ್ತು ಅವನ ಹೆಂಡತಿ ಮಕ್ಕಳ ಸಮಾಧಿಗಳಿವೆ. ಇದು ೬೫.೫ ಮೀಟರ್ ಉದ್ದ, ಮತ್ತು ೬೦.೫ ಮೀಟರ್ ಅಗಲವಿದ್ದು, ೬೩.೫ ಮೀಟರ್ ಎತ್ತರವಿದೆ. ಇದು ಪ್ರಪಂಚದಲ್ಲಿಯೇ ಎರಡನೆಯ ಎತ್ತರವಾದ ಗುಮ್ಮಟವಾಗಿದ್ದು, ಇದರ ವ್ಯಾಸವು ೪೭ ಮೀಟರ್‌ಗಳಷ್ಟಿದೆ. ಇದರ ಗುಮ್ಮಟವು ಅಷ್ಟಕೋನಾಕೃತಿಯ ಗೋಪುರಗಳಿಂದ ಸುತ್ತುವರಿದಿದೆ. ಇದರ ಒಳಗಡೆ ೩.೭ ಮೀಟರ್ ಅಗಲದ ಮೊಗಸಾಲೆ ಇದ್ದು, ಇದನ್ನು 'ಪಿಸುಗುಟ್ಟುವ ಮೊಗಸಾಲೆ' ಎಂದು ಕರೆಯಲಾಗಿದೆ. ನಿಶ್ಯಬ್ಧವಾಗಿದ್ದಾಗ ಪಿಸುಗುಟ್ಟಿದರೆ ಅಥವಾ ಕೈ ಚಪ್ಪಾಳೆ ಹೊಡೆದರೆ ಸುಮಾರು ೭ ರಿಂದ ೧೦ ಬಾರಿ ಪ್ರತಿಧ್ವನಿಸುತ್ತದೆ. ಆದ್ದರಿಂದ ಇದನ್ನು ಧ್ವನಿಗತಿಯ ಆಶ್ಚರ್ಯ (ಅಕಾಸ್ಟಿಕ್ ವಂಡರ್) ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

**ಚಿತ್ರಕಲೆ**

ಇವರು ಹೆಚ್ಚಾಗಿ ಕಾಲ್ಪನಿಕ ಮತ್ತು ಶೃಂಗಾರದ ವಿಷಯಗಳನ್ನು ಚಿತ್ರಿಸುವುದಕ್ಕೆ ಇಷ್ಟಪಡುತ್ತಿದ್ದರು. ನಜುವುಲ್ ಉಲುಮ್ ವಿಶ್ವರಚನೆಗೆ ಸಂಬಂಧಿಸಿದ್ದು ೮೭೬ ಚಿಕ್ಕ ಪುಟ್ಟ ಚಿತ್ರಗಳನ್ನು ಹೊಂದಿದೆ. ಅಜೈಬುಲ್ ಮಕ್ಲುಕಲ್ ಇಂತಹದೇ ಮತ್ತೊಂದು ಚಿತ್ರ. ಎರಡನೆ ಇಬ್ರಾಹಿಂ ಆದಿಲ್‌ಷಾನ ಭಾವಚಿತ್ರವು ಅತ್ಯಂತ ಸುಂದರವಾಗಿದ್ದು, ಒಂದು ಕೈಯಲ್ಲಿ ಏಕ್ತಾರ ಮತ್ತೊಂದು ಕೈಯಲ್ಲಿ ಪುಸ್ತಕವನ್ನು ಹಿಡಿದಿರುವ ದೃಶ್ಯವನ್ನು ಮನಮೋಹಕವಾಗಿ ಚಿತ್ರಿಸಲಾಗಿದೆ. ಇದಲ್ಲದೆ ಸಂತರ ಭಾವಚಿತ್ರಗಳು, ಪ್ರಣಯಿಗಳ ಚಿತ್ರಗಳು, ಆನೆಗಳ ಕಾದಾಟ ಮುಂತಾದವುಗಳನ್ನು ಗೋಡೆಗಳ ಮೇಲೆ ಚಿತ್ರಿಸಲಾಗಿದೆ. ಈ ರೀತಿ ಬಹಮನಿ ಸುಲ್ತಾನರ ಮತ್ತು ಬಿಜಾಪುರ ಸುಲ್ತಾನರ ಕಾಲದಲ್ಲಿ ಕಲೆ, ವಾಸ್ತುಶಿಲ್ಪ ಮತ್ತು ಚಿತ್ರಕಲೆಯು ಉನ್ನತ ಮಟ್ಟವನ್ನು ತಲುಪಿತ್ತು.

## ೫.೩ ಮೈಸೂರಿನ ಒಡೆಯರು (ಆರಂಭ ಕಾಲ)

ಮೈಸೂರಿನ ಒಡೆಯರು ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿದ್ದು, ತಾಳೀಕೋಟೆ ಯುದ್ಧದ ನಂತರವು ಅವರ ಅಧೀನದಲ್ಲಿ ಕಾರ್ಯ ನಿರ್ವಹಿಸಿದ್ದರು. ದಂತಕತೆಗಳ ಪ್ರಕಾರ ಇವರು ಚಂದ್ರವಂಶದವರಾಗಿದ್ದು ದ್ವಾರಕೆಯ ಯಾದವ ಕುಲಕ್ಕೆ ಸೇರಿದವರು. ಇದರ ಸಂಸ್ಥಾಪಕರು ಯದುರಾಯ ಮತ್ತು ಕೃಷ್ಣರಾಯ ಎಂಬ ಸಹೋದರರು. ಇವರು ಕ್ರಿ.ಶ. ೧೩೯೯ ರಿಂದ ಕ್ರಿ.ಶ. ೧೪೨೩ ರವರೆಗೆ ಆಳಿದರು. ಇವರ ನಂತರ ಹಿರೇಬೆಟ್ಟದ ಚಾಮರಾಜ, ಒಂದನೆ ತಿಮ್ಮರಾಜ, ಎರಡನೆ ಗಿರಿಯ ಚಾಮರಾಜ ಮತ್ತು ಒಂದನೆ ರಾಜಒಡೆಯರು ಕ್ರಮವಾಗಿ ಆಳಿದರು.

ರಾಜಒಡೆಯರು ಅಧಿಕಾರಕ್ಕೆ ಬಂದಾಗ ಅವನು ೩೩ ಹಳ್ಳಿಗಳ ಒಡೆಯನಾಗಿದ್ದು ೩೦೦ ಸೈನಿಕರನ್ನು ಹೊಂದಿದ್ದನು. ಇವನು ಎರಡನೆ ಶ್ರೀರಂಗನ ಸಾಮಂತನಾಗಿದ್ದು, ನಂತರ ತಿರುಮಲನ ದೌರ್ಬಲ್ಯವನ್ನು ಅರಿತು ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿ ವಶಪಡಿಸಿ ಕೊಂಡನು. ಅಂದಿನಿಂದ ಶ್ರೀರಂಗಪಟ್ಟಣವು ಒಡೆಯರ ರಾಜಧಾನಿಯಾಗಿ, ಮೈಸೂರು ರಾಜ್ಯವು ದಕ್ಷಿಣದಲ್ಲಿ ಉಮ್ಮತ್ತೂರು ಮತ್ತು ತೆರಕಣಾಂಬಿಯವರೆಗೂ, ಪೂರ್ವದಲ್ಲಿ ಬನ್ನೂರಿನವರೆಗೂ, ವಾಯುವ್ಯದಲ್ಲಿ ಮಾವತ್ತೂರು, ಅಕ್ಕಿಹೆಬ್ಬಾಳು ಮತ್ತು ಹೊಳೆನರಸೀಪುರ ದವರೆಗೂ ಹಬ್ಬಿತ್ತು. ಇದರಿಂದಾಗಿ ಇವನು ಮೈಸೂರನ್ನು ರಚಿಸಿದ ಪ್ರಪ್ರಥಮ ಒಡೆಯರ ದೊರೆಯೆಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ.

ರಾಜಒಡೆಯರ ನಂತರ ಇವನ ಮೊಮ್ಮಗ ಐದನೇ ಚಾಮರಾಜ ಒಡೆಯ ಅಧಿಕಾರಕ್ಕೆ ಬಂದನು. ಇವನು ವಿಜಯನಗರದ ರಾಜಕೀಯ ದುರ್ಬಲತೆಯ ಲಾಭ ಪಡೆದು ತನ್ನ ದಳವಾಯಿಗಳೊಡನೆ ರಾಜ್ಯವನ್ನು ಎಲ್ಲಾ ಕಡೆ ವಿಸ್ತರಿಸಿದನು. ಇವನು ಒಬ್ಬ ಆಡಳಿತಗಾರ ನಾಗಿರುವುದರ ಜೊತೆಗೆ ಓರ್ವ ಶ್ರೇಷ್ಠ ಕವಿಯೂ ಆಗಿದ್ದನು. ಇವನು ಕಾಲವಾದ ನಂತರ ಇಮ್ಮಡಿ ರಾಜಒಡೆಯರು ಮತ್ತು ರಣಧೀರ ಕಂಠೀರವ ನರಸರಾಜ ಒಡೆಯರು ಅಧಿಕಾರಕ್ಕೆ ಬಂದರು.

ಕಂಠೀರವ ನರಸರಾಜನು ಅಧಿಕಾರಕ್ಕೆ ಬಂದಾಗ ದಕ್ಷಿಣ ಭಾರತವು ರಾಜಕೀಯ ಅಸ್ಥಿರತೆಯಿಂದ ಕೂಡಿತ್ತು. ಇವನ ಕಾಲದಲ್ಲಿ ಬಿಜಾಪುರದ ರಣದುಲ್ಲಾಖಾನನು ಶ್ರೀರಂಗ ಪಟ್ಟಣಕ್ಕೆ ಮುತ್ತಿಗೆ ಹಾಕಿ ಕಪ್ಪವನ್ನು ಒತ್ತಾಯಿಸಿದಾಗ, ಅದನ್ನು ಕೊಡಲು ನಿರಾಕರಿಸಿದ್ದೇ ಅಲ್ಲದೆ, ಅವನನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ಇವನು ವಿಜಯನಗರದ ಅಧಿಪತ್ಯದಿಂದ ಸರ್ವ ಸ್ವತಂತ್ರನಾದನು. ಇವನ ಕಾಲದಲ್ಲಿ ಟಂಕಶಾಲೆಯನ್ನು ತೆರೆದು ಚಿನ್ನದ ನಾಣ್ಯಗಳನ್ನು ಇವನ ಹೆಸರಲ್ಲಿ 'ಕಂಠೀರಾಯಿ ಹಣ' ಎಂಬ ತಾಮ್ರದ ನಾಣ್ಯಗಳನ್ನು 'ಆನೆಕಾಸು' ಎಂದು ಟಂಕಿಸಿದನು. ಇವನ ಕಾಲದಲ್ಲಿಯ ಶ್ರೀರಂಗಪಟ್ಟಣವು ಒಂದು ಸಾಮಾಜಿಕ ಮತ್ತು ಧಾರ್ಮಿಕ ಕೇಂದ್ರವಾಗಿ ಬೆಳೆದು, ನವರಾತ್ರಿ ಹಬ್ಬವನ್ನು ಆಚರಿಸಲು ಪ್ರಾರಂಭಿಸಿತು. ಇವನೂ ಸಹ ಓರ್ವ ಉತ್ತಮ ಸಾಹಿತ್ಯ ಪೋಷಕನಾಗಿದ್ದನು.

ಇವನ ನಂತರ ಅಧಿಕಾರಕ್ಕೆ ಬಂದ ದೊಡ್ಡ ದೇವರಾಜ ಒಡೆಯರ (೧೬೫೯-೧೬೭೩) ಕಾಲದಲ್ಲಿ ಇಕ್ಕೇರಿಯ ಶಿವಪ್ಪನಾಯಕನು ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿದನು. ಇದರಿಂದ ಇಕ್ಕೇರಿಯವರಿಗೆ ಅಪಾರ ಹಾನಿಯಾಯಿತು. ಕೊನೆಯಲ್ಲಿ ಸೋಮಶೇಖರ ನಾಯಕನು ಶಾಂತಿ ಒಪ್ಪಂದ ಮಾಡಿಕೊಂಡನು. ಇವನ ಕಾಲದಲ್ಲಿ ಮೈಸೂರು ಯುರೋಪಿಯನ್ನರ ಸಂಪರ್ಕ ಬೆಳೆಸಿತು. ಇವನ ನಂತರ ಚಿಕ್ಕದೇವರಾಜ ಒಡೆಯನು ಅಧಿಕಾರಕ್ಕೆ ಬಂದನು.

## ಚಿಕ್ಕ ದೇವರಾಜ ಒಡೆಯರು (೧೬೭೩-೧೭೦೪)

ಇವನು ಮೈಸೂರಿನ ಒಡೆಯರಲ್ಲಿಯೇ ಅತ್ಯಂತ ಪ್ರಸಿದ್ಧ ದೊರೆಯಾಗಿದ್ದನು. ಇವನು ಅಧಿಕಾರಕ್ಕೆ ಬಂದ ಅವಧಿಯಲ್ಲಿ ವಿಜಯನಗರವು ಸಂಪೂರ್ಣವಾಗಿ ದುರ್ಬಲಗೊಂಡಿದ್ದು, ಷಾಹಿ ರಾಜ್ಯಗಳು ಔರಂಗಜೇಬನ ದಾಳಿಗೆ ತುತ್ತಾಗಿ ನಲುಗಿದ್ದವು. ಮರಾಠರು ಶಿವಾಜಿಯ ನೇತೃತ್ವದಲ್ಲಿ ಪ್ರಾಮುಖ್ಯತೆ ಗಳಿಸಿದ್ದರು. ಇಕ್ಕೇರಿ ನಾಯಕರು ಸಹ ಸ್ವತಂತ್ರರಾಗಿದ್ದರು. ಇಂತಹ ಸಂದರ್ಭದಲ್ಲಿ ದಕ್ಷಿಣ ಭಾರತವು ಸಾಮ್ರಾಜ್ಯಶಾಹಿಗಳಾದ ಮೊಗಲರು ಮತ್ತು ಅವರ ಸಾಮಂತರ ನಡುವೆ ಪದೇ ಪದೇ ತಿಕ್ಕಾಟಗಳಿಗೆ ಒಳಗಾಗಿತ್ತು. ಇದರ ಸದುಪಯೋಗವನ್ನು ಪಡೆದ ಚಿಕ್ಕದೇವರಾಯನು ಹಲವಾರು ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಇವುಗಳಲ್ಲಿ ಪ್ರಮುಖವಾದುದ್ದೆಂದರೆ, ಶಿವಾಜಿಯು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಅವನನ್ನು ಸೋಲಿಸಿ ಹಿಮ್ಮೆಟಿಸಿದ್ದು, ಮರಾಠರು ಸಾಂಭಾಜಿಯ ನೇತೃತ್ವದಲ್ಲಿ ದಂಡೆತ್ತಿ ಬಂದಾಗ ಅವರ ದಂಡನಾಯಕರ ತಲೆಗಳನ್ನು ಕತ್ತರಿಸಲಾಯಿತು. ಇವನು ಬೆಂಗಳೂರನ್ನು ಮೊಗಲರ ದಂಡನಾಯಕ ಖಾಸಿಂ ಖಾನ್‌ನಿಂದ ಕ್ರಯಕ್ಕೆ ಕೊಂಡುಕೊಂಡನು. ಇದಲ್ಲದೆ ಇವನು ಔರಂಗಜೇಬನ ಆಸ್ಥಾನಕ್ಕೆ ತನ್ನ ರಾಯಭಾರಿಯನ್ನು ಕಳಿಸಿ ಅವರ ಸ್ನೇಹವನ್ನು ಸಂಪಾದಿಸಿದನು.

ಚಿಕ್ಕದೇವರಾಯನು ಒಬ್ಬ ದಕ್ಷಯೋಧನಷ್ಟೇ ಆಗಿರದೆ ಓರ್ವ ಚಾಣಾಕ್ಷ ಆಡಳಿತಗಾರನೂ ಆಗಿದ್ದನು. ತನ್ನ ಆಡಳಿತಕ್ಕೋಸ್ಕರ ಒಂದು ಮಂತ್ರಿಮಂಡಲವನ್ನು ರಚಿಸಿದ. ಆಡಳಿತದಲ್ಲಿ ದಳವಾಯಿಗಳು ಸಹ ಮುಂದುವರಿದರು. ಇವನು ಸಹ ಟಂಕಸಾಲೆಯನ್ನು ಅಭಿವೃದ್ಧಿಗೊಳಿಸಿದನು. ಭೂಸುಧಾರಣೆ ಮತ್ತು ಕಂದಾಯ ಪದ್ಧತಿಗಳಿಂದ ಸುವ್ಯವಸ್ಥಿತವಾಗಿ ಕಂದಾಯ ಸಂಗ್ರಹಿಸಿದ ಕಾರಣದಿಂದಾಗಿ ಇವನ ಬೊಕ್ಕಸದಲ್ಲಿ ೯ ಕೋಟಿ ಪಗೋಡಗಳಿದ್ದವು. ಆದ್ದರಿಂದಲೇ ಇವನಿಗೆ 'ನವಕೋಟಿ ನಾರಾಯಣ' ಎಂಬ ಬಿರುದು ಇತ್ತು. ಇದಲ್ಲದೆ ಅಂಚೆ ಮತ್ತು ಪೊಲೀಸ್ ಸೇವೆಗಳನ್ನು ಜಾರಿಗೆ ತಂದನು. ಇಡೀ ಆಡಳಿತವನ್ನು ೧೮ ಇಲಾಖೆಗಳಾಗಿ (ಅಠಾರ ಕಛೇರಿ) ವಿಂಗಡಿಸಿ, ಅಧಿಕಾರಿಗಳ ಸಂಬಳವನ್ನು ನಗದು ರೂಪದಲ್ಲಿ ಮತ್ತು ಧವಸದ ರೂಪದಲ್ಲಿ ಪಾವತಿಸಲಾಗುತ್ತಿತ್ತು. ಅಳತೆ ಮತ್ತು ತೂಕವನ್ನು ಧೃಡಪಡಿಸಲಾಯಿತು. ನಾಣ್ಯ ಮತ್ತು ನೋಟುಗಳನ್ನು ಪುನರ್ರಚಿಸಿ ವ್ಯಾಪಾರ ಮತ್ತು ಮಾರುಕಟ್ಟೆಗಳ ಬೆಳವಣಿಗೆಗೆ ನೆರವು ನೀಡಿದನು.

ಇವನು ತನ್ನ ಕಾಲದಲ್ಲಿ ಸಾಮಾಜಿಕ ಶಾಸನವನ್ನು ಜಾರಿಗೊಳಿಸಿ ಶೂದ್ರರ ಧಾರ್ಮಿಕ ಆಚರಣೆಗಳನ್ನು ಹಾಗೂ ಪದ್ಧತಿಗಳನ್ನು ಪ್ರೋತ್ಸಾಹಿಸಿದನು. ಚಿಕ್ಕದೇವರಾಯನ ಕಾಲದಲ್ಲಿ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯವು ಗಣನೀಯ ಪ್ರಮಾಣದಲ್ಲಿ ಬೆಳೆದಿತ್ತು. ಇವನು ಸ್ವತಃ ಕವಿಯಾಗಿದ್ದು *ಗೀತಗೋಪಾಲ* ಮತ್ತು *ಚಿಕ್ಕದೇವರಾಯ ಬಿನ್ನಪಂ* ಎಂಬ ಕೃತಿಗಳನ್ನು ರಚಿಸಿದ್ದನು. ಇವನು ತನ್ನ ಆಸ್ಥಾನದಲ್ಲಿ ಕೆಲವು ಸಾಹಿತಿಗಳನ್ನು ಪ್ರೋತ್ಸಾಹಿಸಿದ್ದನು. ಅವರಲ್ಲಿ ಚಿಕ್ಕುಪಧ್ಯಾಯನು *ವಿಷ್ಣು ಪುರಾಣ* ಮತ್ತು *ದಿವ್ಯಸೂರಿ ಚರಿತೆ*ಯನ್ನು, ತಿರುಮಲಾರ್ಯನು *ಚಿಕ್ಕದೇವರಾಜ ವಿಜಯ* ಮತ್ತು *ಚಿಕ್ಕದೇವರಾಜ ವಂಶಾವಳಿ*ಯನ್ನು, ಸಿಂಗರಾರ್ಯನು *ಮಿತ್ರಾವಿಂದ ಗೋವಿಂದ*ವನ್ನು, ಸಂಚಿ ಹೊನ್ನಮ್ಮನು *ಹದಿಬದೆಯ ಧರ್ಮ*ವನ್ನು ಹಾಗೂ ಶ್ರೀರಂಗಮ್ಮನು *ಪದ್ಮಿನಿ ಕಲ್ಯಾಣ*ವನ್ನು ರಚಿಸಿದ್ದರು.

ಚಿಕ್ಕದೇವರಾಯನ ನಂತರ ಇಮ್ಮಡಿ ಕಂಠೀರವ ನರಸರಾಜ ಒಡೆಯರು ಮತ್ತು ಎರಡನೆ ನರಸರಾಜ ಒಡೆಯರು ಕ್ರಮವಾಗಿ ಆಳಿದರು. ಇವರ ಕಾಲದಲ್ಲಿ ದಳವಾಯಿಗಳು ಪ್ರಬಲರಾಗಿ ಮೈಸೂರು ಒಡೆಯರನ್ನು ಮೂಲೆಗುಂಪು ಮಾಡಲಾರಂಭಿಸಿದರು. ಇದರ ಲಾಭ ಪಡೆದ ಹೈದರ್‌ಅಲಿಯು ಒಡೆಯರನ್ನು ಬದಿಗಿಟ್ಟು ದಕ್ಷಿಣ ಕರ್ನಾಟಕದಲ್ಲಿ ಮುಸ್ಲಿಂ ಆಳ್ವಿಕೆಗೆ ಅಡಿಪಾಯ ಹಾಕಿದನು.

ಈ ರೀತಿ ಮೈಸೂರು ಒಡೆಯರು ವಿಜಯನಗರದವರ ಅಧಿಪತ್ಯದಲ್ಲಿ ತಮ್ಮ ಆಳ್ವಿಕೆ ಪ್ರಾರಂಭಿಸಿ, ನಂತರ ಸ್ವತಂತ್ರ ರಾಜರಾಗಿ ಆಡಳಿತ, ಕಲೆ ಮತ್ತು ಸಾಹಿತ್ಯಕ್ಕೆ ಅಗಾಧ ಪ್ರಮಾಣದಲ್ಲಿ ಕೊಡುಗೆ ನೀಡಿದ್ದರು.

## ೫.೪ ಇಕ್ಕೇರಿ ಮತ್ತು ಚಿತ್ರದುರ್ಗದ ನಾಯಕರು

ವಿಜಯನಗರದ ಅಧೀನದಲ್ಲಿದ್ದ ಅನೇಕ ಪಾಳೆಯಗಾರರಲ್ಲಿ ಇಕ್ಕೇರಿ ಮತ್ತು ಚಿತ್ರದುರ್ಗದ ನಾಯಕರು ಬಹಳ ಪ್ರಮುಖರು. ಇಕ್ಕೇರಿ ಅಥವಾ ಕೆಳದಿ ನಾಯಕರು ತಾಳಿಕೋಟೆಯ ಯುದ್ಧದ ನಂತರವೂ ಕೆಲವು ವರ್ಷಗಳ ಕಾಲ ಅವರ ಅಧೀನದಲ್ಲಿಯೇ ಕಾರ್ಯ ನಿರ್ವಹಿಸಿದರು. ಇವರು ಸುಮಾರು ೨೫೦ ವರ್ಷಗಳ ಕಾಲ ಕರ್ನಾಟಕದ ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದರು. ಕೆಳದಿಯ ಇತಿಹಾಸವನ್ನು ರಚಿಸಲು ಅಸಂಖ್ಯಾತ ಶಾಸನಗಳು, ಹಸ್ತಪ್ರತಿಗಳು ಮತ್ತು ದೇಶೀಯ ಹಾಗೂ ವಿದೇಶಿಯ ಬರವಣಿಗೆಗಳು ಸಹಾಯಕವಾಗುತ್ತವೆ.

### ಇಕ್ಕೇರಿ ಅರಸರು

ಈ ಸಂಸ್ಥಾನವನ್ನು ಸಂಪ್ರದಾಯಗಳ ಪ್ರಕಾರ 'ಚೌಡಪ್ಪ' ಮತ್ತು 'ಭದ್ರಪ್ಪ' ಎಂಬ ಇಬ್ಬರು ವೀರಶೈವ ಸೋದರರು ಕಟ್ಟಿದರು. ಇವರು ಕೃಷ್ಣದೇವರಾಯನ ಸಾಮಂತರಾಗಿದ್ದರು. ಇವರ ನಂತರ ಸದಾಶಿವ ನಾಯಕನು (೧೫೧೩-೧೫೪೬) ಅಧಿಕಾರಕ್ಕೆ ಬಂದು ಕೆಳದಿ ಸಂಸ್ಥಾನಕ್ಕೆ ಭದ್ರ ಬುನಾದಿ ಹಾಕಿದನು. ಇವನು ಕಲ್ಯಾಣ, ಕಲ್ಬುರ್ಗಿ, ಬೀದರ್, ಬಂಕಾಪುರ ಮತ್ತು ತುಳುನಾಡಿನ ಹಾಗೂ ಕೇರಳದ ಕೆಲವು ಭಾಗಗಳನ್ನು ಗೆದ್ದುಕೊಂಡನು. ಅವನ ಒಂದು ಶಾಸನದ ಪ್ರಕಾರ ಸುಮಾರು ೫೬ ಗರುಡರ ಮೇಲೆ ತನ್ನ ಅಧಿಕಾರ ಹೊಂದಿದ್ದನು. ಇದಲ್ಲದೆ ಇವನು ಚಂದ್ರಗಿರಿ, ಕೆಳದಿ ಮತ್ತು ಕಾಸರಗೋಡಿನಲ್ಲಿ ಕೋಟೆಗಳನ್ನು ಕಟ್ಟಿಸಿದನು. ಇವನು ಒಬ್ಬ ಧೀರಯೋಧನಾಗಿರುವುದರ ಜೊತೆಗೆ ಧಾರ್ಮಿಕ ಸಹಿಷ್ಣುವಾಗಿದ್ದನು. ಇವನ ನಂತರ ಅಧಿಕಾರಕ್ಕೆ ಬಂದ ಒಂದನೆ ವೆಂಕಟಪ್ಪ ನಾಯಕನು ವಿಜಯನಗರದ ಆಳ್ವಿಕೆಯಿಂದ ಬಿಡುಗಡೆ ಹೊಂದಿ ಸ್ವತಂತ್ರ ರಾಜನಾದನು.

#### ಒಂದನೆ ವೆಂಕಟಪ್ಪ ನಾಯಕ (ಕ್ರಿ.ಶ. ೧೬೧೩-೧೬೨೯)

ಈತನ ಕಾಲದಲ್ಲಿ ಇಕ್ಕೇರಿ ಸಂಸ್ಥಾನವು ವಿಸ್ತೃತವಾಗತೊಡಗಿತು. ಇವನು ಬಿಜಾಪುರದ ಸೈನ್ಯವನ್ನು ಹಿಮ್ಮೆಟ್ಟಿಸಿ, ಗೇರುಸೊಪ್ಪೆಯ ಭೈರಾದೇವಿಯನ್ನು ಸೋಲಿಸಿ ಪೋರ್ಚುಗೀಸರ ವಿಸ್ತರಣೆಯನ್ನು ತಡೆಗಟ್ಟಿದನು. ಇದರಿಂದಾಗಿ ಕರಾವಳಿ ಪ್ರದೇಶದ ವ್ಯಾಪಾರವು ಕೆಳದಿಯ ವಶವಾಯಿತು. ಇವನ ನಂತರ ಅಧಿಕಾರಕ್ಕೆ ಬಂದ ವೀರಭದ್ರನಾಯಕನು (೧೬೨೯-೧೬೪೫) ತನ್ನ ರಾಜಧಾನಿಯನ್ನು ಇಕ್ಕೇರಿಯಿಂದ ಬಿದನೂರಿಗೆ ವರ್ಗಾಯಿಸಿದನು. ಇವನು ಪೋರ್ಚುಗೀಸರೊಡನೆ ಕೆಲವು ವ್ಯಾಪಾರ ಒಪ್ಪಂದಗಳನ್ನು ಮಾಡಿಕೊಂಡು ಅವರೊಡನೆ ಮೈತ್ರಿ ಬೆಳೆಸಿದನು. ಇವನ ನಂತರ ಅಧಿಕಾರಕ್ಕೆ ಬಂದವನೆ ಶಿವಪ್ಪನಾಯಕ.

#### ಶಿವಪ್ಪನಾಯಕ (ಕ್ರಿ.ಶ. ೧೬೪೫-೧೬೬೦)

ಶಿವಪ್ಪನಾಯಕನು ಕೆಳದಿ ನಾಯಕರಲ್ಲಿಯೇ ಅತ್ಯಂತ ಪ್ರಸಿದ್ದ ದೊರೆ. ಇವನು ಅಧಿಕಾರಕ್ಕೆ ಬಂದ ಕೆಲವೆ ವರ್ಷಗಳಲ್ಲಿ ವೆಲ್ಲೂರಿನ ಮೇಲೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡನು.

ಇದರ ನಂತರ ಚಿಕ್ಕಪುಟ್ಟ ರಾಜ್ಯಗಳನ್ನು ಸೋಲಿಸಿ ತನ್ನ ವಶಕ್ಕೆ ತೆಗೆದುಕೊಂಡನು. ಇದರಿಂದಾಗಿ ಇವನ ಅಧಿಕಾರವು ಮಂಗಳೂರಿನವರೆಗೂ ವಿಸ್ತರಿಸಿತು. ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರನ್ನು ಸೋಲಿಸಿ ಅವರನ್ನು ಮಂಗಳೂರು, ಕುಂದಾಪುರ, ಗಂಗೊಳ್ಳಿ ಹಾಗೂ ಹೊನ್ನಾವರದಿಂದ ಪಲಾಯನ ಮಾಡಿಸಿದನು. ಇದರಿಂದಾಗಿ ಪೋರ್ಚುಗೀಸರಿಗೆ ತುಂಬಾ ನಷ್ಟವುಂಟಾಯಿತು. ಈ ದಂಡಯಾತ್ರೆಗಳ ಫಲವಾಗಿ ಶಿವಪ್ಪನಾಯಕನ ಅಧಿಕಾರವು ಕಾಸರಗೋಡಿನವರೆಗೆ ವಿಸ್ತರಿಸಿತು. ಆದರೆ ಇವನ ಶ್ರೀರಂಗಪಟ್ಟಣದ ಮುತ್ತಿಗೆಯು ವಿಫಲವಾಗಿ ಇಕ್ಕೇರಿ ಮತ್ತು ಮೈಸೂರಿನವರ ಸಂಬಂಧಗಳ ಹಾಳಾದವು.

ಶಿವಪ್ಪನಾಯಕನು ತನ್ನ ದಂಡಯಾತ್ರೆಗಳಿಗಿಂತ ಹೆಚ್ಚಾಗಿ ಅವನ ಆಂತರಿಕ ಸುಧಾರಣೆಗಳಿಗೆ ಪ್ರಸಿದ್ಧಿಯಾಗಿದ್ದಾನೆ. ಇವನು ಭೂಮಿಯನ್ನು ಸಂಪೂರ್ಣವಾಗಿ ಅಳತೆ ಮಾಡಿಸಿ ಮಣ್ಣಿನ ಫಲವತ್ತತೆ ಮತ್ತು ನೀರಾವರಿ ಸೌಕರ್ಯದ ಆಧಾರದ ಮೇಲೆ ತನ್ನ ರಾಜ್ಯದ ಇಡೀ ಭೂಮಿಯನ್ನು ಐದು ವರ್ಗಗಳಾಗಿ ವಿಂಗಡಿಸಿದ್ದನು. ಅವುಗಳೆಂದರೆ-

೧. ಉತ್ತಮ - ಕಪ್ಪು ಮಿಶ್ರಿತ ಮರಳು ಭೂಮಿ

೨. ಮಧ್ಯಮ - ಕೆಂಪು ಮಿಶ್ರಿತ ಭೂಮಿ

೩. ಕನಿಷ್ಟತಮ ಕಪ್ಪು ಮಿಶ್ರಿತ ಬೂದು ಮಣ್ಣು

೪. ಅಧಮ - ನೀರಿನ ಸೌಕರ್ಯವಿಲ್ಲದ ಒಣಭೂಮಿ ಮತ್ತು

೫. ಅಧಮೋಧಮ - ಒಣ ಮತ್ತು ಕಲ್ಲಿನಿಂದ ಕೂಡಿದ ಭೂಮಿ.

ಈ ರೀತಿ ವರ್ಗೀಕರಿಸಿದ ಭೂಮಿಯಲ್ಲಿ ಪ್ರಾಯೋಗಿಕವಾಗಿ ಬೆಳೆಯನ್ನು ಬೆಳೆಯಲಾಗುತ್ತಿತ್ತು. ನಂತರ ಬೀಜದ ಬೆಲೆ, ಕೃಷಿಯ ಖರ್ಚು, ಒಟ್ಟು ಉತ್ಪತ್ತಿ ಮತ್ತು ಅದರ ಒಟ್ಟು ಮೌಲ್ಯವನ್ನು ಗಣನೆಗೆ ತೆಗೆದುಕೊಂಡು ಐದು ವರ್ಷದ ಸರಾಸರಿ ಆದಾಯ ಮತ್ತು ಖರ್ಚನ್ನು ಲೆಕ್ಕಾಚಾರ ಮಾಡಿ ಕಂದಾಯವನ್ನು ನಿಗಧಿಪಡಿಸಲಾಗಿತ್ತು. ಈ ರೀತಿ ಹೊಸದಾಗಿ ನಿಗಧಿಪಡಿಸಿದ ಕಂದಾಯಕ್ಕೆ 'ಶಿವಪ್ಪನಾಯಕನ ಶಿಸ್ತು' ಎಂದು ಕರೆಯಲಾಗಿದ್ದು, ೧/೩ ರಷ್ಟಿತ್ತು. ಈ ಕಂದಾಯ ವ್ಯವಸ್ಥೆಯನ್ನು ಅಕ್ಬರನ ಮಂತ್ರಿಯಾದ ರಾಜಾ ತೋದರಮಲ್ಲನ ಕಂದಾಯ ಪದ್ಧತಿಗೆ ಹೋಲಿಸಲಾಗಿದೆ.

ಶಿವಪ್ಪನಾಯಕನ ನಂತರ ವೆಂಕಟಪ್ಪ ನಾಯಕ ಮತ್ತು ಸೋಮಶೇಖರ ನಾಯಕ ಕ್ರಮವಾಗಿ ಆಳಿದರು. ಸೋಮಶೇಖರನ ಕಾಲದಲ್ಲಿ ಶಿವಾಜಿಯು ಬಿದನೂರಿನ ಮೇಲೆ ವಿಸ್ಮಯಕಾರಿ ದಾಳಿ ಮಾಡಿ ಕಪ್ಪ ಸಂಗ್ರಹಿಸಿ ವಾಪಸ್ಸಾದನು. ಈ ಸಂದರ್ಭದಲ್ಲಿ ಈತನ 'ರಾಣಿ ಚೆನ್ನಮ್ಮ'ನು ಅಧಿಕಾರದ ಚುಕ್ಕಾಣಿ ಹಿಡಿದಳು. ಇವಳು ಸಹ ಮೈಸೂರಿನವರೊಡನೆ ಹೋರಾಡಬೇಕಾಯಿತು. ಶಿವಾಜಿಯ ಮಗ ರಾಜಾರಾಮನನ್ನು ಔರಂಗಜೇಬನ ಸೈನ್ಯವು ಓಡಿಸಿಕೊಂಡು ಬಂದಾಗ ಅವನು ಕೆಳದಿ ಸಂಸ್ಥಾನವನ್ನು ಪ್ರವೇಶಿಸಿದನು. ಆಗ ರಾಜಾರಾಮನಿಗೆ ಚೆನ್ನಮ್ಮನು ಆಶ್ರಯಕೊಟ್ಟು, ಅವನನ್ನು ರಕ್ಷಿಸಿದಳು. ಇದರಿಂದಾಗಿ ಚೆನ್ನಮ್ಮನು ಔರಂಗಜೇಬನೊಡನೆ ಹೋರಾಡಿ ಅವನನ್ನು ಹಿಮ್ಮೆಟ್ಟಿಸಿದಳು. ಇವಳಿಗೆ ಮಕ್ಕಳಿಲ್ಲದಿದ್ದ

ಕಾರಣ ಬಸವಪ್ಪ ನಾಯಕನನ್ನು ದತ್ತು ಸ್ವೀಕರಿಸಿ ಪಟ್ಟಾಭಿಷೇಕ ಮಾಡಿದಳು. ನಂತರ ಅಧಿಕಾರಕ್ಕೆ ಬಂದ ಎರಡನೆ ಸೋಮಶೇಖರ ನಾಯಕ ಮತ್ತು ವೀರಮ್ಮನ ಕಾಲದಲ್ಲಿ ಕೆಳದಿ ಸಂಸ್ಥಾನವು ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು.

## ಚಿತ್ರದುರ್ಗದ ನಾಯಕರು

ಕೆಳದಿ ನಾಯಕರಂತೆಯೇ ಚಿತ್ರದುರ್ಗದ ನಾಯಕರು ವಿಜಯನಗರದ ಅಧಿಪತ್ಯವನ್ನು ಒಪ್ಪಿಕೊಂಡು ಅವರ ಸಾಮಂತರಾಗಿ ತಮ್ಮ ಅಧಿಕಾರವನ್ನು ಪ್ರಾರಂಭಿಸಿದರು. ಇದೊಂದು ಚಿಕ್ಕ ಪಾಳೆಯಪಟ್ಟಾಗಿದ್ದು ಈಗಿನ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಆಸುಪಾಸಿನ ಸುತ್ತ ತನ್ನ ಅಧಿಕಾರವನ್ನು ಹೊಂದಿತ್ತು. ಇದರ ಸಂಸ್ಥಾಪಕ ಮತ್ತಿ ತಿಮ್ಮಣ್ಣ ನಾಯಕನು ತನ್ನ ಸ್ವಸಾಮರ್ಥ್ಯದಿಂದ ಮೇಲೆ ಬಂದು ವಿಜಯನಗರದವರಿಂದ ಪಾಳೆಪಟ್ಟನ್ನು ಪಡೆದನು. ಇವನು ಬೇಡರ ಜನಾಂಗದ ವಾಲ್ಮೀಕಿ ಗೋತ್ರದವನು. ವಿಜಯನಗರದ ಸಾಳುವ ನರಸಿಂಹನ ಆಜ್ಞೆಯ ಮೇರೆಗೆ ಇವನನ್ನು ೧೪೩೫ ರಲ್ಲಿ ಹೊಳಲ್ಕೆರೆಯ ನಾಯಕನನ್ನಾಗಿ ಮಾಡಲಾಯಿತು. ಇದಾದ ನಂತರ ಇವನು ಚಿತ್ರದುರ್ಗದಲ್ಲಿ ಕೋಟೆಯನ್ನು ಕಟ್ಟಿದನು. ಅಂದಿನಿಂದ ಇವನನ್ನು ವಿಜಯನಗರದ ಅರಸರು ಸಾಮಂತನನ್ನಾಗಿ ಗುರುತಿಸಿದರು. ಸಾಮಂತನಾದ ಕೆಲವೆ ದಿನಗಳಲ್ಲಿ ಗುಲ್ಬರ್ಗಾದ ಕೋಟೆಯನ್ನು ವಶಪಡಿಸಿಕೊಂಡು ವಿಜಯನಗರದವರಿಗೆ ಒಪ್ಪಿಸಿದನು. ಅಂದಿನಿಂದ ಅವನಿಗೆ 'ಹಗಲು ಕಗ್ಗೊಲೆ ಮಾನ್ಯ' ಎಂಬ ಬಿರುದನ್ನು ವಿಜಯನಗರದ ಅರಸರು ಕೊಟ್ಟರು. ಇಷ್ಟಾದರೂ ಇವನು ಕೊನೆಯಲ್ಲಿ ವಿಜಯನಗರದ ಸೆರೆಮನೆಯಲ್ಲಿ ಪ್ರಾಣ ಬಿಡುವ ಪ್ರಸಂಗ ಒದಗಿತು.

ಇವನ ನಂತರ ಅಧಿಕಾರಕ್ಕೆ ಬಂದ ಓಬಣ್ಣನಾಯಕ (ಒಂದನೆ ಮದಕರಿನಾಯಕ)ನು ವಿಜಯನಗರದ ಅಧಿಪತ್ಯದಿಂದ ಸ್ವತಂತ್ರನಾದನೆಂದು ನಂಬಲಾಗಿದೆ. ನಂತರ ಬಂದ ಒಂದನೆ ಕಸ್ತೂರಿ ರಂಗಪ್ಪನಾಯಕನು ತರೀಕರೆ ಮತ್ತು ಶಿರಾದ ಪಾಳೆಯಗಾರರನ್ನು ಸೋಲಿಸಿ ಅವರ ಪ್ರದೇಶಗಳನ್ನು ವಶಪಡಿಸಿಕೊಂಡನು. ಇವನ ನಂತರ ಕಾಲಾನುಕ್ರಮವಾಗಿ ಎರಡನೆ ಮದಕರಿ ನಾಯಕ, ಓಬಣ್ಣನಾಯಕ, ಚಿಕ್ಕಣ್ಣನಾಯಕ ಮತ್ತು ಲಿಂಗಣ್ಣನಾಯಕರು (ಮೂರನೆ ಮದಕರಿನಾಯಕ) ಆಳಿದರು. ಇವರ ಕಾಲದಲ್ಲಿ ಅಂತರಕಲಹವು ರಾಜ್ಯದೆಲ್ಲೆಡೆ ಹರಡಿತ್ತು.

ನಂತರ ಬಂದ ಬರಮಪ್ಪನಾಯಕನು ಚಿತ್ರದುರ್ಗದ ನಾಯಕರಲ್ಲಿ ಸ್ವಲ್ಪ ಪ್ರಸಿದ್ಧಿ ಪಡೆದಿದ್ದನು. ಇವನು ಹರಪನಹಳ್ಳಿ ಪಾಳೆಯಗಾರರಿಂದ ಅಣಜಿ ಕೋಟೆಯನ್ನು ವಶಪಡಿಸಿ ಕೊಂಡನು. ಶಿರಾದ ನವಾಬ ಮತ್ತು ಮರಾಠರ ವಿರುದ್ಧ ಪಾಳೆಯಗಾರರನ್ನು ಒಗ್ಗೂಡಿಸಿ ಒಕ್ಕೂಟವೊಂದನ್ನು ರಚಿಸಿದನು. ಮೊಗಲರಿಗೆ ಸಹಾಯ ಮಾಡಿ ಬಿಜಾಪುರದ ಸುಲ್ತಾನರನ್ನು ಹಿಮ್ಮೆಟ್ಟಿಸಿದನು. ನಂತರ ಮೊಗಲರ ಮತ್ತು ಬಿಜಾಪುರದ ಸೈನ್ಯವನ್ನು ಎದುರಿಸಬೇಕಾದಾಗ ಅವರನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ಇವನು ಸುಮಾರು ೩೦ ದೇವಾಲಯಗಳು, ನಾಲ್ಕು ಅರಮನೆಗಳು ಮತ್ತು ಬರಮಸಾಗರದಲ್ಲಿ ಭೀಮಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದನು. ಇವನ ಕಾಲದಲ್ಲಿ ಪ್ಲೇಗ್ ರೋಗವು ಇವನ ರಾಜ್ಯವನ್ನು ಕಾಡಿತ್ತು. ಇವನ ನಂತರ ಬಂದ

ಹಿರೇ(ನಾಲ್ಕನೆ) ಮದಕರಿನಾಯಕನು ಹರಪನಹಳ್ಳಿಯವರೊಡನೆ ಹೋರಾಡುವಾಗ ಯುದ್ಧದಲ್ಲಿ ಸತ್ತುಹೋದನು.

### ಐದನೆ ಮದಕರಿನಾಯಕ (ಕ್ರಿ.ಶ. ೧೭೫೫-೧೭೭೯)

ಇವನು ಚಿತ್ರದುರ್ಗದ ನಾಯಕರಲ್ಲಿಯೇ ಅತ್ಯಂತ ಪ್ರಸಿದ್ಧ ಕೊನೆಯ ದೊರೆ. ಇವನನ್ನು 'ರಾಜಾವೀರಮದಕರಿ ನಾಯಕ' ಎಂದು ಕರೆಯಲಾಗಿದೆ. ಇವನು ಪಟ್ಟಕ್ಕೆ ಬಂದಾಗ ಕೇವಲ ೧೨ ವರ್ಷದ ಬಾಲಕ. ಇವನ ಅಪ್ರಾಪ್ತ ವಯಸ್ಸಿನ ಲಾಭ ಪಡೆದು ರಾಯದುರ್ಗದವರು ಮತ್ತು ಹರಪನಹಳ್ಳಿಯವರು ದುರ್ಗದ ಮೇಲೆ ದಂಡೆತ್ತಿ ಬಂದಾಗ ಅವರನ್ನು ಸೋಲಿಸಿ ಅವರ ಗಡಿಸೀಮೆಗಳನ್ನು ವಶಪಡಿಸಿಕೊಳ್ಳಲಾಯಿತು. ಇದೇ ರೀತಿ ಸವಣೂರು, ನಗರ, ಹರಪನಹಳ್ಳಿ, ತರೀಕೆರೆಯವರು ಹಾಗೂ ಜರಿಮಲೆಯವರು ಇವನ ಮೇಲೆ ದಂಡೆತ್ತಿ ಬಂದು ದಾಂದಲೆ ಮಾಡುತ್ತಿದ್ದಾಗ ಅವರನ್ನು ಹಿಮ್ಮೆಟ್ಟಿಸಲಾಯಿತು.

ಇದಾದ ಸ್ವಲ್ಪ ವರ್ಷಗಳಲ್ಲಿಯೇ ದುರ್ಗವು ಬಲಿಷ್ಠ ಸಂಸ್ಥಾನವಾಯಿತು. ಈ ಸಮಯದಲ್ಲಿ ಮರಾಠರಿಗೂ ಮತ್ತು ಹೈದರ್ ನಡುವೆ ತೀವ್ರ ಸೆಣಸಾಟ ಇದ್ದುದರಿಂದ ಇಬ್ಬರೂ ಸಹ ಇವನ ಸಹಾಯ ಪಡೆಯುವ ಕಾತುರದಲ್ಲಿದ್ದರು. ಹೈದರಾಲಿಯು ಚಿತ್ರದುರ್ಗದ ಮೇಲೆ ದಾಳಿ ಮಾಡಿದಾಗ, ಅವನ ಸೈನ್ಯವನ್ನು ಎದುರಿಸಲಾರದೇ ಮದಕರಿಯು ಒಂದು ಲಕ್ಷ ವರಹ ಕೊಡಬೇಕೆಂದು ಒಪ್ಪಂದವಾಗಿತ್ತು. ಇದಕ್ಕೆ ಬದಲಾಗಿ ಮದಕರಿಯು, ಹೈದರನಿಗೆ ಸಾಧ್ಯವಾಗದಿದ್ದ ಬಂಕಾಪುರದ ಕೋಟೆಯನ್ನು, ಇಕ್ಕೇರಿ ಮತ್ತು ನಿಜಗಲ್ಲು ಸಂಸ್ಥಾನವನ್ನು, ಗುತ್ತಿಯನ್ನು ಗೆದ್ದುಕೊಟ್ಟನು. ಮರಾಠರು ಶ್ರೀರಂಗಪಟ್ಟಣವನ್ನು ಮುತ್ತಿಗೆ ಹಾಕಿದಾಗ ಮದಕರಿಯು ಹೈದರ್‌ಗೆ ಸಹಾಯ ಮಾಡಿ ಅವರನ್ನು ಅಲ್ಲಿಂದ ಓಡಿಸಿದ್ದೂ ಇದೆ. ನಂತರ ಇದೇ ರೀತಿ ಮರಾಠರಿಗೂ ಸಹ ಸಹಾಯ ಮಾಡಿ ಹೈದರನ ಕೆಲವು ಕೋಟೆಗಳನ್ನು ಮತ್ತು ಆನೆವಟ್ಟಿಯನ್ನು ಮರಾಠರಿಗೆ ಗೆದ್ದುಕೊಟ್ಟನು. ಇದರಿಂದಾಗಿ ಹೈದರನಿಗೆ ಮದಕರಿಯ ಮೇಲೆ ಸಿಟ್ಟು ಬಂದು ಇವನ ಸೊಕ್ಕನ್ನು ಅಡಗಿಸಬೇಕೆಂದು ಮತ್ತೋಡಿನ ಹಾಲಪ್ಪ ನಾಯಕನೊಡಗೂಡಿ ದುರ್ಗದ ಮೇಲೆ ಯುದ್ಧ ಸಾರಿ ವಿಫಲನಾದನು. ಇದಾದ ನಂತರ ಹೈದರನು ತನ್ನ ಬಾಹರ್ ಸೈನ್ಯದೊಂದಿಗೆ ಮತ್ತು ಮದಕರಿಯ ಶತ್ರುಗಳ ಸಹಕಾರದೊಂದಿಗೆ ದುರ್ಗಕ್ಕೆ ಮುತ್ತಿಗೆ ಹಾಕಿದನು. ಆದರೂ ಮದಕರಿನಾಯಕನನ್ನು ಸೋಲಿಸುವುದು ಕಷ್ಟವಾಯಿತು. ಕೊನೆಯಲ್ಲಿ ಮದಕರಿನಾಯಕನ ಅಧಿಕಾರಿಗಳೇ ಹೈದರನೊಡನೆ ಶಾಮೀಲಾಗಿ ಕ್ರಿ.ಶ. ೧೭೭೯ ರಲ್ಲಿ ಅವನನ್ನು ಸೋಲಿಸಿ ಚಿತ್ರದುರ್ಗವನ್ನು ವಶಪಡಿಸಿಕೊಳ್ಳಲು ಕಾರಣರಾದರು. ನಂತರ ಮದಕರಿನಾಯಕ ಮತ್ತು ಅವನ ಪರಿವಾರದವರನ್ನು ಶ್ರೀರಂಗಪಟ್ಟಣದ ಸೆರೆಮನೆಯಲ್ಲಿಡಲಾಯಿತು. ಇದರೊಂದಿಗೆ ಚಿತ್ರದುರ್ಗವು ಹೈದರ್ ವಶವಾಗಿ ನಾಯಕರ ಆಳ್ವಿಕೆಯು ಅಂತ್ಯಗೊಂಡಿತು.

ಹೀಗೆ ವಿಜಯನಗರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಚಿತ್ರದುರ್ಗ ಸಂಸ್ಥಾನವು ನಂತರ ಸ್ವತಂತ್ರವಾಗಿ ಅಂದಿನ ಪ್ರಬಲ ರಾಜ್ಯಗಳಾದ ಮರಾಠರ ಹಾಗೂ ಹೈದರನ ಪೈಪೋಟಿಯಲ್ಲಿ

ನಲುಗಿತು. ಹೈದರನ ಸಾಮ್ರಾಜ್ಯ ವಿಸ್ತರಣೆಯಲ್ಲಿ ಮದಕರಿನಾಯಕನು ಪ್ರಮುಖ ಪಾತ್ರ ವಹಿಸಿದ್ದು, ಹೈದರನು ಅಧಿಕಾರದ ಉಪ್ಪರಿಗೆಯೇರಲು ಮದಕರಿನಾಯಕನು ಏಣಿಯಂತೆ ಕೆಲಸ ಮಾಡಿದನು. ಆದರೆ ಹೈದರನು ಉಪ್ಪರಿಗೆಯೇರಿದ ನಂತರ ಸಹಾಯ ಮಾಡಿದ ಏಣಿಯನ್ನು ಬಿಸಾಡಿದನು. ಇದರಿಂದಾಗಿ ಮದಕರಿಯು ಪುನಃ ಚೇತರಿಸಿಕೊಳ್ಳಲಾಗಲಿಲ್ಲ.

## ಪರಿಕಲ್ಪನೆಗಳು

**೧. ಸಾಮ್ರಾಜ್ಯ:** ಇದು ಒಂದು ರಾಜಕೀಯ ವ್ಯವಸ್ಥೆ. ಈ ವ್ಯವಸ್ಥೆಯಲ್ಲಿ ರಾಜನು ಚಕ್ರವರ್ತಿಯ ಬಿರುದುಗಳನ್ನು ಧರಿಸಿದ್ದು, ಇಡೀ ರಾಜ್ಯದ ಸರ್ವೋನ್ನತ ಅಧಿಕಾರಿಯಾಗಿರುತ್ತಾನೆ. ಇಂತಹ ರಾಜ್ಯವು ಸಾಮಾನ್ಯವಾಗಿ ವಿಶಾಲವಾಗಿದ್ದು ಅನೇಕ ರೀತಿಯ ಜನರನ್ನು ಹೊಂದಿರುತ್ತದೆ.

**೨. ಶಾಸನಗಳು:** ಶಾಸನಗಳು ಎಂದರೆ ಪ್ರಾಚೀನ ಬರವಣಿಗೆಗಳು. ಇಂತಹ ಬರವಣಿಗೆಗಳನ್ನು ಮೊದಲು ಕಲ್ಲಿನ ಮೇಲೆ ನಂತರ ಮಡಕೆಗಳ ಮೇಲೆ ಮತ್ತು ಲೋಹದ ಪಾತ್ರೆಗಳ ಮೇಲೆ ಬರೆಯಲಾಗಿತ್ತು. ಭಾರತದಲ್ಲಿ ಅಶೋಕನು ಶಾಸನಗಳನ್ನು ಬರೆಸುವ ಪದ್ಧತಿಯನ್ನು ಮೊಟ್ಟಮೊದಲಿಗೆ ಜಾರಿಗೆ ತಂದನು.

**೩. ದೋ ಅಬ್ ಪ್ರದೇಶ:** ಎರಡು ನದಿಗಳ ಮಧ್ಯೆಯಿರುವ ಭೂಮಿಯನ್ನು ದೋ ಅಬ್ ಪ್ರದೇಶ ಎಂದು ಕರೆಯಲಾಗಿದೆ. ಮಧ್ಯಕಾಲಿನ ಕರ್ನಾಟಕದಲ್ಲಿ ತುಂಗಭದ್ರಾ ನದಿಯ ಬಲದಂಡೆಯಲ್ಲಿ ವಿಜಯನಗರ ಸಾಮ್ರಾಜ್ಯವು ಹಾಗೆಯೇ ಕೃಷ್ಣನದಿಯ ಎಡದಂಡೆಯಲ್ಲಿ ಬಹಮನಿ ರಾಜ್ಯವು ಅಸ್ತಿತ್ವಕ್ಕೆ ಬಂದವು. ಈ ರಾಜ್ಯಗಳು ಎರಡು ನದಿಗಳ ಮಧ್ಯೆಯಿದ್ದು ಫಲವತ್ತಾದ ಭೂಮಿಯ ಒಡೆತನಕ್ಕೆ ನಿರಂತರವಾಗಿ ಕಾದಾಡುತ್ತಿದ್ದವು.

**೪. ಮಿಲಿಟರಿ ರಾಜ್ಯ:** ಇದನ್ನು ಸೈನಿಕ ರಾಜ್ಯ (ವಾರ್ ಸ್ಟೇಟ್) ಎಂದೂ ಸಹ ಕರೆಯಲಾಗಿದೆ. ಈ ಪರಿಕಲ್ಪನೆ ವಿದೇಶಿ ಇತಿಹಾಸಕಾರರದ್ದು. ಇದರ ಪ್ರಕಾರ ಒಂದು ರಾಜ್ಯವನ್ನು ಕೇವಲ ಸೈನಿಕ ಅಧಿಕಾರಿಗಳೇ ಪ್ರಮುಖವಾಗಿ ಆಳುತ್ತಿದ್ದು, ರಾಜ ಕೇವಲ ಔಪಚಾರಿಕ ಅಧಿಕಾರ ಹೊಂದಿರುತ್ತಾನೆ. ಇದಲ್ಲದೇ ಇಂತಹ ರಾಜ್ಯಗಳು ಯಾವಾಗಲೂ ತಮ್ಮ ಅಸ್ತಿತ್ವಕ್ಕಾಗಿ ಯುದ್ಧದಲ್ಲಿ ತೊಡಗಿರುತ್ತವೆ.

**೫. ವಿಘಟನಾ ರಾಜ್ಯ ವ್ಯವಸ್ಥೆ (ಸೆಗ್ಮೆಂಟರಿ ಸ್ಟೇಟ್):** ಇದು ಸಹ ರಾಜಕೀಯ ವ್ಯವಸ್ಥೆ. ಈ ವ್ಯವಸ್ಥೆಯಲ್ಲಿ ಇಡೀ ರಾಜ್ಯವು ಮೂರು ಭಾಗಗಳಾಗಿ- ಮಧ್ಯ ಪ್ರಾಂತ್ಯ (Core area), ನಡುವಣ ಪ್ರದೇಶ (Intermediate zone) ಮತ್ತು ಗಡಿ ಪ್ರದೇಶ (Pepipheral zone) ಎಂದು ವಿಂಗಡಣೆಯಾಗಿರುತ್ತದೆ. ರಾಜನ ಅಧಿಕಾರವು ಕೇವಲ ಕೇಂದ್ರ ಪ್ರದೇಶದಲ್ಲಿ ಮಾತ್ರ ಇದ್ದು, ಅದು ಬರುಬರುತ್ತಾ ದುರ್ಬಲಗೊಳ್ಳುತ್ತದೆ. ಕೆಳಮಟ್ಟದಲ್ಲಿ ಸ್ಥಳೀಯ ಅಧಿಕಾರಿಗಳು ಹೆಚ್ಚು ಪ್ರಬಲರಾಗಿದ್ದು, ರಾಜ ಕೇವಲ ಔಪಚಾರಿಕ ಅಥವಾ ಪಾರಂಪರಿಕ ಅಧಿಕಾರವನ್ನು ಹೊಂದಿರುತ್ತಾನೆ.

೬. ಊಳಿಗಮಾನ್ಯ ವ್ಯವಸ್ಥೆ: ಇದು ಒಂದು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಯಿಂದ ಕೂಡಿದೆ. ಮಧ್ಯಯುಗೀನ ಕಾಲದಲ್ಲಿ ಹಣದ ಕೊರತೆಯಿಂದಾಗಿ ರಾಜ್ಯವು ತನ್ನ ನೌಕರರಿಗೆ, ಅಥವಾ ಸೇವಕರಿಗೆ ಅವರು ಸಲ್ಲಿಸಿದ ಸೇವೆಗೆ ಹಣದ ಬದಲಾಗಿ ಭೂಮಿಯನ್ನು ನೀಡುತ್ತಿತ್ತು. ಈ ಭೂಮಿಯಿಂದ ಬಂದ ಉತ್ಪನ್ನದಲ್ಲಿ ಅವರು ಜೀವನ ನಡೆಸಬೇಕಾಗುತ್ತಿತ್ತು. ಇದು ಕೆಲವೊಮ್ಮೆ ವಂಶಪಾರಂಪರ್ಯವಾಗಿಯೂ ಇತ್ತು.

೭. ಅಮರನಾಯಕ ಪದ್ಧತಿ: ಇದು ಒಂದು ರಾಜಕೀಯ ಹಾಗೂ ಆರ್ಥಿಕತೆಯ ವ್ಯವಸ್ಥೆ. ಈ ವ್ಯವಸ್ಥೆಯನ್ನು ವಿಜಯನಗರ ಕಾಲದಲ್ಲಿ ಜಾರಿಗೆ ತರಲಾಯಿತು. ಈ ವ್ಯವಸ್ಥೆಯಲ್ಲಿ ಪ್ರಾಂತ್ಯಗಳ ಅಧಿಕಾರಗಳಿಗೆ ಸ್ವಾಯತ್ತತೆ ನೀಡಿದ್ದು, ಅವರು ಇದಕ್ಕೆ ಪ್ರತಿಯಾಗಿ ನಿಗದಿ ಪಡಿಸಿದ ಹಣ, ಕಾಣಿಕೆ ಮತ್ತು ಸೈನ್ಯವನ್ನು ರಾಜ್ಯಕ್ಕೆ ಒದಗಿಸಬೇಕಾಗಿತ್ತು.

೮. ಬ್ರಹ್ಮದೇಯ: ಬ್ರಾಹ್ಮಣರು ತಾವು ನೀಡಿದ ಸೇವೆಗೆ ರಾಜನಿಂದ, ಪ್ರಜೆಗಳಿಂದ, ಅಧಿಕಾರಿಗಳಿಂದ ಮತ್ತು ಶ್ರೀಮಂತ ವರ್ತಕರಿಂದ ಹಣದ ಬದಲು ಭೂಮಿಯನ್ನು ಪಡೆಯುತ್ತಿದ್ದರು. ಇಂತಹ ಭೂಮಿಯು ಸಾಮಾನ್ಯವಾಗಿ ತೆರಿಗೆ ರಹಿತವಾಗಿದ್ದು, ವಂಶಪಾರಂಪರ್ಯವಾಗಿ ಅನುಭವಿಸಬಹುದಾಗಿತ್ತು. ಇಂತಹ ಭೂಹಿಡುವಳಿಯನ್ನು ಬ್ರಹ್ಮದೇಯ ವೆನ್ನಲಾಗಿದೆ.

೯. ದೇವಾದಾಯ: ದೇವಾಲಯಗಳನ್ನು ಕಟ್ಟಿಸುವುದಕ್ಕೆ ಮತ್ತು ಅವುಗಳನ್ನು ದುರಸ್ತಿಗೊಳಿಸುವುದಕ್ಕೆ, ಹಾಗೂ ದೇವಾಲಯಗಳಲ್ಲಿ ವಿವಿಧ ರೀತಿಯ ಪೂಜೆಗಳನ್ನು ಮಾಡುವುದಕ್ಕೆ ಭಕ್ತರು ದೇವರ ಹೆಸರಲ್ಲಿ ವಿವಿಧ ರೀತಿಯ ಭೂಮಿಯನ್ನು ದಾನ ಮಾಡಿದ್ದರು. ಇದೂ ಸಹ ತೆರಿಗೆ ರಹಿತವಾಗಿತ್ತು. ಇಂತಹ ಭೂಹಿಡುವಳಿಯನ್ನು ದೇವಾದಾಯ ಎನ್ನಲಾಗಿದೆ.

೧೦. ಮಠಪೂರ: ಮಧ್ಯಯುಗೀನ ಕಾಲದಲ್ಲಿ ಧಾರ್ಮಿಕ ಚಳುವಳಿಯಿಂದಾಗಿ ಕೆಲವು ಮಠಗಳು ಅಸ್ತಿತ್ವಕ್ಕೆ ಬಂದವು. ಮಠ ಎಂದರೆ ಸನ್ಯಾಸಿಯು ವಾಸಿಸುವ ಸ್ಥಳ. ಸಾಮಾನ್ಯವಾಗಿ ಸನ್ಯಾಸಿಗಳು ವಿದ್ಯಾವಂತರಾದ್ದರಿಂದ ಅವರಿರುವ ಸ್ಥಳದಲ್ಲಿಯೇ ವಿದ್ಯಾದಾನ ಮಾಡಲಾರಂಭಿಸಿದರು. ಕಾಲಕ್ರಮೇಣ ಇವು ಪ್ರಸಿದ್ಧ ವಿದ್ಯಾಕೇಂದ್ರಗಳಾದವು. ಇಂತಹ ಕೇಂದ್ರಗಳಲ್ಲಿದ್ದಂಥ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ಊಟ, ವಸತಿ, ಬಟ್ಟೆ ಇತರೆ ಖರ್ಚುಗಳಿಗಾಗಿ ಹಲವಾರು ಜನರು ಭೂಮಿಯನ್ನು ಮಠಕ್ಕೆ ದಾನ ಮಾಡಿದ್ದರು. ಇಂತಹ ಭೂಹಿಡುವಳಿಯನ್ನು ಮಠಪೂರ ಭೂಹಿಡುವಳಿ ಎನ್ನಲಾಗಿದೆ.

೧೧. ಶ್ರೇಣೀಕೃತ ಸಮಾಜ: ಸಮಾಜದಲ್ಲಿ ನಾಲ್ಕು ಪ್ರಮುಖ ಗುಂಪುಗಳಿದ್ದವು. ಅವು ಪುರೋಹಿತರು, ಆಳರಸರು, ವ್ಯಾಪಾರಿಗಳು ಮತ್ತು ಉತ್ಪಾದಕರು ಎಂಬುವು. ಇವುಗಳಲ್ಲಿ ಮೊದಲೆರಡು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಆಧಾರದ ಮೇಲೆ, ಉಳಿದೆರಡು ಗುಂಪುಗಳ ಮೇಲೆ ತನ್ನ ಅಧಿಕಾರ ಮತ್ತು ಪ್ರಭಾವವನ್ನು ಹೊಂದಿತ್ತು. ಇಂತಹ ಸಮಾಜವನ್ನು ಶ್ರೇಣೀಕೃತ ಸಮಾಜವೆಂದು ಕರೆಯಲಾಗಿದೆ.

೧೨. ಎಡಗೈ ಮತ್ತು ಬಲಗೈ: ಇವು ಶೂದ್ರ ಅಥವಾ ಉತ್ಪಾದಕ ವರ್ಗಗಳಲ್ಲಿ ಮಧ್ಯ ಯುಗೀನ ಕಾಲದಲ್ಲಿ ಕಾಣಿಸಿಕೊಂಡವು. ಎಡಗೈ ಗುಂಪಿನವರು ಶೈವಪಂಥಕ್ಕೆ ಸೇರಿದವ ರಾಗಿದ್ದು, ಕರಕುಶಲ ವೃತ್ತಿಗಳಲ್ಲಿ ಹಾಗೂ ವ್ಯಾಪಾರದಲ್ಲಿ ತೊಡಗಿದ್ದರು. ಬಲಗೈ ಗುಂಪಿನವರು ವೈಷ್ಣವ ಪಂಥದವರಾಗಿದ್ದು ಕೃಷಿ ಮತ್ತು ಸ್ಥಳೀಯ ವ್ಯಾಪಾರದಲ್ಲಿ ನಿರತ ರಾಗಿದ್ದರು. ಇವೆರಡು ಗುಂಪುಗಳ ನಡುವೆ ಹೆಚ್ಚಿನ ಸಾಮಾಜಿಕ ಸ್ಥಾನಮಾನಕ್ಕಾಗಿ ತಿಕ್ಕಾಟಗಳು ನಡೆಯುತ್ತಲಿದ್ದವು.

೧೩. ಕೃಷಿ ಆರ್ಥಿಕತೆ: ಯಾವ ಆರ್ಥಿಕ ಜೀವನವು ಕೃಷಿಯನ್ನು ಹೆಚ್ಚಾಗಿ ಅವಲಂಬಿಸಿರು ತ್ತದೋ ಅಂತಹುದನ್ನು ಕೃಷಿ ಆರ್ಥಿಕತೆಯೆನ್ನುತ್ತಾರೆ. ಸಾಮಾನ್ಯವಾಗಿ ಇಂತಹ ಆರ್ಥಿಕತೆ ಯಲ್ಲಿ ಜನಸಾಮಾನ್ಯರ ದಿನನಿತ್ಯದ ಬಯಕೆಗಳು ಮತ್ತು ವಸ್ತುಗಳು ಬೇಸಾಯದಿಂದ ಅಥವಾ ಭೂಮಿಯ ಉತ್ಪನ್ನದಿಂದ ಪೂರೈಸಲ್ಪಡುತ್ತವೆ. ಇದಲ್ಲದೆ ರಾಜ್ಯದ ಆದಾಯವು ಸಹ ಹೆಚ್ಚಾಗಿ ಭೂಮಿ ಮತ್ತು ಅದರ ಬಳಕೆಯಿಂದ ಬರುತ್ತದೆ. ಇಂತಹ ವ್ಯವಸ್ಥೆಯಲ್ಲಿ ಸ್ಥಳೀಯ ಉತ್ಪಾದನಾ ವಸ್ತುಗಳು ಸ್ಥಳೀಯ ಮಟ್ಟದಲ್ಲೇ ಖರ್ಚಾಗುತ್ತವೆ. ಇಲ್ಲಿ ದೊರೆತ ವ್ಯಾಪಾರಕ್ಕೆ ಅವಕಾಶ ಇರುವುದಿಲ್ಲ. ಸಾಟಿ ಪದ್ಧತಿ ಇದರ ಮುಖ್ಯ ಲಕ್ಷಣ.

೧೪. ಮಾರುಕಟ್ಟೆ ಆರ್ಥಿಕತೆ: ಈ ಆರ್ಥಿಕ ವ್ಯವಸೆಯಲ್ಲಿ ಉತ್ಪಾದನಾ ವಸ್ತುಗಳು ಮಾರುಕಟ್ಟೆಗೆ ಸಿದ್ಧಗೊಂಡಿರುತ್ತವೆ. ಇಲ್ಲಿ ಸಾಟಿ ಪದ್ಧತಿಯ ಬದಲು ಹಣದ ವ್ಯವಸ್ಥೆಯು ಚಲಾವಣೆಯಲ್ಲಿದ್ದು ಪ್ರತಿ ವಸ್ತುವನ್ನು ಹಣದ ಮುಖಾಂತರ ಕೊಡು-ಕೊಳ್ಳಲಾಗುವುದು. ಇದರಿಂದಾಗಿ ವ್ಯಾಪಾರವು ಹೆಚ್ಚಾಗಿ ಬೆಳೆದು ವಿದೇಶಿ ವರ್ತಕರು ಇದರಲ್ಲಿ ಪಾಲ್ಗೊಳ್ಳುವಂತಾ ಯಿತು. ಈ ಬೆಳವಣಿಗೆಯಿಂದಾಗಿ ರಾಜ್ಯದ ಬೊಕ್ಕಸಕ್ಕೆ ನಗದು ರೂಪದಲ್ಲಿ ಆದಾಯ ಬರುವಂತಾಯಿತು.

೧೫. ರಾಯರೇಖೆ: ವಿಜಯನಗರದ ಅರಸು ಕೃಷ್ಣದೇವರಾಯನು ತನ್ನ ಆಳ್ವಿಕೆಯ ಕಾಲದಲ್ಲಿ ತನ್ನ ಸಾಮ್ರಾಜ್ಯದ ಇಡೀ ಭೂಮಿಯನ್ನು ಅಳತೆ ಮಾಡಿಸಿ, ಫಲವತ್ತತೆಗನುಸಾರ ವಾಗಿ ಕಂದಾಯವನ್ನು ನಿಗದಿಪಡಿಸಿದ್ದನು. ಇಂತಹ ಕಂದಾಯ ಪದ್ಧತಿಗೆ ರಾಯರೇಖೆಯೆಂದು ಕರೆಯಲಾಗಿದೆ.

೧೬. ಶಿಸ್ತು: ಇಕ್ಕೇರಿ ನಾಯಕರಲ್ಲಿಯೇ ಖ್ಯಾತನಾಗಿದ್ದ ಶಿವಪ್ಪನಾಯಕನು ತನ್ನ ರಾಜ್ಯದಲ್ಲಿ ಭೂಮಿಯನ್ನು ಅಳತೆ ಮಾಡಿಸಿ ನಂತರ ಅದನ್ನು ಐದು ಭಾಗಗಳಾಗಿ ಫಲವತ್ತತೆಯ ಹಾಗೂ ನೀರಿನ ಸೌಕರ್ಯದ ಆಧಾರದ ಮೇಲೆ ವಿಂಗಡಿಸಿ, ಅದರಲ್ಲಿ ಪ್ರಾಯೋಗಿಕವಾಗಿ ಬೆಳೆ ತೆಗೆದು ಕಂದಾಯವನ್ನು ನಿಗದಿಪಡಿಸಿದ್ದನು. ಇದರ ಪ್ರಕಾರ ಪ್ರತಿ ವಿಭಾಗದ ಭೂಮಿಯ ಉತ್ಪತ್ತಿಯಲ್ಲಿ ೧/೩ ಭಾಗವನ್ನು ಸರ್ಕಾರಕ್ಕೆ ಕಂದಾಯವಾಗಿ ಕೊಡಬೇಕಾಗಿತ್ತು. ಇಂತಹ ಕಂದಾಯ ವ್ಯವಸ್ಥೆಯನ್ನು ಶಿಸ್ತು ಎನ್ನಲಾಗಿದೆ.

೧೭. ಇಸ್ಲಾಮಿಕ ಶೈಲಿ: ಇದನ್ನು ಇಂಡೋ-ಸಾರ್ಸನಿಕ್ ಶೈಲಿ ಎಂದೂ ಕರೆಯಲಾಗಿದೆ. ಇದು ಬಹಮನಿ ಸುಲ್ತಾನರ ಆಳ್ವಿಕೆಯ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಭಾರತೀಯ

ವಾಸ್ತುಶೈಲಿಯ ಒಂದು ಪ್ರಮುಖ ಅಂಗವಾಗಿದೆ. ಈ ಶೈಲಿಯಲ್ಲಿರುವ ಸ್ಮಾರಕಗಳು ಅಥವಾ ಕಟ್ಟಡಗಳು ಹೊರನೋಟಕ್ಕೆ ಹಿಂದೂ ಶೈಲಿಯನ್ನು ಹೋಲುತ್ತವೆಯಾದರೂ, ಅವು ಕೆಲವು ವಿಶಿಷ್ಟತೆಗಳಿಂದ ಕೂಡಿವೆ. ಅವುಗಳೆಂದರೆ ಈ ಕಟ್ಟಡಗಳು ಸಾಮಾನ್ಯವಾಗಿ ಕಮಾನುಗಳನ್ನು ಹಾಗೂ ಗುಮ್ಮಟಗಳನ್ನು ಗುಲಾಬಿ ಹೂವಿನ ಆಕಾರದಲ್ಲಿ ಹೊಂದಿರುತ್ತವೆ.

೧೮. **ನಗರೀಕರಣ:** ನಗರೀಕರಣವೆಂದರೆ ಸಣ್ಣ ಹಳ್ಳಿಗಳು ಪಟ್ಟಣ ಮತ್ತು ನಗರಗಳಾಗಿ ಬೆಳೆಯುವ ಪ್ರಕ್ರಿಯೆ. ಹಳ್ಳಿಗಳು ನಗರಗಳಾಗಿ ಬೆಳೆಯಲು ಮುಖ್ಯವಾಗಿ ಮೂರು ಕಾರಣಗಳಿರುತ್ತವೆ. ಅವುಗಳೆಂದರೆ ಆಡಳಿತ, ವ್ಯಾಪಾರ ಮತ್ತು ಧಾರ್ಮಿಕ ಅಂಶಗಳು. ಈ ಕಾರಣಗಳಿಂದಾಗಿ ಮಧ್ಯಯುಗೀನ ಕಾಲದಲ್ಲಿ ಹಲವಾರು ನಗರಗಳು ಅಸ್ತಿತ್ವಕ್ಕೆ ಬಂದವು.

## ಹೆಚ್ಚಿನ ಓದಿಗಾಗಿ


೧. ರಾಬರ್ಟ್ ಸಿವೆಲ್ - ಎ ಫರಗಾಟನ್ ಎಂಪೈರ್

೨. ಸೂರ್ಯನಾರಾಯಣ ರಾವ್ ಬಿ. - ಎ ಹಿಸ್ಟರಿ ಆಫ್ ವಿಜಯನಗರ, ದಿ ನೆವರ್ ಟುಬಿ ಫರಗಾಟನ್ ಎಂಪೈರ್

೩. ವಿಜಯನಗರ ಸೆಕ್ಸ್‌ಸೆಂಟನರಿ ಕಮೆಮೊರೋಷನ್ ವಾಲ್ಯೂಮ್

೪. ರಾಮಶರ್ಮ ಎಂ.ಹೆಚ್., ಗೋಪಾಲ್ ಎಂ.ಹೆಚ್. (ಸಂ) - ದಿ ಹಿಸ್ಟರಿ ಆಫ್ ದಿ ವಿಜಯನಗರ ಎಂಪೈರ್

೫. ದೀಕ್ಷಿತ್ ಜಿ.ಎಸ್. (ಸಂ) - ಅರ್ಲಿ ವಿಜಯನಗರ

೬. ದೇಸಾಯಿ ಪಿ.ಬಿ. ಮತ್ತಿತರರು - ಎ ಹಿಸ್ಟರಿ ಆಫ್ ಕರ್ನಾಟಕ

೭. ದಿವಾಕರ್ ಆರ್.ಆರ್. - ಕರ್ನಾಟಕ ಥ್ರೂ ದಿ ಏಜಸ್.

೮. ಶಿವಣ್ಣ, ಕೆ.ಎಸ್. - ದಿ ಅಗ್ರೇರಿಯನ್ ಸಿಸ್ಟಮ್ ಆಫ್ ಕರ್ನಾಟಕ

೯. ಬರ್ಟನ್ ಸ್ಟೈನ್ - ದಿ ನ್ಯೂ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯಾ, ವಿಜಯನಗರ

೧೦. ಬರ್ಟನ್ ಸ್ಟೈನ್ - ಎ ಹಿಸ್ಟರಿ ಆಫ್ ಇಂಡಿಯಾ

೧೧. ರಾಜಶೇಖರ ಎಸ್. - ಕರ್ನಾಟಕ ಆರ್ಕಿಟೆಕ್ಚರ್

೧೨. ಹರ್ಮನ್ ಕುಲ್ಕೆ ಮತ್ತು ಡಲೆಯಟೆಮಾರ್ ರೋಥರ್‌ಮಂಡ್ - ಎ ಹಿಸ್ಟರಿ ಆಫ್ ಇಂಡಿಯಾ

೧೩. ನೂಬೂರು ಕರಾಸಿಮ - ಹಿಸ್ಟರಿ ಅಂಡ್ ಸೊಸೈಟಿ ಇನ್ ಸೌಥ್ ಇಂಡಿಯಾ

೧೪. ಶಿವಣ್ಣ ಕೆ.ಎಸ್.(ಸಂ) - ಸಮಗ್ರ ಕರ್ನಾಟಕ ಚರಿತ್ರೆ ಸಂಪುಟ-೩

೧೫. ಸದಾನಂದ ಕನವಳ್ಳಿ (ಅನು) - ಮರೆತುಹೋದ ಮಹಾಸಾಮ್ರಾಜ್ಯ

೧೬. ಬಾಲಸುಬ್ರಹ್ಮಣ್ಯ (ಅನು) - ಮರೆಯಲಾಗದ ಮಹಾಸಾಮ್ರಾಜ್ಯ

೧೭. ಶ್ರೀನಿವಾಸಮೂರ್ತಿ ಹೆಚ್. ವಿ, ರಾಮಕೃಷ್ಣನ್ ಆರ್. - ಸಮಗ್ರ ಕರ್ನಾಟಕ ಚರಿತ್ರೆ

೧೮. ಚಿಟ್ನಿಸ್ ಕೆ.ಎನ್. - ಕೆಳದಿ ಪಾಲಿಟಿ

೧೯. ದೀಕ್ಷಿತ್ ಜಿ.ಎಸ್. (ಸಂ) - ಸ್ಟಡೀಸ್ ಇನ್ ಕೆಳದಿ ಹಿಸ್ಟರಿ
೨೦. ದೀಕ್ಷಿತ್ ಜಿ.ಎಸ್. (ಸಂ) - ಕೆಳದಿ ಐತಿಹಾಸಿಕ ನಿಬಂಧಗಳು
೨೧. ತಿಪ್ಪೇರುದ್ರಸ್ವಾಮಿ, ಹೆಚ್. (ಸಂ) - ಕರ್ನಾಟಕ ಸಂಸ್ಕೃತಿ ಸಮೀಕ್ಷೆ
೨೨. ದಿವಾಕರ್ ಆರ್.ಆರ್. - ಕರ್ನಾಟಕ ಪರಂಪರೆ ಸುಪುಟಗಳು
೨೩. ಶ್ರೀನಿವಾಸಮೂರ್ತಿ ಹೆಚ್.ವಿ. - ಎ ಹಿಸ್ಟರಿ ಆಫ್ ಕರ್ನಾಟಕ
೨೪. ಸೂರ್ಯನಾಥ ಯು.ಕಾಮತ್ - ಕರ್ನಾಟಕದ ಸಂಕ್ಷಿಪ್ತ ಇತಿಹಾಸ
೨೫. ವಸು ಎಂ.ವಿ. (ಸಂ) - ದಕ್ಷಿಣ ಕರ್ನಾಟಕದ ಅರಸು ಮನೆತನಗಳು,
೨೬. ಕೃಷ್ಣಸ್ವಾಮಿ ಅಯ್ಯಂಗಾರ್ ಹೆಚ್.ಎಸ್. (ಸಂ) - ಅವಲೋಕನ
೨೭. ಸೂರ್ಯನಾಥ ಯು. ಕಾಮತ್ - ಎ ಕನ್ಸೈಸ್ ಹಿಸ್ಟರಿ ಆಫ್ ಕರ್ನಾಟಕ
೨೮. ಷೇಕ್ ಅಲಿ ಬಿ. (ಸಂ) - ಸಮಗ್ರ ಕರ್ನಾಟಕ ಚರಿತ್ರೆ, ಸಂಪುಟ-೪

## ಮಾದರಿ ಪ್ರಶ್ನೆಗಳು

**I. ಒಂದು ವಾಕ್ಯದಲ್ಲಿ ಉತ್ತರಿಸಿ**

೧. ವಿಜಯನಗರ ಸಾಮ್ರಾಜ್ಯದ ರಾಜ ಲಾಂಛನ ಯಾವುದು?
೨. ವಿಜಯನಗರವನ್ನು ಕಟ್ಟಿದ ಮೊದಲ ರಾಜವಂಶ ಯಾವುದು?
೩. ತುಳುವಂಶದ ಪ್ರಸಿದ್ಧ ದೊರೆ ಯಾರು?
೪. ತಾಳೀಕೋಟೆ ಯುದ್ಧದಲ್ಲಿ ಹೋರಾಡಿದ ವಿಜಯನಗರದ ಅರಸು ಯಾರು?
೫. ಮಧುರಾ ವಿಜಯವನ್ನು ರಚಿಸಿದವರು ಯಾರು?
೬. ರಾಯರೇಖೆ ಎಂದರೇನು?
೭. ಕೃಷ್ಣದೇವರಾಯನು ರಚಿಸಿದ ಪ್ರಸಿದ್ಧ ತೆಲುಗು ಕೃತಿ ಯಾವುದು?
೮. ಅಷ್ಟದಿಗ್ಗಜರೆಂದರೆ ಯಾರು?
೯. ಇಕ್ಕೇರಿ ಸಂಸ್ಥಾನದ ಸ್ಥಾಪಕರು ಯಾರು?
೧೦. ಚಿತ್ರದುರ್ಗ ಸಂಸ್ಥಾನದ ಸ್ಥಾಪಕರು ಯಾರು?
೧೧. ಶಿವಪ್ಪನಾಯಕನು ಜಾರಿಗೆ ತಂದ ಕಂದಾಯದ ಹೆಸರೇನು?
೧೨. ಮರಾಠ ದೊರೆ ರಾಜಾರಾಮನಿಗೆ ಆಶ್ರಯಕೊಟ್ಟ ಕೆಳದಿ ರಾಣಿ ಯಾರು?
೧೩. ಹಗಲು ಕಗ್ಗೊಲೆ ಮಾನ್ಯ ಎಂಬ ಬಿರುದು ಚಿತ್ರದುರ್ಗದ ಯಾವ ದೊರೆಗಿತ್ತು?
೧೪. ಚಿತ್ರದುರ್ಗದ ಪ್ರಸಿದ್ಧ ದೊರೆ ಯಾರು?
೧೫. ಬಹಮನಿ ರಾಜ್ಯದ ಸಂಸ್ಥಾಪಕ ಯಾರು?
೧೬. ಬಹಮನಿ ರಾಜ್ಯದ ಮೊದಲ ರಾಜಧಾನಿ ಯಾವುದು?
೧೭. ಬಹಮನಿ ರಾಜ್ಯದ ಪ್ರಸಿದ್ಧ ಪ್ರಧಾನಮಂತ್ರಿ ಯಾರು?
೧೮. ಮದ್ರಸಾ ಎಂದರೇನು?

೧೯. ಬಹಮನಿ ರಾಜ್ಯದ ಕೊನೆಯ ರಾಜಧಾನಿ ಯಾವುದು?
೨೦. ಬಿಜಾಪುರ ರಾಜ್ಯದ ಸಂಸ್ಥಾಪಕ ಯಾರು?
೨೧. ಬಿಜಾಪುರದ ಪ್ರಸಿದ್ಧ ಸುಲ್ತಾನ ಯಾರು?
೨೨. ಮೊಗಲರ ಯಾವ ಸುಲ್ತಾನನು ಬಿಜಾಪುರವನ್ನು ವಶಪಡಿಸಿಕೊಂಡನು?
೨೩. ಫೆರಿಸ್ತಾನು ರಚಿಸಿದ ಕೃತಿ ಯಾವುದು?
೨೪. ಗೋಳಗುಮ್ಮಟವನ್ನು ಯಾರ ಕಾಲದಲ್ಲಿ ಕಟ್ಟಲಾಯಿತು?
೨೫. ಕ್ವಾಜಾ ಬಂದೇ ನವಾಜ್‌ರ ಸಮಾಧಿ ಎಲ್ಲಿದೆ?
೨೬. ಇಬ್ರಾಹಿಂ ರೋಜಾವನ್ನು ಯಾರ ಕಾಲದಲ್ಲಿ ಕಟ್ಟಲಾಯಿತು?
೨೭. ಮೈಸೂರು ಸಂಸ್ಥಾನದ ಸ್ಥಾಪಕ ಯಾರು?
೨೮. ಔರಂಗಜೇಬನ ಆಸ್ಥಾನಕ್ಕೆ ರಾಯಭಾರಿಯನ್ನು ಕಳಿಸಿದ ದೊರೆ ಯಾರು?
೨೯. ನವಕೋಟಿ ನಾರಾಯಣ ಎಂಬ ಬಿರುದು ಯಾರಿಗಿತ್ತು?
೩೦. 'ಹದಿಬದೆಯಧರ್ಮ'ವನ್ನು ರಚಿಸಿದವರು ಯಾರು?

**II. ಎರಡು ವಾಕ್ಯಗಳಲ್ಲಿ ಉತ್ತರಿಸಿ**

೧. ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ ಸಹೋದರರನ್ನು ತಿಳಿಸಿ?
೨. ವಿಜಯನಗರ ಸಾಮ್ರಾಜ್ಯವನ್ನು ಎಷ್ಟು ಮನೆತನಗಳು ಆಳಿದವು? ಅವು ಯಾವುವು?
೩. ಕೃಷ್ಣದೇವರಾಯನು ಕಟ್ಟಿಸಿದ ದೇವಾಲಯಗಳು ಯಾವುವು?
೪. ತಾಳೀಕೋಟೆ ಯುದ್ಧವು ಯಾವಾಗ ನಡೆಯಿತು ಮತ್ತು ಯಾರ್‍ಯಾರ ನಡುವೆ ನಡೆಯಿತು?
೫. ವಿಜಯನಗರ ಕಾಲದಲ್ಲಿ ರಚಿತವಾದ ನಾಲ್ಕು ಪ್ರಮುಖ ಕನ್ನಡ ಕೃತಿಗಳನ್ನು ತಿಳಿಸಿ?
೬. ವಿಜಯನಗರ ಕಾಲದಲ್ಲಿ ರಚಿಸಿದ ಯಾವುದಾದರೂ ನಾಲ್ಕು ತೆಲುಗು ಕೃತಿಗಳನ್ನು ತಿಳಿಸಿ?
೭. ವಿಜಯನಗರ ಕಾಲದಲ್ಲಿ ರಚಿಸಿದ ನಾಲ್ಕು ಸಂಸ್ಕೃತ ಕೃತಿಗಳನ್ನು ತಿಳಿಸಿ?
೮. ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿ ಯಾತ್ರಿಕರನ್ನು ತಿಳಿಸಿ?
೯. ವಿಜಯನಗರದಿಂದ ರಫ್ತು ಮಾಡುತ್ತಿದ್ದ ಪ್ರಮುಖ ವಸ್ತುಗಳಾವುವು?
೧೦. ವಿಜಯನಗರಕ್ಕೆ ವಿದೇಶದಿಂದ ಆಮದು ಮಾಡಿಕೊಳ್ಳುತ್ತಿದ್ದ ಪ್ರಮುಖ ವಸ್ತುಗಳಾವುವು?
೧೧. ಎಡಗೈ ಮತ್ತು ಬಲಗೈ ಎಂದರೇನು?
೧೨. ವಿಜಯನಗರ ಕಾಲದ ನಾಣ್ಯಗಳ ಹೆಸರನ್ನು ತಿಳಿಸಿ?
೧೩. ವಿಜಯನಗರ ಕಾಲದ ವಿವಿಧ ರೀತಿಯ ಭೂ ಹಿಡುವಳಿಗಳನ್ನು ತಿಳಿಸಿ?
೧೪. ವಿಜಯನಗರ ಕಾಲದ ಪ್ರಮುಖ ಬಂದರು ಪಟ್ಟಣಗಳನ್ನು ತಿಳಿಸಿ
೧೫. ಬಹಮನಿ ರಾಜ್ಯವನ್ನು ಯಾರು ಮತ್ತು ಯಾವಾಗ ಸ್ಥಾಪಿಸಿದರು?

೧೬. ಬಹಮನಿ ರಾಜ್ಯದ ಪ್ರಸಿದ್ಧ ಪ್ರಧಾನಮಂತ್ರಿ ಯಾರು? ಅವನು ಕಟ್ಟಿಸಿದ ಕಾಲೇಜಿನ ಹೆಸರೇನು?

೧೭. ಷಾಹಿ ಮನೆತನಗಳು ಎಷ್ಟಿದ್ದವು? ಅವು ಯಾವುವು?

೧೮. ಅರಾಬಿಕ್ ಭಾಷೆಯಲ್ಲಿ ಪ್ರಸಿದ್ಧ ವಿದ್ವಾಂಸರನ್ನು ಹೆಸರಿಸಿ?

೧೯. ಗೋಳಗುಮ್ಮಟವನ್ನು ಯಾರ ಕಟ್ಟಿಸಿದರು? ಎಲ್ಲಿ ಕಟ್ಟಿಸಿದರು?

೨೦. ಒಡೆಯರ ಕಾಲದಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿದವರು ಯಾರು? ಆ ಕಾಲದ ನಾಣ್ಯಗಳನ್ನು ಹೆಸರಿಸಿ?

೨೧. ತಿರುಮಲಾರ್ಯನ ಸಾಹಿತ್ಯ ಕೃತಿಗಳನ್ನು ತಿಳಿಸಿ.

೨೨. ಚಿಕ್ಕದೇವರಾಯನ ಸಾಹಿತ್ಯ ಕೃತಿಗಳನ್ನು ತಿಳಿಸಿ.

**III. ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ**

೧. ವಿಜಯನಗರ ಸಂಸ್ಥಾಪನೆಯ ಬಗ್ಗೆ ಇರುವ ವಾದಗಳನ್ನು ಕುರಿತು ಚಿಕ್ಕ ಟಿಪ್ಪಣಿ ಬರೆಯಿರಿ.

೨. ಹರಿಹರ ಮತ್ತು ಬುಕ್ಕರ ಆಳ್ವಿಕೆಯ ಪ್ರಾಮುಖ್ಯತೆಯನ್ನು ತಿಳಿಸಿ?

೩. ತಾಳೀಕೋಟೆ ಯುದ್ಧದ ಕಾರಣಗಳು ಮತ್ತು ಫಲಿತಾಂಶಗಳನ್ನು ವಿವರಿಸಿ.

೪. ವಿಜಯನಗರ ಸಾಮ್ರಾಜ್ಯದ ಆಡಳಿತದ ಸ್ವರೂಪವನ್ನು ಚರ್ಚಿಸಿ.

೫. ನಾಯಂಕರ ಪದ್ಧತಿಯನ್ನು ಕುರಿತು ಟಿಪ್ಪಣಿ ಬರೆಯಿರಿ.

೬. ವಿಜಯನಗರ ಕಾಲದ ಆರ್ಥಿಕತೆಯ ಮುಖ್ಯ ಲಕ್ಷಣಗಳನ್ನು ತಿಳಿಸಿ.

೭. ವಿಜಯನಗರ ಕಾಲದ ಸಂಸ್ಕೃತ ಸಾಹಿತ್ಯದ ಬೆಳವಣಿಗೆಯನ್ನು ಚರ್ಚಿಸಿ.

೮. ವಿಜಯನಗರ ಕಾಲದ ವಾಸ್ತುಶಿಲ್ಪದ ಮುಖ್ಯ ಲಕ್ಷಣಗಳನ್ನು ತಿಳಿಸಿ.

೯. ಶಿವಪ್ಪನಾಯಕನ ಕಂದಾಯ ಪದ್ಧತಿಯನ್ನು ತಿಳಿಸಿ.

೧೦. ಮಹಮ್ಮದ್ ಗವಾನನ ಸಾಧನೆಗಳನ್ನು ಬರೆಯಿರಿ.

೧೧. ಸುಲ್ತಾನರ ಕಾಲದಲ್ಲಿ ಪರ್ಷಿಯನ್ ಸಾಹಿತ್ಯ ಕುರಿತು ಬರೆಯಿರಿ.

೧೨. ಬಿಜಾಪುರದ ಸ್ಮಾರಕಗಳ ಪ್ರಮುಖ ಲಕ್ಷಣಗಳನ್ನು ತಿಳಿಸಿ.

೧೩. ಸುಲ್ತಾನರ ಕಾಲದ ಚಿತ್ರಕಲೆಯನ್ನು ಕುರಿತು ಟಿಪ್ಪಣಿ ಬರೆಯಿರಿ.

೧೪. ಕಂಠೀರವ ನರಸರಾಜ ಒಡೆಯರ ಸಾಧನೆಗಳನ್ನು ವಿವರಿಸಿ.

**IV. ೩೦ ರಿಂದ ೪೦ ವಾಕ್ಯಗಳಲ್ಲಿ ಉತ್ತರಿಸಿ**

೧. ಕೃಷ್ಣದೇವರಾಯನ ಜೀವನ ಮತ್ತು ಸಾಧನೆಗಳನ್ನು ಕುರಿತು ವಿಮರ್ಶಾತ್ಮಕವಾಗಿ ಚರ್ಚಿಸಿ.

೨. ವಿಜಯನಗರ ಕಾಲದ ಆಡಳಿತ ವ್ಯವಸ್ಥೆಯ ಸ್ವರೂಪವನ್ನು ಚರ್ಚಿಸಿ.

೩. ವಿಜಯನಗರ ಕಾಲದ ಆರ್ಥಿಕತೆಯ ಸ್ವರೂಪವನ್ನು ಚರ್ಚಿಸಿ.

೪. ವಿದೇಶಿ ಯಾತ್ರಿಕರ ಬರವಣಿಗೆಗಳಿಂದ ವ್ಯಕ್ತವಾಗಿರುವ ಅಭಿಪ್ರಾಯಗಳನ್ನು ಕುರಿತು ಚರ್ಚಿಸಿ.
೫. ಶಿವಪ್ಪನಾಯಕನ ಜೀವನ ಮತ್ತು ಸಾಧನೆಗಳನ್ನು ವಿಮರ್ಶಾತ್ಮಕವಾಗಿ ಬರೆಯಿರಿ. ಐದನೆ ಮದಕರಿನಾಯಕನ ಜೀವನ ಮತ್ತು ಸಾಧನೆಗಳನ್ನು ಕುರಿತು ಬರೆಯಿರಿ.
೬. ಮಹಮ್ಮದ್ ಗವಾನನ ಜೀವನ ಮತ್ತು ಸಾಧನೆಗಳನ್ನು ಚರ್ಚಿಸಿ.
೭. ಎರಡನೆ ಇಬ್ರಾಹಿಂ ಆದಿಲ್‌ಷಾ ಜೀವನ ಮತ್ತು ಸಾಧನೆಗಳನ್ನು ಕುರಿತು ಬರೆಯಿರಿ.
೮. ಸುಲ್ತಾನರ ಕಾಲದ ಕಲೆ, ವಾಸ್ತುಶಿಲ್ಪ ಮತ್ತು ಚಿತ್ರಕಲೆಯನ್ನು ವಿವರಿಸಿ.
೯. ಸುಲ್ತಾನರ ಕಾಲದ ಸಾಹಿತ್ಯ ಬೆಳವಣಿಗೆಯನ್ನು ಕುರಿತು ಚರ್ಚಿಸಿ.
೧೦. ಚಿಕ್ಕದೇವರಾಜ ಒಡೆಯರ ಜೀವನ ಮತ್ತು ಸಾಧನೆಗಳನ್ನು ವಿವರಿಸಿ.
೧೧. ನಿಮಗೆ ಒದಗಿಸಿರುವ ನಕ್ಷೆಯಲ್ಲಿ ಕೃಷ್ಣದೇವರಾಯನ ಕಾಲದ ರಾಜ್ಯ ವಿಸ್ತರಣೆಯನ್ನು ಗುರುತಿಸಿ.
೧೨. ನಕ್ಷೆಯಲ್ಲಿ ಕೆಳಗಿನ ಸ್ಥಳಗಳನ್ನು ಗುರುತಿಸಿ ಹಾಗೂ ಅವುಗಳ ಐತಿಹಾಸಿಕ ಪ್ರಾಮುಖ್ಯತೆಯನ್ನು ವಿವರಿಸಿ.
೧. ಹಂಪೆ ೨. ಬೇಲೂರು ೩. ಶೃಂಗೇರಿ ೪. ಶ್ರೀಶೈಲ ೫. ತಾಳೀಕೋಟೆ

## V. ಹೆಚ್ಚಿನ ಜ್ಞಾನಕ್ಕಾಗಿ ಕಾರ್ಯ-ಯೋಜನೆಗಳು (Assignments/Projects)

೧. ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆಗೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರನ್ನು ಪಟ್ಟಿ ಮಾಡಿ, ಅಲ್ಲದೆ ಅವರು ನೀಡಿದ ಹಂಪೆಯ ಬಗೆಗಿನ ಹೇಳಿಕೆಗಳನ್ನು ಸಂಗ್ರಹಿಸುವ ಕಾರ್ಯಯೋಜನೆ ರೂಪಿಸಿ.
೨. ಕೃಷ್ಣದೇವರಾಯ, ತೆನಾಲಿ ರಾಮಕೃಷ್ಣ ಮೊದಲಾದ ಚಾರಿತ್ರಿಕ ವ್ಯಕ್ತಿತ್ವಗಳನ್ನು ಕುರಿತ ಮಾಹಿತಿಗಳನ್ನು ಕಲೆ ಹಾಕಿ. ಅಥವಾ ಅಷ್ಟದಿಗ್ಗಜರನ್ನು ಕುರಿತು ಯೋಜನೆ ರೂಪಿಸಿ.
೩. ವಿಜಯನಗರ ಕಾಲದ ಸ್ಮಾರಕಗಳನ್ನು ಪಟ್ಟಿ ಮಾಡಿ. ಅಥವಾ ಭೇಟಿ ಕೊಡಿ ಅಥವಾ ಆ ಕಾಲದ ಸ್ಮಾರಕಗಳಿರುವ ಮ್ಯೂಸಿಯಂ ಇತ್ಯಾದಿಗಳನ್ನು ಸಂದರ್ಶಿಸಿ, ಅಲ್ಲಿರುವ ಕ್ಯೂರೇಟರ್‌ಗಳ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿ. ಅಥವಾ ವಿಜಯನಗರ ಕಾಲದ ಕೋಟೆ-ಕೊತ್ತಲುಗಳ ಬಗ್ಗೆ ಮಾಹಿತಿ ಸಂಗ್ರಹಿಸಿ...ಇತ್ಯಾದಿ.
೪. ಬಹಮನಿ ಮತ್ತು ಆದಿಲ್‌ಶಾಹಿ ಸುಲ್ತಾನರ ಸ್ಮಾರಕಗಳನ್ನು ಪಟ್ಟಿ ಮಾಡಿ. ಚಿತ್ರಗಳನ್ನು ಪ್ರದರ್ಶಿಸಿ. ಅಥವಾ ಬೀದರ್, ಗುಲ್ಬರ್ಗಾ ಹಾಗೂ ಬಿಜಾಪುರಗಳಿಗೆ ಭೇಟಿ ನೀಡಿ.
೫. ಚಿಕ್ಕದೇವರಾಜ ಒಡೆಯರ ಕಾಲದ ಆಡಳಿತ ಪದ್ಧತಿ ಹಾಗೂ ಅವರು ಸಾಹಿತ್ಯಕ್ಕೆ ನೀಡಿದ ಕೊಡುಗೆಗಳನ್ನು ಕುರಿತು ಯೋಜನೆ ರೂಪಿಸಿ.
೬. ಇಕ್ಕೇರಿ, ಕೆಳದಿ ಮತ್ತು ಚಿತ್ರದುರ್ಗಗಳಿಗೆ ಭೇಟಿ ನೀಡಿ ಅಥವಾ ಚಿತ್ರದುರ್ಗದ ಕೋಟೆಯ ಚಿತ್ರವನ್ನು ಸಂಗ್ರಹಿಸಿ ಅಭ್ಯಾಸ ಮಾಡಿ ಅಥವಾ ಶಿವಪ್ಪನಾಯಕ 'ಶಿಸ್ತು' ಪದ್ಧತಿಗೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಗಳನ್ನೊಳಗೊಂಡಂತೆ ಪ್ರಬಂಧ ರಚಿಸಿ.

## ಅಧ್ಯಾಯ ೬

# ಭೂಪಟಗಳ ಅಧ್ಯಯನ

**೬.೧ ಅಶೋಕನ ಕಾಲದ ಮೌರ್ಯ ಸಾಮ್ರಾಜ್ಯ**

ಅ. ಭಾರತದ ಭೂಪಟದಲ್ಲಿ ಅಶೋಕ ಕಾಲದ ಮೌರ್ಯ ಸಾಮ್ರಾಜ್ಯದ ವಿಸ್ತರಣೆಯನ್ನು ಗುರುತಿಸಿ ಸಂಕ್ಷಿಪ್ತವಾಗಿ ವಿವರಿಸಿ.

ಆ. ಅಶೋಕನ ಕಾಲದ ಸ್ತಂಭ ಶಾಸನ ಹಾಗೂ ಶಿಲಾಶಾಸನಗಳು ದೊರೆತ ಸ್ಥಳಗಳನ್ನು ಭಾರತದ ನಕಾಶೆಯಲ್ಲಿ ಗುರುತು ಮಾಡಿ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.

**೬.೨ ಇಮ್ಮಡಿ ಪುಲಿಕೇಶಿಯ ಕಾಲದ ಚಾಲುಕ್ಯ ಸಾಮ್ರಾಜ್ಯ**

ಅ. ಇಮ್ಮಡಿ ಪುಲಿಕೇಶಿಯ ಕಾಲದ ಬಾದಾಮಿ ಚಾಲುಕ್ಯರ ಸಾಮ್ರಾಜ್ಯ ವಿಸ್ತರಣೆಯನ್ನು ಭಾರತದ ನಕ್ಷೆಯಲ್ಲಿ ಗುರುತಿಸಿ ಸಂಕ್ಷಿಪ್ತವಾಗಿ ಟಿಪ್ಪಣಿ ಬರೆಯಿರಿ.

**೬.೩ ಕೃಷ್ಣದೇವರಾಯನ ಕಾಲದ ವಿಜಯನಗರ ಸಾಮ್ರಾಜ್ಯ**

ಅ. ಕೃಷ್ಣದೇವರಾಯನ ಆಳ್ವಿಕೆಯ ವಿಜಯನಗರ ಸಾಮ್ರಾಜ್ಯದ ವಿಸ್ತರಣೆಯನ್ನು ಕುರಿತು ಎಲ್ಲೆಗಳನ್ನು ಗುರುತಿಸಿ ಪ್ರಮುಖ ಸ್ಥಳಗಳ ಬಗ್ಗೆ ಟಿಪ್ಪಣಿ ಬರೆಯಿರಿ.

**೬.೪. ಅಕ್ಬರನ ಕಾಲದ ಮೊಗಲರ ಸಾಮ್ರಾಜ್ಯ**

ಅ. ಅಕ್ಬರನು ತನ್ನ ಆಳ್ವಿಕೆಯ ಅವಧಿಯಲ್ಲಿ ಮೊಗಲ ಸಾಮ್ರಾಜ್ಯವನ್ನು ವಿಸ್ತರಿಸಿದುದರ ಬಗ್ಗೆ ಗುರುತು ಮಾಡಿ, ಪ್ರಮುಖ ಪ್ರದೇಶಗಳ ಬಗ್ಗೆ ಟಿಪ್ಪಣಿ ಬರೆಯಿರಿ.

**೬.೫ ಪ್ರಮುಖ ಚಾರಿತ್ರಿಕ ಸ್ಥಳಗಳು**

ಅ. ಭಾರತದ ನಕಾಶೆಯಲ್ಲಿ ಈ ಕೆಳಕಂಡ ಚಾರಿತ್ರಿಕ ಸ್ಥಳಗಳನ್ನು ಗುರುತು ಮಾಡಿ, ಅವುಗಳ ಮಹತ್ವವನ್ನು ಕುರಿತಂತೆ ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.

ಹರಪ್ಪ, ಮಹೆಂಜೊದಾರೊ, ಲೋಥಾಲ್, ದೆಹಲಿ, ಫತೇಪುರ ಸಿಕ್ರಿ, ಪಾಟಲಿಪುತ್ರ, ಪಾಣಿಪತ್, ಹಳೇಬೀಡು, ಬೇಲೂರು, ಬಿಜಾಪುರ, ಬನವಾಸಿ, ತಲಕಾಡು.

ಸ್ತಂಭ ಶಾಸನಗಳು
ಬಂಡೆಗಲ್ಲು ಶಾಸನಗಳು
ಲಘುಬಂಡೆಗಲ್ಲು ಶಾಸನಗಳು
ಆಧುನಿಕ ನಗರಗಳು

ಶಬಾಸ್‌ಗರಿ
ಲಂಪಕ
ಕಂದಹಾರ
ತಕ್ಷಶಿಲಾ
ಶ್ರೀನಗರ
ಮನ್‌ಸೆರ್‍ರಾ
ಸಿಂಧೂ ನದಿ
ತೋಪ್ರ
ಕಲ್ಸಿ
ಮಿರತ್
ದೆಹಲಿ
ಯಮುನಾ ನದಿ
ಗಂಗಾ ನದಿ
ನಿಗಲಿಸಾಗರ
ಕಪಿಲವಸ್ತು
ರುಮಿಂದೈ
ಸಾರನಾಥ
ರಾಂಪುರ
ಧನ್‌ಗರ್
ಅರರಾಜ್
ಪಾಟಲಿಪುತ್ರ
ಬೈರಾತ್
ಮಾಳವ
ಉಜ್ಜಯಿನಿ
ಗುರ್ಜರ
ಕೌಸಂಬಿ
ಹೌರಾರ್
ಸಾಂಚಿ
ರೂಪನಾಥ್
ನಳಂದ
ಕೊಲ್ಕತ್ತಾ
ಪಂಗುರಾರ್‍ಯ
ನರ್ಮದಾ ನದಿ
ಗಿರ್‌ನಾರ್
ಕಳಿಂಗ
ಸೋಪಾರ್
ತೊಸಾಲಿ
ಜೌಗಡ
ಗೋದಾವರಿ ನದಿ
ಮುಂಬೈ
ಸನ್ನತಿ
ಕೃಷ್ಣಾ ನದಿ
ಮಸ್ಕಿ
ಉದೆಗೋಳ
ರಾಜಲಮಂಡಗಿರಿ
ನಿಟ್ಟೂರು
ಎರ್‍ರಗುಡಿ
ಬ್ರಹ್ಮಗಿರಿ
ಮಂಗಳೂರು
ಬೆಂಗಳೂರು
ಚೆನ್ನೈ
ಕಾವೇರಿ ನದಿ
ಕೇರಳಪುತ್ರ
ಶ್ರೀಲಂಕಾ
ಅರಬ್ಬೀ ಸಮುದ್ರ
ಬಂಗಾಳ ಕೊಲ್ಲಿ
ಉ
ಹಿಂದೂ ಮಹಾಸಾಗರ

ಅಶೋಕನ ಕಾಲದ ಮೌರ್ಯ ಸಾಮ್ರಾಜ್ಯ

ಇಮ್ಮಡಿ ಪುಲಕೇಶಿಯ ಕಾಲದ ಚಾಲುಕ್ಯರ ಸಾಮ್ರಾಜ್ಯ




ಕೃಷ್ಣದೇವರಾಯನ ಕಾಲದ ವಿಜಯನಗರ ಸಾಮ್ರಾಜ್ಯ




ಅಕ್ಬರನ ಕಾಲದ ಮೊಗಲ ಸಾಮ್ರಾಜ್ಯ

## ಆಯ್ದ ಗ್ರಂಥಸೂಚಿ
(Selected Bibliography)

### Indian History


೦೧. Kosambi D.D - An Introduction to the Study of Indian History

೦೨. Kosambi D.D - The Culture and Civilization of Ancient India in Historical outline

೦೩. Romila Thapar & Percival spear - A History of India, VOL-I &II

೦೪. Romila Thapar - Asoka and the Decline of Maurayas

೦೫. Pannikkar K.M - A Survey of Indian History

೦೬. Nilankanta Sastry K.A (ed) - Comprahensive History of India

೦೭. Jayasval K.P - Hindu Polity

೦೮. Smith V.A - Early History of India

೦೯. Ghosh N.N - Early History of India

೧೦. Bannerji R.D - Age of Imperial Guptas

೧೧. Majumdar R.C - Ancient India

೧೨. Srivastava A.L - Muslim rule in India

೧೩. Iswari Prasad - History of Muslim rule in India

೧೪. Sharma R.S - Mughal empire

೧೫. Irfan Habib - Essays in Indian History

೧೬. ಶಂಕರನಾರಾಯಣರಾವ್ ಎನ್.ಪಿ.(ಅನು) - ಪ್ರಾಚೀನ ಭಾರತ (ಮೂಲ: ಆರ್.ಎಸ್. ಶರ್ಮಾ)

## History of Karnataka


೧. ಷೇಕ್ ಅಲಿ.ಬಿ (ಪ್ರ.ಸಂ) - ಕರ್ನಾಟಕ ಚರಿತ್ರೆ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸಂಪುಟ - ೧ - ಸುಂದರ .ಅ (ಸಂ)

ಸಂಪುಟ - ೨ - ಸುರೇಂದ್ರರಾವ್ .ಬಿ (ಸಂ)

ಸಂಪುಟ - ೩ - ಶಿವಣ್ಣ ಕೆ.ಎಸ್ (ಸಂ)

ಸಂಪುಟ - ೪ - ಷೇಕ್‌ಅಲಿ .ಬಿ (ಸಂ)

೨. ನಾಯಕ ಹಾ.ಮಾ (ಪ್ರ.ಸಂ) - ಕರ್ನಾಟಕ-ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೩. ಸಾಲೆತೊರೆ ಬಿ.ಎ ಮತ್ತು ದೇಸಾಯಿ ಪಿ.ಬಿ - ಕನ್ನಡ ನಾಡಿನ ಚರಿತ್ರೆ ಭಾಗ-೧

೪. ಗೋಪಾಲ ಬಿ.ಆರ್ - ಕರ್ನಾಟಕದ ಇತಿಹಾಸ

೫. ದಿವಾಕರ ಆರ್.ಆರ್ - ಕರ್ನಾಟಕ ಪರಂಪರೆ ಸಂ-೧

೬. ರಮೇಶ್ ಕೆ.ವಿ. - ಕರ್ನಾಟಕ ಶಾಸನ ಸಮೀಕ್ಷೆ

೭. ಸೂರ್ಯನಾಥ ಯು. ಕಾಮತ್ (ಸಂ) - ಕರ್ನಾಟಕದ ಗ್ಯಾಜೆಟಿಯರ್ ಸಂಪುಟಗಳು

೮. ಸೂರ್ಯನಾಥ ಯು. ಕಾಮತ್ (ಸಂ) - ಕರ್ನಾಟಕದ ಸಂಕ್ಷಿಪ್ತ ಇತಿಹಾಸ

೯. ಶ್ರೀನಿವಾಸ ಮೂರ್ತಿ ಹೆಚ್.ವಿ ಮತ್ತು ರಾಮಕೃಷ್ಣನ್ .ಆರ್ - ಸಮಗ್ರ ಕರ್ನಾಟಕದ ಚರಿತ್ರೆ

೧೦. ಚಿದಾನಂದಮೂರ್ತಿ .ಎಂ - ಕನ್ನಡ ಸಂಸ್ಕೃತಿ

೧೨. ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ - ಕರ್ನಾಟಕ ಇತಿಹಾಸ ದರ್ಶನ

೧೩. Neelakanta sastry K.A - History of South India

೧೪. Basavaraj K - History and Culture of Karnataka

೧೫. Desai P.B & Others - A History of Karnataka

೧೬. Venkataramanappa - Outlines of South Indian History with special reference to Karnataka


* * *

## ಮೊದಲ ಪದವಿಪೂರ್ವ ತರಗತಿ

## ಇತಿಹಾಸ-೧

## ಮಾದರಿ ಪ್ರಶ್ನೆ ಪತ್ರಿಕೆ

**ಸಮಯ: ೩ ಗಂಟೆಗಳು** **ಭಾಗ-ಅ** **ಗರಿಷ್ಠ ಅಂಕಗಳು : ೯೦**

**I. ಈ ಕೆಳಗಿನ ಪ್ರಶ್ನೆಗಳನ್ನು ಒಂದು ವಾಕ್ಯದಲ್ಲಿ ಉತ್ತರಿಸಿ.** ೧x೧೦=೧೦

೧. 'ಭಾರತದ ನೆಪೋಲಿಯನ್' ಎಂದು ಯಾರನ್ನು ಕರೆಯುತ್ತಾರೆ?

೨. 'ವೈಜಯಂತಿ' ಎಂದು ಯಾವ ನಗರವನ್ನು ಕರೆಯಲಾಗಿತ್ತು?

೩. ಅಲ್ಲಾಉದ್ದೀನ್ ಖಿಲ್ಜಿಯ ರಾಜಧಾನಿಯ ಹೆಸರೇನು?

೪. ರಾಮಾನುಜರ ಅನುಯಾಯಿಗಳನ್ನು ಏನೆಂದು ಕರೆಯುತ್ತಾರೆ?

೫. ಬಂಗಾಳದ ವೈಷ್ಣವ ಸಂತ ಸುಧಾರಕನ ಹೆಸರನ್ನು ತಿಳಿಸಿ.

೬. ಸಿಖ್ಖರ ಪವಿತ್ರ ಗ್ರಂಥವನ್ನು ತಿಳಿಸಿ.

೭. ವಿಜಯನಗರ ಸಾಮ್ರಾಜ್ಯದ ರಾಜ್ಯಲಾಂಛನ ಯಾವುದು?

೮. 'ಹದಿಬದೆಯ ಧರ್ಮ'ವನ್ನು ಬರೆದವರು ಯಾರು?

೯. ರಾಜಾರಾಮನಿಗೆ ಆಶ್ರಯ ನೀಡಿದ ಕೆಳದಿಯ ರಾಣಿ ಯಾರು?

೧೦. ದಿನ್-ಏ-ಇಲಾಹಿ ಎಂದರೇನು?

**ಭಾಗ-ಆ**

**II. ಈ ಕೆಳಗಿನ ಪ್ರಶ್ನೆಗಳಲ್ಲಿ ಹತ್ತಕ್ಕೆ ೨ ಅಥವಾ ೩ ವಾಕ್ಯಗಳಲ್ಲಿ ಉತ್ತರಿಸಿ.** ೨x೧೦=೨೦

೧೧. ವೈದಿಕ ಯುಗದ ಜನಪ್ರಿಯ ಸಭಾಗಳನ್ನು ಹೆಸರಿಸಿ.

೧೨. ಬೌದ್ಧ ಧರ್ಮದಲ್ಲುಂಟಾದ ಪಂಥಗಳನ್ನು ತಿಳಿಸಿ.

೧೩. ಮೌರ್ಯರ ಇತಿಹಾಸದ ಅಧ್ಯಯನಕ್ಕೆ ಎರಡು ಸಾಹಿತ್ಯಕ ಆಧಾರಗಳನ್ನು ತಿಳಿಸಿ.

೧೪. ಗುಪ್ತರ ಕಾಲದ ಪ್ರಮುಖ ವಿಜ್ಞಾನಿಗಳು ಯಾರು?

೧೫. ಶಾತವಾಹನರ ಕಾಲದ ನಾಲ್ಕು ಪ್ರಮುಖ ವಾಸ್ತುಶಿಲ್ಪ ಕೇಂದ್ರಗಳನ್ನು ಹೆಸರಿಸಿ.

೧೬. ಪಲ್ಲವರ ವಿರುದ್ಧ ಹೋರಾಡಿದ ಚಾಲುಕ್ಯ ಅರಸರುಗಳು ಯಾರು?

೧೭. ಪಟ್ಟದಕಲ್ಲಿನಲ್ಲಿ ಕಂಡುಬರುವ ಚಾಲುಕ್ಯರ ಪ್ರಮುಖ ದೇವಾಲಯಗಳನ್ನು ಹೆಸರಿಸಿ.

೧೮. ಶಾಂತಲಾ ಯಾರು? ಅವಳು ನಿರ್ಮಿಸಿದ ದೇವಾಲಯದ ಹೆಸರೇನು?

೧೯. ಶಂಕರರನ್ನು 'ಷಣ್ಮಥ ಸ್ಥಾಪನಾಚಾರ್ಯ' ಎಂದು ಕರೆದದ್ದು ಏಕೆ?

೨೦. ಹೊಯ್ಸಳರ ಕಾಲದ ಖ್ಯಾತ ಶಿಲ್ಪಿಗಳನ್ನು ಹೆಸರಿಸಿ.

೨೧. ಶಿವಾಜಿಗೆ ಪ್ರೇರಣೆ ನೀಡಿದವರು ಯಾರು?

೨೨. ಷಹಜಹಾನನು ನಿರ್ಮಿಸಿದ ಪ್ರಮುಖ ಸ್ಮಾರಕಗಳನ್ನು ತಿಳಿಸಿ.

## ಭಾಗ-ಇ-I

**III.** ಇವುಗಳಲ್ಲಿ ಯಾವುದಾದರೂ ಆರಕ್ಕೆ ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ. ೫x೬=೩೦

೨೩. ಇತಿಹಾಸವನ್ನು ಏಕೆ ಅಧ್ಯಯನ ಮಾಡಬೇಕು?

೨೪. ಸಿಂಧೂ ಬಯಲಿನ ನಾಗರಿಕತೆಯ ನಗರ ಯೋಜನೆಗಳನ್ನು ವಿವರಿಸಿ.

೨೫. ಜೈನ ಹಾಗೂ ಬೌದ್ಧ ಧರ್ಮಗಳ ಏಳಿಗೆಗೆ ಪ್ರೇರಕವಾದ ಅಂಶಗಳು ಯಾವುವು?

೨೬. ಕಲ್ಯಾಣದ ಚಾಲುಕ್ಯರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆಗಳಾವುವು?

೨೭. ಕದಂಬರ ಕಾಲದ ಶಿಕ್ಷಣ ವ್ಯವಸ್ಥೆಯನ್ನು ವಿವರಿಸಿ.

೨೮. ಪಲ್ಲವರು ಮತ್ತು ಚಾಲುಕ್ಯರ ನಡುವೆ ನಡೆದ ಹೋರಾಟವನ್ನು ತಿಳಿಸಿ.

೨೯. ಬಸವೇಶ್ವರರನ್ನು ಕರ್ನಾಟಕದ 'ಮಾರ್ಟಿನ್ ಲೂಥರ್' ಎಂದು ಕರೆಯಲು ಕಾರಣವೇನು?

೩೦. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಮೊಗಲರು ನೀಡಿದ ಕೊಡುಗೆಗಳಾವುವು?

೩೧. ತಾಳಿಕೋಟೆ ಕದನಕ್ಕೆ ಕಾರಣಗಳಾವುವು ಮತ್ತು ಅದರಿಂದಾದ ಪರಿಣಾಮಗಳನ್ನು ವಿವರಿಸಿ.

೩೨. ಶಿವಪ್ಪನಾಯಕನು ಜಾರಿಗೆ ತಂದ ಕಂದಾಯ ವ್ಯವಸ್ಥೆಯನ್ನು ವಿವರಿಸಿ.

## ಭಾಗ-ಇ-II

೫+೫=೧೦

೩೩. ಭಾರತದ ಭೂಪಟದಲ್ಲಿ ಅಕ್ಬರನ ಕಾಲದ ಮೊಗಲ್ ಸಾಮ್ರಾಜ್ಯದ ವಿಸ್ತರಣೆಯನ್ನು ಗುರುತಿಸಿ, ಸಂಕ್ಷಿಪ್ತ ಟಿಪ್ಪಣಿ ಬರೆಯಿರಿ.

ಅಥವಾ

ಭಾರತದ ನಕಾಶೆಯಲ್ಲಿ ಈ ಸ್ಥಳಗಳನ್ನು ಗುರುತಿಸಿ ಮತ್ತು ಅವುಗಳ ಐತಿಹಾಸಿಕ ಮಹತ್ವವನ್ನು ಕುರಿತು ೨ ಅಥವಾ ೩ ವಾಕ್ಯಗಳಲ್ಲಿ ಬರೆಯಿರಿ.

೧. ಮಹೆಂಜೊದಾರೊ ೨. ಫತೇಪುರ್ ಸಿಕ್ರಿ ೩. ಪಾಣಿಪತ್ ೪. ಹಳೇಬೀಡು
೫. ಬಿಜಾಪುರ

## ಭಾಗ-ಈ

**IV.** ಇವುಗಳನ್ನು ೩೦ ರಿಂದ ೪೦ ವಾಕ್ಯಗಳಲ್ಲಿ ಉತ್ತರಿಸಿ. ೧೦x೨=೨೦

೩೪. ವೇದಕಾಲೀನ ಆಡಳಿತ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ವಿವರಿಸಿ.

ಅಥವಾ

ಇಮ್ಮಡಿ ಪುಲಿಕೇಶಿಯ ಜೀವನ ಮತ್ತು ಸಾಧನೆಗಳನ್ನು ತಿಳಿಸಿ.

೩೫. ಅಲ್ಲಾ-ಉದ್ದೀನ್-ಖಿಲ್ಜಿಯ ದಿಗ್ವಿಜಯ ಮತ್ತು ಸುಧಾರಣೆಗಳನ್ನು ವಿವರಿಸಿ.

ಅಥವಾ

ವಿಜಯನಗರ ಕಾಲದ ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪವನ್ನು ವಿವರಿಸಿ.

ಕನ್ನಡ ವಿಶ್ವವಿದ್ಯಾಲಯದ ಪಠ್ಯಪುಸ್ತಕ ರಚನಾ ಕೇಂದ್ರವು ಸಿದ್ಧಪಡಿಸಿರುವ ಪದವಿಪೂರ್ವ ಶಿಕ್ಷಣದ ಮೊದಲ ವರ್ಷದ ಇತಿಹಾಸ ಪಠ್ಯವನ್ನು ತಮ್ಮ ಮುಂದಿಡಲು ನಮಗೆ ಸಂತೋಷವೆನಿಸುತ್ತದೆ. ಈಗ ಜಾರಿಗೆ ಬಂದಿರುವ ಹೊಸ ಪಠ್ಯಕ್ರಮಕ್ಕೆ ಅನುಗುಣವಾಗಿ ಇದನ್ನು ಸಿದ್ಧಪಡಿಸಲಾಗಿದೆ. ಈ ಪಠ್ಯವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಾಡಿನ ಪ್ರಸಿದ್ಧ ವಿದ್ವಾಂಸರು ಪಾಲುದಾರಾಗಿದ್ದಾರೆ.

ಈ ಪಠ್ಯವು ನಾಡಿನ ವಿದ್ಯಾರ್ಥಿಗಳಿಗೆ ಉಪಯುಕ್ತ ವಾಗುತ್ತದೆಂದು ನಾವು ಭಾವಿಸಿದ್ದೇವೆ. ಈ ಪಠ್ಯವನ್ನು ಉಪಯೋಗಿಸುವ ಸಹೃದಯಿಗಳು ಪಠ್ಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೇಂದ್ರಕ್ಕೆ ಬರೆದು ತಿಳಿಸಿದರೆ ತುಂಬಾ ಉಪಯೋಗವಾಗುತ್ತದೆ. ಮುಂದಿನ ಆವೃತ್ತಿಗಳಲ್ಲಿ ಪಠ್ಯದ ಗುಣಮಟ್ಟವನ್ನು ಇನ್ನು ಹೆಚ್ಚು ಉತ್ತಮಪಡಿಸಬಹುದು.

ಪಠ್ಯಪುಸ್ತಕಗಳ ಜೊತೆ ನಾವು ಅಧ್ಯಾಪಕರ ಕೈಪಿಡಿಗಳನ್ನು ಸಿದ್ಧಪಡಿಸುತ್ತಿದ್ದೇವೆ. ನಾವು ಪ್ರಕಟಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಮನ್ನಣೆ ನೀಡಿ ನಮ್ಮ ಪ್ರಯತ್ನದಲ್ಲಿ ಕೈಜೋಡಿಸಿದೆ. ಕರ್ನಾಟಕದ ವಿದ್ಯಾರ್ಥಿ ಬಳಗಕ್ಕೆ ಕನ್ನಡದಲ್ಲಿ ಜ್ಞಾನವು ಉತ್ತಮ ರೀತಿಯಲ್ಲಿ ದೊರೆಯಬೇಕೆಂಬುದು ನಮ್ಮ ಮುಖ್ಯ ಗುರಿಯಾಗಿದೆ. ಈ ದಿಶೆಯಲ್ಲಿ ನಮ್ಮ ಪ್ರಯತ್ನ ನಡೆದಿದೆ. ಇದಕ್ಕೆ ತಮ್ಮ ಆಶೀರ್ವಾದವಿದೆಯೆಂದು ಭಾವಿಸಿದ್ದೇವೆ.

ರೂ. ೧೦೦/-